ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೩೪

ಪ್ರಧಾನ ಸಂಪಾದಕ

**ಡಾ. ಕೆ. ವಿ. ಪುಟ್ಟಪ್ಪ, ಎಂ.ಎ., ಡಿ.ಲಿಟ್.**

# ಕನ್ನಡ ಕೈಪಿಡಿ

ಸಂಪುಟ ೧




೧೯೮೮

ಎಲ್. ನರಸಿಂಹ ಮೂರ್ತಿ

# ಮುನ್ನುಡಿ

## ಮೊದಲನೆಯ ಮುದ್ರಣ

ಕನ್ನಡ ಸಾಹಿತ್ಯವನ್ನು ಓದುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕನ್ನಡದಲ್ಲಿ ಒಂದು ಕೈಪಿಡಿಯನ್ನು ಬರೆಸಬೇಕೆಂದು ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ನಿರ್ಣಯಿಸಿ, ವೇ|| ಪಂಡಿತ ಟಿ. ಶ್ರೀನಿವಾಸರಾಘವಾಚಾರ್ಯರು, ವೇ|| ಪಂಡಿತ ಕೆ. ವರದಾಚಾರ್ಯರು, ಮ|| ರಾ|| ಬಿ. ಕೃಷ್ಣಪ್ಪನವರು, ಮ|| ರಾ|| ಎ. ಆರ್. ಕೃಷ್ಣಶಾಸ್ತ್ರಿಗಳು, ಮ|| ರಾ|| ಟಿ. ಎಸ್. ವೆಂಕಣ್ಣಯ್ಯನವರು ಮತ್ತು ಮ|| ರಾ|| ಬಿ. ಎಂ. ಶ್ರೀಕಂಠಯ್ಯನವರು—ಇವರನ್ನು ಒಂದು ಸಭೆಯಾಗಿ ನೇಮಿಸಿ, ಬಿ. ಎಂ. ಶ್ರೀಕಂಠಯ್ಯನವರನ್ನು ಸಭೆಗೆ ಅಧ್ಯಕ್ಷರನ್ನಾಗಿ ಗೊತ್ತುಮಾಡಿದರು. ಕನ್ನಡ ಭಾಷೆ ಮತ್ತು ಸಾಹಿತ್ಯ—ಇವುಗಳ ವಿಷಯದಲ್ಲಿ ಇದುವರೆಗೆ ತಿಳಿವಳಿಕೆಗೆ ಬಂದಿರುವ ಮುಖ್ಯಾಂಶಗಳನ್ನು ಸಂಕ್ಷೇಪವಾಗಿ ಸೂಚಿಸಬೇಕೆಂಬುದಾಗಿಯೂ, ಪ್ರೌಢವಿಚಾರಗಳಿಗಾಗಲಿ ಇನ್ನೂ ಚರ್ಚಾಸ್ಪದವಾಗಿರತಕ್ಕ ಅಂಶಗಳಿಗಾಗಲಿ ಸಾಧಾರಣವಾಗಿ ಪ್ರವೇಶ ಮಾಡಬೇಕಾದ್ದಿಲ್ಲವೆಂಬುದಾಗಿಯೂ, ಬಿ.ಎ. ಪರೀಕ್ಷೆಯಲ್ಲಿ ಉತ್ತೀರ್ಣನಾಗುವ ವಿದ್ಯಾರ್ಥಿ ತಿಳಿದಿರಬೇಕಾದಷ್ಟು ಅಂಶಗಳು ಇರಬೇಕೆಂಬುದಾಗಿಯೂ ಸಭೆಯವರಿಗೆ ನಿರೂಪಣೆಯಾಗಿತ್ತು. ಅದನ್ನನುಸರಿಸಿ, ಅಧಿಕಾರಿಗಳು ನಿಯಮಿಸಿದ್ದಂತೆ, ಈ ಕೈಪಿಡಿಯ ಐದು ಭಾಗಗಳನ್ನು ಬರೆದ ಲೇಖಕರು ಯಾರೆಂದರೆ—

**೧ನೆಯ ಭಾಗ, ಹಳಗನ್ನಡದ ವ್ಯಾಕರಣ**—
ಟಿ. ಶ್ರೀನಿವಾಸರಾಘವಾಚಾರ್ಯರು ಮತ್ತು
ಬಿ. ಕೃಷ್ಣಪ್ಪನವರು.

**೨ನೆಯ ಭಾಗ, ಕರ್ಣಾಟಕ ಛಂದಸ್ಸು**—
ಟಿ. ಶ್ರೀನಿವಾಸರಾಘವಾಚಾರ್ಯರು.

**೩ನೆಯ ಭಾಗ, ಅಲಂಕಾರ**—
ಎ. ಆರ್. ಕೃಷ್ಣಶಾಸ್ತ್ರಿಗಳು (೧-೧೧) ಮತ್ತು
ಕೆ. ವರದಾಚಾರ್ಯರು (೧೨-೧೩).

**೪ನೆಯ ಭಾಗ, ಕನ್ನಡ ಭಾಷೆಯ ಚರಿತ್ರೆ**—
ಬಿ. ಎಂ. ಶ್ರೀಕಂಠಯ್ಯನವರು ಮತ್ತು
ಟಿ. ಎಸ್. ವೆಂಕಣ್ಣಯ್ಯನವರು.

**೫ನೆಯ ಭಾಗ, ಕನ್ನಡ ಸಾಹಿತ್ಯದ ಚರಿತ್ರೆ—**

ಬಿ. ಎಂ. ಶ್ರೀಕಂಠಯ್ಯನವರು.

ಲೇಖಕರು ತಮ್ಮ ತಮ್ಮ ಭಾಗಗಳನ್ನು ಬರೆದ ಮೇಲೆ ಸಭೆಯವರೆಲ್ಲರೂ ಸೇರಿ ಪ್ರತಿಯೊಂದು ಭಾಗವನ್ನೂ ಪರಾಮರ್ಶಿಸಿರುತ್ತಾರಾದರೂ, ಅಲ್ಲಲ್ಲಿ ಭಿನ್ನಾಭಿಪ್ರಾಯ ಗಳಿಗೆ ಅವಕಾಶವಿದ್ದದ್ದರಿಂದ, ಆಯಾ ಭಾಗಕ್ಕೆ ಆಯಾ ಲೇಖಕರೇ ಉತ್ತರವಾದಿ ಗಳಾಗಿರುತ್ತಾರೆ. ಈ ಗ್ರಂಥದಲ್ಲಿ ಪ್ರಮಾದದಿಂದಲೂ, ಕಡಮೆ ತಿಳಿವಳಿಕೆಯಿಂದಲೂ, ನ್ಯೂನತೆಗಳಿರುವುವೆಂದು ಲೇಖಕರು ಬಲ್ಲರು. ಗುಣಜ್ಞರು ಅವುಗಳನ್ನು ವಿಮರ್ಶಿಸಿ ತಿಳಿಸುವುದರಿಂದಲೂ, ಪಾಠ ಹೇಳುವಾಗ ಉಪಾಧ್ಯಾಯರಿಗೆ ಅನುಭವಕ್ಕೆ ಬರುವುದ ರಿಂದಲೂ ಈ ನ್ಯೂನತೆಗಳು ಸರಿಪಟ್ಟು ಮುಂದಿನ ಮುದ್ರಣದಲ್ಲಿ ಈ ಗ್ರಂಥವು ಕನ್ನಡಿಗರ ವಿಶ್ವಾಸಕ್ಕೂ ವಿಶ್ವವಿದ್ಯಾಪೀಠದ ಗೌರವಕ್ಕೂ ಅರ್ಹವಾದದ್ದಾಗಲೆಂದು ಹಾರೈಸುತ್ತೇವೆ.

ಗ್ರಂಥವು ಮೊದಲು ನಿರೀಕ್ಷಿಸಿದ್ದಕ್ಕಿಂತಲೂ ವಿಸ್ತಾರವಾದದ್ದರಿಂದ, ೧-೨-೩ ನೆಯ ಭಾಗಗಳನ್ನು ಒಂದನೆಯ ಸಂಪುಟವಾಗಿಯೂ, ೪-೫ನೆಯ ಭಾಗಗಳನ್ನು ಎರಡನೆಯ ಸಂಪುಟವಾಗಿಯೂ ವಿಂಗಡಿಸಿರುತ್ತದೆ.

ಈ ಗ್ರಂಥವನ್ನು ರಚಿಸಬೇಕೆಂಬ ಸೂಚನೆಯನ್ನು ಕಾರ್ಯರೂಪಕ್ಕೆ ತಂದು, ಸಭೆಯವರಿಗೆ ಪ್ರೋತ್ಸಾಹವನ್ನೂ ಸಲಹೆಗಳನ್ನೂ ಕೊಟ್ಟು ಕನ್ನಡದ ವಿಷಯದಲ್ಲಿ ಅಭಿಮಾನವನ್ನು ತೋರಿಸಿರುವ ವಿಶ್ವವಿದ್ಯಾನಿಲಯದ ವೈಸ್ ಛಾನ್ಸೆಲರವರೂ, ವಿದ್ವನ್ಮಾನ್ಯರೂ ಆದ ಡಾಕ್ಟರ್ ಸರ್ ಬ್ರಜೇಂದ್ರನಾಥ ಶೀಲರವರಿಗೆ ನಮ್ಮ ಕೃತಜ್ಞತೆ ಯನ್ನು ಅರ್ಪಿಸುತ್ತೇವೆ.

ಮೈಸೂರು<br>೧೮-೯-೧೯೨೭

ಬಿ. ಎಂ. ಶ್ರೀಕಂಠಯ್ಯ<br>ಸಭಾಧ್ಯಕ್ಷ

## ಎರಡನೆಯ ಮುದ್ರಣ

ವಿಶ್ವವಿದ್ಯಾನಿಲಯದ ಅಧಿಕಾರಿಗಳಿಂದ ನಿಯಮಿಸಲ್ಪಟ್ಟ, ಮ|| ರಾ|| ಗಳಾದ ಟಿ. ಎಸ್. ವೆಂಕಣ್ಣಯ್ಯನವರು, ಎ. ಆರ್. ಕೃಷ್ಣಶಾಸ್ತ್ರಿಗಳವರು, ಮತ್ತು ಬಿ. ಎಂ. ಶ್ರೀಕಂಠಯ್ಯನವರು (ಅಧ್ಯಕ್ಷ) ಒಂದು ಸಮಿತಿಯಾಗಿ ಈ ಗ್ರಂಥವನ್ನು ಪರಿಷ್ಕರಿಸಿದ್ದಾರೆ.

ಅಲ್ಲಲ್ಲಿ ವಿಷಯದಲ್ಲಿಯೂ, ಕ್ರಮದಲ್ಲಿಯೂ ಬದಲಾವಣೆಗಳನ್ನು ಮಾಡಿರುವುದಲ್ಲದೆ, ಕನ್ನಡ ಛಂದಸ್ಸಿನ ಚರಿತ್ರೆ ಎಂಬ ಒಂದು ಹೊಸ ಪ್ರಕರಣವನ್ನು ಸೇರಿಸಿದೆ. ಇದರಲ್ಲಿ ಸೂಚಿಸಿರುವ ಅಂಶಗಳು ವಿಚಾರದೃಷ್ಟಿಯಿಂದ ಮಾಡಿರುತ್ತವೆ; ವಿದ್ವಾಂಸರು ವಿಮರ್ಶೆಮಾಡಿ ಸಹಾಯ ಮಾಡಬೇಕೆಂದು ಪ್ರಾರ್ಥನೆ.

ನಾಲ್ಕನೆಯ ಭಾಗವಾದ ಕನ್ನಡಭಾಷೆಯ ಚರಿತ್ರೆಯನ್ನೂ ಈ ಸಂಪುಟಕ್ಕೇ ಸೇರಿಸಿರುತ್ತದೆ. ಎರಡನೆಯ ಸಂಪುಟದಲ್ಲಿ ಐದನೆಯ ಭಾಗವಾದ ಕನ್ನಡಸಾಹಿತ್ಯ ಚರಿತ್ರೆ ಮಾತ್ರ ಪ್ರಕಟವಾಗುವುದು.

ಬೆಂಗಳೂರು
೮-೧೨-೧೯೩೬

ಬಿ. ಎಂ. ಶ್ರೀಕಂಠಯ್ಯ
ಅಧ್ಯಕ್ಷ

# ವಿಷಯಸೂಚಿಕೆ

## ೧ನೆಯ ಭಾಗ—ಹಳಗನ್ನಡದ ವ್ಯಾಕರಣ

## **೨ನೆಯ ಭಾಗ—ಕರ್ಣಾಟಕ ಛಂದಸ್ಸು**

## ೩ನೆಯ ಭಾಗ—ಅಲಂಕಾರ

### ೪ನೆಯ ಭಾಗ—ಕನ್ನಡಭಾಷೆಯ ಚರಿತ್ರೆ

# ೧. ಅವತರಣಿಕೆ

**ಕನ್ನಡ ಭಾಷೆಯ ಬೇರೆ ಬೇರೆ ರೂಪಗಳು**

ಜನರು ದಿನಚರಿಯ ವ್ಯವಹಾರಕ್ಕಾಗಿ ಬಳಸುವ ಭಾಷೆ ಕಾಲಕಾಲಕ್ಕೆ ಮಾರ್ಪಡುತ್ತದೆ. ಈ ಮಾರ್ಪಾಟು ತಕ್ಕಮಟ್ಟಿಗೆ ಗ್ರಂಥಗಳಲ್ಲಿಯೂ ಕಂಡು ಬರುತ್ತದೆ. ಕನ್ನಡವು ಈಗ ಇರುವ ರೂಪದಲ್ಲಿ ಹಿಂದೆ ಇರಲಿಲ್ಲ. ಈಗ ನಾವು ಬಳಸುತ್ತಿರುವ ಭಾಷೆ "ಹೊಸಗನ್ನಡ". ಇದಕ್ಕೆ ಹಿಂದೆ ಇದ್ದ ರೂಪವನ್ನು "ನಡುಗನ್ನಡ"ವೆನ್ನುತ್ತಾರೆ. ಇದನ್ನು ಹರಿಶ್ಚಂದ್ರ ಕಾವ್ಯ, ಗದುಗಿನ ಭಾರತ, ಚೆನ್ನಬಸವ ಪುರಾಣ ಮೊದಲಾದ ಷಟ್ಪದಿ ಗ್ರಂಥಗಳಲ್ಲಿ ನೋಡಬಹುದು. ನಡುಗನ್ನಡಕ್ಕೆ ಹಿಂದಿನದು "ಹಳಗನ್ನಡ". ಇದು ಪಂಪಭಾರತ, ಪಂಪರಾಮಾಯಣ ಮೊದಲಾದ ಚಂಪೂ ಗ್ರಂಥಗಳಲ್ಲಿಯೂ ಪುರಾತನ ಶಾಸನಗಳಲ್ಲಿಯೂ ಕಂಡುಬರುತ್ತದೆ. ಹಳಗನ್ನಡಕ್ಕೂ ಹಿಂದೆ ಕನ್ನಡಕ್ಕೆ ಒಂದು ರೂಪವಿತ್ತು. ಅದನ್ನು "ಪೂರ್ವದ ಹಳಗನ್ನಡ"ವೆನ್ನುತ್ತಾರೆ. ಆದರೆ ಈ ಪೂರ್ವದ ಹಳಗನ್ನಡದಲ್ಲಿ ರಚಿತವಾದ ಗ್ರಂಥವಾವುದೂ ದೊರೆತಿಲ್ಲ. ಈಗ ದೊರೆತಿರುವುವು ಹಳಗನ್ನಡ ನಡುಗನ್ನಡ ಗ್ರಂಥಗಳು. ನಡುಗನ್ನಡದಲ್ಲಿ ಹೊಸಗನ್ನಡ ಹಳಗನ್ನಡಗಳೆರಡೂ ಸೇರಿರುವುದರಿಂದ ನಮ್ಮ ಹಿಂದಿನ ಸಾಹಿತ್ಯವನ್ನು ಓದಬೇಕೆನ್ನುವವರು ಹಳಗನ್ನಡದ ಪರಿಚಯವನ್ನು ಸ್ವಲ್ಪಮಟ್ಟಿಗಾದರೂ ಪಡೆಯುವುದು ಅತ್ಯವಶ್ಯವಾಗಿದೆ.

**ಹಳಗನ್ನಡ ವ್ಯಾಕರಣಗಳು**

ಕನ್ನಡದಲ್ಲಿ ಗ್ರಂಥಗಳು ದೊರೆಯುವುದು ೯ನೆಯ ಶತಮಾನದಿಂದ. ಅಲ್ಲಿಂದ ಸುಮಾರು ಮೂರು ನಾಲ್ಕು ಶತಮಾನಗಳ ಕಾಲ ಗ್ರಂಥಗಳು ಹಳಗನ್ನಡದಲ್ಲಿ ರಚಿತವಾದುವು. ೧೨ನೆಯ ಶತಮಾನದಲ್ಲಿ ನಡುಗನ್ನಡ ಬಳಕೆಗೆ ಬಂತು. ಆದರೂ ಈಚೆಗೆ ಕೆಲವರು ಪ್ರೌಢ ಕವಿಗಳು ಹಳಗನ್ನಡದಲ್ಲಿ ಗ್ರಂಥರಚನೆ ಮಾಡಿರುವುದುಂಟು. ಉದಾಹರಣೆಗೆ—ಷಡಕ್ಷರ ಕವಿಯ ರಾಜಶೇಖರ ವಿಳಾಸ, ಬಸವಪ್ಪ ಶಾಸ್ತ್ರಿಗಳ ದಮಯಂತೀ ಸ್ವಯಂವರ ಮುಂತಾದವು. ಈ ಹಳಗನ್ನಡದ ಲಕ್ಷಣವನ್ನು ಹಿಂದಿನ ಮೂರು ಜನ ವ್ಯಾಕರಣಕಾರರು ನಿರೂಪಿಸಿದ್ದಾರೆ. ಇವರಲ್ಲಿ ಮೊದಲನೆಯವನು ನಾಗವರ್ಮ (ಕಾಲ—ಸು. ೧೧೪೫). ಈತನು ಎರಡು ವ್ಯಾಕರಣಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಒಂದು—ಶಬ್ದಸ್ಮೃತಿ—ಕನ್ನಡದಲ್ಲಿದೆ; ಇನ್ನೊಂದು—ಕರ್ಣಾಟಕ ಭಾಷಾಭೂಷಣ—ಸಂಸ್ಕೃತದಲ್ಲಿದೆ. ಶಬ್ದಸ್ಮೃತಿಯಲ್ಲಿ ಸೂತ್ರಗಳು ಕಂದರೂಪವಾಗಿವೆ; ಭಾಷಾಭೂಷಣದಲ್ಲಿ ಸೂತ್ರವೃತ್ತಿಗಳು ಸಂಸ್ಕೃತ ಗದ್ಯದಲ್ಲಿವೆ. ಶಬ್ದಸ್ಮೃತಿ ಕಾವ್ಯಾವಲೋಕನವೆಂಬ ಅಲಂಕಾರ ಗ್ರಂಥದ ಒಂದು ಭಾಗವಾದ್ದರಿಂದ ಅಲ್ಲಿ ವ್ಯಾಕರಣದ ವಿಷಯವು

ಸಂಗ್ರಹವಾಗಿ ಹೇಳಿದೆ; ಭಾಷಾಭೂಷಣದಲ್ಲಿ ಹೆಚ್ಚು ವಿಸ್ತಾರವಾಗಿ ಹೇಳಿದೆ. ನಾಗವರ್ಮನ ಕಾಲವಾದ ಸುಮಾರು ನೂರು ವರ್ಷಗಳ ಮೇಲೆ ಎಂದರೆ ಸು. ೧೨೬೦ರಲ್ಲಿ ಕೇಶಿರಾಜನು ಶಬ್ದಮಣಿದರ್ಪಣವನ್ನು ಬರೆದನು. ಇದು ಕನ್ನಡದಲ್ಲಿದೆ. ಸೂತ್ರಗಳನ್ನು ಕಂದಪದ್ಯರೂಪವಾಗಿಯೂ ವೃತ್ತಿಗಳನ್ನು ಗದ್ಯರೂಪವಾಗಿಯೂ ಬರೆದಿದೆ. ಇದರಲ್ಲಿ ನಾಗವರ್ಮನ ವ್ಯಾಕರಣಗಳಲ್ಲಿರುವುದಕ್ಕಿಂತಲೂ ಹೆಚ್ಚು ವಿಷಯಗಳು ಸೇರಿವೆ. ಹಳಗನ್ನಡ ಭಾಷೆಗೆ ಇದೇ ಪ್ರಮಾಣಗ್ರಂಥ. ೧೬೦೪ರಲ್ಲಿ ಭಟ್ಟಾಕಳಂಕನು ಶಬ್ದಾನುಶಾಸನವನ್ನು ಬರೆದನು. ಇದು ನಾಗವರ್ಮನ ಭಾಷಾಭೂಷಣದಂತೆ ಸಂಸ್ಕೃತದಲ್ಲಿ ರಚಿತವಾಗಿದೆ. ಇದರಲ್ಲಿ ಸೂತ್ರವೃತ್ತಿಗಳೂ ಅಲ್ಲದೆ ಪ್ರೌಢವಾದ ವ್ಯಾಖ್ಯಾನವೂ ಇದೆ. ವ್ಯಾಕರಣಶಾಸ್ತ್ರದ ಪ್ರಕ್ರಿಯೆಯ ದೃಷ್ಟಿಯಿಂದ ಇದೇ ಅತ್ಯಂತ ಪ್ರೌಢವೂ ಗೌರವಾರ್ಹವೂ ಆದ ಗ್ರಂಥ. ಆದರೆ ಪ್ರಯೋಗಗಳ ಪ್ರಾಮಾಣ್ಯದ ವಿಷಯದಲ್ಲಿ ಭಟ್ಟಾಕಳಂಕನಿಗಿಂತಲೂ ಕೇಶಿರಾಜನು ಹೆಚ್ಚು ವಿಶ್ವಾಸಾರ್ಹನೆಂದು ಹೇಳಬೇಕು.

ನಮ್ಮ ಹಿಂದಿನ ಸಾಹಿತ್ಯಗ್ರಂಥಗಳನ್ನು ಓದುವವರೆಲ್ಲರೂ ಈ ಪ್ರೌಢ ವ್ಯಾಕರಣಗಳನ್ನು ಓದುವುದು ಸಾಧ್ಯವಾಗದಿರಬಹುದಾದ್ದರಿಂದ ಹಳಗನ್ನಡದ ಲಕ್ಷಣವನ್ನು ಸ್ಥೂಲವಾಗಿ ತಿಳಿಯುವುದಕ್ಕೆ ಬೇಕಾದ ಕೆಲವು ಮುಖ್ಯ ವಿಷಯಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ. ವಿಷಯವನ್ನು ಹಳಗನ್ನಡ ವ್ಯಾಕರಣಗಳಿಂದ ಸಂಗ್ರಹಿಸಿದ್ದರೂ ನಿರೂಪಣ ಕ್ರಮದಲ್ಲಿ ಅವನ್ನು ಸಂಪೂರ್ಣವಾಗಿ ಅನುಸರಿಸಿಲ್ಲ. ಅಲ್ಲದೆ, ಭಾಷಾ ಚರಿತ್ರೆಯ ದೃಷ್ಟಿಯಿಂದ ಅತ್ಯಾವಶ್ಯಕವೆಂದು ತೋರಿದ ಕೆಲವು ಕಡೆಗಳಲ್ಲಿ ಪ್ರಾಚೀನರ ಅಭಿಪ್ರಾಯದಿಂದ ಭಿನ್ನವಾದ ವಿವರಣೆಗಳನ್ನು ಕೊಡಲಾಗಿದೆ.

# ೧. ಅಕ್ಷರಪ್ರಕರಣ

ಭಾಷೆ ಸಾಮಾನ್ಯವಾಗಿ ವಾಕ್ಯರೂಪದಲ್ಲಿರುತ್ತದೆ. ವಾಕ್ಯವು ಪದಗಳಿಂದ ಕೂಡಿರುತ್ತದೆ. ಪದವು ಅಕ್ಷರ (ಅಥವಾ ವರ್ಣ)ಗಳಿಂದ ಆಗಿರುತ್ತದೆ. ಆದ್ದರಿಂದ ವ್ಯಾಕರಣದ ಆದಿಯಲ್ಲಿ ಅಕ್ಷರವಿಚಾರವು ಬರುವುದು ರೂಢಿಯಾಗಿದೆ.

## 1. ಕನ್ನಡದ ವರ್ಣಮಾಲೆ

ಅಚ್ಚಗನ್ನಡದಲ್ಲಿ ೪೭ ಅಕ್ಷರಗಳಿವೆಯೆಂದು ಕೇಶಿರಾಜನು ಹೇಳಿರುತ್ತಾನೆ. ಆ ಅಕ್ಷರಗಳು ಯಾವುವೆಂದರೆ :

(i) ಸ್ವರಗಳು : ಅ ಆ, ಇ ಈ, ಉ ಊ, ಎ ಏ ಐ, ಒ ಓ ಔ = ೧೨

(ii) ವ್ಯಂಜನಗಳು (ವರ್ಗೀಯ) : ಕ ಖ ಗ ಘ ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ ಮ = ೨೫

(ಅವರ್ಗೀಯ) : ಯ ರ ಲ ವ ಸ ಹ ಳ ಱ ೞ = ೯

(iii) ಅನುಸ್ವಾರ : ಂ ೧

———
೪೭
———

ಅಚ್ಚಗನ್ನಡದಲ್ಲಿ ದೇಶ್ಯಶಬ್ದಗಳೂ ತದ್ಭವಗಳೂ ಸೇರುತ್ತವೆ; ಸಂಸ್ಕೃತ ಶಬ್ದಗಳು ಸೇರುವುದಿಲ್ಲ. ಕನ್ನಡ ಭಾಷೆಗೆ ಸಂಸ್ಕೃತ ಶಬ್ದಗಳೂ ಬಂದು ಸೇರಿರುವುದರಿಂದ ಕನ್ನಡ ದಲ್ಲಿಲ್ಲದ, ಸಂಸ್ಕೃತ ವರ್ಣಮಾಲೆಗೆ ಸೇರಿದ, ಕೆಲವು ಅಕ್ಷರಗಳೂ ಕನ್ನಡದಲ್ಲಿವೆ. ಅವು ಯಾವುವೆಂದರೆ : ಋ (ಋಷಿ), ಶ (ಶಕುನ), ಷ (ಆಷಾಢ), ವಿಸರ್ಗ (ಅಂತಃಕರಣ)

## 2. ಱ, ೞ

ಮೇಲೆ ಹೇಳಿದ ಅಕ್ಷರಗಳಲ್ಲಿ ಱ, ೞ ಇವೆರಡು ಈಗ ಬಳಕೆಯಲ್ಲಿಲ್ಲ. ಸು. ೧೧ನೇ ಶತಮಾನದಲ್ಲಿ 'ೞ'ವೂ, ೧೬ನೆಯ ಶತಮಾನದಲ್ಲಿ 'ಱ'ವೂ ಬಿಟ್ಟುಹೋದುವು. ಈ ಅಕ್ಷರಗಳ ಉಚ್ಚಾರವು ನಿಂತಮೇಲೂ ಅವುಗಳನ್ನು ಗ್ರಂಥಗಳಲ್ಲಿ ಉಪಯೋಗಿಸು ವುದು ಕೆಲಕಾಲದವರೆಗೂ ವಾಡಿಕೆಯಾಗಿತ್ತು. ಈಚೆಗೆ ಅದೂ ನಿಂತುಹೋಗಿದೆ. 'ೞ'ಕ್ಕೆ ಬದಲಾಗಿ 'ಳ'ವೂ, 'ಱ'ಕ್ಕೆ ಬದಲಾಗಿ 'ರ'ವೂ ಬಳಕೆಗೆ ಬಂದಿವೆ. ಉಚ್ಚಾರ ನಿಂತುಹೋಗಿ ಈ ಅಕ್ಷರಗಳು ಬರವಣಿಗೆಯಲ್ಲಿ ಮಾತ್ರ ಉಳಿದಾಗ ಅವುಗಳನ್ನು

ಗುರುತಿಸುವುದಕ್ಕೆ ಬೇರೆ ಬೇರೆ ಹೆಸರುಗಳನ್ನು ಕೊಡುವುದು ಆವಶ್ಯಕವಾಯಿತು. ಹೀಗೆ 'ೞ'ಕ್ಕೆ ರಳ ಎಂದೂ 'ಱ' ಕ್ಕೆ ಶಕಟರೇಫ ಅಥವಾ ಬಂಡಿಯ ರ ಎಂದೂ ಹೆಸರಾಯಿತು. ಇದರ ಜತೆಗೆ, ಅಚ್ಚಗನ್ನಡ ಶಬ್ದಗಳಲ್ಲಿರುವ 'ಳ' ಕ್ಕೆ ಕುಳವೆಂದೂ ಸಂಸ್ಕೃತ ಶಬ್ದಗಳಲ್ಲಿಯ 'ಲ'ಕ್ಕೆ ಪ್ರತಿಯಾಗಿ ಬರುವ 'ಳ'ಕ್ಕೆ ಕ್ಷಳವೆಂದೂ ಸಂಜ್ಞೆ ಬಂದಿತು. ರಳ ಕುಳ ಕ್ಷಳಗಳಿಗೆ ಉದಾಹರಣೆಗಳು: ರಳ—ಮೞೆ, ೋೞೆ; ಕುಳ—ಬೆಳೆ, ತಿಳಿ; ಕ್ಷಳ—ನಳಿನ( ಂ. ನಲಿನ). ಕಾಳಿದಾಸ (ಸಂ. ಕಾಲಿದಾಸ).

ಱ, ೞ ಗಳ ಪ್ರಯೋಗವು ಈಗ ತಪ್ಪಿಹೋಗಿದ್ದರೂ ಹಳಗನ್ನಡಕ್ಕೆ ಅವು ಬಹು ಮುಖ್ಯವಾದುವು. ಈ ಅಕ್ಷರಗಳ ವ್ಯತ್ಯಾಸದಿಂದ ಅನೇಕ ವೇಳೆ ಶಬ್ದಗಳ ಅರ್ಥವೇ ವ್ಯತ್ಯಾಸವಾಗುತ್ತದೆ; ಇದಕ್ಕೆ ಕೆಲವು ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ. ಹಳಗನ್ನಡವನ್ನು ಕಲಿಯುವವರು ಈ ಅಕ್ಷರಗಳ ಪ್ರಯೋಗದ ಕಡೆಗೆ ಹೆಚ್ಚು ಗಮನವನ್ನು ಕೊಡಬೇಕು:

ಅರಿ=ಕತ್ತರಿಸು, ಅಱಿ=ತಿಳಿ.
ಕೊರೆ=ಗೊರಕೆ ಹಾಕು, ಕೊಱೆ=ಕತ್ತರಿಸು.
ಒರೆ=ಉಜ್ಜು, ಒಱೆ=ಸ್ರವಿಸು, ಸುರಿ.
ನೆರೆ=ಸೇರು, ನೆಱೆ=ತುಂಬು.
ಮುರಿ=ತಿರುಗು, ಮುಱಿ=ಕತ್ತರಿಸು.
ಪರಿ=ಹೋಗು. ಪಱಿ=ಸೀಳು.
ಕರೆ=ದಡ, ಕಱೆ=ಕಪ್ಪು.
ಅರೆ=ಅರ್ಧ, ಅಱೆ=ಬಂಡೆ.
ಆಳ್=ಸೇವಕ, ಆೞ್=ಮುಳುಗು.
ತಳೆ=ಹೊಂದು, ತೞೆ=ಛತ್ರಿ.
ಬಾಳ್=ಕತ್ತಿ, ಬಾೞ್=ಜೀವನ.
ಪೊಳೆ=ಪ್ರಕಾಶಿಸು, ಪೊೞೆ=ನದಿ.
ಬಾಳೆ=ಒಂದು ಜಾತಿಯ ಮೀನು, ಬಾೞೆ=ಬಾಳೆಯ ಗಿಡ.
ಕಳಿ=ಹಣ್ಣಾಗು, ಕೞಿ=ಸಾಯಿ.
ಉಳಿ=ಕೆತ್ತುವ ಉಳಿ, ಉೞ =ಬಿಡು, ನೀಗು.
ಎಳೆ=(ತದ್ಭವ) ಭೂಮಿ, ಎೞೆ=ಸೆಳೆ.
ಅಳಿ=(ತದ್ಭವ) ದುಂಬಿ, ಅೞಿ=ಸಾಯಿ, ಕೆಡು, ಕೆಡಿಸು.

## 3. ಅಕ್ಷರಗಳ ಉತ್ಪತ್ತಿ

ವ್ಯಾಕರಣದಲ್ಲಿ ಹೇಳುವ ಕೆಲವು ವಿಷಯಗಳನ್ನು—ಉದಾಹರಣೆಗೆ ಸಂಧಿ ಕಾರ್ಯಗಳನ್ನು—ಗ್ರಹಿಸಬೇಕಾದರೆ ಅಕ್ಷರಗಳ ಉತ್ಪತ್ತಿಸ್ಥಾನದ ಪರಿಚಯ ಆವಶ್ಯಕ. ಕನ್ನಡ

ವ್ಯಾಕರಣಕಾರರು ಈ ವಿಷಯವನ್ನು ತಮ್ಮ ಗ್ರಂಥಗಳಲ್ಲಿ ವಿಶದಮಾಡಿಲ್ಲ: ಸಂಸ್ಕೃತ ವ್ಯಾಕರಣಗಳಲ್ಲಿ ಹೇಳಿರುವುದನ್ನೇ ಒಪ್ಪಿಕೊಂಡಿರುವಂತೆ ಕಾಣುತ್ತದೆ. ಸ್ವಲ್ಪ ಹೆಚ್ಚು ಕಡಮೆ ಅದೇ ಕ್ರಮವನ್ನು ಅನುಸರಿಸಿ ಇಲ್ಲಿ ಬರೆದಿದೆ.

| | ಸ್ವರಗಳು | ವರ್ಗೀಯ ವ್ಯಂಜನಗಳು | ಅವರ್ಗೀಯ ವ್ಯಂಜನಗಳು |
|---|---|---|---|
| ಕಂಠ್ಯ | ಅ, ಆ | ಕ ವರ್ಗ | ಹ |
| ತಾಲವ್ಯ | ಇ ಈ (ಎ ಏ) | ಚ ,, | ಯ, ಶ |
| ಮೂರ್ಧನ್ಯ | ಋ ೠ | ಟ ,, | ರ, ಷ (ಱ, ೞ, ಳ) |
| ದಂತ್ಯ | . . | ತ ,, | ಲ, ಸ |
| ಓಷ್ಠ್ಯ | ಉ ಊ (ಒ ಓ) | ಪ ,, | . . |
| ಕಂಠತಾಲವ್ಯ | ಐ | . . | . . |
| ಕಂಠೋಷ್ಠ್ಯ | ಔ | . . | . . |
| ದಂತೋಷ್ಠ್ಯ | . . | . . | ವ |

ರ ಹುಟ್ಟುವ ಸ್ಥಾನವನ್ನು ಒತ್ತಿ ಉಚ್ಚರಿಸಿದರೆ ಱ ಕಾರವೂ, ಡ ಹುಟ್ಟುವ ಸ್ಥಾನವನ್ನು ಒತ್ತಿ ಉಚ್ಚರಿಸಿದರೆ ೞ ಕಾರವೂ ಹುಟ್ಟುತ್ತವೆಂದು ಕೇಶಿರಾಜನು ಹೇಳುತ್ತಾನೆ. ಆ ಮತದ ಪ್ರಕಾರ ಅವೆರಡೂ ಮೂರ್ಧನ್ಯಗಳಾಗುತ್ತವೆ. ಳ ಕಾರವೂ ಲ ಕಾರವೂ ಏಕಸ್ಥಾನೀಯಗಳೆಂದು ಕೇಶಿರಾಜನು ಹೇಳಿದ್ದರೂ, ನಿಜವಾಗಿ 'ಳ' ಮೂರ್ಧನ್ಯ. ಸಂಸ್ಕೃತ ವರ್ಣಮಾಲೆಯಲ್ಲಿ ಎ, ಒ ಗಳಿಲ್ಲ; ಏ ಓ ಗಳನ್ನು ಸಂಧಿ ಸ್ವರಗಳೆಂದು ಕರೆದು ಕ್ರಮವಾಗಿ ಐ ಔ ಗಳ ಜೊತೆಗೆ ಸೇರಿಸುತ್ತಾರೆ. ಆದರೆ ಕನ್ನಡದಲ್ಲಿ ಎ ಏ ಒ ಓ ಇವು ನಾಲ್ಕೂ ಸಾಮಾನ್ಯ ಸ್ವರಗಳು. ಇವುಗಳ ಉತ್ಪತ್ತಿ ಸ್ಥಾನವನ್ನು ಇಲ್ಲಿ ಇ, ಉ ಗಳಿರುವಂತೆಯೇ ಕ್ರಮವಾಗಿ ಕೊಡಲಾಗಿದೆ. ಐ ಔ ಎಂಬುವು ಕನ್ನಡದ ಸಹಜ ಸ್ವರಗಳಲ್ಲ; ಅವುಗಳ ನಿಜವಾದ ಉಚ್ಚಾರಣೆ ಹಳಗನ್ನಡದಲ್ಲಿ ಎಯ್ (ಅಥವಾ ಅಯ್), ಅವ್ ಎಂದು. ಉದಾ: ಮೆಯ್ (ಮೈ), ಅಯ್ದು (ಐದು); ಕವುಂಕುಳ್ (ಕೌಂಕುಳ್).

ಅನುಸ್ವಾರಕ್ಕೆ ಕನ್ನಡದಲ್ಲಿ ಒಂದು ನಿಯಮಿತವಾದ ಉಚ್ಚಾರವಿಲ್ಲ. ಪದಾಂತ್ಯದಲ್ಲಿ ಇದರ ಉಚ್ಚಾರವು ಮ್. ಪದ ಮಧ್ಯದಲ್ಲಿ ಬರಹದ ಸೌಲಭ್ಯಕ್ಕಾಗಿ ಅನುಸ್ವಾರವನ್ನು ಬರೆದರೂ ಅದರ ನಿಜವಾದ ಉಚ್ಚಾರಣೆ ತನ್ನ ಮುಂದಿರುವ ವ್ಯಂಜನದ ವರ್ಗಕ್ಕೆ ಸೇರಿದ ಅನುನಾಸಿಕದ್ದು. ಅಂಕ = ಅಙ್ಕ, ಅಂಚೆ = ಅಞ್ಚೆ, ಉಂಟು = ಉಣ್ಟು ಇತ್ಯಾದಿ. ಪದಾಂತ್ಯದಲ್ಲಿ ಮ್, ನ್ ಗಳಿಗೆ ಬದಲಾಗಿ ಅನುಸ್ವಾರವನ್ನು ಉಪಯೋಗಿಸುವುದು ಬಹಳ ಹಿಂದಿನ ಕಾಲದಲ್ಲಿಯೇ ಬಳಕೆಗೆ ಬಂದಿತ್ತು.

**4. ಹಳಗನ್ನಡದ ಕೆಲವು ಶಬ್ದರೂಪಗಳು :**

ಹಳಗನ್ನಡದಲ್ಲಿದ್ದ ೞ ಱ ಗಳು ಪ್ರಯೋಗದಲ್ಲಿಲ್ಲವೆಂದೂ ಆದಕಾರಣ ಹಳಗನ್ನಡ ವನ್ನು ಕಲಿಯುವವರು ಅವುಗಳ ಕಡೆ ಹೆಚ್ಚು ಗಮನವನ್ನು ಕೊಡಬೇಕೆಂದೂ ಹಿಂದೆ ಹೇಳಿಕಷ್ಟೆ. ೞ ಱ ಗಳ ಉಚ್ಚಾರವು ವ್ಯತ್ಯಾಸವಾದಂತೆಯೇ ಮತ್ತೆ ಕೆಲವು ಅಕ್ಷರಗಳ ಉಚ್ಚಾರದಲ್ಲಿಯೂ ವ್ಯತ್ಯಾಸವಾಗಿದೆ. ಹಳಗನ್ನಡ ಶಬ್ದಗಳಿಗೆ ಸಂಬಂಧಿಸಿದ ಈ ಬಗೆಯ ಕೆಲವು ವಿಷಯಗಳನ್ನು ಇಲ್ಲಿ ತಿಳಿಸಿದೆ.

(i) ಈಗ ಳಾಂತವಾಗಿರುವ ಕೆಲವು ಶಬ್ದಗಳು ಹಳಗನ್ನಡದಲ್ಲಿ ಲಾಂತವಾಗಿದ್ದುವು. ಅವು ಯಾವುವೆಂದರೆ :

ಬೆರಲ್, ಎರಲ್, ಒರಲ್, ಕೊರಲ್, ಸರಲ್, ಅರಲ್, ಪರಲ್, ಮುರಲ್, ನರಲ್, ಮೊದಲಾದುವು. (ಇವು ಈಗ ಬೆರಳು, ಕೊರಳು, ಹರಳು, ಮುಂತಾದ ಳಾಂತಗಳಾಗಿವೆ.) ಈಗ (ಉ ಸೇರಿ) ಸ್ವರಾಂತವಾಗಿರುವ ಅನೇಕ ಶಬ್ದಗಳು ಹಳಗನ್ನಡ ದಲ್ಲಿ ವ್ಯಂಜನಾಂತವಾಗಿದ್ದುವೆಂಬುದನ್ನು ಗಮನಿಸಬೇಕು.

(ii) ಈಗ ಬಿಂದುರಹಿತವಾಗಿರುವ ಅನೇಕ ಶಬ್ದಗಳು ಹಳಗನ್ನಡದಲ್ಲಿ ಬಿಂದುವಿ ನಿಂದ ಕೂಡಿದ್ದುವು :

ಉದಾ : ಬೆಡಂಗು, ಕುಱುಂಬಂ, ಅಡಂಗು, ಸಿಡುಂಬು, ಮಿೞಂಟು,
ಬೇಂಟೆ, ತೋಂಟಿಗಂ, ಬಣಂಜಿಗಂ—ಇತ್ಯಾದಿ. ಇವು ಈಗ
ಬೆಡಗು, ಕುರುಬ ಈ ರೀತಿಯಾಗಿವೆ.

(iii) ಹಳಗನ್ನಡದಲ್ಲಿ ರೇಫಯುಕ್ತವಾಗಿದ್ದ ಒತ್ತಕ್ಷರಗಳು ಈಗ ಸಜಾತೀಯ ಸಂಯುಕ್ತ ವ್ಯಂಜನಗಳಾಗಿವೆ :

ಉರ್ದು, ಪರ್ದು, ತಿರ್ದು, ನುರ್ಗು, ತರ್ಗು, ಕುರ್ಗು ಇತ್ಯಾದಿ. ಇವು ಈಗ ಉದ್ದು, ಹದ್ದು ಈ ರೀತಿಯಾಗಿವೆ.

(iv) ಶಬ್ದಗಳ ಅಂತ್ಯದಲ್ಲಿ ನ ಣ ಯ ರ ಲ ಳ ಱ ೞ ಗಳು ಹಳಗನ್ನಡದಲ್ಲಿ ಸಾಮಾನ್ಯವಾಗಿ ವ್ಯಂಜನರೂಪದಲ್ಲಿಯೇ ನಿಲ್ಲುತ್ತಿದ್ದುವು :

ಕೊಯ್ ಸಾಯ್, ಬೆಮರ್ ಉಸಿರ್, ಪಾಲ್ ಬಿಲ್, ಜಾಣ್ ಕಣ್, ಪೊನ್ ಜೇನ್, ತಿರುಳ್ ಕರುಳ್, ಬ ಱ್ ಕೆಸಱ್, ಪೊಗೞ್ ಬಾೞ್ ಇತ್ಯಾದಿ. ಇ, ಉ ಗಳು ಸೇರಿ ಹೊಸಗನ್ನಡದಲ್ಲಿ ಈ ಶಬ್ದಗಳು ಸ್ವರಾಂತವಾಗಿವೆ.

ಕೆಲವು ಶಬ್ದಗಳು ಮಾತ್ರ ಮೊದಲಿನಿಂದಲೂ ಉಕಾರಾಂತಗಳಾಗಿಯೇ ಇವೆ—ಕಱು, ತುೞು, ಪುೞು ಇತ್ಯಾದಿ.

## ೩. ಸಂಧಿಪ್ರಕರಣ

ಪ್ರಕೃತಿಗೆ ಪ್ರತ್ಯಯ ಸೇರಿದಾಗಲೂ ಪದಕ್ಕೆ ಪದ ಸೇರಿದಾಗಲೂ ಮೊದಲನೆಯದರ ಅಂತ್ಯಾಕ್ಷರವನ್ನೂ ಎರಡನೆಯದರ ಆದ್ಯಕ್ಷರವನ್ನೂ ಕೂಡಿಸಿ ಉಚ್ಚಾರಮಾಡುತ್ತಾರೆ. ಹಾಗೆ ಉಚ್ಚಾರ ಮಾಡಿದಾಗ ಕೆಲವು ವೇಳೆ (i) ಆ ಎರಡು ಅಕ್ಷರಗಳಲ್ಲಿ ಒಂದು ಹೋಗುವುದು (ಲೋಪ), (ii) ಎರಡರ ನಡುವೆ ಒಂದು ಹೊಸ ಅಕ್ಷರ ಬರುವುದು (ಆಗಮ), (iii) ಅಥವಾ ಅವುಗಳಲ್ಲಿ ಒಂದಕ್ಷರಕ್ಕೆ ಪ್ರತಿಯಾಗಿ ಮತ್ತೊಂದಕ್ಷರ ಬರುವುದು (ಆದೇಶ). ಬೇರೆ ಬೇರೆಯಾಗಿದ್ದ ಅಕ್ಷರಗಳನ್ನು ಕೂಡಿಸಿ ಉಚ್ಚರಿಸುವುದಕ್ಕೆ ಸಂಧಿ ಎಂದೂ ಹಾಗೆ ಸಂಧಿಯಾದಾಗ ಆಗುವ ವ್ಯತ್ಯಾಸಗಳಿಗೆ ಸಂಧಿಕಾರ್ಯಗಳೆಂದೂ ಸಂಜ್ಞೆ.

### 1. ಸ್ವರಸಂಧಿ–ಲೋಪ

ಎರಡು ಸ್ವರಗಳನ್ನು ಕೂಡಿಸಿ ಉಚ್ಚರಿಸಿದಾಗ ಅವೆರಡೂ ಸ್ವರಗಳಾಗಿಯೇ ಉಳಿಯುವುದು ದ್ರಾವಿಡ ಭಾಷೆಗಳಲ್ಲಿ ಅಪೂರ್ವ. ಅವುಗಳಲ್ಲಿ ಒಂದು ಲೋಪವಾಗುತ್ತದೆ, ಅಥವಾ ಅವೆರಡರ ನಡುವೆ ಒಂದು ವ್ಯಂಜನಾಕ್ಷರ ಆಗಮವಾಗುತ್ತದೆ. ಒಂದು ಸ್ವರಸಂಧಿಯಾದಾಗ ಲೋಪವಾಗುವುದೇ ಆಗಮವಾಗುವುದೇ ಎಂಬುದು ಅರ್ಥದ ಮೇಲಾಗುವ ಪರಿಣಾಮವನ್ನು ಅವಲಂಬಿಸುತ್ತದೆ. ಅರ್ಥಕ್ಕೆ ಭಂಗ ಬಾರದಿದ್ದರೆ ಸಾಮಾನ್ಯವಾಗಿ ಸ್ವರಕ್ಕೆ ಸ್ವರ ಪರವಾದಾಗ ಪೂರ್ವ ಸ್ವರಕ್ಕೆ ಲೋಪಬರುತ್ತದೆ. ಈ ವಿಷಯವಾಗಿ ಶಬ್ದಮಣಿದರ್ಪಣದಲ್ಲಿ ಈ ಸೂತ್ರವಿದೆ :

> **ಸ್ವರಮಿದಿರೊಳಿರೆ ವಿಭಕ್ತಿ**
> **ಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ ।**
> **ವರ ಸಂಸ್ಕೃತ ಕರ್ಣಾಟಕ**
> **ಮೆರಡೞೊಳಂ ನಾಮರೂಢಿಯೞಿಯದ ಪಕ್ಷಂ ॥ ೫೨ ॥**

‘ನಾಮರೂಢಿಯೞಿವುದು’* ಎಂದರೆ ಅರ್ಥಕ್ಕೆ ಹಾನಿ ಬರುವುದು ಎಂದು ಅರ್ಥ. ವಿಧು ಇದು, ಕವಿ ಆರ್ ಎಂಬಿವನ್ನು ವಿಧಿದು, ಕವಾರ್ ಎಂದು ಪೂರ್ವ

---

* ಸಂಧಿಯಲ್ಲಿ ಪೂರ್ವಪದದ ಕೊನೆಯ ಸ್ವರವು ಲೋಪವಾಗುವುದಕ್ಕೆ ಮುಖ್ಯ ಕಾರಣ ಯಾವುದೆಂದರೆ, ಆ ಸ್ವರವು ದುರ್ಬಲವಾಗಿರುವುದು. ದ್ರಾವಿಡ ಭಾಷೆಗಳಲ್ಲಿ ಶಬ್ದದ ಅಂತ್ಯದ ‘ಉ’ ಕಾರವು ಸಾಮಾನ್ಯವಾಗಿ ಮೂಲಪ್ರಕೃತಿಗೆ ಸೇರಿದ್ದಲ್ಲ; ಉಚ್ಚಾರಣೆಯ ಸೌಕರ್ಯಕ್ಕೋಸ್ಕರ ಬಂದು ಸೇರಿದ್ದು; ಅದು ಲೋಪವಾದರೂ ಶಬ್ದದ ಮುಖ್ಯ ರೂಪಕ್ಕೆ ಹಾನಿಯುಂಟಾಗುವುದಿಲ್ಲ. ಈ ಬಗೆಯ ಉ ಕಾರಕ್ಕೆ ತಮಿಳಿನಲ್ಲಿ ‘ಕುಱ್ಱಿಯಲುಕರಂ’ ಎಂದು ಹೆಸರು. ಸಂಧಿಯಲ್ಲಿ ಲೋಪವಾಗುವ ಸ್ವರವು ಸಾಮಾನ್ಯವಾಗಿ ಈ ‘ಕಿರಿಯ ಉ ಕಾರವೇ’. ಉದಾ : ನೋಡು+ಇಲ್ಲಿ=ನೋಡಿಲ್ಲಿ; ಆದರೆ, ಕಱು+ಇದು=ಕಱುವಿದು. (‘ನೋಡು’

ಸ್ವರಕ್ಕೆ ಲೋಪಮಾಡಿ ಕೂಡಿಸಿದರೆ ಅರ್ಥಕ್ಕೆ ಹಾನಿಬರುತ್ತದೆ. ಪಸಿದು ಉಂಡಂ, ಕೂಡಿ ಇರ್ದಂ ಎಂಬಲ್ಲಿ ಪಸಿದುಂಡಂ, ಕೂಡಿರ್ದಂ ಎಂದು ಹೇಳಿದರೆ ಅರ್ಥಕ್ಕೆ ಹಾನಿ ಬರುವುದಿಲ್ಲ. ಆದಕಾರಣ ಇಲ್ಲಿ ಲೋಪಸಂಧಿಯನ್ನು ಮಾಡಬಹುದು.

ಅರ್ಥಕ್ಕೆ ಹಾನಿ ಬರುವ ಸಂದರ್ಭಗಳಲ್ಲಿ ಯ್ ಅಥವಾ ವ್ ಆಗಮವಾಗುತ್ತವೆ. ವಿಧು + ಇದು = ವಿಧುವಿದು, ಕವಿ + ಆರ್ = ಕವಿಯಾರ್. ಅಪೂರ್ವವಾಗಿ ಲೋಪ ಆಗಮಗಳೆರಡೂ ಆಗುವ್ರದುಂಟು. ಒತ್ತೆ + ಇಟ್ಟಂ = ಒತ್ತಿಟ್ಟಂ, ಒತ್ತೆಯಿಟ್ಟಂ; ಸೇಸೆ + ಇಕ್ಕಿದಂ = ಸೇಸಿಕ್ಕಿದಂ, ಸೇಸೆಯಿಕ್ಕಿದಂ; ಮಾತು + ಎಲ್ಲಂ = ಮಾತೆಲ್ಲಂ, ಮಾತುವೆಲ್ಲಂ.

## 2. ಆಗಮ—ಯ, ವ

ಸ್ವರಸಂಧಿಯಲ್ಲಿ ಆಗಮವಾಗುವ ಯ, ವ ಎಂಬ ಅಕ್ಷರಗಳು ಉಚ್ಚಾರಣೆಯ ಸೌಕರ್ಯವನ್ನನುಸರಿಸಿ ಬರುವುವು. ವ್ಯಂಜನಗಳಾದರೂ ಇವು ಅರ್ಧಸ್ವರಗಳೆಂದು ಪರಿಗಣಿತವಾಗಿವೆ. ಇ ಈ ಎ ಏ ಗಳಿಗೆ ಸ್ವರ ಪರವಾದಾಗ ಯಕಾರವೂ ಉ ಊ ಒ ಓ ಗಳಿಗೆ ಸ್ವರ ಪರವಾದಾಗ ವ ಕಾರವೂ ಸಾಮಾನ್ಯವಾಗಿ ಆಗಮವಾಗುವುವು. ಇ ಈ ಎ ಏ ಗಳೂ ಯ ಕಾರವೂ ತಾಲವ್ಯಗಳೆಂಬುದನ್ನೂ ಉ ಊ ಒ ಓ ಗಳೂ ವ ಕಾರವೂ ಓಷ್ಠ್ಯಗಳೆಂಬುದನ್ನೂ ಗಮನಿಸಿದರೆ ಇಲ್ಲಿ ಸಂಧಿಕಾರ್ಯವು ಉತ್ಪತ್ತಿ ಸ್ಥಾನವನ್ನನುಸರಿಸಿರುವುದು ಕಂಡುಬರುತ್ತದೆ. ಇನ್ನು ಕೆಲವೆಡೆಗಳಲ್ಲಿಯೂ ಈ ಆಗಮಗಳಾಗುವುವು. ಅವು ಯಾವುವೆಂದರೆ:

(i) ಅ ಕಾರಕ್ಕೆ ಇ ಎ ಗಳು ಪರವಾದಾಗ ಯ ಕಾರಾಗಮವಾಗುವುದು:
ಉದಾ: ಆತನ + ಎ (ಅವಧಾರಣಾರ್ಥದಲ್ಲಿ) = ಆತನಯೆ, ಸೊಗ + ಇಸು = ಸೊಗಯಿಸು, ಪಟಪಟ + ಎಂದು = ಪಟಪಟಯೆಂದು.

(ii) ಆ ಕಾರಕ್ಕೆ ಉ ಊ ಒ ಓ ಗಳು ಪರವಾದಾಗ ವ ಕಾರಾಗಮವಾಗುವುದು:

ಉದಾ: ಆ + ಉದಕಂ = ಆವುದಕಂ, ಆ + ಊರ್ = ಆವೂರ್,
ಆ + ಒಲೆ = ಆವೊಲೆ, ಆ + ಓಲುಗಂ = ಆವೋಲುಗಂ.

(iii) ಈ ಕಾರಕ್ಕೆ ಉ ಊ ಒ ಓ ಗಳು ಪರವಾದಾಗ ಯ ಕಾರಾಗಮ ಮಾತ್ರವಲ್ಲದೆ ವ ಕಾರಾಗಮವಾಗುವುದೂ ಉಂಟು:

ಎಂಬುದರ ಕೊನೆಯ 'ಉ' ಪ್ರಕೃತಿಗೆ ಮೂಲತಃ ಸೇರಿದ್ದಲ್ಲ; ಆದರೆ 'ಕಜು' ಎಂಬಲ್ಲಿ ಉದು ಪ್ರಕೃತಿಗೇ ಸೇರಿದ್ದು.) ಮಾಜ್ಕೆ (ಮಾಡು+ಕೆ); ಮಾಜ್ಪುದು (ಮಾಡು+ಪ+ಉದು) ಈ ಕಡೆಗಳಲ್ಲಿ ವ್ಯಂಜನ ಪರವಾದಾಗ ಕೂಡ ಪೂರ್ವಪದಾಂತ್ಯದ 'ಉ' ಲೋಪವಾಗುವುದನ್ನು ಇಲ್ಲಿ ಗಮನಿಸಬಹುದು.

ಉದಾ : ಈ + ಉದ್ಯಾನಂ = ಈಯುದ್ಯಾನಂ, ಈವುದ್ಯಾನಂ ; ಹೀಗೆಯೇ—
ಈಯೂರ್, ಈವೂರ್ ; ಈಯೊಕ್ಕಲ್, ಈವೊಕ್ಕಲ್ ;
ಈಯೋಲಗಂ, ಈವೋಲಗಂ.

(iv) ಈ ಕಾರಕ್ಕೆ ಈ ಪರವಾದಾಗಲೂ ವ ಕಾರಾಗಮವಾಗುವುದುಂಟು :
ಉದಾ : ಈ + ಈ = ಈವೀ.

### 3. ಪ್ರಕೃತಿಭಾವ

ಸ್ವರಕ್ಕೆ ಸ್ವರ ಪರವಾದಾಗ ಕೆಲವು ವೇಳೆ ಸಂಧಿಯಾಗುವುದಿಲ್ಲ. ಇದಕ್ಕೆ ಪ್ರಕೃತಿಭಾವವೆಂದು ಹೆಸರು. ಕೆಲವು ಉದಾಹರಣೆಗಳನ್ನು ಇಲ್ಲಿ ಕೊಟ್ಟಿದೆ :

(i) ಆರವೆ, ಎಲೆ (ೞ), ಹೋ, ಅರೆ ಮೊದಲಾದ ನಿಪಾತಗಳಿಗೆ ಸ್ವರ ಪರವಾದಾಗ—

ಉದಾ : ಆರವೆ ಅರಲ್ದ ಬಯಲ್ದಾವರೆ, ಎಲೇ ಇದಲ್ತೆ ತುಹೀನಕ್ಷೋಣೀಧ್ರುದುತ್ತುಂಗಸಾನುಗಳಿಂ, ರಮ್ಯಮಾವುದೊ ಅದಱಿಂ, ಓಹೋ ಇರಲಿಂ ಪೆಜಿವರ ಮಾಹಾತ್ಮ್ಯಂ, ಅರೆ ಎಡೆ ಹಸ್ತಿ ಶಿಕ್ಷಣ ವಿಚಕ್ಷಣರಿಂ, ಅಕ್ಕಟಾ ಇಂದ್ರುಂಗೆ ಕೇಡಾಯ್ತು.

(ii) ಅವಧಾರಣೆ, ವಿಶಂಕೆ, ಮೆಚ್ಚಿಕೆ, ಆಕ್ಷೇಪ ಇವುಗಳನ್ನು ಸೂಚಿಸುವ ಎ (ಏ) ಒ (ಓ) ಗಳಿಗೆ ಸ್ವರ ಪರವಾದಾಗ—

ಉದಾ : ಧನಮುಳ್ಳವನಾವನಾತನೆ ಇಂದ್ರಂ, ಆನೆಯೊ ಅದ್ರಿಯೋ, ಏನೇನೋ ಓದಿನ ಪರಿ ಲೇಸು ಲೇಸು, ಮುತ್ತಿದನೋ ಇಂದೆ ಕೋಂಟೆ ಧೂಳೀಪಟ್ಟಂ.

(iii) ಪ್ಲುತಕ್ಕೆ ಸ್ವರ ಪರವಾದಾಗ—
ಉದಾ : ಹಾ ರಾಮಾ ಎಂದು ಸೀತೆ ಬಾಯಟಿಂದಟ್ಟಳ್.

(iv) ಎಮ ಶಬ್ದಕ್ಕೆ ಸ್ವರ ಪರವಾದಾಗ—
ಉದಾ : ಸಿಂಗಮುಕ್ಕೆಮ ಅಂಜೆಂ.

(v) ಗಡ ಎಂಬ ಅರ್ಥದ ಆ ಕಾರಕ್ಕೆ ಸ್ವರ ಪರವಾದಾಗ—
ಉದಾ : ಪಾಲಾ ಅಮರ್ದಾ ಇನಿದು ಗಡಾ.

(vi) ನಿರ್ದೇಶಾರ್ಥಕವಾದ ಆ ಕಾರಕ್ಕೆ ಅ ಆ ಪರವಾದಾಗ—
ಉದಾ : ಆ ಅರಸಂ, ಆ ಆಳ್.

(vii) ಸಮಾಸದಲ್ಲಿ ಪೊಸ, ಪೊಱ, ಒಳ, ಎಳ, ಪಱ ಎಂಬ ಶಬ್ದರೂಪಗಳಿಗೆ ಸ್ವರಾದಿಯಾದ ಶಬ್ದವು ಪರವಾದಾಗ—

ಉದಾ : ಪೊಸ ಒಕ್ಕಲ್, ಪೊಱ ಊರ್. ಒಳ ಅಟ್ಟಂ, ಎಳ ಅಂಚೆ, ಪಱ ಅಲಗು.

## 4. ಸಂಧಿವಿಕಲ್ಪ

ಕೆಲವು ಕಡೆಗಳಲ್ಲಿ ಸಂಧಿಯಾದರೂ ಆಗಬಹುದು, ಆಗದಿದ್ದರೂ ಇರಬಹುದು. ಇದಕ್ಕೆ ಸಂಧಿವಿಕಲ್ಪವೆಂದು ಹೆಸರು. ವಿಕಲ್ಪವಾಗಿ ಸಂಧಿಯಾಗುವ ಸ್ಥಳಗಳು ಯಾವುವೆಂದರೆ :

(i) ಪದ್ಯಾರ್ಧದಲ್ಲಿ—

ವಿಸಂಧಿಗೆ : ಅಲ್ಲಿಯಿದುಂಟರ್ಥದೊ
ಳೆಲ್ಲಿಯುಮುಳ್ಳೊಡೆಯವಂತ ಶಬ್ದಮುಮುಕ್ಕುಂ।
ಎಲ್ಲಂದದೊಳಂ................

ಸಂಧಿಗೆ : ಬನದೊಳಗೆ ಪೋಗಿ ಪೊಸ ಪೂ
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ।
ನಿನಿತೊಂದು ಬೇಗದಿಂ..................

(ii) ವಾಕ್ಯವೇಷ್ಟನದಲ್ಲಿ—

ವಿಸಂಧಿಗೆ : 'ಕಃ ಕೇನಾರ್ಥೀ ಕೋ ದರಿದ್ರಃ' ಎನುತುಮನಿತುಮಂ
ಧರ್ಮಜಂ ಸೂಱಿಗೊಟ್ಟಂ.

ಸಂಧಿಗೆ : 'ದಂಭೈರ್ವಿನಾ ಯಃ ಕ್ರಿಯತೇ ಸ ಧರ್ಮ'ಯೆಂದಂ—
ಭೋಜ ಗರ್ಭಂ...........

(iii) ಅನುಕರಣದಲ್ಲಿ—

ವಿಸಂಧಿಗೆ : ಗುಬುಗುಬು ಗಬಿಗಬಿ ಎನುತುಂ
ಸಂಧಿಗೆ : ಗುಬುಗುಬು ಗಬಿಗಬಿಯೆನುತುಂ

## 5. ವ್ಯಂಜನಸಂಧಿ—ಆದೇಶ

ಸಮಾಸದಲ್ಲಿ ;

(i) ಉತ್ತರಪದದ ಆದಿಯ ಕ ತ ಪ ಗಳಿಗೆ ಸಾಮಾನ್ಯವಾಗಿ ಗ ದ ಬ ಗಳು ಆದೇಶವಾಗುವುವು :

ಉದಾ : ಪೞ+ಕನ್ನಡಂ = ಪೞಗನ್ನಡಂ, ಬಾಯ್+ತೆಱೆ = ಬಾಯ್ದೆಱೆ,
ಕಣ್+ಪೊಲಂ = ಕಣ್ಬೊಲಂ.

ಆದರೆ, ಕೆಲವೆಡೆಗಳಲ್ಲಿ ಈ ಆದೇಶವಿಲ್ಲ.

ಉದಾ : ತಲೆಕಟ್ಟು, ಬೆಸೆಕೋಲ್, ಒಳಕಯ್.

ಪೂರ್ವಪದದ ಅಂತ್ಯದಲ್ಲಿ ರ ೞ ಗಳು ಆದೇಶವಾಗಿ ಬಂದಾಗಲೂ ಈ ಆದೇಶ ವಿಲ್ಲ.

ಉದಾ : ಒರ್ಕಟ್ಟು, ಕಾೞ್ಕಿಚ್ಚು, ಕಾೞ್ತೊಱೆ, ಏರ್ಪತ್ತರ್.

(ii) ಉತ್ತರಪದದ ಆದಿಯ ಪ ಬ ಮ ಗಳಿಗೆ ಸಾಮಾನ್ಯವಾಗಿ ವ ಆದೇಶ.

ಉದಾ : ಎಳ+ಪೆಱೆ=ಎಳವೆಱೆ, ನೀರ್ + ಪೊನಲ್ = ನೀರ್ವೊನಲ್,
ಕಡು + ಬೆಳ್ಪು = ಕಡುವೆಳ್ಪು, ಮೆಯ್+ಬಸ = ಮೆಯ್ವಸ,
ಪಟಿ+ ಮಾತು = ಪಟಿವಾತು, ಮೆಲ್+ಮಾತು = ಮೆಲ್ವಾತು.

ಕೆಲವೆಡೆಗಳಲ್ಲಿಲ್ಲ.

ಉದಾ : ಕಯ್ಪುಱೆ, ಕಣ್ಬೇಟಂ, ಬಾಳ್ಮೊನೆ. ಪಾಱ್ಮನೆ, ಕತ್ತುರಿಮಿಗಂ.
ಕಿಟಿಪ್ಪೊಡೆ, ಇರ್ಬಾಳ್.

ಸಮಾಸವಲ್ಲದಲ್ಲಿಯೂ ವ ಕಾರ ವಿಕಲ್ಪವಾಗಿ ಬರುವುದುಂಟು.

ಉದಾ : ತಮರೂರ್ಗೆ ವೋಪ, ಕೆಲಸಕ್ಕೆ ವರ್ಪ, ಬೆಂಗೆ ವಂದಂ,
ತರವೇಱ್.

(iii) ಪೂರ್ವಪದದ ಅಂತ್ಯದಲ್ಲಿ ಯ ಲ ಗಳ ಹೊರತು ಬೇರೆ ವ್ಯಂಜನ ಗಳಿದ್ದಾಗ ಉತ್ತರಪದದ ಆದ್ಯಕ್ಷರವಾದ ಸ ಕಾರಕ್ಕೆ ಸಾಮಾನ್ಯವಾಗಿ ಚ, ಜ, ಛ (ಸಂಖ್ಯೆಯಲ್ಲಿ) ಗಳು ಆದೇಶ.

ಉದಾ: ಇನ್+ಸರ=ಇಂಚರ, ಮುನ್+ಸೆಱಂಗು=ಮುಂಜೆಱಂಗು,
ಇರ್ + ಸಾಸಿರ = ಇರ್ಛಾಸಿರ.

ಕೆಲವೆಡೆಗಳಲ್ಲಿಲ್ಲ.

ಉದಾ: ಬಾಯ್ಸವಿ, ಬೆಳ್ಸರಿ, ಕಣ್ಸೋಲಂ.

(iv) ಆದಿ ದೀರ್ಘದಿಂದ ಕೂಡಿದ ಅಥವಾ ಅನೇಕ ಸ್ವರಗಳುಳ್ಳ ಶಬ್ದಗಳ ಅಂತ್ಯದಲ್ಲಿರುವ ಱು ಡು ಗಳಿಗೆ ವ್ಯಂಜನ ಪರವಾದಾಗ ರ, ಟ ಗಳು ವಿಕಲ್ಪವಾಗಿ ಆದೇಶವಾಗುವುವು.

ಉದಾ : ಕಾಡು+ಕಿರ್ಚು = ಕಾಟ್ಕಿರ್ಚು, ಕಾಡುಗಿರ್ಚು.
ಕೆದಱು+ತಲೆ=ಕೆದರ್ತಲೆ, ಕೆದಱುದಲೆ.
ಎರಡು+ ತೆಱಂ = ಎರಟ್ತೆಱಂ, ಎರಡು ತೆಱಂ.

ಪ್ರಕೃತಿಗೆ ಪ್ರತ್ಯಯ ಸೇರುವಾಗಲೂ ವಿಕಲ್ಪವಾಗಿ ಈ ಆದೇಶವಾಗುವುದುಂಟು.

ಉದಾ: ಮಾಡು+ವಂ=ಮಾಡುವಂ, ಮಾಟ್ಪಂ.
ತೋಱು+ಗೆ=ತೋಱುಗೆ, ತೋರ್ಕೆ.

(v) ಪದಾಂತವಾದ ಣ ಕಾರಕ್ಕೆ ಪರವಾದ ನ ಕಾರಕ್ಕೆ ಣ್ ಆದೇಶ ವಾಗುತ್ತದೆ.

ಉದಾ: ಕಣ್+ನೀರ್ = ಕಣ್ಣೀರ್.
ತಣ್+ನೆಟಲ್ = ತಣ್ಣೆಟಲ್.

6. ದ್ವಿತ್ವ

ಒಂದು ಹ್ರಸ್ವಸ್ವರದಿಂದ ಕೂಡಿ ಅಂತ್ಯದಲ್ಲಿ ನ ಣ ಯ ಲ ಳ ಗಳನ್ನುಳ್ಳ ಶಬ್ದಗಳಿಗೆ ಸ್ವರ ಪರವಾದರೆ ಆ ಅಂತ್ಯ ವ್ಯಂಜನಗಳಿಗೆ ಸಾಮಾನ್ಯವಾಗಿ ದ್ವಿತ್ವ ಬರುತ್ತದೆ.

ಉದಾ : ಪೊನ್+ಉಳ್ಳಂ = ಪೊನ್ನುಳ್ಳಂ, ಪೆಣ್+ಅಂತೆ = ಪೆಣ್ಣಂತೆ, ಮೆಯ್+ಅ = ಮೆಯ್ಯ, ಕಲ್+ಎಲ್ಲಂ = ಕಲ್ಲೆಲ್ಲಂ.

(i) ಮೇಲೆ ಹೇಳಿದ ಲಕ್ಷಣವುಳ್ಳ ಧಾತುಗಳಿಗೆ ಪ್ರತಿಷೇಧಾರ್ಥದ ಆಖ್ಯಾತಪ್ರತ್ಯಯಗಳೂ ಅದೆ, ಅದ ಎಂಬ ಪ್ರತ್ಯಯಗಳೂ ಪರವಾದಾಗ ಮಾತ್ರ ದ್ವಿತ್ವ ಬರುತ್ತದೆ.

ಉದಾ : ತಿನ್ + ಅಂ = ತಿನ್ನಂ, ಎನ್ + ಅದೆ = ಎನ್ನದೆ, ಕೊಳ್+ ಅದ=ಕೊಳ್ಳದ.

ಮಿಕ್ಕೆಡೆಗಳಲ್ಲಿ ಬರುವುದಿಲ್ಲ.

ಉದಾ : ತಿನ್ + ಅಲ್ = ತಿನಲ್, ಎನ್+ಅಲುಂ = ಎನಲುಂ, ಪೊಯ್+ಎ=ಪೊಯೆ, ಉಣ್+ಉತುಂ = ಉಣುತುಂ, ಮೆಲ್+ಇಸು=ಮೆಲಿಸು, ಕೊಳ್+ಉತೆ=ಕೊಳುತೆ.

(ii) ಅಟ್, ಉಟ್, ಕಳ್ ಧಾತುಗಳಿಗೆ ಯಾವಾಗಲೂ ದ್ವಿತ್ವವಿಲ್ಲ.

ಉದಾ: ಅಟ್+ಅಂ=ಅಟಂ, ಉಟ್+ಅದೆ=ಉಟದೆ, ಕಳ್+ ಅದ=ಕಳದ.

(iii) ಯಕಾರಾಂತ ಧಾತುಗಳಿಗೆ ಪ್ರತಿಷೇಧಾರ್ಥವಿಲ್ಲದಲ್ಲಿಯೂ ವಿಕಲ್ಪವಾಗಿ ದ್ವಿತ್ವವುಂಟು.

ಉದಾ: ಪೊಯ್+ಅಲ್=ಪೊಯಲ್, ಪೊಯ್ಯಲ್.

ಗೆಯ್+ಎ=ಗೆಯೆ, ಗೆಯ್ಯೆ.

(iv) ಉಯ್, ನೆಯ್, ಬಯ್, ಸುಯ್ ಧಾತುಗಳಿಗೆ ದ್ವಿತ್ವವು ನಿತ್ಯ.

ಉದಾ : ಉಯ್ಯೆ, ನೆಯ್ಯುತೆ, ಬಯ್ಯುತ್ತುಂ, ಸುಯ್ಯಲೊಡಂ.

(v) 'ಆರಯ್', ಎಂಬುದು ದೀರ್ಘಾದಿಯಾಗಿದ್ದರೂ ವಿಕಲ್ಪವಾಗಿ ದ್ವಿತ್ವವುಂಟು.

(vi)ಉಳ್ ಧಾತುವಿಗೆ ಉಳ್ಳ, ಉಳ್ಳುದು, ಉಳ್ಳೊಡೆ ಎಂಬಲ್ಲಿ ಮಾತ್ರ ದ್ವಿತ್ವವುಂಟು.

(vii) ದಲ್ ಎಂಬ ಅವ್ಯಯಕ್ಕೆ ಯಾವಾಗಲೂ ದ್ವಿತ್ವದಿಲ್ಲ.

ಉದಾ: ಕಲಿ ದಲಿವಂ (ದಲ್+ಇವಂ).

ವೆ. ನರಸಿಂಹ ಮೂರ್ತಿ
ಕೆಂಗೇರಿ ಉಪ ನಗರ



## 7. ಶಿಥಿಲ ದ್ವಿತ್ವ

'ಶಿಥಿಲ ದ್ವಿತ್ವ' ಎಂದರೆ ಒತ್ತಿ ಉಚ್ಚರಿಸದೆ ತೇಲಿಸಿ ಉಚ್ಚರಿಸುವ ಒತ್ತಕ್ಷರ. ಛಂದಸ್ಸಿನಲ್ಲಿ ಒತ್ತಕ್ಷರದ ಹಿಂದಿನ ಅಕ್ಷರವು ಗುರುವಾಗುತ್ತದೆ; ಆದರೆ ಆ ಒತ್ತಕ್ಷರವು ಶಿಥಿಲ ದ್ವಿತ್ವವಾಗಿದ್ದರೆ ಅದು ಗುರುವಾಗುವುದಿಲ್ಲ—ಲಘುವಾಗಿಯೇ ಉಳಿಯುತ್ತದೆ.

(i) ಕೆಲವು ಶಬ್ದಗಳಲ್ಲಿ ಶೈಥಿಲ್ಯವು ಸಹಜವಾಗಿರುತ್ತದೆ.

* * * * *

ಉದಾ : ಬರ್ದಿಲಂ, ಗರ್ದುಗು, ಅಮರ್ದು, ಅಮರ್ದುವಳ್ಳಿ, ಅದಿರ್ಮುತ್ತೆ,

* * * *

ಎರ್ದೆ, ಎರ್ದೆವಾಯ್, ಕರ್ದುಂಕು, ಬರ್ದುಂಕು.

(ii) ದ್ವಿಲಘುಯುಕ್ತವಾದ ರಳ ಕುಳ ರೇಫಾಂತ* ಶಬ್ದಗಳಿಗೆ ಗ ದ ವ ಜ ಗಳು ಪರವಾದಾಗ ವಿಕಲ್ಪವಾಗಿ ಶಿಥಿಲತೆ ಬರುತ್ತದೆ. ಇದು ಕೆಲವು ನಾಮಪದ ಗಳಲ್ಲಿಯೂ ಕ್ರಿಯಾಪದಗಳಲ್ಲಿಯೂ ಸಮಾಸಶಬ್ದಗಳಲ್ಲಿಯೂ ಕಂಡುಬರುತ್ತದೆ.

ನಾಮಪದಗಳಲ್ಲಿ—ಬಹುವಚನದ 'ಗಳ್', 'ಚತುರ್ಥಿಯ 'ಗೆ', ಇವು ಪರ ವಾದಾಗ :

* * *

ಅಗಲ್ಗಳ್, ಕನರ್ಗಳ್, ನವಿರ್ಗೆ ಇತ್ಯಾದಿ.

ಬಾಸುಟ್ಗಳ್ ಎಂಬಲ್ಲಿ ಬಾಸುಟ್ ಎಂಬುದು ರಳಾಂತವಾಗಿದ್ದರೂ ದ್ವಿಲಘು ಯುಕ್ತವಾಗಿರದೆ ಆದ್ಯಕ್ಷರವು ಗುರುವಾಗಿರುವುದರಿಂದ ಅದಕ್ಕೆ ಗಳ್ ಸೇರಿದಾಗ ಶಿಥಿಲತೆ ಯುಂಟಾಗುವುದಿಲ್ಲ. ಆದಿ ದೀರ್ಘವಿದ್ದರೂ ಅಪೂರ್ವವಾಗಿ ಕೆಲವೆಡೆಗಳಲ್ಲಿ ಶಿಥಿಲತೆ ಬರುವುದುಂಟು.

* *

ಕಾದಲರ್ಗಳ್, ತಾಪಸರ್ಗೆ, ಇಲ್ಲಿ ಅಂತ್ಯ ಉಪಾಂತ್ಯ ಸ್ವರಗಳು ಲಘುವಾಗಿವೆ

ಕ್ರಿಯಾಪದಗಳಲ್ಲಿ—ಕಾಲವಾಚಕಗಳಾದ 'ದ' 'ದಪ' 'ವ' 'ಗುಂ', ವಿಧ್ಯರ್ಥದ 'ಗೆ' ಇವು ಪರವಾದಾಗ :

* * * * *

ಜಗುಟ್ದಂ, ತೊಡರ್ದಪಂ, ನಿಮಿರ್ವಂ, ಅಮರ್ಗುಂ, ನುಸುಳ್ಗೆ.

ಸಮಾಸ ಶಬ್ದಗಳಲ್ಲಿ :

* * * *

ಪೊಗರ್ವಟ್ಟೆ, ಕುಳಿರ್ಗಾಳಿ, ಅಮಳ್ದೊಂಗಲ್, ಅಮಳ್ಜಂತ್ರಂ.

* ಕೆಸೞ್+ಗಳ್=ಕೆಸರ್ಗಳ್, ಎಂಬಲ್ಲಿ ಶಬ್ದಾಂತ್ಯದಲ್ಲಿ ೞ ಇದ್ದರೂ, ಗಳ್ ಸೇರು ವಾಗ ಅದಕ್ಕೆ ರ್ ಆದೇಶವಾಗಿ ಬರುವುದರಿಂದ ಶೈಥಿಲ್ಯವುಂಟಾಗುತ್ತದೆ.

ಕೆಲವು ವೇಳೆ ಲ ಕಾರಾಂತ ಶಬ್ದಗಳಲ್ಲಿಯೂ ಶಿಥಿಲತೆ ಬರುತ್ತದೆ. ಉದಾ : ಅಗಲ್ಬ.

## ೪. ದೇಶ್ಯಶಬ್ದಪ್ರಕರಣ

ಜನರಲ್ಲಿ ತಿಳಿವು ಹುಟ್ಟಿ ಹೆಚ್ಚಿದಂತೆ, ಸಂಸ್ಕೃತಿ ಬೆಳೆದಂತೆ, ಅವರಾಡುವ ಭಾಷೆಯೂ ಹುಟ್ಟಿ ಬೆಳೆಯುತ್ತದೆ. ಒಂದು ಭಾಷೆಯನ್ನಾಡುವ ಜನರಲ್ಲಿಯೇ ಹುಟ್ಟಿ ಬೆಳೆದ ಶಬ್ದಗಳಿಗೆ 'ದೇಶ್ಯ' ಎಂದು ಹೆಸರು. ಬೇರೆ ಭಾಷೆಯನ್ನಾಡುವ ಜನರ ಸಂಸರ್ಗ ವುಂಟಾದಾಗ ಆ ಸಂಸರ್ಗದ ಫಲವಾಗಿ ಅನ್ಯಭಾಷೆಯ ಶಬ್ದಗಳು ಬಂದು ಸೇರುತ್ತವೆ. ಹೀಗೆ ಸಾಮಾನ್ಯವಾಗಿ ಯಾವ ಭಾಷೆಯನ್ನು ತೆಗೆದುಕೊಂಡರೂ ಅದರಲ್ಲಿ ದೇಶ್ಯ ಶಬ್ದಗಳೂ ಅನ್ಯದೇಶ್ಯಶಬ್ದಗಳೂ ಸೇರಿರುತ್ತವೆ.

ಹಳಗನ್ನಡ ಭಾಷೆಯಲ್ಲಿ ಅದಕ್ಕೆ ಸ್ವಂತವಾದ ದೇಶ್ಯ (ಕನ್ನಡ) ಶಬ್ದಗಳಿರು ವುದೂ ಅಲ್ಲದೆ ಅನೇಕ ಸಂಸ್ಕೃತ ಪ್ರಾಕೃತ ಶಬ್ದಗಳು ಸೇರಿವೆ. ಹಾಗೆ ಸೇರುವಾಗ ಅವು ಕೆಲವು ವೇಳೆ (i) ವಿಕಾರವನ್ನು ಪಡೆಯದೆಯೂ ಕೆಲವು ವೇಳೆ (ii) ವಿಕಾರವನ್ನು ಪಡೆದೂ ಸೇರುತ್ತವೆ. ವಿಕಾರವನ್ನು ಪಡೆಯದ ಅಥವಾ (ಗಮನಾರ್ಹವಲ್ಲದಷ್ಟು) ಅತ್ಯಲ್ಪ ವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೆ 'ತತ್ಸಮ' ವೆಂಬ ಹೆಸರು ಬಳಕೆಗೆ ಬಂದಿದೆ. ಆದರೆ ಕೇಶಿರಾಜನು ಅದನ್ನು 'ಸಮಸಂಸ್ಕೃತ'ವೆನ್ನುತ್ತಾನೆ. 'ತತ್ಸಮ' ಎಂಬ ಹೆಸರನ್ನು ಮಣಿ, ಮಂಚಂ, ಪಟ್ಟಂ ಮೊದಲಾದ ಕೆಲವು ಶಬ್ದಗಳಿಗೆ ಮಾತ್ರ ಕೊಟ್ಟಿರುತ್ತಾನೆ. ವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೂ ವಿಕಾರವನ್ನು ಪಡೆದ ಅಥವಾ ಪಡೆಯದ ಪ್ರಾಕೃತ ಶಬ್ದಗಳಿಗೂ 'ತದ್ಭವ'ವೆಂಬ ಹೆಸರಿದೆ.

### ಮೂಲ ಶಬ್ದಗಳು

ದೇಶ್ಯಶಬ್ದಗಳನ್ನು ಮೂಲ ಶಬ್ದಗಳು, ನಿಷ್ಪನ್ನ (Derivative) ಶಬ್ದಗಳು, ಸಮಾಸ ಶಬ್ದಗಳು ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು. ಕಣ್, ಉಸಿರ್, ಕಲ್, ಪೊನ್, ತಿನ್ ಮೊದಲಾದುವು ಮೂಲ ಶಬ್ದಗಳು. ಒಳ್ಪು, ಮಾಟಿಸೈ, ಪಡೆವಳಂ, ಕೈದುಕಾಜಂ, ಕಲ್ಕುಟಿಗಂ, ಪೂವಡಿಗಂ ಮೊದಲಾದುವು ನಿಷ್ಪನ್ನ ಶಬ್ದ ಗಳು. ಬೆಳ್ದಿಂಗಳ್, ಚೆಂಬೊನ್, ನಿಡುಸೂಗಿ, ಅಂಗಯ್ ಮೊದಲಾದುವು ಸಮಾಸ ಶಬ್ದಗಳು.

ಒಂದು ಶಬ್ದದ ಮೂಲರೂಪಕ್ಕೆ 'ಪ್ರಕೃತಿ' ಎಂದು ಹೆಸರು. ಅನೇಕ ಸಂದರ್ಭ ಗಳಲ್ಲಿ ಪ್ರಕೃತಿಯೇ ಶಬ್ದವಾಗಿರುತ್ತದೆ. ಕಣ್, ಕಲ್, ಉಸಿರ್, ಪೊನ್ ಮೊದಲಾ ದುವು ಪ್ರಕೃತಿ ರೂಪದಲ್ಲಿರುವ ಶಬ್ದಗಳು. ಇನ್ನು ಕೆಲವು ಪ್ರಕೃತಿಗಳಂತೆ ಕಂಡರೂ ಪ್ರಕೃತಿಯಿಂದ ನಿಷ್ಪನ್ನವಾದುವು. ಬಿಳಿದು, ಪೊಸತು ಮೊದಲಾದುವುಗಳಲ್ಲಿ ಬೆಳ್, ಪೊಸ ಮೊದಲಾದ ಪ್ರಕೃತಿಗಳಿಗೆ ದು, ತು ಗಳು ಸೇರಿ ಬಿಳಿದು, ಪೊಸತು ಮೊದಲಾದ ರೂಪಗಳು ಬಂದಿವೆ. ಪಡೆವಳಂ, ಕೈದುಕಾಜಂ, ಕಲ್ಕುಟಿಗಂ ಮೊದಲಾದುವುಗಳಲ್ಲಿ

ಪ್ರಕೃತಿಗೆ ವಳ, ಕಾಱ, ಕುಟಿಗ ಮೊದಲಾದ ಪ್ರತ್ಯಯಗಳು ಸೇರಿರುತ್ತವೆ. ಕ್ರಿಯಾರ್ಥವಾದ ಪ್ರಕೃತಿಗಳಿಗೆ (ಇವಕ್ಕೆ 'ಧಾತು' ಎಂಬ ಹೆಸರಿದೆ) ಇಸು, ಚು, ವು ಮೊದಲಾದುವು ಸೇರಿ ಮಾಡಿಸು, ನೆಗೞ್ಚು, ತಿಳಿವು ಮೊದಲಾದ ರೂಪಗಳು ಬರುತ್ತವೆ. ಹೀಗೆ ಶಬ್ದಗಳು ಬೆಳೆಯುವುದೂ ಅಲ್ಲದೆ ಎರಡು ಮೂರು ಪ್ರಕೃತಿಗಳು ಸೇರಿ ಸಮಾಸ ಶಬ್ದಗಳಾಗುವುದೂ ಉಂಟು. ಬೆಳ್‌ದಿಂಗಳ್, ಪೆಱೆನೊಸಲ್, ನಿಟ್ಟುಸಿರ್, ಬಳೆದುಡು, ಪೋತರ್ ಇತ್ಯಾದಿ.

ಮೂಲಪ್ರಕೃತಿಗಳಂತೆ ತೋರುವ ಕೆಲವು ಶಬ್ದಗಳು ನಿಜವಾಗಿಯೂ ಸಮಾಸ ಶಬ್ದಗಳಾಗಿರುತ್ತವೆ.

ಉದಾ : ಕೈದು (ಕೈ + ಅದು)=ಕೈಯಲ್ಲಿ ಧರಿಸತಕ್ಕದ್ದು, ಆಯುಧ.
ಎಣ್ಣೆ(ಎಳ್ + ನೆಯ್)=ಎಳ್ಳಿನಿಂದ ಬರುವ ಜಿಡ್ಡು.
ಬೆಣ್ಣೆ(ಬೆಳ್ + ನೆಯ್)=ಬೆಳ್ಳಗಿರುವ ಜಿಡ್ಡು.

ಹಳಗನ್ನಡ ವ್ಯಾಕರಣಗಳಲ್ಲಿ ಕರಿದು, ಬಿಳಿದು, ಪೊಸದು ಮೊದಲಾದುವು ಗುಣವಚನಗಳ ಮೂಲರೂಪಗಳೆಂದೂ, ಇವುಗಳಿಂದಲೇ ಕರಿಯಂ, ಬಿಳಿಯಳ್, ಪೊಸಂಬಂ ಮೊದಲಾದ ರೂಪಗಳು ಹುಟ್ಟುವುವೆಂದೂ, ಇವಕ್ಕೆ ಕರ್, ಬೆಳ್, ಪೊಸ ಮೊದಲಾದುವು ಸಮಾಸಗಳಲ್ಲಿ ಆದೇಶವಾಗುವುವೆಂದೂ ಹೇಳಿದೆ. ನಾಮ ಪ್ರಕೃತಿ ಆಖ್ಯಾತಪ್ರಕೃತಿ (ಧಾತು)ಗಳಿರುವಂತೆಯೇ ಗುಣಪ್ರಕೃತಿ ಸಂಖ್ಯಾಪ್ರಕೃತಿಗಳೂ ಇದ್ದುವೆಂದು ತೋರುತ್ತದೆ. ಆದರೆ ಅವು ಸ್ವತಂತ್ರ ಶಬ್ದಗಳಾಗಿದ್ದುದು ಈಗ ಕಂಡುಬರುವುದಿಲ್ಲ. ಅಂಥ ಪ್ರಕೃತಿಗಳಲ್ಲಿ ಕೆಲವನ್ನು ಕೆಳಗೆ ಕೊಟ್ಟಿದೆ :

| ಗುಣಪ್ರಕೃತಿಗಳು | | ಸಂಖ್ಯಾಪ್ರಕೃತಿಗಳು | |
|---|---|---|---|
| ಬೆಳ್ | ಬಿಳಿದು | ಒರ್ | ಒಂದು |
| ತಣ್ | ತಣ್ಣಿತ್ತು | ಇರ್ | ಎರಡು |
| ಪೆರ್ | ಪಿರಿದು | | ಇತ್ಯಾದಿ |
| ಇತ್ಯಾದಿ | | | |

ಈ ರೂಪಗಳನ್ನು ಸಮಾಸ ಪ್ರಕರಣದಲ್ಲಿ ತೋರಿಸಿದೆ.

## ನಿಷ್ಪನ್ನ ಶಬ್ದಗಳು :

ಧಾತುಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ಕೃತ್ ಪ್ರತ್ಯಯಗಳೆಂದೂ, ಇವುಗಳಿಂದ ನಿಷ್ಪನ್ನವಾದ ಶಬ್ದಗಳಿಗೆ ಕೃದಂತಗಳೆಂದೂ, ಮಿಕ್ಕ ಪ್ರಕೃತಿಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ತದ್ಧಿತಪ್ರತ್ಯಯಗಳೆಂದೂ, ಇವುಗಳಿಂದ ನಿಷ್ಪನ್ನವಾದ ಶಬ್ದಗಳಿಗೆ ತದ್ಧಿತಾಂತಗಳೆಂದೂ ಹೆಸರಿದೆ.*

* ಕೃತ್ಪ್ರತ್ಯಯ ತದ್ಧಿತಪ್ರತ್ಯಯಗಳಿಂದ ನಾಮಪ್ರಕೃತಿಗಳು ಮಾತ್ರವಲ್ಲದೆ ಕೆಲವು ಅವ್ಯಯಗಳೂ ನಿಷ್ಪನ್ನವಾಗುವುವು. ಅವುಗಳಲ್ಲಿ ಕೃದಂತಾವ್ಯಯಗಳ ವಿಚಾರವನ್ನು ಆಖ್ಯಾತ ಪ್ರಕರಣದಲ್ಲಿಯೂ, ತದ್ಧಿತಾಂತಾವ್ಯಯಗಳ ವಿಚಾರವನ್ನು ಅವ್ಯಯಪ್ರಕರಣದಲ್ಲಿಯೂ ಹೇಳಿದೆ.

## 1. ಕೃದಂತಗಳು

ಧಾತುಗಳಿಗೆ ಕೃತ್ಪ್ರತ್ಯಯಗಳು ಸೇರಿ ನಾಮಪ್ರಕೃತಿಗಳಾಗುವುವು. ಇವುಗಳಲ್ಲಿ ಕೆಲವು ವಿಶೇಷಣಗಳು, ಹೆಚ್ಚು ಭಾಗದವು ಭಾವನಾಮಗಳು.

(i) ಕೃದಂತವಿಶೇಷಣಗಳು—

ಧಾತುವಿಗೆ ದ, ವ ಎಂಬ ಕಾಲವಾಚಕ ಪ್ರತ್ಯಯಗಳೂ ನಿಷೇಧಾರ್ಥದ ಅದ ಎಂಬ ಪ್ರತ್ಯಯವೂ ಸೇರಿ ಕೃದಂತವಿಶೇಷಣಗಳಾವುವು:

ನುಡಿ—ನುಡಿದ, ನುಡಿವ, ನುಡಿಯದ.

ನೋಡು—ನೋಡಿದ, ನೋಡುವ, ನೋಟ್ಪ, ನೋಡದ ಇತ್ಯಾದಿ.

(ii) ಕೃದಂತಭಾವನಾಮಗಳು—

ಭಾವಾರ್ಥದ ಕೃತ್ಪ್ರತ್ಯಯಗಳು ಅನೇಕವಾಗಿರುವುವು. ಅವುಗಳಲ್ಲಿ ಕೆಲವನ್ನು ಇಲ್ಲಿ ಉದಹರಿಸಿದೆ:

| ಪ್ರತ್ಯಯ | ಧಾತು | ಉದಾಹರಣೆಗಳು |
|---|---|---|
| ಅ | ಗೆಲ್, ಸೋಲ್ | ಗೆಲ್ಲ, ಸೋಲ |
| ಅವಿ | ಅಳೆ, ಬಳೆ | ಅಳವಿ, ಬಳವಿ |
| ಅವು | ಒಲ್, ಕಳ್, ಗೆಲ್, ನಿಲ್, ಬರ್, ನೆರೆ | ಒಲವು, ಕಳವು, ಗೆಲವು, ನಿಲವು, ಬರವು, ನೆರವು |
| ಇಕೆ | ಅಂಜು, ಒಂದು | ಅಂಜಿಕೆ, ಒಂದಿಕೆ |
| ಇಸು | ಉಣ್, ತಿನ್ | ಉಣಿಸು, ತಿನಿಸು |
| ಕುಳಿ | ಪೋರ್ | ಪೋರ್ಕುಳಿ |
| ಕೆ | ಅಟ್, ಆರಯ್, ಆಳ್, ಉಟ್, ಕಾಣ್, ಪೂಣ್, ಪೊಗಟ್, ಪೊಣರ್, ಪೋರ್, ಪೋಲ್ | ಅಟ್ಕೆ, ಆರಯ್ಕೆ, ಆಳ್ಕೆ, ಉಟ್ಕೆ, ಕಾಣ್ಕೆ, ಪೂಣ್ಕೆ, ಪೊಗಟ್ಕೆ, ಪೊಣರ್ಕೆ, ಪೋರ್ಕೆ, ಪೋಲ್ಕೆ |
| ಗುಳ್ | ಪೊಯ್, ಬಯ್ | ಪೊಯ್ಗುಳ್, ಬಯ್ಗುಳ್ |
| ಗೆ | ಉಡು, ಏಟ್, ತುಡು, ನಂಬು, ಪೊರ್ದು | ಉಡುಗೆ, ಏಟ್ಗೆ, ತುಡುಗೆ, ನಂಬುಗೆ, ಪೊರ್ದುಗೆ |
| ಟ | ಆಡು, ಊಡು, ಓಡು, ಕೂಡು, ನೋಡು, ಮಾಡು, ತೀಡು | ಆಟ, ಊಟ, ಓಟ, ಕೂಟ, ನೋಟ, ಮಾಟ, ತೀಟ |
| ತ | ಅಜು, ಇಜು, ಕುಣಿ, ಬಿಗಿ, ಮುಜು, ಸುಗಿ | ಅಜುತ, ಇಜುತ, ಕುಣಿತ, ಬಿಗಿತ, ಮುಜುತ, ಸುಗಿತ |
| ತೆ | ನೆಗಟ್, ಪೊಗಟ್ | ನೆಗಟ್ತೆ, ಪೊಗಟ್ತೆ |
| ಪ | ಬರೆ | ಬರೆಪ |

| ಪ್ರತ್ಯಯ | ಧಾತು | ಉದಾಹರಣೆಗಳು |
|---|---|---|
| ಪಿ | ಕಲ್, ನೋನ್ | ಕಲ್ಪಿ, ನೋಂಪಿ |
| ಪು | ಕಾ, ಮೇ | ಕಾಪು, ಮೇಪು |
| ಮೆ | ಕೂರ್, ಒಲ್ | ಕೂರ್ಮೆ, ಒಲ್ಮೆ |
| ಲು | ಕೊಯ್, ಪೊಯ್, ಸುಯ್ | ಕೊಯ್ಲು, ಪೊಯ್ಲು, ಸುಯ್ಲು |
| ವಳಿ | ನಡೆ, ನುಡಿ | ನಡೆವಳಿ, ನುಡಿವಳಿ |
| ವು | ಅಱಿ, ಉಱಿ, ನೋ, ಪಸಿ, ಸಾ | ಅಱಿವು, ಉಱಿವು, ನೋವು, ಪಸಿವು, ಸಾವು |
| ಸು | ಮುನಿ, ಮುಳಿ | ಮುನಿಸು, ಮುಳಿಸು |

(iii) ಎಲ್ಲಾ ಧಾತುಗಳ ಮೇಲೂ ಸಾಮಾನ್ಯವಾಗಿ ಉದು ಪ್ರತ್ಯಯವು ಕಾಲಸೂಚಕವಾದ ದ ಕಾರ ವ ಕಾರಗಳ ಮುಂದೆ ಬರುವುದು. ನಿಷೇಧವು ತೋರುವಾಗ ಅದ ಪ್ರತ್ಯಯದ ಮೇಲೆ ಉದು ಪ್ರತ್ಯಯವು ಸೇರುವುದು.

ಉದಾ : ಅಱಿದುದು, ಅಱಿವುದು; ಅಱಿಯದುದು.
ಬರ್ : ಬಂದುದು, ಬರ್ಪುದು; ಬಾರದುದು.
ನೋಡು : ನೋಡಿದುದು, ನೋಡುವುದು, ನೋಟ್ಪುದು ; ನೋಡದುದು.

(iv) ಕೆಲವು ಧಾತುಗಳು ನಿಜರೂಪದಿಂದಲೇ ಭಾವಕೃದಂತಗಳಾಗುವುವು.
ಉದಾ : ಆಗು, ಉರ್ಕು, ಓದು, ಕೇಗು, ತಡೆ, ತೇಗು, ನಡೆ, ಪೋಗು, ಸೊರ್ಕು.

(v) ಮತ್ತೆ ಕೆಲವು ಧಾತುಗಳು ಆದಿಸ್ವರವು ದೀರ್ಘವಾಗಿ ಭಾವಕೃದಂತಗಳಾಗುವುವು. ಹೀಗಾಗುವಾಗ ಕೆಲವು ಕಡೆ ಇ ಉ ಗಳು* ಏ ಓ ಗಳಾಗುವುವು.

ಉದಾ : ಬಿಡು-ಬೀಡು, ಸುಡು-ಸೂಡು, ಕಿಡು-ಕೇಡು, ಕುಡು-ಕೋಡು, ತುಡು-ತೋಡು, ಇಸು-ಏಸು.

(vi) ನಿಷೇಧವು ತೋರುವಾಗ ಕೆಲವು ಧಾತುಗಳ ಮೇಲೆ ಅಮೆ ಪ್ರತ್ಯಯವು ಬರುವುದು.

ಉದಾ : ಅಱಿ-ಅಱಿಯಮೆ, ಅಂಜು-ಅಂಜಮೆ, ಅಟ್ಕು-ಅಟ್ಕಮೆ, ಪೊಲ್-ಪೊಲ್ಲಮೆ.

---

* ಇಲ್ಲಿ ಎ, ಒ ಗಳೇ ಧಾತುಗಳ ಮೂಲಸ್ವರಗಳಾಗಿದ್ದಂತೆ ತೋರುತ್ತದೆ. ಈ ಧಾತುಗಳ ಭೂತಕಾಲದ ರೂಪಗಳನ್ನೂ ನೋಡಿ : ಕೆಟ್ಟಂ, ಕೊಟ್ಟಂ, ಇತ್ಯಾದಿ.

## 2. ತದ್ಧಿತಾಂತಗಳು

ಕೃದಂತಗಳಂತೆಯೇ ತದ್ಧಿತಾಂತಗಳಲ್ಲಿಯೂ ವಿಶೇಷಣಗಳು, ಭಾವನಾಮಗಳು ಎಂದು ಎರಡು ವಿಭಾಗ ಮಾಡಬಹುದು.

(i) ತದ್ಧಿತಾಂತ ವಿಶೇಷಣಗಳು :

| ಪ್ರತ್ಯಯ | ಅರ್ಥ | ತದ್ಧಿತಾಂತ |
|---|---|---|
| ಆಟಿಗ | ಇದರಲ್ಲಿ ನಿಯುಕ್ತ | ದೀವಟಿಗ |
| ಅಡಿಗ | ಇದು ವೃತ್ತಿಯಾಗಿ ಉಳ್ಳ | ಪೂವಡಿಗ, ಪಾವಡಿಗ |
| ಅಣ | ಈ ದಿಕ್ಕಿನಲ್ಲಿ ಅಥವಾ ಈ ಸ್ಥಾನದಲ್ಲಿ ಇರುವ | ಮೂಡಣ, ನಡುವಣ, ಅತ್ತಣ, ಎತ್ತಣ |
| ಅನೆಯ | ಈ ಸಂಖ್ಯೆಯನ್ನು ತೋರಿಸುವ | ಎರಡನೆಯ, ಅನಿತನೆಯ |
| ಅಯಿಲ | ಇದನ್ನು ಮಾಡುವ ಅಥವಾ ಇದರಲ್ಲಿ ಅಧಿಕಾರವುಳ್ಳ | ಪಚ್ಚೆಯಿಲ, ಘೋಟಯಿಲ |
| ಆಯಿಲ | " | ಘೋಟಾಯಿಲ |
| ಆಯ್ಲ | " | ಘೋಟಾಯ್ಲ |
| ಆಳಿ | ಇದು ಸ್ವಭಾವವಾಗಿ ಉಳ್ಳ | ಮಾತಾಳಿ, ಓದಾಳಿ |
| ಇಗ | ಇದನ್ನು ಮಾಡುವ | ಕಬ್ಬಿಗ, ತೋಂಟಿಗ |
| | " ಮಾರುವ | ಗಂಧಿಗ, ದವಸಿಗ |
| | " ಅರಿವ | ಕನ್ನಡಿಗ, ಜೋಯಿಸಿಗ |
| ಇಚ | ಇದರಲ್ಲಿ ಹುಟ್ಟಿದ | ಅಲರಿಚ, ಪೊಬಲಿಚ |
| ಉಗ | " ವರ್ತಿಸುವ | ಕಾಳುಗ, ಪೆಣ್ಣುಗ |
| ಉಳಿಗ | " " | ಮಣ್ಣುಳಿಗ, ದೇವುಳಿಗ |
| ಕ | ಇದು ಉಳ್ಳ | ಕರಿಕ, ಕೊಟಕ, ಬಿಳಿಕ |
| ಕಾಱ | ಇದರಲ್ಲಿ ನಿರತನಾಗಿರುವ | ಪಗಕಾಱ, ನುಡಿಕಾಱ |
| ಗ | ಇದರಲ್ಲಿ ವರ್ತಿಸುವ | ಮಾತುಗ, ಸಟೆಗ |
| ಗಾಱ* | ಇದನ್ನು ಮಾಡುವ ಅಥವಾ ಮಾರುವ | ಬಳೆಗಾಱ, ಮಾಲೆಗಾಱ, ಕಂಚಗಾಱ |
| ದ | ಇರುವ (ಅಲ್ಲಿ, ಇಲ್ಲಿ, ಎಲ್ಲಿ ಎಂಬ ಪದಗಳ ಮೇಲೆ ಮಾತ್ರ) | ಅಲ್ಲಿದ, ಇಲ್ಲಿದ, ಎಲ್ಲಿದ |

* ಉ ಕಾರಾಂತ ಶಬ್ದಗಳಿಗೆ ಗಾಱ ಪ್ರತ್ಯಯವು ಪರವಾದರೆ ಕೆಲವು ಕಡೆ ಅನುಸ್ವಾರಾಗಮವು ಬರುವುದು.

ಉದಾ : ಓದುಂಗಾಱ ಜೂದುಂಗಾಱ.

| ಪ್ರತ್ಯಯ | ಅರ್ಥ | ತದ್ಧಿತಾಂತ |
|---|---|---|
| ವಣಿಗ | ಇದು ಸ್ವಭಾವವಾಗಿ ಉಳ್ಳ | ಸಾಲವಣಿಗ, ಲಂಚವಣಿಗ, ಕೂಟಿಪ್ಪಣಿಗ |
| ವಂತ | ಇದನ್ನು ಉಳ್ಳ | ಪಣವಂತ |
| ವಳ | ಇದರಲ್ಲಿ ಅಧಿಕಾರವುಳ್ಳ | ಪಡೆವಳ |
| | ಇದನ್ನು ಮಾಡುವ | ಮಡಿವಳ |
| ವಳ್ಳ | ಇದರಲ್ಲಿ ಅಧಿಕಾರವುಳ್ಳ | ಪಡೆವಳ್ಳ |

(ii) ತದ್ಧಿತಾಂತಭಾವನಾಮಗಳು :

ಭಾವವನ್ನು ಎಂದರೆ ವಸ್ತುಧರ್ಮವನ್ನು ತಿಳಿಸುವ ಕೆಲವು ತದ್ಧಿತಪ್ರತ್ಯಯಗಳು ಸೇರಿದರೆ ತದ್ಧಿತಾಂತಭಾವನಾಮಗಳಾಗುತ್ತವೆ.

ಉದಾ : ಇಕೆ : ಗರುವಿಕೆ (ಗರುವನ ಭಾವ), ಉನ್ನತಿಕೆ

ತನ : ಬಲ್ಲತನ, ಪೆಣ್ತನ

ಪು : (ಗುಣವಾಚಕಗಳ ಮೇಲೆ ಬರುವುದು) ಒಳ್ಪು, ಕರ್ಪು, ತಣ್ಪು

ಮೆ : ಬಲ್ಮೆ, ಜಾಣ್ಮೆ, ಪೆರ್ಮೆ.

ಪಿರಿದು ಶಬ್ದಕ್ಕೆ ಪೆಂಪು, ಪಿರಿಯತನ ಎಂಬ ರೂಪಗಳೂ ಉಂಟು.

## ಸಮಾಸಗಳು

ಎರಡು ಅಥವಾ ಹೆಚ್ಚು ಪ್ರಕೃತಿಗಳು ಕೂಡಿ ಒಂದು ಶಬ್ದವಾದಾಗ ಸಮಾಸವಾಗುತ್ತದೆ.* ಹೇಗೆಂದರೆ :

ನಾಮ + ನಾಮ : ಮಲ್ಲಿಗೆನನೆ, ಮಲರ್ಗಣ್, ಬಿಲ್ಜಾಣಂ, ಅರಮನೆ

ಗುಣ + ನಾಮ : ಬೆಳ್ದಿಂಗಳ್, ತೆಳ್ಗದಂಪು, ಬಿಸಿಲ್ವೊಱೆ

ಧಾತು + ನಾಮ : ಅಡುಗೂೞ್, ಉಡುಗೊಱೆ

ನಾಮ + ಧಾತು : ಕೆಳೆಗೊಳ್, ಮಱೆವುಗು

† { ಗುಣ + ಧಾತು : ಉಳ್ಳರ್, ಒಳ್ಳಿಕಯ್

ಧಾತು + ಧಾತು : ಎಟ್ಟುರ್, ಪೋತರ್ }

---

* ಹಳಗನ್ನಡ ವ್ಯಾಕರಣಗಳಲ್ಲಿ ಸಮಾಸದ ಲಕ್ಷಣವನ್ನು ಹೇಳುವ ರೀತಿ ಇದು. ಪರಸ್ಪರ ಸಂಬಂಧವುಳ್ಳ ಅನೇಕ ಪದಗಳು ಸೇರಿ ಒಂದು ಪ್ರಾತಿಪದಿಕವಾಗುವುದು ಸಮಾಸವೆನಿಸುವುದು. ಸಮಾಸವಾದಾಗ ಅದರಲ್ಲಿ ಸೇರಿರುವ ಪದಗಳ ನಡುವಣ ವಿಭಕ್ತಿಗಳಿಗೆ ಲೋಪ ಬರುವುದು.

† ಇವು ಹಳಗನ್ನಡ ವ್ಯಾಕರಣಗಳಲ್ಲಿ ಸಮಾಸವೆಂದು ಪರಿಗಣಿತವಾಗಿಲ್ಲ, ಇವನ್ನು ಸಂಯುಕ್ತ ಧಾತುಗಳೆಂದು ಕರೆಯುವ ರೂಢಿ ಇದೆ.

ನಾಮಪ್ರಕೃತಿಗಳಿಗೆ ಧಾತು ಸೇರಿ ಆಗಿರುವ ಬಳೆದುಡು, ಮಱೆವುಗು ಮೊದಲಾದುವೂ ಇದೇ ಜಾತಿಗೆ ಸೇರತಕ್ಕವು. ಆದರೆ ಹಳಗನ್ನಡ ವ್ಯಾಕರಣಗಳಲ್ಲಿ ಇವನ್ನು ಕ್ರಿಯಾಸಮಾಸವೆಂದು ಕರೆದಿದೆ.

ಪ್ರಕೃತಿಗಳು ಸೇರಿ ಸಮಾಸವಾದಾಗ :

(i) ಕೆಲವು ವೇಳೆ ಯಾವ ವ್ಯತ್ಯಾಸವೂ ಆಗುವುದಿಲ್ಲ.
ಉದಾ : ಮಲ್ಲಿಗೆನನೆ, ತಳ್ಪೊಯ್.

(ii) ಕೆಲವು ವೇಳೆ ಸಂಧಿಕಾರ್ಯಗಳಾಗುತ್ತವೆ.
ಉದಾ : ಉಡು + ಕೊಱೆ > ಉಡುಗೊಱೆ
ಬಳೆ + ತುಡು > ಬಳೆದುಡು,
ಮಱೆ + ಪುಗು > ಮಱೆವುಗು ;
ಇಲ್ಲಿ ಕ, ತ, ಪ ಗಳಿಗೆ ಗ, ದ, ವ ಗಳು ಆದೇಶವಾಗಿವೆ.
ಉಳ್ + ಅಲರ್ > ಉಳ್ಳಲರ್
ಇಲ್ಲಿ ಳ ಕಾರಕ್ಕೆ ದ್ವಿತ್ವ ಬಂದಿದೆ.

(iii) ಕೆಲವು ವೇಳೆ ಇನ್ನು ಕೆಲವು ವ್ಯತ್ಯಾಸಗಳೂ ಆಗುತ್ತವೆ :

ಒಳ್ + ಕಯ್ > ಒಳ್ಳಿಕಯ್. ಇಲ್ಲಿ ಳ ಕಾರಕ್ಕೆ ದ್ವಿತ್ವ ಬಂದಿರುವುದೂ ಅಲ್ಲದೆ ಇ ಕಾರ ಆಗಮವಾಗಿದೆ. ಅರಸು + ಮನೆ > ಅರಮನೆ* ಇಲ್ಲಿ ಸು ಎಂಬ ಅಂತ್ಯಾಕ್ಷರಕ್ಕೆ ಲೋಪ ಬಂದಿದೆ. ಇಂತಹ ವಿಶೇಷ ವ್ಯತ್ಯಾಸಗಳಲ್ಲಿ ಕೆಲವನ್ನು ಮುಂದೆ ತಿಳಿಸಲಾಗುತ್ತದೆ.

ಸಮಾಸ ಶಬ್ದದಲ್ಲಿ ಸೇರಿರುವ ಪ್ರಕೃತಿಗಳಿಗೆ ಅರ್ಥದಲ್ಲಿ ಪರಸ್ಪರ ಸಂಬಂಧ ವಿರುತ್ತದೆ. ಈ ಸಂಬಂಧವನ್ನು ವಿವರಿಸಿ ಹೇಳುವುದಕ್ಕೆ ವಿಗ್ರಹವಾಕ್ಯ ಎಂಬ ಹೆಸರಿದೆ. ಅರಮನೆ ಎಂದರೆ ಅರಸನ ಮನೆ* ಎಂದರ್ಥ, ಉಡುಗೊಱೆ ಎಂದರೆ ಉಡುವ ಕೊಱೆ ಎಂದರ್ಥ. ಅರಸನ ಮನೆ, ಉಡುವ ಕೊಱೆ ಎಂಬುವು ವಿಗ್ರಹ ವಾಕ್ಯಗಳು.

ಸಮಾಸ ಶಬ್ದದಲ್ಲಿ, ಅರ್ಥದ ದೃಷ್ಟಿಯಿಂದ ಕೆಲವು ವೇಳೆ ಮೊದಲ ಪ್ರಕೃತಿಯೂ, ಕೆಲವು ವೇಳೆ ಕೊನೆಯ ಪ್ರಕೃತಿಯೂ, ಕೆಲವು ವೇಳೆ ಎಲ್ಲ ಪ್ರಕೃತಿಗಳೂ ಪ್ರಧಾನವಾಗಿರುತ್ತವೆ. ಇದೂ ಅಲ್ಲದೆ ಕೆಲವು ವೇಳೆ ಪ್ರಧಾನಾರ್ಥವು ಯಾವ ಪ್ರಕೃತಿಗೂ ಇರದೆ ಅನ್ಯತ್ರ ಇರುವುದೂ ಉಂಟು. ಅರಮನೆ, ಅಲರ್ಗಣ್, ಉಡುಗೊಱೆ ಮೊದಲಾದುವುಗಳಲ್ಲಿ ಪ್ರಧಾನವಾದುವು ಮನೆ, ಕಣ್, ಕೊಱೆ ಎಂಬ ಉತ್ತರ ಪ್ರಕೃತಿಗಳು ; ಅವುಗಳ ಹಿಂದಿನ ಪ್ರಕೃತಿಗಳು ಅವು ಎಂಥವು ಎಂಬುದನ್ನು ನಿರೂಪಿಸುತ್ತವೆ. ಅಂಗಯ್† (ಅಗಂ ಕಯ್), ಅಂಗಳ† (ಅಗಂ

---

* ಅರಮನೆ ಎಂಬುದು ಅರಣ್+ಮನೆ ಎಂಬಿವು ಸೇರಿ ಆಗಿರಬಹುದೆ? ತಮಿಳಿನಲ್ಲಿ ಅರಣ್ ಎಂದರೆ ಕೋಟೆ ಎಂದು ಅರ್ಥವಾಗುತ್ತದೆ.

† ಅಗಂ ಎಂದರೆ ಒಳಗು ಎಂದರ್ಥ. ವ್ಯಾಕರಣಗಳಲ್ಲಿ ಅಂಗಯ್, ಅಂಗಾಲ್ ಮೊದಲಾದ ಶಬ್ದಗಳಿಗೆ ಅಡಿ+ಕಯ್ಯ, ಅಡಿ+ಕಾಲ ಎಂದು ವಿಗ್ರಹವಾಕ್ಯವನ್ನು ಮಾಡಿ, ಅಡಿ ಎಂಬುದಕ್ಕೆ ಅಂ ಆದೇಶವೆಂದು ಹೇಳಿದೆ.

ಕಳ), ಮುಂಬಗಲ್ (ಮುನ್ ಪಗಲ್) ಎಂಬಿವುಗಳಲ್ಲಿ ಅಗಂ, ಮುನ್ ಎಂಬ ಪೂರ್ವ ಪ್ರಕೃತಿಗಳ ಅರ್ಥ ಪ್ರಧಾನವಾದದ್ದು. ಕೆಱೆಕಟ್ಟೆಬಾವಿಗಳ್, ತಾಯ್ತುಂದೆಗಳ್ ಎಂಬಿವುಗಳಲ್ಲಿ ಎಲ್ಲ ಪ್ರಕೃತಿಗಳೂ ಸಮಾನವಾದ ಪ್ರಾಧಾನ್ಯವನ್ನು ಹೊಂದಿರುತ್ತವೆ. ಅಲರ್ಗಣ್ಣಂ ಎಂಬುದರಲ್ಲಿ ವಿವಕ್ಷಿತವಾದದ್ದು ಅಲರ್ ಎಂಬುದೂ ಅಲ್ಲ, ಕಣ್ ಎಂಬುದೂ ಅಲ್ಲ, ಅಲರ್ಗಣ್ ಎಂಬುದೂ ಅಲ್ಲ; ಅಲರ್ಗಣ್ಣನ್ನು ಹೊಂದಿರುವ ವ್ಯಕ್ತಿ.

ಹಳಗನ್ನಡ ವ್ಯಾಕರಣಕಾರರು ಎಂಟು ವಿಧದ ಸಮಾಸಗಳನ್ನು ಹೇಳಿರುತ್ತಾರೆ. ಅವುಗಳ ವಿಭಾಗಕ್ರಮವನ್ನೂ ಲಕ್ಷಣವನ್ನೂ ವಿಗ್ರಹವಾಕ್ಯವನ್ನೂ ಕೆಳಗೆ ಕೊಟ್ಟಿದೆ.

## 1. ಉತ್ತರಪದಾರ್ಥ ಪ್ರಧಾನ

(i) ತತ್ಪುರುಷ :

ಉತ್ತರಪದದ ಅರ್ಥವು ಪ್ರಧಾನವಾಗಿ ಪೂರ್ವಪದವು ತೃತೀಯಾದಿ ವಿಭಕ್ತಿಗಳಿಂದ ಕೂಡಿ ಆಗುವ ಸಮಾಸವು ತತ್ಪುರುಷ.

ವಿಗ್ರಹವಾಕ್ಯ ಸಮಾಸ

ಉದಾ : ಮೆಯ್ಯಿಂ + ಕಲಿ=ಮೆಯ್ಗಲಿ
ತೇರ್ಗೆ + ಮರಂ=ತೇರ್ಮರಂ
ಪೊಱೆಯ + ನೀರ್=ಪೊಱೆನೀರ್
ಬಿಲ್ಲೊಳ್ + ಜಾಣಂ=ಬಿಲ್ಜಾಣಂ

(ii) ಕರ್ಮಧಾರಯ :

ವಿಶೇಷಣವು ವಿಶೇಷ್ಯದೊಡನೆ ಕೂಡಿ ಆಗುವ ಸಮಾಸವು ಕರ್ಮಧಾರಯ.

ಉದಾ : ಬಿಳಿದು + ಕೊಡೆ=ಬೆಳ್ಗೊಡೆ
ಪರಿವುದು + ಪೊನಲ್=ಪರಿವೊನಲ್
ಪೆಱೆಯಂತೆ+ನೊಸಲ್=ಪೆಱೆನೊಸಲ್
ಮಾವೆಂಬ +ಮರಂ=ಮಾಮರಂ
ತೆರೆಯೇ +ಕಯ್=ತೆರೆಗಯ್.

(iii) ದ್ವಿಗು :

ವಿಶೇಷಣವು ಸಂಖ್ಯಾವಾಚಕವಾಗಿದ್ದರೆ ದ್ವಿಗು.

ಉದಾ : ಒಂದು + ಪಿಡಿ=ಒರ್ಪಿಡಿ
ಎರಡು + ಸಾಸಿರಂ=ಇರ್ಚ್ಛಾಸಿರಂ.

(iv) ಕ್ರಿಯಾಸಮಾಸ :

ಪೂರ್ವಪದವು ಕಾರಕವಾಗಿದ್ದು ಉತ್ತರಪದವು ಕ್ರಿಯಾವಾಚಿಯಾಗಿದ್ದರೆ ಆಗುವ ಸಮಾಸವು ಕ್ರಿಯಾಸಮಾಸ.

ಉದಾ : ಕೆಳೆಯಂ + ಕೊಂಡು = ಕೆಳೆಗೊಂಡು
ಸರಿಗೆ + ಬಂದಪುದು = ಸರಿವಂದಪುದು
ಸೆಱೆಯೊಳ್ + ಇರ್ದಂ = ಸೆಱೆಯಿರ್ದಂ.

(v) ಗಮಕ :*

ಸಂಖ್ಯಾ ಸರ್ವನಾಮ ಗುಣವಚನ ಕೃದಂತಗಳು ಪೂರ್ವಪದವಾಗಿದ್ದು ಉತ್ತರ ಪದವು ಕಾರಕವಾಗಿದ್ದರೆ ಗಮಕಸಮಾಸ.

ಉದಾ : ನೂಱು + ಪತ್ತು = ನೂಱುಪತ್ತು
ಆವುದು + ಕಾರ್ಯಂ = ಆವಕಾರ್ಯಂ
ಬಿಳಿದು + ಕರ್ಬು = ಬಿಳಿಯಕರ್ಬು
ಪಾಡುವುದು + ತುಂಬಿ = ಪಾಡುವತುಂಬಿ.

## 2. ಪೂರ್ವಪದಾರ್ಥ ಪ್ರಧಾನ

(vi) ಅಂಶಿ :

ಪೂರ್ವಪದವು ಅಂಶವಾಚಕವಾಗಿಯೂ ಉತ್ತರಪದವು ಅಂಶಿವಾಚಕ ವಾಗಿಯೂ ಇದ್ದು ಆಗುವ ಸಮಾಸವು ಅಂಶಿಸಮಾಸ.

ಉದಾ : ಅಡಿ + ಕಯ್ಯ = ಅಂಗಯ್
ಮುಂದು + ಪಗಲ = ಮುಂಬಗಲ್
ಕೆಲಗು + ಕೆಱೆಯ = ಕಿಱ್ಕೆಱೆ.

## 3. ಉಭಯಪದಾರ್ಥ ಪ್ರಧಾನ

(vii) ದ್ವಂದ್ವ :

ಅನೇಕ ಪದಗಳಿಗೆ ಸಮುಚ್ಚಯವು ತೋರಿ ಆಗುವ ಸಮಾಸವು ದ್ವಂದ್ವ.

ಉದಾ : ತಾಯ್ತಂದೆಗಳ್, ಗಿಡುಮರಬಳ್ಳಿಗಳ್, ಕೆಱೆಕಟ್ಟೆಬಾವಿಗಳ್.

## 4. ಅನ್ಯಪದಾರ್ಥ ಪ್ರಧಾನ

(viii) ಬಹುವ್ರೀಹಿ :

ಅನ್ಯಪದವು ವಿಶೇಷ್ಯವಾಗಿ ಅನೇಕ ಪದಗಳಿಗೆ ಆಗುವ ಸಮಾಸವು ಬಹುವ್ರೀಹಿ.

---

*ಈ ಸಮಾಸವನ್ನು ಕೇಶಿರಾಜನು ಮಾತ್ರ ಹೇಳುತ್ತಾನೆ. ಅಲ್ಲದೆ "ಕರ್ಮಧಾರಯ ಮದುವುಂ" ಎಂದು ಹೇಳಿ ಇದು ಕರ್ಮಧಾರಯದ ಒಂದು ಭೇದವೆಂಬುದನ್ನು ಸೂಚಿಸಿದ್ದಾನೆ.

ಉದಾ : ಮೂಱು ಕಣ್ಗಳ್ ಆವಂಗೆ ಅವಂ=ಮುಕ್ಕಣ್ಣಂ
ಪೆಱಿ ತಲೆಯೊಳ್ ಆವಂಗೆ ಅವಂ = ಪೆಱಿದಲೆಯಂ
ಕೋಲಿಂ ಕೋಲಿಂ ಮಾಟ್ಪ ಯುದ್ಧಂ = ಕೋಲಾಕೋಲಿ.

## 5. ಅರಿಸಮಾಸ

ಕನ್ನಡ (ದೇಶ್ಯ ಅಥವಾ ತದ್ಭವ) ಪದಕ್ಕೂ ಸಂಸ್ಕೃತ ಪದಕ್ಕೂ ಸಮಾಸವು ಕೂಡದು. ಇದನ್ನು ಅರಿಸಮಾಸವೆನ್ನುವರು. ಆದರೆ ಕ್ರಿಯಾಸಮಾಸದಲ್ಲಿಯೂ ಗಮಕ ಸಮಾಸದಲ್ಲಿಯೂ ಬಿರುದಾವಳಿಯಲ್ಲಿಯೂ ಕೆಲವು ಪೂರ್ವಕವಿಪ್ರಯೋಗಗಳಲ್ಲಿಯೂ ಅರಿಸಮಾಸ ದೋಷವಿಲ್ಲ.

ಉದಾಹರಣೆ
ದೋಷಕ್ಕೆ : ಅರಸುಕುಮಾರಂ. ಕೆಳದಿಸಮೇತಂ
ದೋಷವಿಲ್ಲದುದಕ್ಕೆ : ಕ್ರಿಯಾಸಮಾಸ : ಚಕ್ರಂಗೊಳೆ, ಪದಂಬಿಡಿದು
ಗಮಕಸಮಾಸ : ಮೂಡುವ ರವಿ
ಬಿರುದಾವಳಿ : ಅಂಕತ್ರಿಣೇತ್ರಂ, ರಾಯಕೋಲಾಹಲಂ
ಪೂರ್ವಕವಿಪ್ರಯೋಗ : ಮಂಗಳಾರತಿ, ಕೂರಸಿ.

## 6. ಸಮಾಸ ಕಾರ್ಯಗಳು

(i) ತತ್ಪುರುಷದಲ್ಲಿ :

ಪೂರ್ವಪದದ ಕಡೆಯ ವರ್ಣಗಳಿಗೆ ಕೆಲವು ಕಡೆ ಲೋಪವೂ, ಕೆಲವು ಕಡೆ ಉಚಿತಾಕ್ಷರಾಗಮವೂ, ಕೆಲವೆಡೆ ಲೋಪಾಗಮಗಳೆರಡೂ ಬರುವುವು.

ಉದಾ : ಲೋಪಕ್ಕೆ : ಅರಸು + ಗಿಳಿ=ಅರಗಿಳಿ,
ಮಾವು + ಮರಂ=ಮಾಮರಂ.
ಆಗಮಕ್ಕೆ : ಕಣ್ + ತೊಟಿಲಿ = ಕಣ್ಣಂದೊಟಿಲಿ,
ಬಾನ್ + ಗುಳಿಗೆ=ಬಾನಂಗುಳಿಗೆ.
ಲೋಪಾಗಮಗಳಿಗೆ : ಆವು+ಕೊಱಗು = ಆಂಗೊಱಗು,
ಮಾವು+ಕಾಯಿ=ಮಾಂಗಾಯಿ.

(ii) ಕ್ರಿಯಾಸಮಾಸದಲ್ಲಿ :

ಪೂರ್ವಪದವು ಅ ಕಾರಾಂತ ಸಂಸ್ಕೃತ ಶಬ್ದವಾಗಿದ್ದಲ್ಲಿ ನಿತ್ಯವಾಗಿಯೂ, ಕನ್ನಡದ ಅ ಕಾರಾಂತ ಉ ಕಾರಾಂತ ಶಬ್ದವಾಗಿದ್ದಲ್ಲಿ ವಿಕಲ್ಪವಾಗಿಯೂ ಅನುಸ್ವಾರಾಗಮವು ಬರುವುದು.

ಉದಾ : ಸಂಸ್ಕೃತಕ್ಕೆ : ಚಕ್ರಂಗೊಂಡು, ಧನಂಬಡೆದಂ
ಕನ್ನಡಕ್ಕೆ : ಮೊಗಂನೋಡಿದಂ, ಮೊಗನೋಡಿದಂ ;
ಪುದುಂಗೊಳಿಸಿದಂ, ಪುದುಗೊಳಿಸಿದಂ

(iii) ಕರ್ಮಧಾರಯ ಸಮಾಸದಲ್ಲಿ :

ಸಮಾಸದಲ್ಲಿ ಪೂರ್ವಪದವಾಗಿ ಬರುವ ಬಿಳಿದು ಕರಿದು ಮೊದಲಾದ ಗುಣವಾಚಕಗಳೂ ಒಂದು ಎರಡು ಮೊದಲಾದ ಸಂಖ್ಯಾವಾಚಕಗಳೂ ತಮ್ಮ ಪ್ರಕೃತಿ ರೂಪದಲ್ಲಿ ನಿಲ್ಲುತ್ತವೆ. ಕೆಲವು ವೇಳೆ ಪ್ರಕೃತಿ ಸ್ವಲ್ಪ ರೂಪಾಂತರವಾಗುವುದೂ ಉಂಟು. ಇವುಗಳಲ್ಲಿ ಮುಖ್ಯವಾದವುಗಳ ರೂಪಗಳನ್ನು ಕೆಳಗೆ ಕೊಟ್ಟಿದೆ :

1. ಪೂರ್ವಪದವಾದ ಗುಣವಾಚಕಕ್ಕೆ ಬರುವ ರೂಪಗಳು—

| ಗುಣವಾಚಕ | ಸ್ವರಪರವಾದರೆ | ವ್ಯಂಜನಪರವಾದರೆ | ಉದಾಹರಣೆ |
|---|---|---|---|
| ಪಿರಿದು | ಪೇರ್ | ಪೆರ್ | ಪೇರಾನೆ, ಪೆರ್ಗಾಡು |
| ಬಿಳಿದು | ಬೆಳ್ | ಬೆಳ್ | ಬೆಳ್ಳಿಲಿ, ಬೆಳ್ಮುಗಿಲ್ |
| ಇನಿದು | | ಇನಿ, ಇನ್ | ಇನಿವಾತು, ಇನಿವಾಲ್, ಇಂಗಡಲ್, ಇಮ್ಮಾವು |
| | | ಈನ್ | ಈಂಚರಂ |
| ಕಡಿದು | ಕಟ್ | ಕಡು | ಕಟ್ಟಿಱುಂಪೆ, ಕಡುಕೂರ್ಮೆ |
| ನಿಡಿದು | ನಿಟ್ | ನಿಡು | ನಿಟ್ಟಿಸಲ್, ನಿಡುಗಣ್ |
| ಕಿಱಿದು | ಕಿತ್ | ಕಿಱು | ಕಿತ್ತಡಿ, ಕಿಱುಗಾಳಿ |
| (ಕುಱಿದು) | ಕುತ್ | ಕುಱು | ಕುತ್ತಿಸಲ್, ಕುಱುಗಂಟು |
| ಪಸಿದು* | ಪಚ್ | ಪಂ | ಪಚ್ಚಡಿಕೆ, ಪಚ್ಚೋಲೆ, ಪಂದಳಿರ್ |
| ಬಿಸಿದು* | | ಬಿಸು, ಬೆಂ | ಬಿಸುಗದಿರ್, ಬೆಂಗದಿರ್ |
| ಕಿಸಿದು* | ಕೇಸ್ | ಕಿಸು, ಕೆಂ | ಕೇಸಕ್ಕಿ, ಕೇಸುರಿ, ಕಿಸುವೊನ್, ಕೆಂಬೊನ್ |
| | | ಚೆಂ | ಚೆಂಬೊನ್ |
| ಎಳದು | ಎಳ | ಎಳ | ಎಳಅಡಕೆ, ಎಳಗಾಯ್ |
| ಪೞದು | ಪೞ | ಪೞ | ಪೞಅಲಗು, ಪೞಗನ್ನಡಂ |
| ಪೊಸತು | ಪೊಸ | ಪೊಸ | ಪೊಸಅಂಗಡಿ, ಪೊಸಗನ್ನಡಂ |
| ಪೊಲ್ಲದು | ಪೊಲ್ಲ | ಪೊಲ್ಲ | ಪೊಲ್ಲಾಳ್, ಪೊಲ್ಲಗೆಯ್ತ |
| ಬಟ್ಟಿತು | | ಬಟ್ಟ | ಬಟ್ಟವೊಗಂ |
| ಬೆಟ್ಟಿತು | | ಬಿಱು, ಬೆಟ್ಟ | ಬಿಱುಗಾಳಿ, ಬೆಟ್ಟವೇಸಗೆ |

* ಕೇಶಿರಾಜನು ಪಚ್ಚನೆ, ಬೆಚ್ಚನೆ, ಕೆಚ್ಚನೆ ಇವು ಪೂರ್ವಪದಗಳೆಂದು ಹೇಳುತ್ತಾನೆ.

2. ಪೂರ್ವಪದವಾದ ಸಂಖ್ಯಾವಾಚಕಕ್ಕೆ ಬರುವ ರೂಪಗಳು

| ಸಂಖ್ಯಾವಾಚಕ | ಸ್ವರಪರವಾದರೆ | ವ್ಯಂಜನಪರವಾದರೆ | ಉದಾಹರಣೆ |
|---|---|---|---|
| ಒಂದು | ಓರ್ | ಒರ್, ಒಂ (ಕೆಲವೆಡೆ) | ಓರೊಕ್ಕಲ್, ಒರ್ಪಿಡಿ ಒಂಪೆಸೆ, ಒಂಬತ್ತು |
| ಎರಡು | ಈರ್ | ಇರ್ | ಈರೆಸಟ್, ಈರೆರಡು ಇರ್ಕಟ್ಟು, ಇರ್ಪತ್ತು |
| ಮೂಱು | ಮುಯ್ | ಮು, ಮೂ (ಕೆಲವೆಡೆ) | ಮುಯ್ಯೇೞು, ಮುಕ್ಕೊಡೆ, ಮುಪ್ಪೊೞಲ್, ಮೂವಳಸು, ಮೂಗಾವುದಂ |

| ಸಂಖ್ಯಾವಾಚಕ | ಸಮಾಸದಲ್ಲಿ ರೂಪ | ಉದಾಹರಣೆ |
|---|---|---|
| ನಾಲ್ಕು | ನಾಲ್ | ನಾಲಡಿ, ನಾಲ್ವತ್ತು |
| ಅಯ್ದು | ಅಯ್ | ಅಯ್ವಡಿ, ಅಯ್ವತ್ತು |
| ಆಱು | ಅಱು | ಅಱುಗಾವುದಂ, ಅಱುವಗೆ |
| ಏೞು | ಏೞ್, ಎೞ್ | ಏೞ್ನೂಱು, ಏೞ್ಪೊಜೆ, ಎೞ್ಪತು |
| ಎಂಟು | ಎಣ್ | ಎಣ್ದೆಸೆ, ಎಣ್ಬತ್ತು |
| ಒಂಬತ್ತು | ತೊವ್ (ಪತ್ತು ಪರವಾದರೆ) | ತೊಂಬತ್ತು |
| | ಒಂಬಯ್ (ನೂಱು, ಸಾಸಿರ ಪರವಾದರೆ) | ಒಂಬಯ್ನೂಱು ಒಂಬಯ್ಸಾಸಿರಂ |
| ಪತ್ತು | ಪನ್ (ಒಂದು, ಎರಡು ಪರವಾದರೆ) | ಪನ್ನೊಂದು, ಪನ್ನೆರಡು |
| | ಪದಿ (ಮೂಱು, ನಾಲ್ಕು ಪರವಾದರೆ) | ಪದಿಮೂಱು, ಪದಿನಾಲ್ಕು |
| | ಪದಿನ್ (ಅಯ್ದು, ಆಱು ಏೞು, ಎಂಟು ಪರವಾದರೆ) | ಪದಿನಯ್ದು ಇತ್ಯಾದಿ |
| | ಪದಿರ್ (ಮಡಿ ಪರವಾದರೆ) | ಪದಿರ್ಮಡಿ |
| | ಪಯಿಂ (ಸಾಸಿರ ಪರವಾದರೆ) | ಪಯಿಂಛಾಸಿರಂ |
| ಸಾಸಿರ | ಸಾಸಿರ್ | ಸಾಸಿರ್ವನೆ |
| ಕೆಲವು | ಕೆಲ | ಕೆಲದೆವಸಂ |
| ಪಲವು | ಪಲ | ಪಲವಣ್ |

(iv) ಕೃದಂತವಿಶೇಷಣವು ಪೂರ್ವಪದವಾದಾಗ ಅದರ ಧಾತು ಸಾಮಾನ್ಯವಾಗಿ ಸ್ವಸ್ವರೂಪದಲ್ಲಿ ಉಳಿಯುವುದು.

ಉದಾ : ಅಡುವ ಕೂಳ್=ಅಡುಗೂಳ್ ; ಇಡುವ ಕಿಚ್ಚು=ಇಡುಗಿಚ್ಚು.

ಆದರೆ ಉಕಾರಾಂತ ಧಾತುಗಳ ಮುಂದೆ ಅನುಸ್ವಾರವೂ ಇಕಾರಾಂತ ಧಾತುಗಳ ಮುಂದೆ ಉಂ ಎಂಬುದೂ ಆಗಮವಾಗಿ ಬರುವುದುಂಟು.

ಉದಾ : ತೂಗುವ ತೊಟ್ಟಿಲ್ = ತೂಗುಂದೊಟ್ಟಿಲ್,
ಇಱಿವ ಪೊೞ್ತು = ಇಱಿಯುಂಬೊೞ್ತು.

ಕೆಲವು ವೇಳೆ ಧಾತುವಿನ ಅಂತ್ಯಾಕ್ಷರವು ಲೋಪವಾಗುವುದೂ ಉಂಟು.

ಉದಾ : ಮಡಗಿದ ಕೂಳ್ = ಮಡಗೂಳ್
ಒಣಗಿದ ಮರಂ = ಒಣಮರಂ.

(v) ಕ್ರಿಯಾಸಮಾಸ ಅಂಶಿಸಮಾಸಗಳಲ್ಲಿ—

1. ಪೂರ್ವಪದವಾಗಿ ಬರುವ ಪಿಂದು, ಮುಂದು, ಪೆಱಗು, ಒಳಗು ಮೊದಲಾದ ದಿಗ್ವಾಚಕಗಳಿಗೆ ಸಾಮಾನ್ಯವಾಗಿ ಅಂತ್ಯಾಕ್ಷರವು ಲೋಪವಾಗಿ ಅವುಗಳ ಪ್ರಕೃತಿರೂಪ ಬರುತ್ತದೆ.

ಉದಾ : ಪಿಂಬಗಲ್, ಮುಂಬರಿದಂ, ಪೆಱಸಾರ್ದು, ಒಳಕೋಂಟೆ.

2. ಕೆಱಗು ಶಬ್ದಕ್ಕೆ ಕಿೞ್, ಕಿನ್ ಎಂಬ ರೂಪಗಳಾಗುತ್ತವೆ.

ಉದಾ : ಕಿೞ್ಕೆಱೆ, ಕಿನ್ನೆಲಂ.

3. ಪೆಱಗು ಎಂಬುದಕ್ಕೆ ಪೆಡಂ, ಪೆಡ ಎಂದೂ ಆದೇಶವುಂಟು.

ಉದಾ : ಪೆಡಂಮೆಟ್ಟು, ಪೆಡಮೆಟ್ಟು.

4. ನಡು ಎಂಬುದಕ್ಕೆ ನಟ್ ಆದೇಶ.

ಉದಾ : ನಟ್ಟಿರುಳ್.

(vi) ಬಹುವ್ರೀಹಿ ಸಮಾಸದಲ್ಲಿ—

1. ಕರ್ಮಧಾರಯದಲ್ಲಿ ಪೂರ್ವಪದಕ್ಕೆ ಬರುವ ಕಾರ್ಯಗಳೇ ಬಹುವ್ರೀಹಿಯಲ್ಲಿಯೂ ಪ್ರಾಯಿಕವಾಗಿ ಬರುವುದಲ್ಲದೆ ಕೊನೆಗೆ ಪುಲ್ಲಿಂಗದಲ್ಲಿ ಅಂ ಪ್ರತ್ಯಯವೂ ಸ್ತ್ರೀಲಿಂಗದಲ್ಲಿ ಕೆಲವೆಡೆ ಅಳ್ ಪ್ರತ್ಯಯವೂ ಬರುವುವು.

ಉದಾ : ನಿಡುವಣೆಯಂ, ನಿಡುವಣೆಯಳ್.

2. ಚಾಗ ಮೊದಲಾದ ಶಬ್ದಗಳು ಉತ್ತರಪದವಾಗಿ ಉಳ್ಳ ಬಹುವ್ರೀಹಿಯ ಕಡೆಗೆ ಪುಂಸ್ತ್ರೀಲಿಂಗಗಳೆರಡರಲ್ಲಿಯೂ ಇ ಪ್ರತ್ಯಯ ಬರುವುದು.

ಉದಾ : ಕಡುಚಾಗಿ, ಕಡುಗೆಲಸಿ, ಬಲ್ಲುಜ್ಜುಗಿ.

3. ಉತ್ತರಪದವಾದ ಇಲ್ಲ ಎಂಬುದಕ್ಕೆ ಮೂರು ಲಿಂಗಗಳಲ್ಲಿಯೂ ಇಲಿ ಎಂಬ ರೂಪವಾಗುವುದು.

ಉದಾ : ಪಲ್ ಇಲ್ಲ ಆವಂಗೆ ಅವಂ = ಪಲ್ಲಿಲಿ, ನಾಣಿಲಿ (ಪೆಣ್), ಅಗಿಲಿಲಿ (ಗಂಧಂ).

4. ಉಣ್ಬ, ಕುಟ್ಟುವ, ಕೊಲ್ವ, ಕೊಳ್ವ, ತಿನ್ಬ ಎಂಬೀ ಉತ್ತರಪದಗಳಿಗೆ ಕ್ರಮವಾಗಿ ಉಣಿ, ಕುಟಿಗ, ಕುಲಿ, ಕುಳಿ, ತಿನಿ ಎಂಬ ಆದೇಶಗಳು ಬರುವುವು.

ಉದಾ : ಅಲರುಣಿ, ಕಲ್ಕುಟಿಗಂ, ಮೀಂಗುಲಿ, ಲಂಚಂಗುಳಿ, ಅಡದಿನಿ.

## ೫. ಅನ್ಯದೇಶ್ಯಪ್ರಕರಣ

### 1. ಸಮಸಂಸ್ಕೃತ

ಸಂಖ್ಯಾವಾಚಕಗಳನ್ನೂ ಅವ್ಯಯಗಳನ್ನೂ ಉಳಿದು ಮಿಕ್ಕ ಸಂಸ್ಕೃತ ಶಬ್ದಗಳನ್ನು ಕನ್ನಡಕ್ಕೆ ಪ್ರಕೃತಿಗಳನ್ನಾಗಿ ತೆಗೆದುಕೊಳ್ಳುತ್ತಾರೆ. ಹಾಗೆ ಕನ್ನಡಕ್ಕೆ ಬಂದಾಗ ಆಗುವ ಕೆಲವು ಮುಖ್ಯ ವ್ಯತ್ಯಾಸಗಳನ್ನು ಇಲ್ಲಿ ತಿಳಿಸಿದೆ.

ಸ್ವರಾಂತಗಳು :

(i) ಹ್ರಸ್ವಸ್ವರಾಂತವಾದ ಶಬ್ದಗಳು ಸಾಮಾನ್ಯವಾಗಿ ಯಾವ ವ್ಯತ್ಯಾಸವನ್ನೂ ಹೊಂದುವುದಿಲ್ಲ.

ಉದಾ : ಭುವನ, ಮುನಿ, ರಿಪು, ಪಿತೃ.

ಕೆಲವು ಅಕಾರಾಂತಗಳು ಎಕಾರಾಂತವಾಗುವುದುಂಟು.

ಉದಾ : ಪ್ರಶ್ನೆ, ದರ್ಭೆ, ಅಭಿಲಾಷೆ.

ಋ ಕಾರಕ್ಕೆ 'ಆರ' ಎಂಬ ಆದೇಶ ಬರುವುದೂ ಉಂಟು.

ಉದಾ : ಸವಿತೃ–ಸವಿತಾರ, ಕರ್ತೃ–ಕರ್ತಾರ.

ಋ ಕಾರಕ್ಕೆ ಇನ್ನೂ ಕೆಲವು ವಿಶೇಷರೂಪಗಳೂ ಉಂಟು.

ಉದಾ : ದಾತೃ–ದಾತ, ಮಾಂಧಾತೃ–ಮಾಂಧಾತ, ವಿಧಾತೃ–ವಿಧಾತ್ರ.

'ಸಖಿ' ಎಂಬ ಇಕಾರಾಂತ ಶಬ್ದವು ಸಖ ಎಂದು ಅಕಾರಾಂತವಾಗುವುದು.

(ii) ದೀರ್ಘಸ್ವರಾಂತವಾದ ಶಬ್ದಗಳು ಹ್ರಸ್ವಸ್ವರಾಂತಗಳಾಗುತ್ತವೆ.

ಉದಾ : ಕರುಣಾ–ಕರುಣ, ಗೌರೀ–ಗೌರಿ, ಸರಯೂ–ಸರಯು.

ಆ ಕಾರಾಂತಗಳು ಸಾಮಾನ್ಯವಾಗಿ ಎ ಕಾರಾಂತಗಳಾಗುತ್ತವೆ.

ಉದಾ : ಮಾಲಾ–ಮಾಲೆ, ಭಾಷಾ–ಭಾಷೆ ಇತ್ಯಾದಿ.

ಗ್ರೀವಾ ಭಿಕ್ಷಾ ಎಂಬೆರಡು ಶಬ್ದಗಳಿಗೆ ಗ್ರೀವ–ಗ್ರೀವೆ, ಭಿಕ್ಷ–ಭಿಕ್ಷೆ ಎಂಬೆರಡು ರೂಪಗಳೂ ಬರುವುದುಂಟು.

ಏಕಾಕ್ಷರದ ಶಬ್ದಗಳು ಇದ್ದಂತೆಯೇ ಕನ್ನಡಕ್ಕೆ ಬರುವುವು.

ಉದಾ : ಶ್ರೀ, ಸ್ತ್ರೀ, ಜ್ಯಾ ಇತ್ಯಾದಿ.

ವ್ಯಂಜನಾಂತಗಳು :

ಸಂಸ್ಕೃತದ ವ್ಯಂಜನಾಂತ ಶಬ್ದಗಳು ಕನ್ನಡಕ್ಕೆ ಬರುವಾಗ—

(i) ಕೆಲವಕ್ಕೆ ಅಂತ್ಯವ್ಯಂಜನ ಲೋಪವಾಗುತ್ತದೆ.

ಉದಾ : ರಾಜನ್–ರಾಜ, ಬ್ರಹ್ಮನ್–ಬ್ರಹ್ಮ, ಪುರೂರವಸ್–ಪುರೂರವ. ಸೀಮನ್, ಊಷ್ಮನ್ ಶಬ್ದಗಳಿಗೆ ಸೀಮೆ, ಊಷ್ಮೆ ಎಂಬ ರೂಪಗಳುಂಟು.

(ii) ಕೆಲವಕ್ಕೆ ಅಕಾರ ಸೇರುತ್ತದೆ.
ಉದಾ: ದಿವ್-ದಿವ, ಬುಧ್-ಬುಧ.

(iii) ಕೆಲವಕ್ಕೆ ಅಂತ್ಯವ್ಯಂಜನಕ್ಕೆ ದ್ವಿತ್ವ ಬಂದು ಉಕಾರ ಸೇರುತ್ತದೆ.
ಉದಾ: ಅಪ್-ಅಪ್ಪು, ವಿದ್ಯುತ್-ವಿದ್ಯುತ್ತು, ಕ್ಷ್ಮಿತ್-ಕ್ಷ್ಮಿತ್ತು.

(iv) ಕೆಲವಕ್ಕೆ ಮೇಲಿನ (i), (iii) ಎರಡು ರೂಪಗಳೂ ಉಂಟು.
ಉದಾ: ತೇಜಸ್-ತೇಜ, ತೇಜಸ್ಸು; ಯಶಸ್-ಯಶ, ಯಶಸ್ಸು.

(v) ಕೆಲವಕ್ಕೆ ಯಾವ ವ್ಯತ್ಯಾಸವೂ ಆಗುವುದಿಲ್ಲ.
ಉದಾ: ವಾಕ್, ಗೀರ್ (ಗಿರೆ ಎಂಬ ರೂಪವೂ ಉಂಟು).

(vi) ಕೆಲವು ಸಂಸ್ಕೃತ ಪ್ರಥಮಾಬಹುವಚನಗಳು ಅಂತ್ಯ ವಿಸರ್ಗವನ್ನುಳಿದು ಕನ್ನಡದಲ್ಲಿ ಏಕವಚನದ ಪ್ರಕೃತಿಗಳಾಗುವುವು.
ಉದಾ: ವಿದ್ವಾನ್ ಎಂಬುದರ ಪ್ರಥಮಾ ಬಹುವಚನರೂಪ ವಿದ್ವಾಂಸಃ.
ಕನ್ನಡದಲ್ಲಿ ಇದು ವಿದ್ವಾಂಸ ಎಂದು ಆಗುತ್ತದೆ. ಹಾಗೆಯೇ ಶ್ವಾನು ಶ್ರೀಮಂತ, ಹನುಮಂತ ಇತ್ಯಾದಿ.

## 2. ತದ್ಭವ

ಸಂಸ್ಕೃತದಿಂದ ಶಬ್ದಗಳನ್ನು ತೆಗೆದುಕೊಳ್ಳುವಾಗ ಕನ್ನಡಿಗರು ತಮ್ಮಲ್ಲಿ ಬಳಕೆಯಲ್ಲಿಲ್ಲದ ಅಕ್ಷರಗಳನ್ನು ವ್ಯತ್ಯಾಸಪಡಿಸಿಕೊಳ್ಳುವುದು ಸ್ವಾಭಾವಿಕ. ಈ ಸ್ವಾಭಾವಿಕವಾದ ವ್ಯತ್ಯಾಸಗಳು ಕೆಲವು ತದ್ಭವಗಳಲ್ಲಿ ಕಂಡುಬರುತ್ತವೆ. ಸಂಸ್ಕೃತದ ಋ ಶ ಷ ಗಳು ಕನ್ನಡದಲ್ಲಿಲ್ಲವೆಂದು ಅಕ್ಷರಪ್ರಕರಣದಲ್ಲಿ ತಿಳಿಸಿದೆ. ದೇಶ್ಯ ಶಬ್ದಗಳಲ್ಲಿ ಪ್ರಾಯಿಕವಾಗಿ ಮಹಾಪ್ರಾಣಾಕ್ಷರಗಳು ಕಂಡುಬರುವುದಿಲ್ಲ. ಈ ಕಾರಣದಿಂದ ಸಂಸ್ಕೃತ ಶಬ್ದಗಳಲ್ಲಿರುವ ಈ ಅಕ್ಷರಗಳು ತದ್ಭವದಲ್ಲಿ ವ್ಯತ್ಯಾಸವಾಗುವುದು ಕಂಡುಬರುತ್ತದೆ.

ಉದಾ: ಶ, ಷ > ಸ—

ಆಕಾಶ-ಆಗಸ, ಪಶು-ಪಸು, ಶಾಣ-ಸಾಣೆ, ಶುದ್ಧಿ-ಸುದ್ದಿ, ಜ್ಯೋತಿಷ-ಜೋಯಿಸ, ಶೇಷ-ಸೇಸೆ.

ಋ > ರಿ, ಇ, ಅ—

ಋಣ-ರಿಣ, ಋಷಿ-ರಿಸಿ; ಮೃಗ-ಮಿಗ, ಶೃಂಗಾರ-ಸಿಂಗಾರ, ಶೃಂಗಿ-ಸಿಂಗಿ; ವೃಷಭ-ಬಸವ, ಶೃಂಖಲಾ-ಸಂಕಲೆ.

ಮಹಾಪ್ರಾಣ > ಅಲ್ಪಪ್ರಾಣ—

ಪರಿಖಾ-ಪರಿಕೆ, ಮುಖ-ಮುಕ-ಮೊಗ; ಶುಂಠಿ-ಸುಂಟಿ, ಕಥಾ-ಕತೆ, ಕಂಥಾ-ಕಂತೆ, ಘಟಿಕಾ-ಗಡಿಗೆ, ಘೂಕ-ಗೂಗೆ, ಧಾರಾ-ದಾರೆ, ಆರಂಭ-ಆರಂಬ.

ಇದರಂತೆಯೇ ಇನ್ನೂ ಹಲವು ವ್ಯತ್ಯಾಸಗಳಾಗುತ್ತವೆ. ಅವುಗಳಲ್ಲಿ ಮುಖ್ಯವಾದ ಕೆಲವನ್ನು ಕೆಳಗೆ ನಿರೂಪಿಸಿದೆ :

(i) ವಿಜಾತೀಯ ಸಂಯುಕ್ತ ವ್ಯಂಜನಾಕ್ಷರಗಳು ವಿರಳ*ವಾಗುವುವು :
ಕ್ರಕಚ-ಗರಗಸ, [illegible]ರ್ಷ-ಬರಿಸ, ಲಕ್ಷ್ಮೀ-ಲಕುಮಿ, ಅರ್ಹ-ಅರುಹ, ಮುಕ್ತಿ-ಮುಕುತಿ.

(ii) ಶಬ್ದಗಳ ಆದಿಯಲ್ಲಿಲ್ಲದ ಕ ಚ ಟ ತ ಗಳು ಗ ಜ ಡ ದ ಗಳಾಗುತ್ತವೆ:
ಆಕಾಶ-ಆಗಸ, ಮಲ್ಲಿಕಾ-ಮಲ್ಲಿಗೆ, ಸೂಚೀ-ಸೂಜಿ, ವಾಚನ-ಬಾಜನೆ, ಅಟವೀ-ಅಡವಿ, ಚತುರ-ಚದುರ, ಜಾತಿ-ಜಾದಿ.

(iii) ಪ > ವ (ಶಬ್ದ ಮಧ್ಯದಲ್ಲಿ)
ಕಪಿಲಾ-ಕವಿಲೆ, ತ್ರಿಪದೀ-ತಿವದಿ.
ಬ > ವ (ಶಬ್ದ ಮಧ್ಯದಲ್ಲಿ)
ಕಬಳ-ಕವಳ, ಶಿಬಿಕಾ-ಸಿವಿಗೆ.
ವ > ಬ (ಶಬ್ದದ ಆದಿಯಲ್ಲಿ)
ವಲ್ಲೀ-ಬಳ್ಳಿ, ವಸತಿ-ಬಸದಿ, ವಿಧಿ-ಬಿದಿ, ವೇಗ-ಬೇಗ.

(iv) ಯ > ಜ (ಸಾಮಾನ್ಯವಾಗಿ ಶಬ್ದದ ಆದಿಯಲ್ಲಿ)
ಯೋಗಿನ್-ಜೋಗಿ, ಯಾತ್ರಾ-ಜಾತ್ರೆ ;
ದ್ಯ > ಜ್ಜ (ಶಬ್ದ ಮಧ್ಯದಲ್ಲಿ)
ಉದ್ಯೋಗ-ಉಜ್ಜುಗ, ವಿದ್ಯಾ-ಬಿಜ್ಜೆ, ವೈದ್ಯ-ಬೆಜ್ಜ.
ದ್ಯ ಧ್ಯ > ಜ
ದ್ಯೂತ-ಜೂಜು, ವಂಧ್ಯಾ-ಬಂಜೆ, ಸಂಧ್ಯಾ-ಸಂಜೆ, ಧ್ಯಾನ-ಜಾನ.

(v) ವಿಜಾತೀಯ ವ್ಯಂಜನ ದ್ವಿತ್ವದ 'ರ'ಕ್ಕೆ ಲೋಪ :
†ಕರ್ತರೀ-ಕತ್ತರಿ, ವರ್ತೀ-ಬತ್ತಿ, ಶರ್ಕರಾ-ಸಕ್ಕರೆ, ದ್ರೋಣೀ-ದೋಣಿ, ಶ್ರಮಣ-ಸವಣ, ಪ್ರ[illegible]ಾ-ಹಬೆ, ನಿದ್ರಾ-ನಿದ್ದೆ, ವೇತ್ರ-ಬೆತ್ತ, ವ್ಯಾಘ್ರ-ಬಗ್ಗ.

(vi) ಕ್ಷ > ಕ್ಕ, ಚ್ಚ (ಹಿಂದಿನ ಅಕ್ಷರ ಹ್ರಸ್ವವಾದಾಗ)
ಅಕ್ಷರ-ಅಕ್ಕರ, ಭಿಕ್ಷಾ-ಬಿಕ್ಕೆ, ಅಕ್ಷ-ಅಚ್ಚು.
ಕ್ಷ > ಸ (ಶಬ್ದದ ಆದಿಯಲ್ಲಿ)
ಕ್ಷಪಣ-ಸವಣ, ಕ್ಷೇಮ-ಸೇಮ.

---

* ವಿರಳವಾಗುವುದೆಂದರೆ ಎರಡು ವ್ಯಂಜನಗಳ ನಡುವೆ ಒಂದು ಸ್ವರ ಬರುವುದು.

† ಕತ್ತರೀ ಮೊದಲಾದುವನ್ನು ದ್ವಿತ್ವವಿಲ್ಲದೆಯೇ ಈಗ ಬರೆಯುವ ರೂಢಿಯಿದ್ದರೂ ಅವುಗಳ ಉಚ್ಚಾರಣೆ ಕತ್ತ್ರರೀ ಎಂಬಂತೆ.

ವೆ. ನರಸಿಂಹ ಮೂರ್ತಿ
ಕೆಂಗೇರಿ ಉಪ ನಗರ,



ಕ್ಷ > ಕ
ಕ್ಷಾರ-ಕಾರ, ಪರೀಕ್ಷಾ-ಪರಿಕೆ.

(vii) ಉ > ಒ, ಇ > ಎ (ಶಬ್ದದ ಆದಿಸ್ವರವಾದಾಗ)
ಉಷ್ಟ್ರ-ಒಟ್ಟೆ-ಒಂಟೆ, ಪುಸ್ತಕ-ಪೊತ್ತಗೆ, ಮುಖ-ಮೊಗ; ಇಳಾ ಎಳೆ, ದಿಶಾ-ದೆಸೆ, ಶಿಲಾ-ಸೆಲೆ.

(viii) ದೀರ್ಘಸ್ವರ > ಹ್ರಸ್ವ (*a*) ಶಬ್ದದ ಆದಿಯಲ್ಲಿದ್ದು ಮುಂದೆ ಒತ್ತಕ್ಷರ ಬಂದಾಗ, (*b*) ಶಬ್ದ ಮಧ್ಯದಲ್ಲಿದ್ದಾಗ:
1. ಆರ್ಯ-ಅಜ್ಜ, ಘೂರ್ಜರ-ಗುಜ್ಜರ, ರಾಕ್ಷಸ-ರಕ್ಕಸ, ಸೂತ್ರಿಕಾ-ಸುತ್ತಿಗೆ, ಪ್ರೇಕ್ಷಣ-ಪೆಕ್ಕಣ.
2. ಆಕಾಶ-ಆಗಸ, ಕೂರ್ಪಾಸ-ಕುಪ್ಪಸ, ತಾಂಬೂಲ-ತಂಬುಲ, ಪ್ರಯಾಣ-ಪಯಣ, ದುಕೂಲ-ದುಗುಲ.

(ix) ಪದಮಧ್ಯದ ಅಕ್ಷರಕ್ಕೆ ಲೋಪ :
ಕುಮಾರ-ಕೋರ ; ನವಮಿ-ನಾಮಿ ; ನಿಯಮ-ನೇಮ ; ಮಯೂರ-ಮೋರ ; ಸಾಹಸ-ಸಾಸ.

(x) ಒತ್ತಕ್ಷರದಲ್ಲಿಯ ವ ಕಾರಕ್ಕೆ ಲೋಪ :
ಜ್ವರ-ಜರೆ, ತಪಸ್ವಿನ್-ತವಸಿ, ಧ್ವನಿ-ದನಿ, ಸ್ವರ್ಗ-ಸಗ್ಗ.

(xi) ಷ್ಟ, ಷ್ಠ>ಟ್ಟ :
ಇಷ್ಟಕಾ-ಇಟ್ಟಿಗೆ, ಗೋಷ್ಠೀ-ಗೊಟ್ಟಿ, ನಿಷ್ಠಾ-ನಿಟ್ಟೆ.

(xii) ಸಮಾಸಾದಿಯ ಏಕ, ದ್ವಿ, ತ್ರಿ, ಚತುಃ > ಎಕ್ಕ, ದು, ತಿ, ಚೌ :
ಏಕಸ್ಥಲ-ಎಕ್ಕತಳ, ದ್ವಿಗುಣ-ದುಗುಣ, ತ್ರಿಪದೀ-ತಿವದಿ, ಚತುರ್ದಂತ-ಚೌದಂತ.

(xiii) ಸಹ, ಮಹತ್ > ಸಾ, ಮಾ :
ಸಹದೇವ-ಸಾದೇವ, ಸಹವಾಸಿನ್-ಸಾವಾಸಿ, ಮಹಾದೇವ-ಮಾದೇವ, ಮಹಾಸಾಮಂತ-ಮಾಸಾವಂತ.

## 3. ಪ್ರಾಕೃತ

ತದ್ಭವಗಳು ಸಂಸ್ಕೃತದಿಂದ ನೇರವಾಗಿ ಕನ್ನಡಕ್ಕೆ ಬಂದಂತೆ ಹಳಗನ್ನಡ ವ್ಯಾಕರಣಗಳಲ್ಲಿ ಹೇಳಿದೆ. ಹಲವು ತದ್ಭವಗಳು ಪ್ರಾಕೃತದಿಂದ ಬಂದಿರುವುವು ಎಂದು ಆಧುನಿಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಂಥವುಗಳಲ್ಲಿ ಕೆಲವನ್ನು ಮುಂದೆ ಕೊಟ್ಟಿದೆ :—

| ಸಂಸ್ಕೃತ | ಪ್ರಾಕೃತ | ತದ್ಭವ |
|---|---|---|
| ದಂಷ್ಟ್ರಾ | ದಾಢಾ | ದಾಡೆ |
| ವೃತ್ತಂ | ವಟ್ಟಂ | ಬಟ್ಟೆ |
| ಯಜ್ಞಃ | ಜಣ್ಣೋ | ಜನ್ನ |
| ಸಾಕ್ಷೀ | ಸಕ್ಖೀ | ಸಕ್ಕಿ |
| ಶಯ್ಯಾ | ಸೆಜ್ಜಾ | ಸೆಜ್ಜೆ |
| ವಿದ್ಯಾ | ವಿಜ್ಜಾ | ಬಿಜ್ಜೆ |
| ಸಿಂಹಃ | ಸಿಂಘೋ | ಸಿಂಗ |
| ಆಜ್ಞಾ | ಆಣಾ | ಆಣೆ |
| ತ್ವರಿತಂ | ತುರಿಅಂ | ತುರಿಹ |
| ಜ್ಯೋತ್ಸ್ನಾ | ಜೋಣ್ಹಾ | ಜೊನ್ನ |
| ಶ್ರದ್ಧಾ | ಸದ್ಧಾ | ಸಡ್ಡೆ |
| ನೂಪುರಂ | ಣೇವುರಂ | ನೇವುರ |
| ಸ್ತ್ರೀ | ಇತ್ಥೀ | ಇತ್ತಿ, ಇತಿ (—ಪ್ರತ್ಯಯವಾಗಿ) ಉದಾ : ಅರಸಿತಿ |

ಕೆಲವು ವೇಳೆ ಪ್ರಾಕೃತ ಶಬ್ದಗಳು ಯಾವ ವ್ಯತ್ಯಾಸವೂ ಇಲ್ಲದೆ ಕನ್ನಡದಲ್ಲಿ ಬಳಕೆಯಾಗುತ್ತವೆ. ಉದಾ :

| ಸಂಸ್ಕೃತ | ಪ್ರಾಕೃತ | ಕನ್ನಡ |
|---|---|---|
| ಪ್ರತಿ | ಪಡಿ | ಪಡಿ |
| ಸ್ಥಾನ | ಠಾಣ | ಠಾಣ |
| ವಕ್ರ | ವಂಕ | ವಂಕ |
| ಕಾರ್ಯ | ಕಜ್ಜ | ಕಜ್ಜ |
| ಸ್ನೇಹ | ನೇಹ | ನೇಹ |
| ಅಂಗಾರ | ಇಂಗಾಲ | ಇಂಗಾಲ |

## 4. ತತ್ಸಮ

ಕೇಶಿರಾಜನು ಮಣಿ, ಮಂಚಂ, ಪಟ್ಟಂ, ತೋರಣಂ, ಅಟ್ಟಂ ಮೊದಲಾದ ಕೆಲವು ಶಬ್ದಗಳಿಗೆ 'ತತ್ಸಮ' ಎಂದು ಹೆಸರಿಟ್ಟಿದ್ದಾನಷ್ಟೆ. ಈ ಶಬ್ದಗಳು 'ಸಂಸ್ಕೃತಕ್ಕಂ ಕನ್ನಡಕ್ಕಂ ಸರಿ' ಎಂದು ಹೇಳಿ ಉದಾಹರಣೆಗಳನ್ನು ಕೊಟ್ಟಿದ್ದಾನೆ— ಮಣಿ : ಮಕುಟಮಣಿ, ಉಡೆವಣಿ ; ಮಂಚ : ರತ್ನಮಂಚ, ಸೆಳೆಮಂಚ; ತೋರಣ : ಮಕರತೋರಣ, ತಳಿರ್ದೋರಣ ಇತ್ಯಾದಿ. ಹೀಗೆ ಈ ತತ್ಸಮ ಶಬ್ದಗಳು ಕನ್ನಡ

ಶಬ್ದಗಳೊಡನೆಯೂ ಸಂಸ್ಕೃತ ಶಬ್ದಗಳೊಡನೆಯೂ ಸಮಾಸವಾಗುತ್ತವೆ. ಸಂಸ್ಕೃತ ಶಬ್ದಗಳನ್ನು ಬಳಸದೆ ಅಚ್ಚಗನ್ನಡದಲ್ಲಿಯೇ ಗ್ರಂಥರಚನೆ ಮಾಡಬೇಕೆನ್ನುವವರಿಗೆ ತದ್ಭವ ಶಬ್ದಗಳೂ ತತ್ಸಮ ಶಬ್ದಗಳೂ ಅವುಗಳ ಸಮಾಸ ಶಬ್ದಗಳೂ 'ಶೈವೊಕ್ಕ ನಿಧಾನ'ವೆಂದು ಹೇಳಿದ್ದಾನೆ. ತದ್ಭವಕ್ಕೂ ದೇಶೀಯ ಪದಕ್ಕೂ ಸಮಾಸವಾಗುವುದಕ್ಕೆ—ಸೆಜ್ಜೆವನೆ, ಸಿಂಗವೇಂಟೆ; ತದ್ಭವ ಸಮಾಸಕ್ಕೂ ದೇಶೀಯ ಪದಕ್ಕೂ ಸಮಾಸವಾಗುವುದಕ್ಕೆ—ತಾಣದೀವಿಗೆವೆಳಗು, ಜೊನ್ನವಕ್ಕಿಕಣ್ಗಳ್; ದೇಶೀಯ ಪದಕ್ಕೂ ತತ್ಸಮ ಸಮಾಸಕ್ಕೂ ಸಮಾಸವಾಗುವುದಕ್ಕೆ—ಪೂಮಾಲೆದುಱುಂಬು, ಕಟ್ಟಂಕದಲ್ಲಣಂ ಮೊದಲಾದ ಉದಾಹರಣೆಗಳನ್ನು ಕೊಟ್ಟಿದ್ದಾನೆ. 'ಅಚ್ಚಗನ್ನಡ' ಎಂದರೆ ದೇಶ್ಯ, ತದ್ಭವ, ತತ್ಸಮ ಇವು ಮೂರೂ ಸೇರುತ್ತವೆಂಬುದನ್ನು ಗಮನದಲ್ಲಿಡಬೇಕು. ಈ ಅರ್ಥದಲ್ಲಿಯೇ ಆಂಡಯ್ಯನ ಕಬ್ಬಿಗರಕಾವವು ಅಚ್ಚಗನ್ನಡದಲ್ಲಿ ರಚಿತವಾಗಿರುವುದು.

# ೬. ನಾಮಪದ ಪ್ರಕರಣ

ಜನರು ಭಾಷೆಯನ್ನು ಬಳಸುವುದು, ಎಂದರೆ ಮಾತನಾಡುವುದು ಅಥವಾ ಬರೆಯುವುದು, ಸಾಮಾನ್ಯವಾಗಿ ವಾಕ್ಯರೂಪದಲ್ಲಿ ಎಂದು ಹಿಂದೆಯೇ ಸೂಚಿಸಿದೆ. ವಾಕ್ಯ ಎಂದರೆ ಒಂದು ಅರ್ಥವನ್ನು ಪೂರ್ಣವಾಗಿ ಹೇಳುವ, ಪರಸ್ಪರ ಸಂಬಂಧವುಳ್ಳ ಶಬ್ದಗಳ ಸಮುದಾಯ. ವಾಕ್ಯದಲ್ಲಿ ಶಬ್ದಗಳಿಗಿರುವ ಸಂಬಂಧವನ್ನು ಪ್ರತ್ಯಯಗಳು ಸೂಚಿಸುತ್ತವೆ. ಈ ಪ್ರತ್ಯಯಗಳಿಂದ ಕೂಡಿದ ಶಬ್ದಗಳಿಗೆ ಪದ ಎಂದು ಸಂಜ್ಞೆ. ಒಂದು ವಾಕ್ಯದಲ್ಲಿ ಬರುವ ಪದಗಳನ್ನು ನಾಮಪದ, ಕ್ರಿಯಾಪದ, ಅವ್ಯಯ ಎಂದು ಮೂರು ಭಾಗಗಳಾಗಿ ವಿಂಗಡಿಸುತ್ತಾರೆ.

**ನಾಮಪದ**

ನಾಮಪದವು ಲಿಂಗ ವಚನ ವಿಭಕ್ತಿಗಳಿಂದ ಕೂಡಿರುತ್ತದೆ. ಕನ್ನಡದಲ್ಲಿ ಲಿಂಗವು ಅರ್ಥವನ್ನು ಅನುಸರಿಸುವುದರಿಂದ ಅದು ಪ್ರಕೃತಿಯಿಂದಲೇ ಸೂಚಿತವಾಗುತ್ತದೆ. ವಚನ ವಿಭಕ್ತಿಗಳು ಸಾಮಾನ್ಯವಾಗಿ ಪ್ರತ್ಯಯಗಳಿಂದ ಸೂಚಿತವಾಗುತ್ತದೆ.

**ಲಿಂಗ**

ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಎಂದು ಲಿಂಗವು ಮೂರು ತೆರನಾಗಿರುವುದು. ಪುರುಷರನ್ನು ಹೇಳುವುದು ಪುಲ್ಲಿಂಗ, ಸ್ತ್ರೀಯರನ್ನು ಹೇಳುವುದು ಸ್ತ್ರೀಲಿಂಗ, ಮಿಕ್ಕುದೆಲ್ಲವೂ ನಪುಂಸಕಲಿಂಗ.

ಉದಾ : ಪುಲ್ಲಿಂಗ—ಅರಸಂ, ತಂದೆ
ಸ್ತ್ರೀಲಿಂಗ—ಅಕ್ಕಂ, ಸೀತೆ
ನಪುಂಸಕಲಿಂಗ—ಮರಂ, ಬಳ್ಳಿ

ಕೆಲವು ಶಬ್ದಗಳು ಸಂದರ್ಭಾನುಸಾರವಾಗಿ ಬೇರೆ ಬೇರೆ ಲಿಂಗಗಳಾಗುತ್ತವೆ.

ಉದಾ : ತೊೞ್ತು—ಅವಂ ತೊೞ್ತು (ಪುಂ.), ಅವಳ್ ತೊೞ್ತು (ಸ್ತ್ರೀ.)
ಸಿರಿ—ಲಕ್ಷ್ಮೀದೇವಿ (ಸ್ತ್ರೀ.), ಐಶ್ವರ್ಯ (ನಪುಂ.)

ಆನ್, ನಾನ್, ನೀನ್, ತಾನ್ ಎಂಬ ಶಬ್ದಗಳೂ ಈ ಜಾತಿಯವು. ಇವು 'ವಾಚ್ಯಲಿಂಗ'ಗಳು.

(i) ಕೆಲವು ವೇಳೆ ಶಬ್ದಗಳ ಅಂತ್ಯದಲ್ಲಿರುವ ಪ್ರತ್ಯಯಗಳಿಂದ ಅವುಗಳ ಲಿಂಗವು ಸೂಚಿತವಾಗುತ್ತದೆ. ಇಂಥ ಪ್ರತ್ಯಯಗಳಲ್ಲಿ ಮುಖ್ಯವಾದುವು ತು, ದು ; ಅನ್, ಅಳ್. ಇವು ಗುಣವಾಚಕ, ಸರ್ವನಾಮ, ಸಂಖ್ಯಾವಾಚಕ, ಪರಿಮಾಣವಾಚಕಗಳಲ್ಲಿ ಕಂಡುಬರುತ್ತವೆ. ಉದಾ :

(1) ಗುಣವಾಚಕ—

| ನಪುಂಸಕಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|
| ಒಳ್ಳಿತು | ಒಳ್ಳಿದನ್ | ಒಳ್ಳಿದಳ್ |
| ಇನಿದು | ಇನಿಯನ್ | ಇನಿಯಳ್ |

ಕೆಲವು ಗುಣವಾಚಕಗಳಿಗೆ ಪುಂಸ್ತ್ರೀಲಿಂಗಗಳಲ್ಲಿ ವಿಶೇಷ ರೂಪಗಳುಂಟು. ಅವನ್ನು ಇಲ್ಲಿ ಕೊಟ್ಟಿದೆ :

| | | |
|---|---|---|
| ಬಱಿದು | ಬಱುವನ್ | ಬಱುವಳ್ |
| | ಬಱುವನ್ | ಬಱುವಳ್ |
| | ಬಱುಂಬನ್ | ಬಱುಂಬಳ್ |
| ಎಳದು | ಎಳೆಯನ್ | ಎಳೆಯಳ್ |
| ಪಟಿದು | ಪಟಿಯಾನ್ | ಪಟಿಯಳ್ |
| ಪೊಲ್ಲದು | ಪೊಲ್ಲನ್ | ಪೊಲ್ಲಳ್ |
| ಪೊಸತು | ಪೊಸಂಬನ್ | ಪೊಸಂಬಳ್ |

(2) ಸರ್ವನಾಮ—

| | | |
|---|---|---|
| ಅದು | ಅವನ್ | ಅವಳ್ |
| | (ಆತನ್) | (ಆಕೆ) |
| ಇದು | ಇವನ್ | ಇವಳ್ |
| | (ಈತನ್) | (ಈಕೆ) |
| ಉದು | ಉವನ್ | ಉವಳ್ |
| | (ಊತನ್) | (ಊಕೆ) |
| ಆವುದು | ಆವನ್ | ಆವಳ್ |
| (ಏವುದು) | (ಏವನ್) | (ಏವಳ್) |
| ಪೆಱತು | ಪೆಱನ್ | ಪೆಱಳ್ |

(3) ಸಂಖ್ಯಾವಾಚಕ—

| | | |
|---|---|---|
| ಒಂದು | ಒರ್ವನ್ | ಒರ್ವಳ್ |

ಎರಡು, ಮೂಱು ಮೊದಲಾದ ಸಂಖ್ಯಾವಾಚಕಗಳ ಪುಂ ಸ್ತ್ರೀಲಿಂಗರೂಪ ಗಳನ್ನು ಬಹುವಚನದಲ್ಲಿ ಮಾತ್ರ ನೋಡಬಹುದು.

(4) ಪರಿಮಾಣವಾಚಕ—

ಅನಿತು, ಇನಿತು, ಎನಿತು, ಕೆಲವು, ಪಲವು ಎಂಬ ಪರಿಮಾಣವಾಚಕ

ಶಬ್ದಗಳು ಬಹುತ್ವವನ್ನು ಸೂಚಿಸುವುದರಿಂದ ಅವುಗಳ ಪುಂಸ್ತ್ರೀರೂಪಗಳನ್ನು ಬಹುವಚನದಲ್ಲಿ ಮಾತ್ರ ನೋಡಬಹುದು.

ಅನ್, ಅಳ್ ಎಂಬ ಪ್ರತ್ಯಯಗಳು ಕೆಲವು ಬಹುವ್ರೀಹಿ ಸಮಾಸಪದಗಳಿಗೂ ದಿಗ್ವಾಚಿಗಳಿಗೂ ಹತ್ತುವುವು. ಉ ದಾ :

| | | |
|---|---|---|
| ಬಹುವ್ರೀಹಿ— | ಮೆಲ್ಲೆರ್ದೆಯನ್ | ಮೆಲ್ಲೆರ್ದೆಯಳ್ |
| | ನಿಡುವಣೆಯನ್ | ನಿಡುವಣೆಯಳ್ |
| ದಿಗ್ವಾಚಿಗಳು– | ಅಲ್ಲಿದನ್ | ಅಲ್ಲಿದಳ್ |
| | ಎಲ್ಲಿದನ್ | ಎಲ್ಲಿದಳ್ |
| | ತೆಂಕಣನ್ | ತೆಂಕಣಳ್ |
| | ಮೂಡಣನ್ | ಮೂಡಣಳ್ |

(ii) ಕೆಲವು ಅಕಾರಾಂತ ಶಬ್ದಗಳಿಗೆ* ಸ್ತ್ರೀಲಿಂಗದಲ್ಲಿ ಇ, ಎ ಎಂಬ ಪ್ರತ್ಯಯಗಳು ಸೇರುತ್ತವೆ.

| | ಪುಲ್ಲಿಂಗ | ಸ್ತ್ರೀಲಿಂಗ |
|---|---|---|
| ಉದಾ : | ಅರಸನ್ | ಅರಸಿ |
| | ಅಣುಗನ್ | ಅಣುಗಿ |
| | ನಿಡುಮೂಗನ್ | ನಿಡುಮೂಗಿ |
| | ಜಾಣನ್ | ಜಾಣೆ |
| | ಚದುರನ್ | ಚದುರೆ |
| | ಅಲರ್ಗಣ್ಣನ್ | ಅಲರ್ಗಣ್ಣೆ |

(iii) ಕೆಲವು ತದ್ಧಿತಾಂತಗಳಿಗೆ ಸ್ತ್ರೀಲಿಂಗದಲ್ಲಿ ಇತಿ, ತಿ ಎಂಬ ಪ್ರತ್ಯಯಗಳು ಸೇರುತ್ತವೆ.

| ಪುಲ್ಲಿಂಗ | ಸ್ತ್ರೀಲಿಂಗ |
|---|---|
| ಕನ್ನಡಿಗನ್ | ಕನ್ನಡಿಗಿತಿ |
| ಒಕ್ಕಲಿಗನ್ | ಒಕ್ಕಲಿಗಿತಿ |
| ಗಾಡಿಕಾಱನ್ | ಗಾಡಿಕಾರ್ತಿ |
| ಬಳೆಗಾಱನ್ | ಬಳೆಗಾರ್ತಿ |
| ಗಟ್ಟಿವಳನ್ | ಗಟ್ಟಿವಳ್ತಿ |

* ಇವುಗಳಿಗೆಲ್ಲಾ ಪುಲ್ಲಿಂಗರೂಪದಲ್ಲಿ (ಅ)ನ್ ಎಂಬ ಪ್ರತ್ಯಯವು ಸೇರಿರುತ್ತದೆ ಎಂಬುದನ್ನು ಜ್ಞಾಪಕದಲ್ಲಿಟ್ಟಿರಬೇಕು.

**ವಚನ**

ಕನ್ನಡದಲ್ಲಿ ವಚನಗಳು ಎರಡು—ಏಕವಚನ, ಬಹುವಚನ. ಒಂದು ವಸ್ತುವನ್ನು ಹೇಳುವುದು ಏಕವಚನ; ಒಂದಕ್ಕಿಂತಲೂ ಹೆಚ್ಚು ವಸ್ತುಗಳನ್ನು ಹೇಳುವುದು ಬಹುವಚನ. ಬಹುವಚನವು ಪ್ರತ್ಯಯಗಳಿಂದ ಸೂಚಿತವಾಗುತ್ತದೆ. ಆ ಪ್ರತ್ಯಯಗಳು ಯಾವುವೆಂದರೆ :

(i) ಗಳ್, ಕಳ್—ಇವು ಸಾಮಾನ್ಯವಾಗಿ ನಪುಂಸಕಲಿಂಗ ಶಬ್ದಗಳಿಗೆ ಸೇರುತ್ತವೆ.

ಉದಾ : ಮರಂ ಮರಂಗಳ್
ತೊಡೆ ತೊಡೆಗಳ್
ಕಣ್ ಕಣ್ಗಳ್
ಮಗು ಮಕ್ಕಳ್
ನಾಡು ನಾಟ್ಕಳ್
ಆವು ಆಕಳ್ (ಆವು+ಕಳ್)

ಕೆಲವು ವೇಳೆ ಇಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳಿಗೂ ಸೇರುವುದುಂಟು.

ಉದಾ : ಗುರು ಗುರುಗಳ್
ಅಣ್ಣನ್ ಅಣ್ಣಂಗಳ್
ಅಕ್ಕನ್ ಅಕ್ಕಂಗಳ್

(ii) ಅರ್, ಇರ್, ದಿರ್, ವಿರ್—ಇವು ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳಿಗೆ ಸೇರುತ್ತವೆ.

ಉದಾ : ದೇವನ್ ದೇವರ್
ತೊೞ್ತು ತೊೞ್ತಿರ್
ಇವನ್ ಇವಂದಿರ್
ತಾಯ್ ತಾಯ್ವಿರ್

ಸಂಖ್ಯಾವಾಚಕ ಪರಿಮಾಣವಾಚಕಗಳಿಗೆ 'ಅರ್' ಸೇರಿದಾಗ ವ ಕಾರವು ಆಗಮವಾಗುತ್ತದೆ. ಆ ವ ಕಾರಕ್ಕೆ ಬ ಕಾರವು ಬರುವುದೂ ಉಂಟು.

ಉದಾ : ಇರ್ವರ್, ಮೂವರ್, ನಾಲ್ವರ್ (ಸಂಖ್ಯಾ)
ಎಲ್ಲವರ್, ಅನಿಬರ್, ಇನಿಬರ್ (ಪರಿಮಾಣ)

ಪಲವು, ಕೆಲವು ಎಂಬ ಶಬ್ದಗಳ ಪುಂಸ್ತ್ರೀಲಿಂಗ ಬಹುವಚನದಲ್ಲಿ ಮೂರು ರೂಪಗಳುಂಟು.

ಉದಾ : ಪಲಂಬರ್, ಪಲಬರ್, ಪಲರ್
ಕೆಲಂಬರ್, ಕೆಲಬರ್, ಕೆಲರ್

(iii) ಅರ್ಗಳ್, ಅರ್ಕಳ್—ಬಹುವಚನದ ಅರ್ ಪ್ರತ್ಯಯದ ಮುಂದೆ ಗಳ್, ಪ್ರತ್ಯಯಗಳು ಬರುವುದೂ ಉಂಟು.

ಉದಾ : ಅವರ್ಗಳ್, ಇವರ್ಗಳ್
ಬುಧರ್ಕಳ್, ಗೋ ರ್ಕಳ್

(iv) ವು, ಅವು = ಸರ್ವನಾಮ ಗುಣವಾಚಕಗಳಿಗೆ ನಪುಂಸಕಲಿಂಗದ 'ವು', 'ಅವು' ಎಂಬ ಪ್ರತ್ಯಯಗಳು ಸೇರುವುವು.

ಉದಾ: ಅದು ಅವು } (ಸರ್ವನಾಮ)
ಆವುದು ಆವುವು }

ಇಲ್ಲಿ ಏಕವಚನ ರೂಪದ ಅಂತ್ಯಾಕ್ಷರವಾಗಿರುವ ' ದು ' ಲೋಪವಾಗಿ ' ವು ' ಸೇರಿದೆ.

ಪಿರಿದು ಪಿರಿಯುವು } (ಗುಣವಚನ)
ಮೆಲ್ಲಿತು ಮೆಲ್ಲಿದುವು }

ಇಲ್ಲಿ ಏಕವಚನದ ಅಂತ್ಯದಲ್ಲಿರುವ ' ದು ' ಲೋಪವಾಗಿ ' ಅವು ' ಸೇರಿದೆ; ತಕಾರಕ್ಕೆ ದ ಕಾರಾದೇಶವಾಗಿ ' ವು ' ಸೇರಿದೆ.

(v) ಆನ್ ನಾನ್ ನೀನ್ ತಾನ್ ಎಂಬಿವಕ್ಕೆ ಬಹುವಚನದಲ್ಲಿ ಆಮ್ ನಾಮ್ ನೀಮ್ ತಾಮ್ ಎಂಬ ರೂಪಗಳು ಬರುವುವು.

**ವಿಭಕ್ತಿ**

ವಿಭಕ್ತಿಪ್ರತ್ಯಯಗಳು ಏಕವಚನದಲ್ಲಿ ಪ್ರಕೃತಿಯ ಮುಂದೆಯೂ ಬಹುವಚನ ದಲ್ಲಿ ಬಹುವಚನ ಪ್ರತ್ಯಯದ ಮುಂದೆಯೂ ಸೇರುತ್ತವೆ. ವಿಭಕ್ತಿಗಳು ಏಳು. ಸಂಬೋಧನ ವಿಭಕ್ತಿಯೂ ಸೇರಿದರೆ ಎಂಟಾಗುತ್ತವೆ.

| ವಿಭಕ್ತಿ | ಪ್ರತ್ಯಯ |
|---|---|
| ಪ್ರಥಮಾ | [ಮ್]* |
| ದ್ವಿತೀಯಾ | ಅಂ (ಅನ್) |

* ಹಳಗನ್ನಡದಲ್ಲಿ ಪ್ರಥಮಾ ವಿಭಕ್ತಿಗೆ ಪ್ರತ್ಯಯವಿರುವಂತೆ ಕಾಣುವುದಿಲ್ಲ; ಪ್ರಕೃತಿಯೇ (ಬ. ವ. ದಲ್ಲಿ ಬ. ವ. ಪ್ರತ್ಯಯದಿಂದ ಕೂಡಿದ ಪ್ರಕೃತಿ), ಪ್ರಥಮಾ ವಿಭಕ್ತಿ ರೂಪವಾಗುತ್ತದೆ.

ಉದಾ : ಕಲ್, ಕುಜಿ, ತುಜಿ, ಅರಸರ್, ಗುರುಗಳ್ ಇತ್ಯಾದಿ.

ಅರಸ, ಮರ ಮೊದಲಾದ ಶಬ್ದಗಳು ಹಳಗನ್ನಡದಲ್ಲಿ ಅಕಾರಾಂತವಾಗಿ ನಿಲ್ಲುವುದಿಲ್ಲ.

ಪೆ. ನರಸಿಂಹ ಮೂರ್ತಿ
ಕೆಂಗೇರಿ ಉಪ ನಗರ



| ವಿಭಕ್ತಿ | ಪ್ರತ್ಯಯ |
|---|---|
| ತೃತೀಯಾ | ಇಂ (ಇನ್), ಇಂದಂ, ಇಂದೆ, ಎ |
| ಚತುರ್ಥೀ | ಗೆ, ಕೆ, ಕ್ಕೆ |
| [ಪಂಚಮೀ | ಅತ್ತಣಿಂ (ಅತ್ತಣಿನ್), ಅತ್ತಣಿಂದಂ, ಅತ್ತಣಿಂದೆ]* |
| ಷಷ್ಠೀ | ಅ |
| ಸಪ್ತಮೀ | ಒಳ್, ಅಲ್ಲಿ |

ಕೆಲವು ವಿಭಕ್ತಿಗಳಿಗೆ ಎರಡು ಮೂರು ಪ್ರತ್ಯಯಗಳಿರುವುವಷ್ಟೆ. ಇವುಗಳಲ್ಲಿ ಯಾವುದನ್ನಾಗಲಿ ಇಷ್ಟಬಂದಂತೆ ಪ್ರಯೋಗಿಸಬಹುದು. ತೃತೀಯಾ ವಿಭಕ್ತಿಯ 'ಎ' ಎಂಬ ಪ್ರತ್ಯಯವು ಸಾಮಾನ್ಯವಾಗಿ ಅಕಾರಾಂತ ನಪುಂಸಕಲಿಂಗ ಶಬ್ದಗಳಿಗೆ ಮಾತ್ರ ಹತ್ತುತ್ತದೆ. ಉದಾ : ಕ್ರಮದೆ, ನಯದೆ. ಆದರೆ ಅಪೂರ್ವವಾಗಿ ಅಕಾರಾಂತವಲ್ಲದ ಶಬ್ದಗಳಿಗೂ ಹತ್ತುವುದುಂಟು. ಉದಾ : ಅಟ್ಟಿಯೆ. ಚತುರ್ಥೀ ವಿಭಕ್ತಿಯಲ್ಲಿ ಸಾಮಾನ್ಯವಾಗಿ ಗೆ ಎಂಬುದು ಸೇರುತ್ತದೆ. ಎರಡು ಸಂದರ್ಭಗಳಲ್ಲಿ ಮಾತ್ರ ಕ್ಕೆ, ಕೆ ಎಂಬಿವು ಪ್ರಯೋಗವಾಗುತ್ತವೆ:

(i) ಅಕಾರಾಂತ ನಪುಂಸಕಲಿಂಗ ಶಬ್ದಗಳಿಗೆ ಏಕವಚನದಲ್ಲಿ—

ಉದಾ : ಮರಕ್ಕೆ, ಮರಕೆ

(ii) ಅಜ್ ಆಗಮವಾದಾಗ (ಇದನ್ನು ಮುಂದೆ ಹೇಳಿದೆ), ಪ್ರಕೃತಿಯ ಡ ಕ್ಕೆ ಟ ಆದೇಶವಾದಾಗ—

ಉದಾ : ಎರಡು—ಎರಡರ್ಕೆ, ಕೋಡು—ಕೋಟ್ಕೆ.

---

ಅವುಗಳ ಕೊನೆಯಲ್ಲಿ ಸಾಮಾನ್ಯವಾಗಿ ಪುಲ್ಲಿಂಗದಲ್ಲಿ ನ್, ನಪುಂಸಕಲಿಂಗದಲ್ಲಿ ಮ್ ಸೇರಿರುತ್ತವೆ.

ಉದಾ : ಅರಸನ್, ಮರಮ್.

ಕೆಲವು ನಪುಂಸಕಲಿಂಗ ಶಬ್ದಗಳಿಗೆ ಮ್ ಗೆ ಬದಲಾಗಿ ನ್ ಸೇರಿರುವುದೂ ಉಂಟು.

ಉದಾ : ಮರಮ್-ಮರನ್, ಕೊಳಮ್-ಕೊಳನ್, ಕೋಣಮ್-ಕೋಣನ್.

ಶಬ್ದಗಳ ಅಥವಾ ಪ್ರತ್ಯಯಗಳ ಅಂತ್ಯದಲ್ಲಿರುವ ನ್, ಮ್‌ಗಳಿಗೆ ಬದಲಾಗಿ ಅನುಸ್ವಾರವನ್ನು ಉಪಯೋಗಿಸುವುದು ಬಳಕೆಯಲ್ಲಿದ್ದುದ್ದರಿಂದಲೂ ಅಂತ್ಯ ಅನುಸ್ವಾರವನ್ನು ಮ್ ಎಂದು ಉಚ್ಚರಿಸುತ್ತಿದ್ದುದ್ದರಿಂದಲೂ ಅಂತ್ಯ ಮ್ ನ್ ಗಳೆರಡೂ ಮ್ ಎಂಬ ಭಾವನೆ ಬಂದಿತ್ತು. ಇದರಿಂದ ಅಕಾರಾಂತ ಶಬ್ದಗಳ ಅಂತ್ಯದಲ್ಲಿರುವ ನ್ ಮ್, ದ್ವಿತೀಯಾ ವಿಭಕ್ತಿಯ ಅನ್, ತೃತೀಯೆಯ ಇನ್, ಪಂಚಮಿಯ ಅತ್ತಣಿನ್ ಇವನ್ನು ಕ್ರಮವಾಗಿ ಮ್, ಅಮ್, ಇಮ್, ಅತ್ತಣಿಮ್ ಎಂದು ಉಚ್ಚರಿಸುವುದು ರೂಢಿಯಾಗಿತ್ತು.

(ಈ ವಿಷಯದ ವಿಮರ್ಶೆಯನ್ನು ಭಾಷಾಚರಿತ್ರೆಯ ಭಾಗದಲ್ಲಿ ನೋಡಬಹುದು.)

* ಕನ್ನಡದಲ್ಲಿ ಸಹಜವಾಗಿ ಪಂಚಮೀ ವಿಭಕ್ತಿಯಿಲ್ಲ. ತೃತೀಯಾ ವಿಭಕ್ತಿಯೇ ಪಂಚಮಿಯ ಅರ್ಥವನ್ನು ಕೊಡುತ್ತದೆ. ಪಂಚಮೀ ವಿಭಕ್ತಿ ಪ್ರತ್ಯಯವೆಂಬುದು ಅತ್ತ ಎಂಬ ದಿಗ್ವಾಚಕಕ್ಕೆ ಇಂ, ಇಂದಂ, ಇಂದೆ ಎಂಬ ತೃತೀಯಾ ವಿಭಕ್ತಿ ಪ್ರತ್ಯಯಗಳು ಸೇರಿ ಆಗಿದೆ. (ಈ ವಿಷಯದ ವಿಮರ್ಶೆಯನ್ನು ಭಾಷಾಚರಿತ್ರೆಯಲ್ಲಿ ನೋಡಬಹುದು.)

**ಆಗಮ**

ಶಬ್ದಗಳಿಗೆ ವಿಭಕ್ತಿಪ್ರತ್ಯಯಗಳು ಸೇರುವಾಗ ಕೆಲವು ವೇಳೆ ಆಗಮಗಳು ಬರುತ್ತವೆ. ಹಾಗೆ ಆಗಮವಾಗಿ ಬರುವ ಅಕ್ಷರಗಳನ್ನೂ ಅವು ಬರುವ ಸಂದರ್ಭವನ್ನೂ ಇಲ್ಲಿ ತಿಳಿಸಿದೆ.

(i) ದ್—ಅ ಕಾರಾಂತ ನಪುಂಸಕಲಿಂಗ ಶಬ್ದಗಳಿಗೆ ತೃತೀಯೆ ಮೊದಲಾದ ವಿಭಕ್ತಿ ಪ್ರತ್ಯಯಗಳು ಪರವಾದಾಗ ದ್ ಆಗಮವಾಗುತ್ತದೆ.

ಉದಾ : ಮರ+ಅ = ಮರದ

ಕೊಳ+ಇಂ = ಕೊಳದಿಂ

ಕೆಲವು ಕನ್ನಡ ಶಬ್ದಗಳಲ್ಲಿ ನ ಕಾರಾಗಮವಾಗುವುದೂ ಉಂಟು :

ಉದಾ : ಕೊಳ+ಅ=ಕೊಳನ ; ನೆಲ+ಒಳ್ = ನೆಲನೊಳ್.

(ii) ಇನ್—ಉ ಋ ಒ ವರ್ಣಗಳು ಅಂತ್ಯದಲ್ಲಿರುವ ಶಬ್ದಗಳಿಗೆ ತೃತೀಯೆ ಮೊದಲಾದ ಪ್ರತ್ಯಯಗಳು ಪರವಾದಾಗ ಇನ್ ಆಗಮವಾಗುತ್ತದೆ.

ಉದಾ : ಪಾಸು+ಇಂದೆ= ಪಾಸಿನಿಂದೆ

ಪಿತೃ+ಅ = ಪಿತೃವಿನ

ಗೋ+ಒಳ್ = ಗೋವಿನೊಳ್.

ಆದರೆ, (1) ಸ್ವರ ಪರವಾದಾಗ ವ ಕಾರಾಗಮವನ್ನು ಹೊಂದುವ ಉ ಕಾರಾಂತ ಶಬ್ದಗಳಿಗೆ ಇನ್ ಆಗಮವು ನಿತ್ಯವಲ್ಲ.

ಉದಾ : ಮಡು+ಇಂ = ಮಡುವಿನಿಂ, ಮಡುವಿಂ

ಗುರು+ಅ=ಗುರುವಿನ, ಗುರುವ.

ವ ಕಾರಾಗಮವಾಗದಾಗಲೂ ತೃತೀಯಾ ವಿಭಕ್ತಿಯಲ್ಲಿ ಮಾತ್ರ ಇನ್ ಆಗಮವು ವಿಕಲ್ಪ..

ಉದಾ : ಮಾತು+ಇಂ = ಮಾತಿಂ, ಮಾತಿನಿಂ.

(2) ವ್ಯಂಜನಾಂತ ಶಬ್ದಗಳಲ್ಲಿ ಇನ್ ಆಗಮವು ಸಾಮಾನ್ಯವಾಗಿ ಬರಕೂಡದು.

ಉದಾ : ಮುಗಿಲ್+ಇಂ = ಮುಗಿಲಿಂ

ಬೆಮರ್+ಅ = ಬೆಮರ.

ಇವನ್ನು ಮುಗಿಲಿನಿಂ, ಬೆಮರಿನ ಎಂದು ಮಾಡಲಾಗದು.

ಪಗಲ್ ಇರುಳ್ ಎಂಬೆರಡು ಶಬ್ದಗಳಲ್ಲಿ ಇನ್ ಆಗಮವು ವಿಕಲ್ಪ.

ಉದಾ : ಪಗಲ್+ಇಂ=ಪಗಲಿಂ, ಪಗಲಿನಿಂ

ಇರುಳ್+ಅ = ಇರುಳ, ಇರುಳಿನ.

ಆಗಳ್ ಈಗಳ್ ಎಂಬೆರಡು ಶಬ್ದಗಳಲ್ಲಿ ನಿತ್ಯ.

ಉದಾ : ಆಗಳ್+ಅ=ಆಗಳಿನ
ಈಗಳ್+ಅ=ಈಗಳಿನ.

ಇವನ್ನು ಆಗಳ, ಈಗಳ ಎಂದು ಮಾಡಲಾಗದು.

(iii) ಅಱ್—ಉ ಕಾರಾಂತವಾದ ಗುಣವಾಚಕ, ಸರ್ವನಾಮ, ಸಂಖ್ಯಾವಾಚಕ, ಪರಿಮಾಣವಾಚಕ ಕೃದಂತಗಳಿಗೆ ನಪುಂಸಕಲಿಂಗದಲ್ಲಿ ತೃತೀಯೆ ಮೊದಲಾದ ಪ್ರತ್ಯಯಗಳು ಪರವಾದಾಗ ಅಱ್ ಆಗಮವಾಗುತ್ತದೆ.

ಉದಾ : ಕಿಱಿದು+ಒಳ್=ಕಿಱಿದಱೊಳ್
ಅದು+ಅಲ್ಲಿ=ಅದಱಲ್ಲಿ
ನಾಲ್ಕು+ಇಂ=ನಾಲ್ಕಱಿಂ
ಅನಿತು+ಅ=ಅನಿತಱ
ಬಂದುದು+ಒಳ್=ಬಂದುದಱೊಳ್

ಗೆಂಟು, ಮೇಲುದು ಎಂಬ ನಾಮವಾಚಕಗಳಿಗೂ ಅಱ್ ಆಗಮವುಂಟು.

ಉದಾ : ಗೆಂಟು+ಒಳ್=ಗೆಂಟಱೊಳ್
ಮೇಲುದು+ಅ=ಮೇಲುದಱ.

(iv) ಅಣ್—ದಿಗ್ವಾಚಿಗಳಿಗೆ ತೃತೀಯಾದಿ ಪ್ರತ್ಯಯಗಳು ಪರವಾದಾಗ ಅಣ್ ಆಗಮವಾಗುತ್ತದೆ.

ಉದಾ : ಮೂಡ+ಇಂ=ಮೂಡಣಿಂ
ಅತ್ತ+ಗೆ=ಅತ್ತಣ್ಗೆ
ಕೆಲಗು+ಅ=ಕೆಲಗಣ.

**ವಿಭಕ್ತಿಗಳ ವಿಚಾರವಾದ ಕೆಲವು ವಿಶೇಷಾಂಶಗಳು**

(i) ದ್ವಿತೀಯೆ, ಸಪ್ತಮಿ—ಈ ವಿಭಕ್ತಿಪ್ರತ್ಯಯಗಳು ಅತ್ತ ಮೂಡ ಮೊದಲಾದ ಅ ಕಾರಾಂತ ದಿಗ್ವಾಚಿಗಳ ಮೇಲೆಯೂ, ಅಲ್ಲಿ ಇಲ್ಲಿ ಎಲ್ಲಿ ಎಂಬ ಸ್ಥಾನವಾಚಕಗಳ ಮೇಲೆಯೂ, ಅಂದು ಇಂದು ಎಂದು ಆಗಳ್ ಈಗಳ್ ಏಗಳ್ ಎಂಬ ಕಾಲವಾಚಕಗಳ ಮೇಲೆಯೂ ಹತ್ತುವುದಿಲ್ಲ.

(ii) ಅ ಕಾರಾಂತ ದಿಗ್ವಾಚಿಗಳ ಮೇಲೆ ವಿಕಲ್ಪವಾಗಿ ಪ್ರಥಮಾ ದ್ವಿತೀಯಾ ಸಪ್ತಮಿಗಳಲ್ಲಿ ಅಲ್ ಹತ್ತುವುದುಂಟು.

ಉದಾ : ಅತ್ತ, ಅತ್ತಲ್ ; ಮೂಡ, ಮೂಡಲ್.

(iii) ಸಪ್ತಮಿಯಲ್ಲಿ, ಉ ಕಾರಾಂತ ದಿಗ್ವಾಚಿಗಳಿಗೂ ಮೇಲ್ ಎಂಬುದಕ್ಕೂ ಎ ಎಂಬ ಪ್ರತ್ಯಯವು ಹತ್ತುವುದು.

ಉದಾ : ಪಿಂದು-ಪಿಂದೆ, ಕೆಲಗು-ಕೆಲಗೆ, ಮೇಲ್-ಮೇಲೆ.

(iv) ಆನ್, ನಾನ್, ನೀನ್, ತಾನ್ ಎಂಬ ಸರ್ವನಾಮಗಳ ಏಕವಚನ ಬಹುವಚನ ರೂಪಗಳಿಗೆ ದ್ವಿತೀಯಾದಿ ವಿಭಕ್ತಿ ಪ್ರತ್ಯಯಗಳು ಪರವಾದಾಗ ಕೆಲವು ವಿಶೇಷ ರೂಪಗಳು ಬರುತ್ತವೆ. ಅವು ಯಾವುವೆಂದರೆ—

1. ಆದಿ ದೀರ್ಘವು ಹ್ರಸ್ವ ವಾಗುವುದು ; ಆನ್, ಆವ್ ಎಂಬುವಕ್ಕೆ ಅನ್, ಅವ್ ಎಂಬ ರೂಪಗಳು ಬಾರದೆ ಎನ್, ಎವ್ ಎಂಬ ರೂಪಗಳು ಬರುವುವು.

ಉದಾ : ನಾನ್ : ನನ್ನಂ, ನನ್ನಿಂ
ಆನ್, ಆವ್ : ಎನ್ನ, ಎಮ್ಮೊಳ್
ನೀವ್ : ನಿಮ್ಮಂ, ನಿಮ್ಮತ್ತಣಿಂ.

2. ಚತುರ್ಥಿಯ 'ಗೆ' ಪರವಾದಾಗ ಆದರ ಹಿಂದೆ ಅ ಕಾರ ಬರುವುದು.

ಉದಾ : ಆನ್ : ಎನಗೆ, ನೀನ್ : ನಿನಗೆ
ನೀವ್ : ನಿಮಗೆ, ತಾವ್ : ತಮಗೆ.

3. ಷಷ್ಠಿಯಲ್ಲಿ ಅತು, ಅತ್ತು ಎಂಬ ಪ್ರತ್ಯಯಗಳೂ ಸೇರುವುವು.

ಉದಾ : ನೀನ್ : ನಿನ್ನ, ನಿನತು, ನಿನತ್ತು
ಆವ್ : ಎಮ್ಮ, ಎಮತು, ಎಮತ್ತು.

(v) ಸಂಬೋಧನ ವಿಭಕ್ತಿ—

1. ಸಂಬೋಧನೆಯಲ್ಲಿ ಸಾಮಾನ್ಯವಾಗಿ ಎ ಏ ಎಂಬ ಪ್ರತ್ಯಯಗಳು ಸೇರುತ್ತವೆ. ಹಾಗೆ ಸೇರುವಾಗ ಅ ಕಾರಾಂತ ಶಬ್ದಗಳಿಗೆ ನ್, ವ್ ಗಳು ಸೇರಿರುತ್ತವೆ.

ಉದಾ : ಚಂದ್ರನೆ, ನಂದನವೇ ; ನೀಳಕುಂತಳೆಯೆ, ಮನುವೇ ; ಭಟ್ಟರೆ, ದೇವರೇ, ಇತ್ಯಾದಿ.

2. ಸ್ವರಾಂತವಾದ ಶಬ್ದಗಳಿಗೆ ಏಕವಚನದಲ್ಲಿ ಯಾವ ಪ್ರತ್ಯಯವೂ ಸೇರದೆ ಪ್ರಕೃತಿಯೇ ಪ್ರಯೋಗವಾಗುವುದುಂಟು. ಆಗ ಅಂತ್ಯಸ್ವರವು ದೀರ್ಘವಾಗುವುದೂ ಉಂಟು. ಆದರೆ ಅ ಕಾರಾಂತವಾದ ಅಚೇತನವಾಚಕಗಳಿಗೆ ಈ ರೀತಿಯ ಪ್ರಯೋಗ ವಿಲ್ಲ.

ಉದಾ : ದೇವ, ದೇವಾ. ಅಭಿಮನ್ಯು, ಅಭಿಮನ್ಯೂ.

3. ಬಹುವಚನದಲ್ಲಿ, ಇರ, ಇರಾ ಎಂಬ ಪ್ರತ್ಯಯಗಳು ಹತ್ತುವುದೂ ಉಂಟು.

ಉದಾ : ಬುಧರಿರ, ಗುರುಗಳಿರ, ದೇವಿಯರ್ಕಳಿರಾ.

4. ಸರ್ವನಾಮ ಪರಿಮಾಣವಾಚಕಗಳಿಗೆ ಸಂಬೋಧನ ವಿಭಕ್ತಿಯಿಲ್ಲ.

## ೭. ಕ್ರಿಯಾಪದ ಪ್ರಕರಣ

ಕ್ರಿಯಾರ್ಥವನ್ನು ತಿಳಿಸುವ ಶಬ್ದಗಳಿಗೆ, ಎಂದರೆ ಧಾತುಗಳಿಗೆ, ಕೆಲವು ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತವೆ. ಈ ಪ್ರತ್ಯಯಗಳಿಗೆ 'ಆಖ್ಯಾತ' ಪ್ರತ್ಯಯಗಳೆಂದು ಹೆಸರು.

ಧಾತುಗಳಲ್ಲಿ ಸಹಜ, ಪ್ರತ್ಯಯಾಂತ (ವ್ಯುತ್ಪನ್ನ), ಸಂಯುಕ್ತ (ಸಮಗ್ರ) ಎಂದು ಮೂರು ವಿಧಗಳಿವೆ.

ಉದಾ : ಸಹಜ—ಮೀ, ತಿನ್, ನುಡಿ, ಬೆಳಗು ಇತ್ಯಾದಿ.
ಪ್ರತ್ಯಯಾಂತ—ನುಡಿಯಿಸು, ತೆರಳ್ಚು, ನೆರಪು ಇತ್ಯಾದಿ.
ಸಂಯುಕ್ತ—ಎಯ್ತರ್, ಬೇರ್ಪಡು, ಇಂಬುಕಯ್, ತಱಿಸಲ್ ಇತ್ಯಾದಿ.

ಸಹಜ ಧಾತುಗಳಿಗೆ ಪ್ರೇರಣಾರ್ಥದಲ್ಲಿ ಇಸು ಮೊದಲಾದ ಪ್ರತ್ಯಯಗಳು ಸೇರಿ ಪ್ರತ್ಯಯಾಂತ ಧಾತುಗಳಾಗುತ್ತವೆ.

ಉದಾ : ಇಸು—ನಗಿಸು, ಮಾಡಿಸು, ಬೇಯಿಸು.
ಮೀ ಧಾತುವಿಗೆ ಇಸು ಸೇರಿದಾಗ ವಿಕಲ್ಪವಾಗಿ ಮಿಸಿಸು ಎಂಬ ರೂಪ ಬರುವುದು.
ಸು—ಕೊಯ್ಸು, ಗೆಯ್ಸು, ಬರೆಸು.
ಚ—ನೆಗೆಟ್ಚು, ಪೊರಳ್ಚು, ಅಲರ್ಚು, ಅಗಲ್ಚು.
ಟ್, ಳ್, ರ್, ಲ್ ಗಳು ಅಂತ್ಯದಲ್ಲಿರುವ ಧಾತುಗಳಿಗೆ ಸಾಮಾನ್ಯವಾಗಿ ಈ ಪ್ರತ್ಯಯವು ಹತ್ತುತ್ತದೆ.
ಪು—ಕಟಿಪು, ಅಟೀಪು, ಮಡಿಪು, ನೆಗಪು.

ಪ್ರೇರಣಾರ್ಥದ ಇಸು ಪ್ರತ್ಯಯದ ಮೇಲೆ ಮತ್ತೆ ಪ್ರೇರಣಾರ್ಥದಲ್ಲಿ ಇಸು ಪರವಾದರೆ ಪೂರ್ವದ ಇಸುವಿಗೆ ಲೋಪವಾಗುವುದು.

ಉದಾ : ನುಡಿಯಿಸು+ಇಸು=ನುಡಿಯಿಸು.

'ಇಸು' ಪ್ರತ್ಯಯವು ಪ್ರೇರಣಾರ್ಥದಲ್ಲಿ ಅಲ್ಲದೆ ಭಾವನಾಮಗಳ ಮೇಲೆ ಅದನ್ನು ಮಾಡು ಎಂಬ ಅರ್ಥದಲ್ಲಿಯೂ ಬರುವುದು.

ಉದಾ : ಉಜ್ಜುಗಿಸು, ಭಾವಿಸು, ಭೋಗಿಸು, ರಾಗಿಸು.

ನಮನ, ಭ್ರಮಣ ಮೊದಲಾದ ಕೆಲವು ಶಬ್ದಗಳಿಗೆ ಇಸು ಸೇರಿದಾಗ ನಮಿಸು, ಭ್ರಮಿಸು ಎಂಬ ರೂಪಗಳು ಬರುತ್ತವೆ. ಆದರೆ ಶಯನ, ಚಯನ ಮೊದಲಾದ ಮತ್ತೆ ಕೆಲವಕ್ಕೆ ಶಯನಿಸು, ಚಯನಿಸು ಎಂಬ ರೂಪಗಳು ಬರುತ್ತವೆ.

ಇಸು ಅಥವಾ ಸು ಎಂಬುದು ಕೆಲವು ಸಹಜ ಧಾತುಗಳ ಅಂತ್ಯದಲ್ಲಿಯೂ ಕಂಡುಬರುವುದು.

ಉದಾ : ನಿಟ್ಟಿಸು, ದಳ್ಳಿಸು, ಸೈರಿಸು.

ಧಾತುಗಳನ್ನು ಸಕರ್ಮಕ, ಅಕರ್ಮಕ ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಕರ್ಮವನ್ನು ಅಪೇಕ್ಷಿಸುವ್ರವು ಸಕರ್ಮಕ, ಅಪೇಕ್ಷಿಸದಿರುವುವು ಅಕರ್ಮಕ.

ಉದಾ : ಸಕರ್ಮಕ—ನುಡಿ, ಬರೆ

ಅಕರ್ಮಕ—ಆಗು, ಬರ್

ಧಾತುವಿನ ಮೇಲೆ ಆಖ್ಯಾತಪ್ರತ್ಯಯಗಳು ಕರ್ತ್ರರ್ಥದಲ್ಲಿಯೂ ಕರ್ಮಾರ್ಥದಲ್ಲಿಯೂ ಬರುತ್ತವೆ. ಕರ್ತ್ರರ್ಥದಲ್ಲಿ ಅಕರ್ಮಕ ಸಕರ್ಮಕ ಧಾತುಗಳೆರಡರ ಮೇಲೂ, ಕರ್ಮಾರ್ಥದಲ್ಲಿ ಸಕರ್ಮಕ ಧಾತುವಿನ ಮೇಲೆ ಮಾತ್ರವೂ ಬರುತ್ತವೆ. ಕರ್ಮಾರ್ಥಕ ಪ್ರಯೋಗದಲ್ಲಿ ಧಾತುವಿನ ಮುಂದೆ ಎ ಪಡು ಅಥವಾ ಅಲ್ ಪಡು ಎಂಬಿವು ಸೇರುವುವು. (ಉದಾ: ಮಾಡೆಪಟ್ಟುದು, ಎಯ್ದಿಸಲ್‌ಪಟ್ಟುವು.) ಕರ್ಮಾರ್ಥಕ ಪ್ರಯೋಗವು ಕನ್ನಡದಲ್ಲಿ ಹೆಚ್ಚು ಬಳಕೆಯಲ್ಲಿಲ್ಲ.

ಕ್ರಿಯಾಪದಗಳನ್ನು ಸಾಮಾನಾರ್ಥಕ, ವಿಧ್ಯರ್ಥಕ, ನಿಷೇಧಾರ್ಥಕ ಎಂದು ಮೂರು ಪಂಗಡಗಳಾಗಿ ವಿಭಾಗಿಸಬಹುದು.

## ಸಾಮಾನ್ಯಾರ್ಥಕ ಕ್ರಿಯಾಪದ

ಧಾತುವಿಗೆ ಮೊದಲು ಕಾಲವಾಚಕ ಪ್ರತ್ಯಯಗಳೂ ಆಮೇಲೆ ಪುರುಷವಾಚಕ ಪ್ರತ್ಯಯಗಳೂ ಸೇರಿ ಸಾಮಾನ್ಯಾರ್ಥಕ ಕ್ರಿಯಾಪದವಾಗುತ್ತದೆ. ಪುರುಷವಾಚಕ ಪ್ರತ್ಯಯಗಳು ವಚನವನ್ನೂ, (ಪ್ರಥಮ ಪುರುಷದಲ್ಲಿ) ಲಿಂಗವನ್ನೂ ತಿಳಿಸುತ್ತವೆ (ಇವನ್ನು ಆಖ್ಯಾತ ವಿಭಕ್ತಿ ಪ್ರತ್ಯಯಗಳೆಂದು ಕರೆಯುವುದೂ ಉಂಟು).

1. ಕಾಲವಾಚಕ ಪ್ರತ್ಯಯಗಳು—

| ಕಾಲ | | ಪ್ರತ್ಯಯ | ಉದಾಹರಣೆ |
|---|---|---|---|
| ವರ್ತಮಾನ | — | ದಪ | ನುಡಿದಪ, ಕೇಳ್ದಪ |
| ಭವಿಷ್ಯತ್ | — | ವ | ನುಡಿವ, ಕೇಳ್ವ |
| ಭೂತ | — | ದ | ನುಡಿದ, ಕೇಳ್ದ. |

ಈ ಪ್ರತ್ಯಯಗಳು ಧಾತುಗಳಿಗೆ ಸೇರುವಾಗ ಕೆಲವು ವೇಳೆ ಹೊಂದುವ ವಿಶೇಷ ರೂಪಗಳನ್ನೂ, ಇವು ಸೇರಿದಾಗ ಧಾತುಗಳಲ್ಲಿ ಆಗುವ ವ್ಯತ್ಯಾಸಗಳನ್ನೂ ಮುಂದೆ ನಿರೂಪಿಸಿದೆ.

*2. ಪುರುಷವಾಚಕ ಪ್ರತ್ಯಯಗಳು—

---

*ಉತ್ತಮ ಮಧ್ಯಮ ಪ್ರಥಮಪುರುಷ ಸರ್ವನಾಮಗಳ ಮೂಲರೂಪಗಳೇ ಸ್ವಲ್ಪ ಮಟ್ಟಿಗೆ ವ್ಯತ್ಯಾಸ ಹೊಂದಿ ಈ ಆಖ್ಯಾತಪ್ರತ್ಯಯಗಳಾಗಿವೆಯೆಂದು ತೋರುತ್ತದೆ.

| ಪುರುಷ | ವಚನ | | ಉದಾಹರಣೆ |
|---|---|---|---|
| | ಏಕ | ಬಹು | |
| ಉತ್ತಮ | —ಎನ್ (ಏನ್)* | ಎಮ್, ಎವು | ಮಾಡುವೆನ್, ಮಾಡುವೆಮ್ ಅಥವಾ ಮಾಡುವೆವು |
| ಮಧ್ಯಮ | —ಅಯ್ (ಎ) | ಇರ್ | ಮಾಡುವಯ್, ಮಾಡುವಿರ್ |
| ಪ್ರಥಮ— | | | |
| ಪುಂ. | —ಅನ್ | ಅರ್ | ಮಾಡುವನ್, ಮಾಡುವರ್ |
| ಸ್ತ್ರೀ. | —ಅಳ್ | ಅರ್ | ಮಾಡುವಳ್, ಮಾಡುವರ್ |
| ನಪುಂ. | —ಉದು | ಉವು | ಮಾಡುವುದು, ಮಾಡುವುವು. |

(i) ಈ ಪ್ರತ್ಯಯಗಳು ನಾಮವಾಚಕ ಸರ್ವನಾಮ ಗುಣವಾಚಕ ಸಂಖ್ಯಾವಾಚಕಗಳಿಗೂ ಸೇರುವುದುಂಟು.

ಉದಾ : ನಾಮವಾಚಕ—ಕವಿ ಕೇಶವನೆನ್
ಸರ್ವನಾಮ—ಆಮ್ ಪೆಜಱೆವು, ನೀನ್ ಪೆಜಱಯ್
ಗುಣವಾಚಕ—ನೀನ್ ಒಳ್ಳಿದಯ್, ಅವರ್ ಉದ್ಧತರ್
ಸಂಖ್ಯಾವಾಚಕ—ಅನ್ ಒರ್ವನೆನ್.

(ii) ಪ್ರಥಮ ಪುರುಷದಲ್ಲಿ, ಕಾಲ ವಚನ ಲಿಂಗ ಭೇದವಿಲ್ಲದೆ ಗುಂ ಅಥವಾ ಕುಂ ಎಂಬ ಪ್ರತ್ಯಯವು ಸೇರುತ್ತದೆ.

ಉದಾ : ಗೆಲ್ಗುಂ, ಬಿಸುಸುಯ್ಗುಂ, ಕೋಗಿಲೆಯುಲಿಗುಂ ; ಇರ್ಕುಂ, ಬರ್ಕುಂ, ಸೂಚಿಕುಂ.

(iii) ಇಸು ಪ್ರತ್ಯಯದಿಂದ ಕೂಡಿದ ಧಾತುವಿಗೆ ಗುಂ, ಕುಂ ಎಂಬ ಎರಡು ಪ್ರತ್ಯಯಗಳೂ ಸೇರುತ್ತವೆ; ಕುಂ ಪರವಾದಾಗ ಸು ಲೋಪವಾಗುತ್ತದೆ.

ಉದಾ : ಪರಿಹರಿಸುಗುಂ, ಪರಿಹರಿಕುಂ ; ಭಾವಿಸುಗುಂ, ಭಾವಿಕುಂ ; ಕೇಳಿಸುಗುಂ, ಕೇಳಿಕುಂ ; ಇತ್ಯಾದಿ.

(iv) ಕುಂ ಎಂಬುದಕ್ಕೆ ದ್ವಿತ್ವ ಬರುವುದೂ ಉಂಟು.

ಉದಾ : ರಂಜಿಸುಗುಂ, ರಂಜಿಕುಂ, ರಂಜಿಕ್ಕುಂ ; ಪಾಲಿಸುಗುಂ, ಪಾಲಿಕುಂ, ಪಾಲಿಕ್ಕುಂ.

(v) ಪ್ರಥಮಪುರುಷ ನಪುಂಸಕಲಿಂಗ ಏಕವಚನದ ಉದು ಎಂಬುದಕ್ಕೆ ಬದಲಾಗಿ ಇತು, ಇತ್ತು, ಅತ್ತು ಎಂಬ ಪ್ರತ್ಯಯಗಳು ಪ್ರಯೋಗವಾಗುವುದುಂಟು.

---

* ಉದಾ : ನಿನಗೀವೆನಂಚೆ ಕಂಪಂ. ಈ ಪ್ರಯೋಗವು ಪ್ರಚುರವಾಗಿಲ್ಲ.

ಉದಾ : ಮುಟ್ಟಿತ್ತು, ಮೆಟ್ಟಿತು ; ಅಲ್ಲಾಡಿತ್ತು, ಓಡಿತ್ತು ; ಇರ್ದತ್ತು, ಪಸರಿಸಿದತ್ತು.

(vi) ಉಳ್ ಧಾತುವಿಗೆ ಉದುವಿಗೆ ಬದಲಾಗಿ ಟು ಪ್ರತ್ಯಯವು ಸೇರುತ್ತದೆ.

ಉದಾ : ಉಂಟು.

(vii) ಆದುದು, ಪೋದುದು ಎಂಬುವಕ್ಕೆ ಆಯ್ತು, ಪೋಯ್ತು ಎಂಬ ರೂಪಗಳೂ ಉಂಟು.*

(viii) ಗುಂ, ಕುಂ, ಇತು, ಇತ್ತು, ಟು ಎಂಬುವು ಧಾತುವಿಗೆ ನೇರವಾಗಿ ಹತ್ತುತ್ತವೆ. ಅತ್ತು ಎಂಬುದು ಭೂತಕಾಲದ ದ ಕಾರದ ಮುಂದೆ ಸೇರುತ್ತದೆ.

3. ಕಾಲವಾಚಕ ಪ್ರತ್ಯಯಗಳು ಪಡೆಯುವ ರೂಪಗಳು—

(a) ಭವಿಷ್ಯತ್ಕಾಲದಲ್ಲಿ :

(i) ಈ ಪ್ರತ್ಯಯವು ಸಾಮಾನ್ಯವಾಗಿ ವ ಆಗಿರುತ್ತದೆ.

ಉದಾ : ಆಳ್ವೆನ್, ಮಾಡುವೆನ್, ನಡೆವಳ್, ಕಲ್ವನ್ ಇತ್ಯಾದಿ.

(ii) ಧಾತುವಿನ ಅಂತ್ಯದ ಡು ಉ ಗಳಿಗೆ ಟ್ ರ್ ಗಳು ಆದೇಶವಾಗಲೂ, ಇರ್ ತರ್ ಬರ್ ಓ ಮೊದಲಾದ ಧಾತುಗಳ ಮುಂದೆಯೂ ಪ ಆಗಿರುತ್ತದೆ.

ಉದಾ : ನೋಟ್ಪ, ತೋರ್ಪ, ಇರ್ಪ, ತರ್ಪ, ಓಪ ಇತ್ಯಾದಿ.

(iii) ಗು ಸು ಗಳು ಅಂತ್ಯವಾದ ಶಬ್ದಗಳಿಗೆ ಪರವಾದಾಗ ಕೆಲವು ವೇಳೆ ವ ಆಗಿಯೂ ಕೆಲವು ವೇಳೆ (ಆ ಅಂತ್ಯಾಕ್ಷರಗಳು ಲೋಪವಾದಾಗ) ಪ ಆಗಿಯೂ ಇರುತ್ತದೆ.

ಉದಾ : ಪೋಗುವ, ಪೋಪ ; ತರಿಸುವ, ತರಿಪ. ಕೆಲವು ವೇಳೆ 'ತರಿಪ್ಪ' ಎಂದೂ ಆಗುತ್ತದೆ. ಆಗು ಎಂಬುದು ಆಗುವ, ಅಪ್ಪ ಎಂಬ ಎರಡು ರೂಪಗಳನ್ನೂ ಹೊಂದುತ್ತದೆ.

(iv) ನ್ ಣ್ ಗಳನ್ನು ಅಂತ್ಯದಲ್ಲುಳ್ಳ ಧಾತುಗಳಿಗೆ ಪರವಾದಾಗ ಬ ಆಗುತ್ತದೆ.

ಉದಾ : ಎಂಬ, ಉಣ್ಬ.

ನ ಕಾರಾಂತಗಳಲ್ಲಿ ಕೆಲವು ವೇಳೆ ಪ ಆಗಿರುವುದೂ ಉಂಟು.

ಉದಾ : ಆಂಪ, ನೋಂಪ.

(b) ಭೂತಕಾಲದಲ್ಲಿ :

---

*ತು ಎಂಬುದೂ ನಪುಂಸಕಲಿಂಗ ಏಕವಚನದ ಒಂದು ಪ್ರತ್ಯಯವೆಂದು ಇಟ್ಟುಕೊಳ್ಳಬಹುದು. ಉಳ್+ತು< ಉಂಟು (ಳ್ > ಣ್, ತು> ಟು) ; ಆಗು+ತು> *ಆಗತು (ಉ > ಇ)> ಆಯಿತು > ಆಯ್ತು. ಹೀಗೆಯೇ ಪೋಯ್ತು.

(i) ಕವಲ್, ಮಡಲ್, ಕಲ್ ಮೊದಲಾದ ಲಾಂತಗಳಿಗೂ ಕೂರ್, ಕೊನರ್, ತಳಿರ್ ಮೊದಲಾದ ರಾಂತಗಳಿಗೂ ಅಟ್ಟು, ಕೀಟ್ಟು ಮೊದಲಾದ ಟ್ಟಾಂತಗಳಿಗೂ ಬಾ, ಕೀ, ಪೂ ಮೊದಲಾದ ದೀರ್ಘಸ್ವರಯುಕ್ತವಾದ ಕೆಲವು ಏಕಾಕ್ಷರ ಧಾತುಗಳಿಗೂ ಸೀನ್, ನೋನ್, ಆನ್ ಮೊದಲಾದ ನಾಂತಗಳಿಗೂ ಮೊಳೆ, ಅಱು, ಒಱೆ (ಸ್ರವಿಸು) ಧಾತುಗಳಿಗೂ ಭೂತಕಾಲ ಸೂಚಕವಾಗಿ ತ ಪ್ರತ್ಯಯವು ಸೇರುತ್ತದೆ.

ಉದಾ : ಕವಲ್ತ, ಮಡಲ್ತ, ಕಲ್ತ, ಕೂರ್ತ, ಕೊನರ್ತ, ತಳಿರ್ತ, ಅಟ್ಟ, ಕಿಟ್ಟ, ಬಾತ, ಕೀತ, ಪೂತ, ಸೀಂತ, ನೋಂತ, ಆಂತ, ಮೊಳೆತ, ಅರ್ತ, ಒಱೆತ.

ಅರ್ತ ಎಂಬುದಕ್ಕೆ, ಅಱುತ, ಎಂಬ ರೂಪವೂ ಬರುತ್ತದೆ.

(ii) ಕೊಳ್, ಉಣ್, ಕಾಣ್ ಧಾತುಗಳಿಗೆ ಭೂತಕಾಲದಲ್ಲಿ ಡ ಪ್ರತ್ಯಯವು ಸೇರುವುದು. ಕೊಳ್ ಎಂಬುದರ ಳ ಕಾರಕ್ಕೆ ಣ ಕಾರಾದೇಶವೂ ಕಾಣ್ ಎಂಬುದರ ಆದಿ ದೀರ್ಘಕ್ಕೆ ಹ್ರಸ್ವವೂ ಬರುತ್ತವೆ.

ಉದಾ : ಕೊಂಡಂ, ಉಂಡಂ, ಕಂಡಂ.

(iii) ನೋ, ಬೇ, ಮೀ, ತರ್, ಬರ್, ಕೊಲ್, ಆಗು, ಪೋಗು, ಮಾಡು ಮೊದಲಾದ ಧಾತುಗಳಿಗೆ ಭೂತಕಾಲದಲ್ಲಿ ದ ಸೇರುತ್ತದೆ.

ಉದಾ : ನೊಂದಂ, ತಂದಂ, ಆದಂ, ಮಾಡಿದಂ ಇತ್ಯಾದಿ.

(iv) ಕೆಲವು ಸಂದರ್ಭಗಳಲ್ಲಿ ಧಾತುವಿನ ಅಂತ್ಯಾಕ್ಷರದ ರೂಪವನ್ನು ಭೂತ ಕಾಲಸೂಚಕ ಪ್ರತ್ಯಯವು ಹೊಂದುತ್ತವೆ.

ಉದಾ : ಎಚ್ಚಂ, ಪೊಕ್ಕಂ, ಪೆತ್ತಂ ಇತ್ಯಾದಿ.

(c) ವರ್ತಮಾನಕಾಲದಲ್ಲಿ :

ಭೂತಕಾಲಸೂಚಕವಾದ ದ ಪ್ರತ್ಯಯಕ್ಕೆ ಉಂಟಾಗುವ ರೂಪಾಂತರಗಳೇ ವರ್ತಮಾನ ಕಾಲಸೂಚಕ ಪ್ರತ್ಯಯವಾದ ದಪ ದ ಆದಿಯ ದ ಕಾರಕ್ಕೂ ಉಂಟಾಗುತ್ತವೆ.

ಉದಾ : ಕವಲ್ತಪುದು, ಕೊಂಡಪುದು, ನೊಂದಪುದು, ಎಚ್ಚಪುದು ಇತ್ಯಾದಿ.

(4) ದ, ದಪ ಗಳು ಸೇರಿದಾಗ ಧಾತುಗಳಲ್ಲಿ ಆಗುವ ವ್ಯತ್ಯಾಸಗಳು--

(i) ನೋ, ಬೇ, ಮೀ—ಈ ಧಾತುಗಳ ದೀರ್ಘಸ್ವರವು ಹ್ರಸ್ವವಾಗಿ ಅನುಸ್ವಾರಾಗಮವಾಗುವುದು.

ಉದಾ : ನೊಂದಂ, ಬೆಂದಂ, ಮಿಂದಂ.

(ii) ತರ್, ಬರ್, ಕೊಲ್, ಸಲ್—ಇವುಗಳ ಅಂತ್ಯಾಕ್ಷರಕ್ಕೆ ಬಿಂದು ಆದೇಶವಾಗುವುದು.

ಉದಾ : ತಂದಂ, ಬಂದಂ, ಕೊಂದಂ, ಸಂದಂ. ನಿಲ್ ಧಾತುವಿಗೆ ನಿಂದಂ, ನಿಲ್ತಂ ಎಂಬ ಎರಡು ರೂಪಗಳು ಬರುವುವು.

(iii) ಆಗು, ಪೋಗು—ಇವುಗಳ ಅಂತ್ಯಾಕ್ಷರವು ಲೋಪವಾಗುವುದು.

ಉದಾ : ಆದಂ, ಪೋದಂ. ಆದುದು, ಪೋದುದು ಎಂಬುವಕ್ಕೆ ಆಯ್ತು, ಪೋಯ್ತು ಎಂಬ ರೂಪಗಳು ಉಂಟು. ಆಗು ಧಾತುವಿಗೆ ಆಯಿತು ಎಂಬ ರೂಪವೂ ಬರುತ್ತದೆ.

(iv) ಲಘ್ವಾದಿಯೂ ದ್ವಿಲಘುಸ್ವರಯುಕ್ತವೂ ಆದ ಧಾತುವಿನ ಅಂತ್ಯಾಕ್ಷರವು ಗು, ಸು, ಡು, ಱು ಆಗಿದ್ದರೆ ಆ ಅಕ್ಷರಗಳಿಗೆ ಕ್ರಮವಾಗಿ ಕ್, ಚ್, ಟ್, ತ್ ಗಳೂ ಪ್ರತ್ಯಯಕ್ಕೆ ಪೂರ್ವವರ್ಣವೂ (ಕ್, ಚ್, ಟ್, ತ್) ಆದೇಶವಾಗುತ್ತವೆ.

ಉದಾ : ಮಿಗು>ಮಿಕ್ಕಂ, ಪಸು>ಪಚ್ಚಂ, ಬಿಡು>ಬಿಟ್ಟಂ, ಪೆಱು>ಪೆತ್ತಂ.

ಧಾತುವಿನ ಆದಿಯ ಇ ಉ ಕಾರಗಳಿಗೆ ಕೆಲವು ವೇಳೆ ಎ ಒ ಕಾರಗಳು ಆದೇಶವಾಗುವುದುಂಟು.

ಉದಾ : ಪುಗು>ಪೊಕ್ಕಂ, ಉಗು>ಒಕ್ಕಂ, ಇಸು>ಎಚ್ಚಂ, ಬಿಸು>ಬೆಚ್ಚಂ, ಕುಡು>ಕೊಟ್ಟಂ, ತುಡು>ತೊಟ್ಟಂ.

ಮೂರು ಸ್ವರಗಳಿಂದ ಕೂಡಿದ ಬಿಸುಡು ಎಂಬ ಧಾತುವಿಗೆ ಭೂತರೂಪದಲ್ಲಿ ಬಿಸುಟ್ಟಂ, ಬಿಸುಟಂ ಎಂಬ ರೂಪಗಳು ಬರುವುವು.

(v) ದ್ವಿಲಘುಯುಕ್ತವಲ್ಲದ ಉ ಕಾರಾಂತ ಧಾತುಗಳ ಉ ಕಾರಕ್ಕೆ ಇ ಕಾರ ಬರುವುದು.

ಉದಾ : ನೋಡಿದಪಂ, ಮಾಡಿದಳ್, ತೊಡರ್ಚಿದುದು.

(vi) ಕೀೞ್, ಎೞ್, ಬೀೞ್, ಆೞ್ ಇವುಗಳ ದೀರ್ಘಕ್ಕೆ ಹ್ರಸ್ವ ಬರುವುದು.

ಉದಾ : ಕೀೞ್>ಕಿೞ್ತ, ಏೞ್>ಎೞ್ದ, ಬೀೞ್>ಬಿೞ್ದ, ಆೞ್>ಅೞ್ದ. ಬಾೞ್ ಧಾತುವಿಗೆ ವಿಕಲ್ಪವಾಗಿ ಹ್ರಸ್ವ ಬರುವುದು—ಬಾೞ್ದ, ಬೞ್ದ.

### ವಿಧ್ಯರ್ಥಕ ಕ್ರಿಯಾಪದ

ವಿಧ್ಯರ್ಥದಲ್ಲಿ ವಿಧಿಯಲ್ಲದೆ ಆಶೀರ್ವಾದ, ವಿಜ್ಞಾಪನೆ, ಆಜ್ಞೆ ಮೊದಲಾದುವು ಸೇರಿರುತ್ತವೆ. ವಿಧ್ಯರ್ಥದಲ್ಲಿ ಧಾತುವಿಗೆ ಸೇರುವ ಪ್ರತ್ಯಯಗಳನ್ನು ಇಲ್ಲಿ ಸೂಚಿಸಿದೆ.

ಮಧ್ಯಮಪುರುಷ ಏಕವಚನದಲ್ಲಿ—

(1) ಧಾತುವೇ ಪ್ರಯೋಗವಾಗುತ್ತದೆ.

ಉದಾ : (ನೀನ್) ಪೋಗು, ಮಾಡು ಇತ್ಯಾದಿ.

ಇರ್ ಧಾತುವಿಗೆ ಉ ಸೇರುತ್ತದೆ.

ಉದಾ : ಇರು ಮರುಳೆ. ತರ್ ಬರ್ ಧಾತುಗಳು ತಾ, ಬಾ ಎಂಬ ರೂಪವನ್ನು ಹೊಂದುತ್ತವೆ.

(2) ಧಾತುವಿಗೆ ಅ ಸೇರುತ್ತದೆ.

ಉದಾ : ನೋಡ, ಕೂಡ, ಕೇಳ.

ತರ್ ಬರ್ ಧಾತುಗಳಿಗೆ ತಾರ, ಬಾರ ಎಂಬ ರೂಪಗಳು ಬರುತ್ತವೆ.

ಮ. ಪು. ಬಹುವಚನದಲ್ಲಿ—

ಧಾತುವಿಗೆ ಇಂ ಸೇರುವುದು. ಉದಾ : ಕುಡಿಂ, ಮಾಡಿಂ, ಇರಿಂ.

ತರ್, ಬರ್ ಧಾತುಗಳಿಗೆ ತನ್ನಿಂ, ಬನ್ನಿಂ ಎಂಬ ರೂಪಗಳು ಬರುವುವು.

ಉತ್ತಮ ಪುರುಷದಲ್ಲಿ—

ಏಕವಚನದಲ್ಲಿ ಎನ್, ಬಹುವಚನದಲ್ಲಿ ಅಂ ಎಂಬ ಪ್ರತ್ಯಯಗಳು ಸೇರುವುವು. ಈ ಪ್ರತ್ಯಯಗಳು ಭವಿಷ್ಯತ್ಕಾಲಸೂಚಕ ಪ್ರತ್ಯಯದಿಂದ ಕೂಡಿದ ಧಾತುಗಳಿಗೆ ಸೇರುವುವು.

ಉದಾ : ಮಾಡುವೆನ್, ಮಾಡುವಂ.

ಪ್ರಥಮಪುರುಷದಲ್ಲಿ—

(1) ಗೆ, ಕೆ

ಅವನ್ ಮಾಡುಗೆ, ಅವರ್ ಮಾಡುಗೆ, ಮಾಟ್ಕೆ. ಆಗು ಪೋಗು ಧಾತುಗಳಿಗೆ ಆಗುಗೆ ಅಕ್ಕೆ, ಪೋಗುಗೆ ಪೋಕೆ ಎಂಬ ರೂಪಗಳು ಬರುವುವು.

ಕೆಲವು ವೇಳೆ ಮಧ್ಯಮಪುರುಷಕ್ಕೂ ಈ ರೂಪಗಳುಂಟು.

(2) ಉದು.

ಈ ಪ್ರತ್ಯಯವು ಮಧ್ಯಮಪುರುಷ ಪ್ರಥಮಪುರುಷಗಳಲ್ಲಿ ಭವಿಷ್ಯತ್ಕಾಲಸೂಚಕ ಪ್ರತ್ಯಯದಿಂದ ಕೂಡಿದ ಧಾತುವಿಗೆ ಸೇರುತ್ತದೆ—

ನೀನ್ ಬರ್ಪುದು, ನೀಮೆಲ್ಲರ್ ಬರ್ಪುದು ; ಅವನ್ ಮಾಟ್ಪುದು, ಅವರ್ ಮಾಟ್ಪುದು.

**ನಿಷೇಧಾರ್ಥಕ ಕ್ರಿಯಾಪದಗಳು**

ಕ್ರಿಯಾನಿಷೇಧವು ತೋರುವಾಗ ನಿಷೇಧರೂಪವಾಗುವುದು. ಕಾಲವಾಚಕ ಪ್ರತ್ಯಯಗಳು ಸೇರದೆಯೇ ಅವುಗಳ ಮುಂದೆ ಸೇರುವ ಪುರುಷವಾಚಕ ಪ್ರತ್ಯಯಗಳು

ನೇರವಾಗಿ ಧಾತುವಿಗೆ ಸೇರಿದರೆ ಕ್ರಿಯೆಯು ನಿಷೇಧರೂಪವಾಗುವುದೆಂದು ಕೆಲವರ ಮತ. ಉದಾಹರಣೆಗೆ, ಕೇಶಿರಾಜನು "ಧಾತುವಂ ಪ್ರತಿಷೇಧದ ಕ್ರಿಯೆಯ ವಿಭಕ್ತಿಯುಂ ಕಳೆಯೆ ಕಾಣಲಕ್ಕುಂ" ಎಂದು ಹೇಳಿರುತ್ತಾನೆ. ಮಾಡೆನ್ ಎಂಬ ನಿಷೇಧದ ಕ್ರಿಯೆಯ ಎನ್ ಎಂಬ ಆಖ್ಯಾತಪ್ರತ್ಯಯವನ್ನು ಕಳೆದರೆ ಉಳಿಯುವ ಮಾಡು ಎಂಬುದೇ ಧಾತು. ಈ ಅಭಿಪ್ರಾಯದ ಪ್ರಕಾರವಾಗಿ ನಿಷೇಧಾರ್ಥ ಸೂಚಕವಾದ ಪ್ರತ್ಯಯವಾವುದೂ ಸೇರದೆಯೇ ನಿಷೇಧಕ್ರಿಯೆಯಾಗುತ್ತದೆ. ಅ ಎಂಬ ನಿಷೇಧಾರ್ಥಕ ಪ್ರತ್ಯಯವು ಧಾತುವಿಗೆ ಸೇರಿ ಅದರ ಮುಂದೆ ಬರುವ ಪುರುಷವಾಚಕ ಆಖ್ಯಾತಪ್ರತ್ಯಯದ ಸ್ವರದೊಡನೆ ಬೆರೆತುಹೋಗುವುದೆಂಬುದೇ ಇನ್ನೊಂದು ಮತ. ಪ್ರಥಮಪುರುಷ ನಪುಂಸಕದಲ್ಲಿ ಉದು ಉವುಗಳಿಗೆ ಬದಲಾಗಿ ಪ್ರತಿಷೇಧಾರ್ಥದಲ್ಲಿ ಅದು ಅವು ಬರುವುದೂ (ಉದಾ: ಮಾಡದು, ಮಾಡವು); ಮಾಡಿದ, ಕೇಳ್ದ ಮೊದಲಾದುವುಗಳಿಗೆ ಸರಿಯಾಗಿ ನಿಷೇಧಾರ್ಥದಲ್ಲಿ ಮಾಡದ, ಕೇಳದ ಎಂದು ಅ ಪ್ರತ್ಯಯವನ್ನುಳ್ಳ ರೂಪಗಳಿರುವುದೂ; ಅಜು, ಅಟ್ಕು ಮೊದಲಾದುವಕ್ಕೆ ಭಾವಾರ್ಥದ ಮೆ ಸೇರಿ ನಿಷೇಧಾರ್ಥವನ್ನು ತೋರುವಾಗ ಅಜಿಯಮೆ, ಅಟ್ಕಮೆ ಎಂಬ ಅಕಾರಾಗಮವಾದ ರೂಪ ಬರುವುದೂ; ಇರಅದೆ ಎಂಬ ಅಪೂರ್ವ ಪ್ರಯೋಗವೂ ಈ ಅಭಿಪ್ರಾಯಕ್ಕೆ ಸಾಧಕವಾಗಿದೆ.

ನಿಷೇಧರೂಪದಲ್ಲಿ ತರ್ ಬರ್ ಧಾತುಗಳ ಆದಿಸ್ವರಕ್ಕೆ ದೀರ್ಘವಾಗುವುದು.

ಉದಾ: ತಾರೆನ್, ಬಾರಂ.

ವಿಧ್ಯರ್ಥಕವಾದ ನಿಷೇಧದಲ್ಲಿ ಧಾತುವಿಗೆ ಮಧ್ಯಮಪುರುಷ ಏಕವಚನದಲ್ಲಿ ಅಲ್ ಪ್ರತ್ಯಯವೂ ಬಹುವಚನದಲ್ಲಿ ಅಲಿಂ (ಅಲ್+ಇಮ್) ಪ್ರತ್ಯಯವೂ ಸೇರುತ್ತವೆ.

ಉದಾ: ಬನಮುಂ ಪುಗಲ್ (ವನವನ್ನು ಪ್ರವೇಶಿಸಬೇಡ).
ನೀಮಿದಂ ನಂಬಲಿಂ (ನೀವು ಇದನ್ನು ನಂಬಬೇಡಿರಿ).

ವಿಧ್ಯರ್ಥಕ ನಿಷೇಧದಲ್ಲಿ ಧಾತುವಿನ ಮುಂದೆ ಬೇಡಂ, ಬೇಡ ಎಂಬ ಅವ್ಯಯಗಳು ಸೇರುತ್ತವೆ. ಆಗ ಧಾತುವಿಗೆ ಅಲ್ ಅಥವಾ ಅ ಎಂಬ ಪ್ರತ್ಯಯವು ಸೇರುವುದು.

ಉದಾ: ಪೋಗಲ್‌ಬೇಡಂ, ಪೋಗಬೇಡ.

**ಅಪೂರ್ಣ ಕ್ರಿಯಾಪದಗಳು**

ಧಾತುಗಳಿಗೆ ಕೆಲವು ಆಖ್ಯಾತ ಪ್ರತ್ಯಯಗಳು ಸೇರಿ ಪೂರ್ಣ ಕ್ರಿಯಾಪದಗಳಾಗುತ್ತವೆ; ಇವನ್ನು ಹಿಂದೆ ತಿಳಿಸಿದೆ. ಮತ್ತೆ ಕೆಲವು ಪ್ರತ್ಯಯಗಳು ಸೇರಿ ಅಪೂರ್ಣ ಕ್ರಿಯಾಪದಗಳಾಗುತ್ತವೆ. ಇವು ಅವ್ಯಯಗಳೆಂದು ವ್ಯವಹಾರವಾಗು

ತ್ರವೆ. ಇವುಗಳಲ್ಲಿ ಏಕಕರ್ತೃಕ, ಭಿನ್ನಕರ್ತೃಕ ಎಂದು ಎರಡು ವಿಧಗಳಿವೆ. ಕಾದುತ್ತುಂ ಬಂದಂ ಎಂಬಲ್ಲಿ ಕಾದುವುದು ಬರುವುದು ಎಂಬ ಎರಡು ಕ್ರಿಯೆಗಳೂ ಒಬ್ಬನಿಂದಲೇ ಉಂಟಾದುವು. ಎಂದರೆ ಏಕಕರ್ತೃಕವಾದುವು. ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ ಎಂಬಲ್ಲಿ ಕಡೆವ ಕ್ರಿಯೆಯೂ ಈವ ಕ್ರಿಯೆಯೂ ಒಂದೇ ಕರ್ತೃವಿನಿಂದ ಆದುವಲ್ಲ; ಭಿನ್ನ ಕರ್ತೃಕವಾದುವು. ಮೊದಲನೆಯ ವಾಕ್ಯದಲ್ಲಿ ಬರುವುದೂ ಎರಡನೆಯ ವಾಕ್ಯದಲ್ಲಿ ಈವುದೂ ಪ್ರಧಾನ ಕ್ರಿಯೆಗಳು; ಕಾದುವುದು ಕಡೆವುದು ಅಧೀನ ಕ್ರಿಯೆಗಳು. ಇವು ಅಪೂರ್ಣ ಕ್ರಿಯಾಪದರೂಪದಲ್ಲಿರುತ್ತವೆ. ಅಪೂರ್ಣ ಕ್ರಿಯಾ ಪ್ರಯೋಗವನ್ನು ಇಲ್ಲಿ ಸ್ಥೂಲವಾಗಿ ನಿರೂಪಿಸಿದೆ—

(i) ಉತುಂ, ಉತ್ತುಂ, ಉತೆ, ಉತ್ತೆ—ಅನೇಕ ಕ್ರಿಯೆಗಳು ಏಕಕಾಲದಲ್ಲಿ ನಡೆದರೆ ಅವುಗಳಲ್ಲಿ ಅಧೀನ ಕ್ರಿಯೆಗಳನ್ನು ತಿಳಿಸುವ ಧಾತುಗಳ ಮೇಲೆ ಈ ಪ್ರತ್ಯಯಗಳಲ್ಲಿ ಒಂದು ಹತ್ತುತ್ತದೆ.

ಉದಾ: ಪುಗುತುಮಿರ್ದಂ, ಕಾದುತ್ತುಂ ಬಂದಂ, ಈಸುತಿರ್ದಂ, ಪರಸುತ್ತೆ ಬಂದಂ.

(ii) ದು, ಇ—ಅನೇಕ ಕ್ರಿಯೆಗಳು ನಡೆದಾಗ ಮೊದಲು ನಡೆದ ಕ್ರಿಯೆಯನ್ನು ತಿಳಿಸುವ ಧಾತುಗಳಿಗೆ ಈ ಪ್ರತ್ಯಯಗಳಲ್ಲಿ ಒಂದು ಸೇರುತ್ತದೆ. ಭೂತಕಾಲದ ದ ಸೇರಿದಾಗ ಇ ಕಾರಾಗಮವನ್ನು ಹೊಂದುವ ಮಾಡು ಮೊದಲಾದ ಧಾತುಗಳಿಗೆ ಇ ಪ್ರತ್ಯಯವೂ ಮಿಕ್ಕ ಧಾತುಗಳಿಗೆ ದು ಪ್ರತ್ಯಯವೂ ಸೇರುತ್ತವೆ.

ಉದಾ: ನಚ್ಚಿ ಬಂದಂ, ಮುಚ್ಚಿ ಪೊಗಟ್ಟಂ, ಸೆಡೆದು ನಡೆದಳ್, ಕಂಡು ಪೋದಂ.

(iii) ಅದೆ—ಮೇಲೆ ಹೇಳಿದೆಡೆಗಳಲ್ಲಿ ನಿಷೇಧವು ತೋರಿದರೆ ಧಾತುವಿಗೆ ಅದೆ ಎಂಬ ಪ್ರತ್ಯಯವು ಸೇರುವುದು.

ಉದಾ: ಈಯದೆ ಪೋದಂ, ಕುಡದಿರ್ದಂ.

(iv) ಅಲ್, ಅಲ್ಕೆ—

(1) ಒಂದು ಕ್ರಿಯೆಯು ಮತ್ತೊಂದು ಕ್ರಿಯೆಯ ಅರ್ಥವನ್ನು ಅಥವಾ ಪ್ರಯೋಜನವನ್ನು ಹೇಳುವಾಗ ಧಾತುವಿಗೆ ಅಲ್ ಅಥವಾ ಅಲ್ಕೆ ಎಂಬ ಪ್ರತ್ಯಯವು ಸೇರುತ್ತದೆ.

ಉದಾ: ಗೆಲಲ್ ಬಗೆದಂ, ಮುತ್ತಲ್ವೇಟ್ಟಂ;
ಬೇಡಲ್ಕೆ ಬಂದಂ, ಇಱಿಯಲ್ಕೆ ಬಗೆದಂ.

(2) ಅರ್ಹ, ಶಕ್ತ ಎಂಬ ಅರ್ಥದ ಶಬ್ದಗಳು ಸೇರಿದಾಗಲೂ ನಿಷೇಧಾರ್ಥದ

ಆಗದು, ಆಗ ಎಂಬ ಶಬ್ದಗಳು ಸೇರಿದಾಗಲೂ ಧಾತುವಿಗೆ ಅಲ್, ಅಲ್ಕೆ ಎಂಬ ಪ್ರತ್ಯಯಗಳು ಸೇರುತ್ತವೆ.

ಉದಾ : ಪಾಡಲರ್ಹಂ, ಮಾತಱಿಯಲ್ ತಕ್ಕ ವಿವೇಕಂ; ಇರಲಾಗದು, ನುಡಿಯಲ್ಕಾ;

(3) ಪೇೞ್, ಬೇಡು ಎಂಬ ಶಬ್ದಗಳು ಸೇರಿದಾಗ ಧಾತುವಿಗೆ ಅಲ್, ಅ ಎಂಬ ಪ್ರತ್ಯಯಗಳು ಸೇರುತ್ತವೆ.

ಉದಾ : ಬೆಸಸಲ್ವೇೞ್ಪುದು, ಈಯಲ್ವೇೞ್ಕುಂ; ತರವೇೞ್, ಇರವೇೞ್ಕುಂ.

(v) ಒಡೆ—ಪಕ್ಷಾರ್ಥವನ್ನು ತಿಳಿಸುವಾಗ ಧಾತುವಿಗೆ ಸಾಮಾನ್ಯವಾಗಿ ಭೂತ ಭವಿಷ್ಯತ್ ಕಾಲಸೂಚಕ ಪ್ರತ್ಯಯಗಳ ಮುಂದೆ ಒಡೆ ಎಂಬ ಪ್ರತ್ಯಯವು ಸೇರುತ್ತದೆ.

ಉದಾ : ಕಡೆದೊಡೆ ಪಾಲ್ಗಡಲ್ ವಿವಿಧವಸ್ತುವನೀಯದೆ ? ; ತೀಡುವೊಡಲ್ಲಿ ಕಮ್ಮೆಲರ್ ತೀಡುಗುಂ; ನೀನುಳ್ಳೊಡುಂಟು ರಾಜ್ಯಂ.

(vi) ಎ, ಅಲ್*, ಅಲೊಡಂ (ಅಲ್ + ಒಡಂ)—

ಬೇರೆ ಬೇರೆ ಕರ್ತೃಗಳಿಂದ ಉಂಟಾದ ಅನೇಕ ಕ್ರಿಯೆಗಳಲ್ಲಿ ಮೊದಲು ಹೇಳುವ ಕ್ರಿಯೆಯ ಧಾತುವಿನ ಮೇಲೆ ಬರುತ್ತವೆ.

ಉದಾ : ಗಾಯಕಂ ಪಾಡೆ ದೇವಂ ಮೆಚ್ಚಿದಂ;
ಬಯ್ಗಿನ ಕೆಂಬಿಸಿಲೆಳಸಲ್ ಎಸೆದುವಾಶ್ರಮತರುಗಳ್;
ವಸಂತಂ ಬರಲೊಡಂ ಕೋಗಿಲೆಯುಲಿಗುಂ.

ಒಡಂ ಎಂಬುದಕ್ಕೆ 'ಎ' ಸೇರಿ ಅಲೊಡನೆ ಎಂದೂ ಪ್ರತ್ಯಯವುಂಟು.

ಉದಾ : ಗಾಳಿ ಬೀಸಲೊಡನೆ ಎಲೆ ಕಟಲ್ದುವು.

(vii) ಅನ್ನಂ, ಅನ್ನೆಗಂ, ಇನಂ, ಇನೆಗಂ, ಉದುಂ—ಇವುಗಳ ಕಾರ್ಯವೂ ಎ, ಅಲ್ ಮೊದಲಾದುವುಗಳ ಕಾರ್ಯದಂತೆಯೇ. ಆದರೆ ಇವು ಧಾತುವಿಗೆ ಭವಿಷ್ಯತ್ಕಾಲ ಸೂಚಕ ಪ್ರತ್ಯಯದ ಮುಂದೆ ಹತ್ತುತ್ತವೆ.

ಉದಾ : ಹರಿ ಬರ್ಪನ್ನಂ ತಪಂಗೆಯ್ದಪೆಂ;
ನೆನೆವನ್ನೆಗಂ ಬಂದಂ; ಬೆಳಗಪ್ಪಿನಂ ಕೇಳಿಸಿದಂ;
ಅವಧಿ ಬರ್ಪಿನೆಗಂ ಸೈರಿಸಿದಂ; ಬರವೇೞ್ಪೆಂಬುದುಂ.

---

*ಎ, ಅಲೊಡಂ ಎಂಬ ಪ್ರತ್ಯಯಗಳ ಸ್ಥಾನದಲ್ಲಿ ಅಲ್ ಪ್ರತ್ಯಯವನ್ನು ಪ್ರಯೋಗಿಸುವುದು ತಪ್ಪೆಂದು ಕೇಶಿರಾಜನು ಹೇಳಿರುತ್ತಾನೆ. ಇದಕ್ಕೆ ಕಾರಣ ಈ ತೆರವ ಪ್ರಯೋಗವು ಪ್ರಖ್ಯಾತರಾದ ಪೂರ್ವಕವಿಗಳ ಗ್ರಂಥಗಳಲ್ಲಿಲ್ಲವೆಂಬುದೇ. ಮೇಲೆ ಕೊಟ್ಟಿರುವ ಎರಡನೆಯ ಉದಾಹರಣೆ ನಾಗವರ್ಮನ ಕಾದಂಬರಿಯದು.

# ೮. ಅವ್ಯಯಪ್ರಕರಣ

'ಅವ್ಯಯ' ಎಂದರೆ (ನಾಮಪದ ಕ್ರಿಯಾಪದಗಳಂತೆ) ಲಿಂಗ ವಚನ ವಿಭಕ್ತಿ ಸೂಚಕವಾದ ಪ್ರತ್ಯಯಗಳನ್ನು ಹೊಂದದೆ ಇರುವ ಶಬ್ದ. ಅವ್ಯಯಗಳನ್ನು (i) ಸಾಮಾನ್ಯ, (ii) ನಿಪಾತ, (iii) ಅನುಕರಣ, (iv) ತದ್ಧಿತಾಂತ, (v) ಕೃದಂತ ಎಂದು ವಿಭಾಗ ಮಾಡುತ್ತಾರೆ.

(1) ಸಾಮಾನ್ಯಾವ್ಯಯಗಳು—

ಅಲ್ಲಂ, ಅಲ್ಲ, ಅಲ್ಲದೆ, ಅಲ್ತು; ಇಲ್ಲಂ, ಇಲ್ಲ, ಇಲ್ಲದೆ; ಗಡಂ, ಗಡ, ಗಡಾ, ಗಳ; ಕಮ್ಮಗೆ, ಕಮ್ಮನೆ, ಸುಣ್ಣಗೆ, ಸುಣ್ಣನೆ, ಪಮ್ಪನೆ; ಮತ್ತೆ, ಮೇಣ್, ವಲಂ, ಕರಂ, ಅಣಂ, ಐದೆ, ಸಲೆ ಇತ್ಯಾದಿ.

ಬಟ್ಟೆ, ಬಟ್ಟೆಕ್ಕೆ, ಬಟಕಂ, ಬಟ್ಟೆಕ್ಕಂ, ಬಟ್ಟೆಯಂ.

(2) ನಿಪಾತಾವ್ಯಯಗಳು—

ಇವು ಭಯ ವಿಸ್ಮಯಾದಿ ಭಾವಗಳನ್ನು ತಿಳಿಸುತ್ತದೆ. ಅಹಹ (ನೋವು), ಅಕ್ಕಟಾ. ಆಯ್ಯೋ (ದುಃಖ), ಒಹೋ, ಹೋ (ತಡೆಯುವ ಅರ್ಥದಲ್ಲಿ), ಗಹಗಹ (ನಗು), ಆಃ, ಅಃ (ಆಶ್ಚರ್ಯ, ವ್ಯಥೆ), ಎ, ಏ (ಅವಧಾರಣೆ) ಇತ್ಯಾದಿ.

(3) ಅನುಕರಣಾವ್ಯಯಗಳು—ಗಟಗಟ, ಕವಕವ, ಛಟಿಲ್, ಛಿಟಿಲ್ ತಟತಟ, ನಿಟಿಲ್, ಪಠಿಲ್. ಭುಗಿಲ್, ಭೋರ್, ಖಟ್ಟಿಲನೆ, ದುಢುಮ್ಮನೆ ಇತ್ಯಾದಿ.

(4) ತದ್ಧಿತಾಂತಾವ್ಯಯಗಳು—

(i) ಸಾದೃಶ್ಯಾರ್ಥದಲ್ಲಿ ನಾಮಪದಗಳ ಷಷ್ಠೀವಿಭಕ್ತಿಯ ಮೇಲೆ ಅಂತೆ. ಅಂತಿರೆ, ವೋಲ್, ವೊಲ್, ಅಂತೆವೋಲ್, ಅಂತಿರೆವೋಲ್ ಎಂಬ ಪ್ರತ್ಯಯಗಳು ಬರುವುವು—

ಸಿಂಗದಂತೆ, ಚಂದ್ರನಂತಿರೆ, ಹರಿಯವೋಲ್ ಇತ್ಯಾದಿ. ಷಷ್ಠೀವಿಭಕ್ತಿ ಪ್ರತ್ಯಯ ವಿಲ್ಲದೆಯೇ ಈ ಪ್ರತ್ಯಯಗಳು ಸೇರುವುದೂ ಉಂಟು.

ಹರಿವೊಲ್, ಇಂದ್ರಂಬೋಲ್.

(ii) ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂಬರ್ಥದಲ್ಲಿ ಮೆ ಸೇರುವುದು—

ಒರ್ಮೆ, ಇರ್ಮೆ, ಸಾಸಿರ್ಮೆ, ಪಲರ್ಮೆ.

(5) ಕೃದಂತಾವ್ಯಯಗಳು—

ಇವು ಅಸಂಪೂರ್ಣ ಕ್ರಿಯೆಗಳು. ಇವುಗಳ ವಿಷಯವನ್ನು ಹಿಂದಿನ ಪ್ರಕರಣ ದಲ್ಲಿ ಹೇಳಿದೆ.

# ೯. ಪ್ರಯೋಗಪ್ರಕರಣ

ಹಿಂದಣ ಪ್ರಕರಣಗಳಲ್ಲಿ ಪದಗಳ ರೂಪನಿಷ್ಪತ್ತಿಯನ್ನೂ ಅವುಗಳ ಪ್ರಯೋಗದ ಸಾಮಾನ್ಯಾಂಶಗಳಲ್ಲಿ ಕೆಲವನ್ನೂ ಹೇಳಿದೆ. ಈ ಪ್ರಕರಣದಲ್ಲಿ ಪದಗಳ ಪ್ರಯೋಗದಲ್ಲಿರುವ ಮತ್ತೆ ಕೆಲವು ಸಾಮಾನ್ಯಾಂಶಗಳನ್ನೂ ಕೆಲವು ವಿಶೇಷಾಂಶಗಳನ್ನೂ ಹೇಳಲಾಗುವುದು.

## ನಾಮಪದ ಪ್ರಯೋಗ

ವಿಭಕ್ತಿಗಳು ಬೇರೆ ಬೇರೆ ಅರ್ಥಗಳಲ್ಲಿ ಪ್ರಯೋಗವಾಗುತ್ತವೆ. ವಿಭಕ್ತ್ಯರ್ಥಗಳು ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ, ಸಂಬಂಧ, ಅಧಿಕರಣ ಎಂದು ಏಳು ವಿಧ. ಇವುಗಳಲ್ಲಿ ಸಂಬಂಧವನ್ನುಳಿದು ಮಿಕ್ಕವಕ್ಕೆ ಕಾರಕವೆಂದು ಸಂಜ್ಞೆ. ಕಾರಕವೆಂದರೆ ಕ್ರಿಯೆಯನ್ನು ಮಾಡುವುದು ಅಥವಾ ಕ್ರಿಯೆಗೆ ಸಹಕಾರಿ.

(1) ಪ್ರಥಮಾ ವಿಭಕ್ತಿ :

(i) ಆಖ್ಯಾತಪ್ರತ್ಯಯವು ಕರ್ತ್ರರ್ಥದಲ್ಲಿ ಬಂದಾಗ ಕರ್ತೃವನ್ನೂ ಕರ್ಮಾರ್ಥದಲ್ಲಿ ಬಂದಾಗ ಕರ್ಮವನ್ನೂ ಸೂಚಿಸುವುದಕ್ಕಾಗಿ ಪ್ರಥಮಾವಿಭಕ್ತಿ ಬರುವುದು.

ಉದಾ : ಕರ್ತೃ : ಪೊೞ್ತು ಸರಿವುದು; ನೇಸಱ್ ಮೂಡಿದುದು.
ಕರ್ಮ : ಬಡಗಿಯಿಂ ಮನೆ ಕಟ್ಟಲ್ಪಟ್ಟುದು; ಪಾಂಥನಿಂ ಊರ್ ಎಯ್ದಪಟ್ಟುದು.

(ii) ಸಮುಚ್ಚಯವನ್ನು ತಿಳಿಸುವಾಗ ಅನೇಕ ಪದಗಳಲ್ಲಿ ಕಡೆಯ ಪದಕ್ಕೆ ಬೇರೆ ವಿಭಕ್ತಿಯನ್ನೂ ಅದರ ಹಿಂದಿನ ಪದಗಳಿಗೆ ಪ್ರಥಮೈಕವಚನವನ್ನೂ ಹೇಳುವುದುಂಟು.

ಉದಾ : ಸಿರಿಯರಸಂ ಮಾದೇವಂ ಸರಸತಿಯೆಱೆಯರ್ಕಳ.

(iii) ವಿಶೇಷ್ಯವು ಬೇರೆ ವಿಭಕ್ತಿಯಿಂದಿದ್ದರೂ ಅನೇಕ ವಿಶೇಷಣಗಳನ್ನು ಪ್ರಥಮಾಂತವಾಗಿ ಪ್ರಯೋಗಿಸುವುದುಂಟು.

ಉದಾ : ಧೀರನುದಾರಂ ಕಲಿ ಗಂಭೀರಂ ನಯಶಾಲಿ ಕೈದುವೊತ್ತರ ದೇವಂಗಾರೆಣೆಗರ್ ನೃಪತುಂಗಂಗೆ.

(iv) ವಸ್ತುವಾಚಕದ ಮುಂದೆ ಅದಕ್ಕೆ ವಿಶೇಷಣವಾದ ಸಂಖ್ಯಾವಾಚಕ ಬಂದಾಗ ಆ ಸಂಖ್ಯಾವಾಚಕವನ್ನು ಬೇರೆ ವಿಭಕ್ತಿಯಿಂದಲೂ ಅದರ ಹಿಂದಣ ವಸ್ತುವಾಚಕವನ್ನು ಪ್ರಥಮಾವಿಭಕ್ತಿಯಿಂದಲೂ ಪ್ರಯೋಗಿಸುವರು.

ಉದಾ : ರನ್ನಮೊಂದಂ ತಳೆದಪ ರತ್ನಾಕರಕ್ಕೆ ಸರಿವಂದಪುದೇ !

(2) ಸಂಬೋಧನ ವಿಭಕ್ತಿ :

(i) ಇತರರನ್ನು ತನ್ನ ಕಡೆಗೆ ಗಮನಿಸುವಂತೆ ಮಾಡುವಾಗ ಈ ವಿಭಕ್ತಿಯನ್ನು ಪ್ರಯೋಗಿಸುವರು. ಅಚೇತನ ವಸ್ತುಗಳನ್ನೂ ಸಂಬೋಧಿಸುವುದುಂಟು.

ಉದಾ: ದೇವ ಬಿನ್ನಪಂ; ಎಲೆ ಸಖಿ; ತಳಿರೇ ತಾವರೆಯೇ ಮದಾಳಿ ಕುಲಮೇ ಕರ್ನೆಯ್ದಿಲೇ ಮತ್ತಕೋಕಿಳಮೇ ಕಂಡಿರೆ ಸೀತೆಯಂ.

(ii) ಸಂಬೋಧಿಸುವಾಗ, ಪುಲ್ಲಿಂಗದಲ್ಲಿ ಎಲವೊ, ಸ್ತ್ರೀಲಿಂಗದಲ್ಲಿ ಎಲೆಗೆ ಎಂಬ ಅವ್ಯಯಗಳನ್ನು ಉಪಯೋಗಿಸುವುದುಂಟು.

ಉದಾ: ಎಲವೊ ಖೂಳ, ಎಲೆಗೆ ದಾಸಿ.

(3) ದ್ವಿತೀಯಾ ವಿಭಕ್ತಿ :

(i) ಇದು ಕರ್ಮಾರ್ಥದಲ್ಲಿ ಬರುವುದು, ಕರ್ಮವೆಂದರೆ ಕ್ರಿಯೆಗೆ ವಿಷಯ ವಾದದ್ದು.

ಉದಾ: ಮಗನಂ ಕಂಡಂ; ಅರಸನಂ ಪರಸಿದರ್; ಆನೆಯನೇಱ ; ಪಾದಂಗಳನೊತ್ತುತ್ತಿರಲ್.

(ii) ಕಱೆ ಮೊದಲಾದ ಧಾತುಗಳಿಗೆ ಎರಡು ಕರ್ಮಪದಗಳು ಬರುವುವು.

ಉದಾ: ಪಸುವಂ ಪಾಲಂ ಕಱೆದಂ; ಅರಸನಂ ಧನಮಂ ಬೇಡಿದರ್.

(iii) ಕ್ರಿಯೆಯು ಅವಿಚ್ಛಿನ್ನವಾಗಿ ನಡೆಯಿತೆಂದು ತಿಳಿಸುವಾಗ ಕಾಲ ವಾಚಕದ ಮೇಲೂ ಮಾರ್ಗವಾಚಕದ ಮೇಲೂ ದ್ವಿತೀಯೆ ಬರುವುದು.

ಉದಾ: ಜಾವಮಂ ತೊಟಲ್ದಂ; ಅರೆಗಾವುದಮಂ ಪರಿದಂ.

(4) ತೃತೀಯಾ ವಿಭಕ್ತಿ :

(i) ಇದು ಕರಣವನ್ನೂ ಕಾರಣವನ್ನೂ ತಿಳಿಸುವ ಶಬ್ದಗಳ ಮೇಲೆಯೂ ಕರ್ಮಣಿಪ್ರಯೋಗದಲ್ಲಿ ಕರ್ತೃಪದದ ಮೇಲೆಯೂ ಬರುವುದು.

ಉದಾ: ಕರಣ : ಕೊಡಲಿಯಿಂ ಕಡಿದಂ; ಕಿವಿಯಿಂ ಕೇಳ್ದಂ.
ಕಾರಣ : ಬಿಜ್ಜೆಯಿಂ ಜಸಂ; ಪ್ರಕೃತಿಯಿನೊಳ್ಳಿದಂ.

(ii) ಕರ್ಮಣಿಪ್ರಯೋಗದಲ್ಲಿ ಕರ್ತೃವಿನ ಮೇಲೆ ಬರುವುದು :

ಉದಾ: ಅಕ್ಕಸಾಲೆಯಿಂ ಪದಕಂ ಗೆಯ್ಯಲ್ಪಟ್ಟುದು; ಹರಿ ಅರ್ಜುನನಿಂ ಕರ್ಣನಂ ಕೊಲಿಸಿದಂ.

(iii) ಕ್ರಿಯೆ ಅವಿಚ್ಛಿನ್ನವಾಗಿ ನಡೆದಾಗ ಕಾಲವಾಚಕ ಮಾರ್ಗವಾಚಕಗಳ ಮೇಲೆ ದ್ವಿತೀಯೆಯಂತೆ ತೃತೀಯೆಯೂ ಬರುವುದು.

ಉದಾ : ಬರಿಸದಿಂ ಶಾಸ್ತ್ರಮನೋದಿದಂ; ಗಾವುದದಿಂ ಪದ್ಯಂಗಳಂ ಪಱಿಸಿದಂ.

(iv) ಒಡನೆ, ಬೆರಸು ಎಂಬುವು ಹೊರತು ಮಿಕ್ಕ ಸಹಾಯಾರ್ಥ ಶಬ್ದಗಳು ಸೇರಿರುವಾಗಲೂ ತೃತೀಯೆ ಬರುವು ದು.

ಉದಾ : ಮಗನಿಂ ಕೂಡಿ; ಉಮೆಯಿಂ ಸಂಗಡಿಸಿ ಮೆಱೆದನಾ ಪೆಱೆದಲೆಯಂ. ತೃತೀಯೆ ಬಾರದಿರುವುದಕ್ಕೆ-ಗಿಳಿಯೊಡನೋದಿ, ಮಕ್ಕಳ್ವೆರಸು.

(5) ಚತುರ್ಥೀ ವಿಭಕ್ತಿ :

(i) ಕೊಟ್ಟ ವಸ್ತು ಯಾವುದನ್ನು ಸೇರುವುದೋ ಅದು ಸಂಪ್ರದಾನಕಾರಕವೆನಿಸುವುದು. ಇದನ್ನು ತಿಳಿಸುವ ಶಬ್ದದ ಮೇಲೆ ಚತುರ್ಥಿ ಬರುವುದು.

ಉದಾ : ಯಾಚಕರ್ಗೆ ಪಣಮಂ ಕೊಟ್ಟಂ; ಯತಿಗೆ ಭಿಕ್ಷಮನಿಕ್ಕಿದಂ,

(ii) ಶಕ್ತಿ, ರುಚಿ, ಮೊದಲಾದ ಅರ್ಥವುಳ್ಳ ಶಬ್ದಗಳು ಸೇರಿರುವಾಗಲೂ ಚತುರ್ಥೀ ವಿಭಕ್ತಿ ಬರುವುದು.

ಉದಾ : ಕರ್ಣಂಗೆ ಅರ್ಜುನಂ ಬಲ್ಲಿದಂ; ಕೂಸಿಂಗೆ ಲಡ್ಡುಗೆಯುಚಿತಂ; ಕೆಳದಿಗೆ ತಿಳಿವಂತು ತನ್ನ ತೆಱನಂ ಪೇಳ್ದಳ್; ಪೋಲಿಪೊಡೆ ರಂಭೆಗಗ್ಗಳಂ; ಎನಗಪಾಯಮನಾವನೊಡರ್ಚುವಂ; ಭೂಭುಜನಾಜ್ಞೆಗೆ ಮಾಣ್ದಂ; ಅಸುರೇಂದ್ರಂಗೆ ಕೃತಾಂತನ ಕಿಸುಗಣ್ಣಿದ ಕಣ್ಣ ಕೆಂಪೆನಲ್; ತವರೂರ್ಗೆ ಪೋಪ; ಅನುರೂಪಂ ಕನ್ನೆಗೀತಂ; ಧುರಕ್ಕೊದಗುವರಾರ್;ಎರಲೆಗೆ ಗಱಿ ಮೂಡಿದವೋಲ್; ಖಳನಂ ಸೌಮಿತ್ರಿ ಪುಲಿತ ಕವಡೆಗೆ ಬಗೆದಂ.

(6) ಪಂಚಮೀ ವಿಭಕ್ತಿ :

(i) ಇದು ಅಪಾದಾನ ನಿಮಿತ್ತಗಳನ್ನು ತಿಳಿಸುವಾಗಲೂ, ಭಯ, ಆಧಿಕ ಮೊದಲಾದ ಅರ್ಥಗಳುಳ್ಳ ಶಬ್ದಗಳು ಪ್ರಯೋಗವಾದಾಗಲೂ ಬರುವುದು. ಅಪಾದಾನವೆಂದರೆ ಅಗಲಿಕೆಗೆ ಅವಧಿಯಾದ ವಸ್ತು.

ಉದಾ : ಅಪಾದಾನ : ಮರದತ್ತಣಿಂ ಪಣ್ಣು ದಿರ್ದುದು.
ನಿಮಿತ್ತ : ಜ್ಞಾನದತ್ತಣಿಂ ಮೋಕ್ಷಂ; ಕಿರ್ಚಿನತ್ತಣಿಂ ಪೊಗೆ.
ಭಯ : ಪುಲಿಯತ್ತಣಿಂದಳ್ಕು.
ಆಧಿಕ್ಯ : ಕೃಷ್ಣನತ್ತಣಿಂ ಬಲಭದ್ರಂ ಪಿರಿಯಂ.

(7) ಷಷ್ಠೀ ವಿಭಕ್ತಿ :

(i) ಇದು ಸಂಬಂಧಾರ್ಥದಲ್ಲಿ ಬರುವುದು.

ಉದಾ : ಇಳೆಯಾಣ್ಮಂ; ಗಿಳಿಯ ಪಿಂಡು; ನನೆವಿಲ್ಲಾತಂ; ಪುರದುದ್ಯಾನಂ; ತೋಳ ಬಂದಿ; ಕಳಸದ ತಳಿರ್; ಕೋಲ ಮುಟಿ.

(ii) ವಿಶೇಷಣ ಶಬ್ದದ ಮೇಲೆಯೂ ಷಷ್ಠಿ ಬರುವುದು.

ಉದಾ : ಎಳನಗೆಯ ಕಲರವದ ಬಾಲಕರ್.

(iii) ಭಾವಕೃದಂತ ಶಬ್ದಗಳು ಪ್ರಯೋಗವಾದಾಗ ಕರ್ತೃ ಕರ್ಮಗಳನ್ನು ತಿಳಿಸುವ ಶಬ್ದಗಳ ಮೇಲೆ ಷಷ್ಠಿ ಬರುವುದು.

ಉದಾ : ದೇವರ ಬರವು; ದೇವದತ್ತನ ಘಟದ ಮಾಟ್ಕೆ.

(8) ಸಪ್ತಮೀ ವಿಭಕ್ತಿ :

(i) ಇದು ಅಧಿಕರಣ ಎಂದರೆ ಆಧಾರವನ್ನು ತಿಳಿಸುವ ಶಬ್ದಗಳ ಮೇಲೆ ಬರುವುದು.

ಉದಾ : ದಿವದೊಳ್ ಬೆಳ್ದಿಂಗಳಂ ಬಿತ್ತರಿಸೆ; ಧುರದೊಳ್ ದುರ್ಜಯ ನಾರ್ಗಂ; ಆವಂ ಯಮಪಾಶದೊಳ್ ತೊಡರ್ದಂ; ಕಾಸಾರ ತಟೀದೇಶಂಗಳೊಳ್ ಪೂಗೊಳದ ತಡಿಗಳೊಳ್ ದಂಡಕಾರಣ್ಯ ದೊಳ್ ಕೂಡೆ ತೊಟಿಲ್ದರ್.

(ii) (1) ಗುಣ ಕ್ರಿಯೆ ಇವುಗಳ ಮೂಲಕ ಒಂದು ಪದಾರ್ಥವನ್ನು ಒಂದು ಸಮುದಾಯದಿಂದ ಬೇರ್ಪಡಿಸುವಾಗಲೂ, (2) ಸಾಧು, ನಿಪುಣ ಈ ಅರ್ಥದ ಶಬ್ದಗಳು ಪ್ರಯೋಗವಾದಾಗಲೂ, (3) ವಿಷಯಾರ್ಥದಲ್ಲಿಯೂ ಸಪ್ತಮಿ ಬರುವುದು.

ಉದಾ : (1) ಮಾತಱಿವರ್ ಕೆಲಬರ್ ಜಗ
ತೀತಳಗತ ಮನುಜರಲ್ಲಿ ಮಾತಱಿವವರೊಳ್ |
ನೀತಿವಿದರವುಳಕವಿತಾ
ನೀತಿಯುತರ್ ಕೆಲರೆ ಪರಮಕವಿವೃಷಭರ್ಕಳ್ ||

ರತ್ನಂಗಳೊಳ್ ಮಾಣಿಕ್ಯಮುತ್ತಮಮಂ ; ಕಾದುವರೊಳೀತಂ ಮೆಯ್ಗಲಿ ;

(2) ತಾಯೊಳ್ ಸಾಧು, ಚಿತ್ರದೊಳ್ ಕುಶಲಂ ;

(3) ಪೊಡೆಯೆಂಬುದು ಬೆಳೆಗೆಯ್ಯೊಳ್, ಪಿಡಿಯೆಂಬುದು ಪೆಣ್ಣಾನೆಯೊಳ್.

## ವಿಭಕ್ತಿಪಲ್ಲಟ

ಒಂದು ವಿಭಕ್ತಿಗೆ ಪ್ರತಿಯಾಗಿ ಮತ್ತೊಂದು ವಿಭಕ್ತಿ ಕೆಲವೆಡೆಗಳಲ್ಲಿ ವಿಕಲ್ಪದಿಂದ ಬರುವುದು. ಉದಾಹರಣೆ :

| | | |
|---|---|---|
| ಪ್ರಥಮೆ | ಸಪ್ತಮಿಗೆ ಪ್ರತಿಯಾಗಿ | ಒಂದು ದಿವಸಂ ಬಂದಂ=ಒಂದು ದಿವಸದೊಳ್ ಬಂದಂ |
| ದ್ವಿತೀಯೆ | ತೃತೀಯೆಗೆ | ಪೂವನರ್ಚಿಸಿದಂ = ಪೂವಿನರ್ಚಿಸಿದಂ |
| ತೃತೀಯೆ | ಪಂಚಮಿಗೆ | ಪತಿವ್ರತಾಗುಣದಿನಗ್ಗಳಮಾವುದು ಮುಂಟೆ = ಪತಿವ್ರತಾಗುಣದ ತ್ತಣಿಂ........ |
| ಚತುರ್ಥಿ | ದ್ವಿತೀಯಾ ಷಷ್ಠೀ ಸಪ್ತಮಿಗಳಿಗೆ | ಕ್ಷಮಿಯಿಸುವುದೆನ್ನ ಗೆಯ್ದಱಿಯಮೆಗೆ = . . . ಗೆಯ್ದಱಿಯಮೆಯಂ; ತನು ಶುಭಲಕ್ಷಣಕ್ಕೆ ತವರಾದುದು = ತನು ಶುಭಲಕ್ಷಣದ . . .; ಅನುಚಿತಮೆಂಬಿದಂ ಬಗೆಗೆ ತಾರದೆ = . . . .ಬಗೆಯೊಳ್ ತಾರದೆ; |
| ಪಂಚಮಿ | ದ್ವಿತೀಯೆ ತೃತೀಯೆಗಳಿಗೆ | ಆತನತ್ತಣಿಂ ಬೆಸಗೊಂಡಂ = ಆತನಂ . . . . . . ; ಕೊಡಲಿಯತ್ತಣಿಂ ಕಡಿದಂ = ಕೊಡಲಿಯಿಂ . . ; |
| ಷಷ್ಠಿ | ಪ್ರಥಮಾ ದ್ವಿತೀಯಾ ಸಪ್ತಮಿಗಳಿಗೆ | ಎನ್ನೆಚ್ಚಂಬು = ಆನೆಚ್ಚಂಬು ; ಎಲವೋ ನೀನೆನ್ನ ಕೊಂದೆ= . . . . ನೀನೆನ್ನಂ ಕೊಂದೆ; ಚಾಗಿಗಳ ಬಲ್ಲಹಂ = ಚಾಗಿಗಳೊಳ್ ಬಲ್ಲಹಂ. |
| ಸಪ್ತಮಿ | ತೃತೀಯಾ ಚತುರ್ಥಿಗಳಿಗೆ | ಸಿರಿಕಂಡದ ಕೋಟಿಕ್ಕೈಸಱೊಳ್ ಬೆರಸಿದ = . . . ಕೋಟಿಕ್ಕೈಸಱಿಂ ಬೆರಸಿದ; ಮಹೀಭುಜಂ ತಪದೊಳ್ ತಱಿಸಲ್ಗಂ = . . . . ತಪಕ್ಕೆ ತಱಿಸಲ್ಗಂ. |

## ವಚನಪಲ್ಲಟ

(i) ಜಾತಿವಾಚಕ, ಸಂಖ್ಯೇಯವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು.

ಉದಾ : ಜಾತಿ : ಆನೆ ಬಂದುವು—ಆನೆಗಳ್ ಬಂದುವು;

ಕಳವೆ ಬೆಳೆದುದು—ಕಳವೆಗಳ್ ಬೆಳೆದುವು.

ಸಂಖ್ಯೇಯ : ಪತ್ತು ದೆಸೆ—ಪತ್ತು ದೆಸೆಗಳ್.

ವಿಧೇಯ : ಮಹೇಂದ್ರಮಹೈಶ್ವರ್ಯಂಗಳಿಲ್ಲಮ
ಧ್ರುವಂ=. . . . . ಅಧ್ರುವಂಗಳ್.

(ii) ಉಪಹಾಸ, ಗೌರವ ಇವುಗಳನ್ನು ತೋರಿಸುವಾಗ ಏಕವಚನಕ್ಕೆ ಪ್ರತಿಯಾಗಿ ಬಹುವಚನವು ಬರುವುದು.

ಉದಾ : ಉಪಹಾಸಕ್ಕೆ : ಬಡವಾದಿರರಸ ಕಾಲೊಳ್
ನಡೆದಪಿರೊಡನಾರುಮಿಲ್ಲ ಕಡಲೆಗಳೇಂ ನಿ |
ಮ್ಮುಡಿಯೊಳಗೆ ಪಡುವ ದೇಗುಲ
ದೆಡೆಯಾವುದು ಕುಡದ ನಿಮಗವಿಮಾ
ಯೆಡಜುಾಯ್ತೇ ||

ಗೌರವಕ್ಕೆ : ಸಮಂತಭದ್ರಸ್ವಾಮಿಗಳ, ಸಕಲಭೂಷಣ
ಕೇವಲಿಗಳ್.

**ವಿಶೇಷಣದ ಪ್ರಯೋಗ :**

ವಿಶೇಷಣ ಪದವು ವಿಶೇಷ್ಯಪದಕ್ಕನುಸಾರವಾದ ಲಿಂಗ, ವಿಭಕ್ತಿ, ವಚನಗಳನ್ನು ಹೊಂದಿರುವುದು. ಗುಣವಾಚಕ, ಸರ್ವನಾಮ, ಸಂಖ್ಯಾವಾಚಕ, ಕಾರಕ ಕೃದಂತ, ಬಹುವ್ರೀಹಿಸಮಾಸ ಇವುಗಳು ಸಾಮಾನ್ಯವಾಗಿ ವಿಶೇಷಣಗಳಾಗುವುವು.

ಉದಾ : ಲೆಕ್ಕಿಗರ ಪಿರಿಯನಾಂಡಯ್ಯಂ ; ನಿಜದಿಂದಾರ ಬಗೆಗಳು ನೇರಿದುವೇ ? ಲಕ್ಷ್ಮಣಂ ಸಂಗರದೊಳ್ ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧಕಂಠಂ ; ಆತನ ತಂಗೆಯೊಳ್ ಜಗದ್ವಿಜಯಿಗೆ ಲಕ್ಷ್ಮಣಂಗೆ ರತಿಮಾಲೆಯೊಳಾಯ್ತು ವಿವಾಹಂ ; ಕರಿಯಂ ಕಾಮಂ ಬಿಸಪಾಂಡುರವರ್ಣಂ ರಾಮನಿದುವೆ ಭೇದಂ ; ಬಾಂಬೊಟಲನುರ್ಕಿಂ ಮೂಜುಮಂ ಸುಟ್ಟು ;

ಪಾಡುವುವಂ ತುಂಬಿಗಳಂ
ಕೂಡುವುವಂ ಜಕ್ಕವಕ್ಕಿಗಳನತಿಬಿನದಂ |
ಮಾಡುವುವಂ ಪುಲ್ಲೆಗಳಂ
ನೋಡಿದನರಸಂ ವಿವೇಕನಿಧಿ ಸಂತಸದಿಂ ||

(i) ಒಂದು ವಿಶೇಷ್ಯಕ್ಕೆ ಅನೇಕ ಕಾರಕಕೃದಂತಗಳು ವಿಶೇಷಣಗಳಾಗಿ ಪ್ರಕೃತಿರೂಪದಿಂದ ಇರುವುದುಂಟು.

ಉದಾ : ನಡುವಿಡುವುಚ್ಚುರ್ವಾರ್ವರಿವ ನೇಲ್ವ ಪಳಂಚುವ ಪೋರ್ವ ಬಾಣದಿಂ.

(ii) ಕಾರಕಕೃದಂತದ ಮೇಲೆ ಅದು ಎಂಬ ಸರ್ವನಾಮದ ರೂಪಗಳನ್ನು ಸೇರಿಸುವುದುಂಟು.

ಉದಾ : ಆವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದು ; ಸುಚರಿತೆ ಸೀತೆ ನಿನ್ನೊಡನೆ ಬರ್ಪವಳಿರ್ಪವಳಲ್ಲಳ್.

(iii) ನೀನ್ ಶಬ್ದದ ಪ್ರಥಮಾಂತ ವಿಶೇಷಣಕ್ಕೆ ಏಕವಚನದಲ್ಲಿ ಅಯ್, ಬಹುವಚನದಲ್ಲಿ ಇರ್ ಎಂದೂ, ಎನ್ ಶಬ್ದದ ಪ್ರಥಮಾಂತ ವಿಶೇಷಣಕ್ಕೆ ಏಕವಚನ ದಲ್ಲಿ ಎರ್, ಬಹುವಚನದಲ್ಲಿ ಎವು ಎಂದೂ ವಿಕಲ್ಪದಿಂದ ಸೇರುವುವು.

ಉದಾ : ನೀನೊಳ್ಳಿದಂ-ನೀನೊಳ್ಳಿದನಯ್, ನೀಮೊಳ್ಳಿದರ್-ನೀಮೊಳ್ಳಿ ದರಿರ್, ಆಂ ಕವಿಕೇಶವಂ-ಆಂ ಕವಿಕೇಶವನೆಂ, ಆಮಿರ್ವರ್- ಆಮಿರ್ವರೆವು.

## ಕ್ರಿಯಾಪದ ಪ್ರಯೋಗ :

(1) ಭಿನ್ನಲಿಂಗದ ಅನೇಕ ಕರ್ತೃಪದಗಳಿರುವಲ್ಲಿ ಕ್ರಿಯಾಪದಕ್ಕೆ ಕಡೆಯ ಕರ್ತೃಪದದ ಲಿಂಗವು ಬರುವುದು.

ಉದಾ : ಆನೆಯುಮರಸನುಮರಸಿಯುಂ ಬಂದರ್ ;
ಅರಸನುಮರಸಿಯುಂ ಚತುರಂಗಬಲಮುಂ ಬಂದುವು.

(2) ಏಕವಚನಾಂತವಾದ ಅನೇಕ ಕರ್ತೃಪದಗಳಿರುವಲ್ಲಿ ಕ್ರಿಯಾಪದವು ಏಕವಚನಾಂತವಾಗಿಯಾಗಲಿ ಬಹುವಚನಾಂತವಾಗಿಯಾಗಲಿ ಇರುವುದು.

ಉದಾ : ತ್ರಿದಶಾನಕವಾಸನವಸು
ಗೆ ದಿವ್ಯರವಂ ಶತಪತ್ರಮೆಸಟ್ವೆಚಿ ಚಮರಂ |
ಸದಮಲಭಾಮಂಡಲಮೆಸೆ
ವುದು ನಿನ್ನೊಳ್ ನೀನೆ ಜಿನಪ ಜಗದಾರಾಧ್ಯಂ ||

(3) ಮಧ್ಯಮ ಪುರುಷ ಪ್ರಥಮ ಪುರುಷ ಶಬ್ದಗಳು ಸೇರಿ ಕರ್ತೃಗಳಾಗಿರುವಲ್ಲಿ ಕ್ರಿಯಾಪದವು ಮಧ್ಯಮ ಪುರುಷಾಂತವಾಗಿಯೂ ; ಉತ್ತಮ ಪುರುಷವೂ ಪ್ರಥಮ ಪುರುಷವೂ ಸೇರಿ ಕರ್ತೃಗಳಾಗಿರುವಲ್ಲಿ ಉತ್ತಮ ಪುರುಷಾಂತವಾಗಿಯೂ ; ಉತ್ತಮ ಮಧ್ಯಮ ಪುರುಷಗಳಾಗಲಿ, ಇವುಗಳೊಡನೆ ಪ್ರಥಮ ಪುರುಷ ಶಬ್ದಗಳು ಸೇರಿಯೇ ಆಗಲಿ, ಕರ್ತೃಗಳಾದಾಗ ಉತ್ತಮ ಪುರುಷಾಂತವಾಗಿಯೂ ಇರುವುದು.

ಉದಾ : ಅಣ್ಣನುಂ ನೀನುಂ ಬಂದಿರ್ ; ನೀನು ಮಾತನುಂ ಮಾಳ್ಪಿರ್ ;
ಆನುಮರಸನುಂ ಪೋಪೆವು ; ಈತನುಮಾನುಮಿರ್ದೆವು ;
ನೀನುಮಾನುಂ ಕಾಣ್ಬೆವು ; ಆನುಂ ನೀನುಮಣ್ಣನುಂ
ಪೋಗುವಂ.

(4) ರೂಪಪಲ್ಲಟ—

(i) ಕ್ರಿಯಾಪದದ ಒಂದು ರೂಪಕ್ಕೆ ಪ್ರತಿಯಾಗಿ ಮತ್ತೊಂದು ರೂಪವು ಕೆಲವು ವೇಳೆ ಬರುವುದುಂಟು. ಕಾಲಸಾಮೀಪ್ಯವು ತೋರುವಾಗ ಭವಿಷ್ಯದ್ರೂಪಕ್ಕೆ ಪ್ರತಿಯಾಗಿ ವರ್ತಮಾನ ರೂಪವು ಬರುವುದು.

ಉದಾ : ಬನದೊಳಗೆ ಪೋಗಿ ಪೊಸ ಪೂವಿನ ಗೊಂಚಲನಕ್ಕ ನಿನಗೆ
ತಂದಪ್ಪೆಂ ;
ಆನೀ ಬವರಮಂ ತೀರ್ಚಿ ನಿಮ್ಮ ಬೆನ್ನನೆ ಬಂದಪೆಂ.

(ii) ವರ್ತಮಾನರೂಪಕ್ಕೆ ಭವಿಷ್ಯದ್ರೂಪವು ಬರುವುದು.

ಉದಾ : ಆನಜೀವೆಂ ಪೃಥೆಯಜೀವಳ್
ದಾನವರಿಪುವಜೀವನರ್ಕನಜೀವಂ ದಿವ್ಯ |
ಜ್ಞಾನಿ ಸಹದೇವನಜೀವಂ
ನೀನಾರ್ಗೆಂದಾರುಮಜೀಯುರಂಗಾಧಿಪತೀ ||

(iii) ತ್ವರೆ, ನಿಶ್ಚಯ ಇವು ತೋರುವಲ್ಲಿ ವರ್ತಮಾನರೂಪಕ್ಕೆ ಭೂತರೂಪವು ಬರುವುದು.

ಉದಾ : ಇದೊ ಇದೊ ಬಂದುದು ಬಂದುದು.

## ಅವ್ಯಯಪ್ರಯೋಗ

ಅಮ್ ಎಂಬ ಅವ್ಯಯವು ಗೆ (ಚತುರ್ಥೀ ವಿಭಕ್ತಿ), ಒಳ್ (ಸಪ್ತಮೀವಿಭಕ್ತಿ), ದೊಡೆ, ವೊಡೆ ಇವುಗಳಿಂದ ಕೂಡಿದ ಪದಗಳ ಮೇಲೆ ಮಾತ್ರ ಬರುವುದು. ಉಮ್ ಎಂಬ ಅವ್ಯಯವು ಸಂಬೋಧನೆ, ಷಷ್ಠೀ, ತೃತೀಯೆಯ ಇಂ, ಎ, ಪಂಚಮಿಯ ಅತ್ತಣಿಂ ಇವುಗಳು ಹೊರತು ಮಿಕ್ಕ ಎಲ್ಲಾ ವಿಭಕ್ತಿ ಪ್ರತ್ಯಯಗಳ ಮೇಲೆಯೂ ಬರುವುದು. ಆದರೆ ದ್ವಿತೀಯೆಯಲ್ಲಿ ಪ್ರಕೃತಿಪ್ರತ್ಯಯಗಳ ನಡುವೆ ಸೇರುವುದು.

ಉದಾ : ಅಮ್ : ಮದನಂಗಂ ಮಾನಿನಿ ದಶವದನಂಗಂ ರೂಪಭೇದ
ಮೇನಾದಪುದೇ ; ಪೂವಿನೊಳಂ ಪೊರ್ಕುಳಿ ನನು
ಗೇವುದೋ ; ಎನಿತೆನಿತಂ ಭುಂಜಿಸಿದೊಡಮನಿತ

ಸಿತಂ ಮಣಿಯುಲಜ್ಜೆಯುದಣಿಯುರಮುಱಿಗುಂ ;
ದೇವರ್ ಕಾವೊಡಮೇನೊ.

ಉದಾ : ತುಂಬಿಯುಂ ಕೋಗಿಲೆಯುಂ ಮೆಯ್ಗರೆದುವು ; ಒಂದೆಡೆಯೊಳ್ ಕಟ್ಟುವುದೆ ಪುಲಿಯುಮಂ ಕವಿಲೆಯುಮಂ ; ಕಾಲಿಂದೆಯುಂ ಕೈಯಿಂದೆಯುಂ ಘಟ್ಟಿಸಿದಂ ; ವಂಚಿಸುವುದವಂಗೆಯುಂ ನಿನಗೆಯುಂ ಸಹಜಂ ; ಜಾದಿಯತ್ತಣಿಂದೆಯುಂ ಕೇದಗೆಯತ್ತಣಿಂದೆಯುಂ ಕಂಪು ಬಂದುದು ; ಅಲ್ಲಿಯುಮಿಲ್ಲಿಯುಮೆಲ್ಲಿಯುಂ ನರಂ ; ಒಡನಾಡಿಯುಮೊಡನೋದಿಯುಮೊಡವಳೆದುಂ ; ಕಾಯುಲುಮಿಾಯುಲುಂ ನೆಱೆವ.

ದ್ವಿರುಕ್ತಿ

(1) ದೂರ, ಸಾಮಿಾಪ್ಯ, ಸಂಭ್ರಮ, ಆಧಿಕ್ಯ, ಆವೃತ್ತಿ, ವೀಪ್ಸೆ, ಬಾಧೆ ಇವು ಮೊದಲಾದ ಅರ್ಥಗಳು ತೋರುವಲ್ಲಿ ಒಂದೇ ಪದವನ್ನು ಅನೇಕಾವೃತ್ತಿ ಪ್ರಯೋಗಿಸುವರು.

ಉದಾ : ದೂರ : ಆ ತೋರ್ಪುದಾ ತೋರ್ಪುದು ಬಾನೊಳ್ ಧ್ವಜಪಟಂ.
ಸಾಮಿಾಪ್ಯ : ಇದೆ ಇದೆ, ಸಾರ್ಕೆ ಸಾರ್ಕೆ.
ಸಂಭ್ರಮ : ಕುಡು ಕುಡು, ಒಪ್ಪಿಸೊಪ್ಪಿಸು.
ಆಧಿಕ್ಯ : ಲೇಸು ಲೇಸು.
ಆವೃತ್ತಿ : ಗಿಳಿಯೊಡನೋದಿಯೋದಿ ನುಡಿಗಲ್ತು, ಮುದಾಲಸ ರಾಜಹಂಸಮುಂಡಳಿಯೊಡನಾಡಿಯಾಡಿ ನಡೆಗಲ್ತು.
ವೀಪ್ಸೆ : ಬದ್ದವಣಂ ಬಾಜಿಸಿದುವು ವೀಧಿವೀಧಿಯೊಳ್, ಕೇರಿಕೇರಿಯೊಳ್ ಮನೆಮನೆಯೊಳ್.
ಬಾಧೆ : ಕಲ್ ಕಲ್, ಪುಲಿ ಪುಲಿ.

(2) ದ್ವಿರುಕ್ತಿ ಕಾರ್ಯಗಳು—

(i) ದ್ವಿರುಕ್ತಿಯಲ್ಲಿ ಪ್ರಾರಂಭದ ತುದಿ ಮೊದಲ್ ಶಬ್ದಗಳಿಗೆ ತುತ್ತ ಮೊತ್ತ ಎಂದೂ ಕಡೆ ನಡು ಶಬ್ದಗಳಿಗೆ ಕಟ್ಟ ನಟ್ಟ ಎಂದೂ ರೂಪಗಳು ಬರುವುವು.

ಉದಾ : ತುತ್ತತುದಿ, ಮೊತ್ತಮೊದಲ್, ಕಟ್ಟಕಡೆ, ನಟ್ಟನಡು.

(ii) ಗುಣವಾಚಕಗಳಿಗೆ ಸಮಾಸದ ಕಾರ್ಯಗಳೇ ಬರುವುವು.

ಉದಾ ; ಕೋರ ತೋರ ಮುತ್ತುಗಳ್, ಬಿಳಿಯ ಬಿಳಿಯುಂಚೆಗಳ್,

(iii) ವ್ಯಂಜನಾದಿಯಾಗಿ ಗು ಶಬ್ದಾಂತವಾದ ದಿಗ್ವಾಚಕಗಳ ಮತ್ತು ತಣ್ಣನೆ, ಮೆಲ್ಲಗೆ ಮೊದಲಾದ ಕೆಲವು ಅವ್ಯಯಗಳ ಕಡೆಯಕ್ಷರಕ್ಕೆ ವಿಕಲ್ಪವಾಗಿ ಲೋಪ ಬರುವುದು.

ಉದಾ : ಮೇಗು ಮೇಗು–ಮೇಮೇಗು, ಕೆಳಗೆ ಕೆಳಗೆ–ಕೆಳಕೆಳಗೆ,
ತಣ್ಣನೆ ತಣ್ಣನೆ–ತಣ್ಣತಣ್ಣನೆ, ಮೆಲ್ಲಗೆ ಮೆಲ್ಲಗೆ–ಮೆಲ್ಲಮೆಲ್ಲಗೆ.

(iv) ನಾಮಪದಗಳಿಗೂ ಕ್ರಿಯಾಪದಗಳಿಗೂ ದ್ವಿರುಕ್ತಿಯಾದಾಗ ಪೂರ್ವ ಶಬ್ದದ ಪ್ರತ್ಯಯಗಳಿಗೆ ವಿಕಲ್ಪದಿಂದ ಲೋಪವಾಗುವುದು. ಲೋಪವಾದಾಗ ಬಹುಸ್ವರಗಳೂ ಗು ಕಾರಾಂತಗಳೂ ಆದ ಧಾತುಗಳ ಕಡೆಯ ಗು ಕಾರಕ್ಕೂ ಲೋಪವಾಗುವುದು.

ಉದಾ : ಮನೆಗಳ್ ಮನೆಗಳ್–ಮನೆಮನೆಗಳ್,
ಪೋದಂ ಪೋದಂ–ಪೋದಪೋದಂ,
ಬೆಳಗಿದಂ ಬೆಳಗಿದಂ–ಬೆಳಬೆಳಗಿದಂ,
ತೊಳಗುವ ತೊಳಗುವ–ತೊಳತೊಳಗುವ.

(v) ತಮ್ಮ ತಮ್ಮ ಎಂಬುದು ತಂತಮ್ಮ ಎಂದೂ ಆಗುವುದು.

# ಪರಿಶಿಷ್ಟ

ಅವತರಣಿಕೆಯಲ್ಲಿ ಹಳಗನ್ನಡ ಭಾಷೆಯನ್ನು ಕುರಿತು ಹುಟ್ಟಿದ ಗ್ರಂಥಗಳನ್ನೂ ಅವುಗಳ ವೈಲಕ್ಷಣ್ಯವನ್ನೂ ಸಂಗ್ರಹವಾಗಿ ನಿರೂಪಿಸಿದೆಯಷ್ಟೆ. ಅವುಗಳಲ್ಲಿ ವಿಷಯವು ಹೇಗೆ ನಿರೂಪಿತವಾಗಿದೆ ಎಂಬುದನ್ನು ತೋರಿಸುವುದಕ್ಕಾಗಿ ಲೋಪಸಂಧಿಯನ್ನು ಕುರಿತು ಆ ಗ್ರಂಥಗಳಲ್ಲಿ ಹೇಳಿರುವುದನ್ನು ಇಲ್ಲಿ ಉದ್ಧರಿಸಿದೆ. ಇದರಿಂದ ಆ ಗ್ರಂಥಗಳ ಸ್ವರೂಪವನ್ನರಿಯಲು ಸಹಾಯವಾಗಬಹುದು.

## ಶಬ್ದಸ್ಮೃತಿ

ಸೂತ್ರಂ|| ಸ್ವರಮಿರೆ ಪರದೊಳ್ ಪೂರ್ವ್ವ
ಸ್ವರಲೋಪಂ ಕೃತವಿಭಕ್ತಿಗಕ್ಕುಂ ಪ್ರಕೃತಿ |
ಸ್ವರದೊಳುದೇದಂತಕ್ಕಾ
ಚರಿಸುವರವಿನಷ್ಟನಾಮಭಾಗಸ್ಥಿತಿಯೊಳ್ ||೮||

ಪ್ರಯೋಗಂ ||

ಪೂರ್ವಾರ್ಧಕ್ಕೆ—

ಎನ್ನಯ್ಯಂಗಕ್ಕುಮೆನ್ನಂ ನಡಪಿದತಿರಥಂಗಕ್ಕುಮೆನ್ನಾನೆಗಕ್ಕುಂ
ಮುನ್ನಾವೊಂ ಗಂಡನಿಂತಣ್ಮಿದನಿನಿತು ಭರಂಗೆಯ್ದು ನಿಂತೊಳ್ಪಿತೆಚ್ಚಂ |
ತನ್ನೊಂದಾಯಕ್ಕೆ ಮಕ್ಕಳ್ಗಿನಿತು ಮುನಿದನೆಂದೆಲ್ಲಮಂ ಮೆಚ್ಚಿಸುತ್ತುಂ
ತನ್ನಂ ಪಾಯ್ವಂಬನಂಬಿಂ ಕಡಿದನೊಡನೆ ಮೂಕ್ಕೊಂಡು ಗಾಂಡೀವಧನ್ವಂ ||

ಅಪರಾರ್ಧದೊಳುಕಾರಾಂತಕ್ಕೆ—

ಸೊವಡೊಂದೊಯ್ಯನೆ ಬಂದು ಪೊಯ್ಯೆ ಮುನಿಸಿಂದಾರಯ್ದು ಕೆಂಪುಣ್ಮೆ ಪೊ
ಣ್ಮುವಿನಂ ಬೆಚ್ಚನೆ ಬಿಟ್ಟ ದಿಟ್ಟಿಗಳ್ಳುಯ್ತುಂದೋವದಾವೇಗದಿಂ |
ಕಿವಿಯುಂ ನಿಚ್ಚಳಮಪ್ಪಿನಂ ತೆಱೆದು ನಿಂದೋರೊಂದಱೊಳ್ ತಾಗಿ ಪೋ
ರ್ವ್ವುವು ಕಾಡಾನೆಗಳೊರ್ಮ್ಮೆಗೊರ್ಮ್ಮೆ ಶಬರರ್ ಜೀಯಯ್ಯಭಾಪ್ಪೆಂಬಿನಂ ||

ಏಕಾರಾಂತಕ್ಕೆ—

ಪೊಗಟಲಾದುವು ನಾಲಗುಳ್ಳರ ಬಾಯ್ಗಳೀತನ ಚಾಗಮುಂ
ಪೊಗಟದಿರ್ಪ್ಪುವೆ ಮೆಚ್ಚದಾಂತ ಚತುರ್ಬ್ಬಲಂಗಳ ಮೆಯ್ಗಳೊಳ್ |
ಬಗಿದಸುಂಗೊಳೆ ಸುಯ್ದು ಕೆತ್ತುವ ಪುಣ್ಣ ಬಾಯ್ಗಳೆ ಬೀರಮುಂ
ಪೊಗಟ್ಟೆ ಬಾಯ್ಗಳೆನಿಪ್ಪುವಣ್ಮಿನ ಪೆಂಪು ಬೀರರ ಬೀರನಾ ||

ಅವಿನಷ್ಟನಾಮಭಾಗಕ್ಕೆ—

ಪಟುವೇಕವಾಕ್ಯನಮಳಂ
ದಿಟಕ್ಕೆ ಕುಡಲಾರ್ಪನೆನಿಸದವನೀತಳದೊಳ್ |
ಅಟಮಟಗಂಗಾಳುವಿವಂ
ಕುಟಿಲಂ ಲಂಪಟನೆನಿಪ್ಪವಂ ಮಾನಸನೇ ||

**ಕರ್ಣಾಟಕ ಭಾಷಾಭೂಷಣಂ**

ಸೂ || ಸ್ವರೇ ಸ್ವರಸ್ಯ ಲೋಪಃ || ೧೯ ||

ವೃ|| ಸ್ವರೇ ಪರತ್ರಾನವಸ್ಥಿತೇ ಪೂರ್ವಸ್ವರಸ್ಯ ಲೋಪೋ ಭವತಿ ||

ಉ|| ಎನ್ನರಸಂ, ತನ್ನಾಳಿಂ, ಮುನ್ನಿಱಿವಂ, ಕೂರ್ತಿನಂ, ಬಿಟ್ಟುಱಿವಂ, ಕೆಟ್ಟೊಳ್ವಂ, ತಳ್ತಿಸೆವಂ, ಪದೆದ್ದೈದುಗೊಳ್ವಂ, ಬಿಟ್ಟೊಳ್ಪಂ.

ಸೂ|| ಪ್ರಕೃತೇರುದೇತೋಃ || ೨೦ ||

ವೃ|| ಸಿದ್ಧೇ ಸತ್ಯಾರಭ್ಯಮಾಣೋ ವಿಧಿರ್ನಿಯಮಾಯೇತಿ ನಿಯಮಾರ್ಥೋಽಯಂ ಯೋಗಃ | ಪ್ರಕೃತೇಃ ಸಂಬಂಧಿನಃ ಸ್ವರಸ್ಯ ಲೋಪೋ ಯದಿ ಸ್ಯಾತ್ ತದುಕಾರೈಕಾರಯೋರೇವ | ನಾನ್ಯಸ್ಯ | ಸ್ವರಾಧಿಕಾರಾದತ್ರ ಸ್ವರಲೋಪೋ ನಿಯಮ್ಯತೇ | ನ ಪುನಃ ಪ್ರಕೃತಿಃ ||

ಉ|| ಮಾತೆಲ್ಲಂ, ಲೇಸೆಲ್ಲಂ, ನಾಲಗುಳ್ಳನೆ ಬಾಟ್ಬಂ, ಸೇಸಿಕ್ಕಿದಂ,

ಸೂ|| ನ ನಾಮಭಾಗಪ್ರಧ್ವಂಸೇ || ೨೧ ||

ವೃ|| ಯಸ್ಮಿನ್ ನಾಮಭಾಗಪ್ರಧ್ವಂಸಃ ಸಂಭವತಿ ತಸ್ಮಿನ್ ಉಕಾರಾಸ್ಯೈಕಾರಸ್ಯ ಚ ಲೋಪೋ ನ ಭವತಿ ||

ಉ|| ಪಟುವೀತಂ, ಗಾಳುವಿವಳ್, ಮಡುವಿದು, ಆನೆಯೊಡ್ಡು, ಕುದುರೆಯೆಕ್ಕತುಳಂ, ಪಡೆಯಿದು.

ಲೋಪಃ ಕಃ ?

ಸೂ|| ಭರದಿಂ ವರ್ಣವಿನಾಶಾಂ
ತರಮಾಗಿಯುಮೀಕ್ಷಿಸಲ್ಕೆ ಕೇಳಲ್ಕಿರದು |
ಚ್ಚರಿಸಲ್ಕೆ ಬಾರದಿರ್ದೊಡೆ
ನಿರತಂ ತಾಂ ಲೋಪಮೆಂಬ ಪೆಸರಂ ಪಡೆಗುಂ ||

**ಶಬ್ದಮಣಿದರ್ಪಣಂ**

ಸೂತ್ರಂ || ಸ್ವರಮಿಂದಿರೊಳಿರೆ ವಿಭಕ್ತಿ
ಸ್ವರಕಂ ಪ್ರಕೃತಿಸ್ವರಕ್ಕಮುಕ್ಕುಂ ಲೋಪಂ||

ವರಸಂಸ್ಕೃತ ಕರ್ಣಾಟಕ
ಮೆರಡಱೊಳಂ ನಾಮರೂಢಿಯಱಿಯದ ಪಕ್ಷಂ || ೫೨ ||

ವೃತ್ತಿ|| ಸ್ವರಂ ಪರಮಾಗೆ, ಸಂಸ್ಕೃತದ ಕನ್ನಡದ ವಿಭಕ್ತಿಸ್ವರಕ್ಕಂ ಪ್ರಕೃತಿಯ ಸಹಜ ಸ್ವರಕ್ಕಂ, ನಾಮಪ್ರಸಿದ್ಧಿ ಕೆಡದ ಪಕ್ಷಂ, ಲೋಪಮಕ್ಕುಂ.

ಪ್ರಯೋಗಂ ||

ಸಂಸ್ಕತಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—

ಕ್ರಮದೆ + ಆಯ್ತು = ಕ್ರಮದಾಯ್ತು ; ಇಂದ್ರಂಗೆ + ಐರಾವತಂ = ಇಂದ್ರಂಗೈರಾವತಂ ; ಗಿರಿಯತ್ತಣಿಂದೆ + ಇೞಿದಂ = ಗಿರಿಯತ್ತಣಿಂದಿೞಿದಂ ; ಗೃಹದಲ್ಲಿ + ಇರ್ದಂ = ಗೃಹದಲ್ಲಿರ್ದಂ ; ಈಶ್ವರನ + ಒಲವು = ಈಶ್ವರನೊಲವು.

ವಿಭಕ್ತ್ಯಾದಿ ಕೂಡುವೆಡೆ ಸಂಸ್ಕೃತ ಪ್ರಕೃತಿಸ್ವರಲೋಪಕ್ಕೆ—

ಬುಧ+ಅರ್ = ಬುಧರ್ ; ಉದ್ಧತ + ಅರ್ = ಉದ್ಧತರ್ ; ದೇವ + ಎಂಬರ್ = ದೇವೆಂಬರ್ ; ರಾಗ + ಇಸು ರಾಗಿಸು ; ಭಂಗ + ಇಸು = ಭಂಗಿಸು ; ಭಾವ + ಇಸು = ಭಾವಿಸು. ಇಂತುಬಿದುವ ನಱಿವುದು.

ಕರ್ಣಾಟಕಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—

ನೆಲದಿಂದೆ+ಉಣ್ಬಂ = ನೆಲದಿಂದುಣ್ಬಂ ; ಲೇಸಿಂಗೆ + ಒಡೆಯಂ = ಲೇಸಿಂಗೊಡೆಯಂ ; ಮರದತ್ತಣಿಂದೆ + ಇೞಿದಂ = ಮರದತ್ತಣಿಂದಿೞಿದಂ ; ಚಲದ + ಆಣ್ಮಂ = ಚಲದಾಣ್ಮಂ ; ಪೊಲದಲ್ಲಿ+ಇರ್ದಂ = ಪೊಲದಲ್ಲಿರ್ದಂ ; ನೆಲದೆ+ಎೞ್ದಂದಂ = ನೆಲದೆೞ್ದಂದಂ.

ಆಖ್ಯಾತ ವಿಭಕ್ತಿಸ್ವರಲೋಪಕ್ಕೆ—

ಮಾಡಿದೆವು+ಒಳ್ಪಂ = ಮಾಡಿದೆವೊಳ್ಪಂ

ಕ್ರಿಯಾವಿಭಕ್ತಿಯಾದೇಶಮಾದ ಸ್ವರದ ಲೋಪಕ್ಕೆ—

ಕೂಡಿ+ಇರ್ದಂ = ಕೂಡಿರ್ದಂ ; ಪಸಿದು+ಉಂಡಂ = ಪಸಿದುಂಡಂ.

ಕರ್ಣಾಟಕ ಪ್ರಕೃತಿ ಸ್ವರಲೋಪಕ್ಕೆ—

(1) ಆಕಾರಕ್ಕೆ—ಅರಸ+ಆಳ್ = ಅರಸಾಳ್ ; ಅಚ್ಚ+ಆನೆ = ಅಚ್ಚಾನೆ ; ಜೀಯ+ಎಂಬಂ = ಜೀಯೆಂಬಂ ; ಬಡಬಡ + ಆದಂ=ಬಡಬಡಾದಂ ; ಸಾವಂತ + ಓಲಗಂ = ಸಾವಂತೋಲಗಂ. (2) ಇಕಾರಕ್ಕೆ— ದಾೞಿಟ್ಟಂ, ಹಂದಿಟ್ಟಂ, ಸವಡಿಟ್ಟಂ (3) ಉಕಾರಕ್ಕೆ—ಸುತ್ತೋಲೆ,

ಪತ್ತೆಂಟು, ಲೇಸೆಲ್ಲಂ, ಸೋವಡೊಂದು. (4) ಎಕಾರಕ್ಕೆ—ಸೇಸಿಕ್ಕಿದಂ, ಮುಡಿಗಿಕ್ಕಿದಂ, ಮತ್ತೆಲ್ಲಂ, ಮುನ್ನಿಱಿವಂ.

ನಾಮಂ ಕಿಡುವೊಡೆ ಸಂಸ್ಕೃತ ಕರ್ಣಾಟಕದ ಪ್ರಕೃತಿಸ್ವರಕ್ಕೆ ಲೋಪವಿಲ್ಲ—

ಪಟು+ಏಕವಾಕ್ಯಂ = ಪಟುವೇಕವಾಕ್ಯಂ; ವಿಧು+ಇದು = ವಿಧುವಿದು; ಮಡು+ಇದು=ಮಡುವಿದು; ಕುಡು+ಇಲ್ಲ = ಕುಡುವಿಲ್ಲ.

## ಶಬ್ದಾನುಶಾಸನಂ

ಸೂತ್ರಂ || ಲುಬನಾಮಹಾನೌ || ೩೬ ||

ವೃತ್ತಿ|| ಲೋಪನಂ ಲುಪ್. ಸ್ವರೇ ಪರೇ ಸ್ವರಸ್ಯ ಲುಬ್ಭವತಿ, ನಚೇಲ್ಲೋಪೇ ನಾಮಹಾನಿಃ.

ಪ್ರಯೋಗ|| ಎನ್ನ+ಅರಸಂ=ಎನ್ನರಸಂ. ಏವಂ ತನ್ನಾಳ್, ಗುಣದಿರವು, ಸುಖದೊಡೆಯಂ, ಮನೆಯಲ್ಲಿರ್ದ, ಕಂಡೆವಿದಂ, ಕೂಡುಂಡಂ, ಕೂಡಿದಳ್, ಕ್ರಮದಾಯ್ತು, ಲೇಸಿಂಗೊಡೆಯಂ. ಅನಾಮಹಾನಾವಿತಿ ಕಿಂ? ಸತಿಯಿವಳ್, ಪತಿಯೀತಂ. ನಾಮಹಾನ್ಯಹಾನೀ ಚ ಶಿಷ್ಟಪ್ರಯೋಗಾದವಗನ್ತವ್ಯೇ.

ವ್ಯಾಖ್ಯಾ|| ಲುಪ್ ಇತಿ ಲುಪಧಾತೋರ್ಭಾವೇ ಕ್ವಿಪಿ ಸಿದ್ಧಂ ರೂಪಮಿತ್ಯಾಹ—ಲೋಪನಂ ಲುಪ್ ಇತಿ. ಅದರ್ಶನಮಿತಿ ಯಾವತ್. ನಾಮಪ್ರಸಿದ್ಧಿಃ ಅರ್ಥಸ್ಫುರಣಂ. ನಾಮ್ನೋ ಹಾನಿಃ ನಾಮಹಾನಿಃ, ಪ್ರತೀತಿವೈಕಲ್ಯಂ. ಅನಾಮಹಾನಿರಿತಿ ಪ್ರತೀತಿ ಸಾಕಲ್ಯಮೇವೋಚ್ಯತೇ. ಯತೋಽತ್ರ ನಞ್ ಉತ್ತರಪದಾರ್ಥ ಪ್ರತಿದ್ವಂದ್ವಿವಚನಃ, ನ ತದನ್ಯಮಾತ್ರವಚನಃ ತದಭಾವಮಾತ್ರವಚನೋ ವಾ, ಯಥಾ ಅಸುರಾಃ ಅವಿದ್ಯಾ ಇತ್ಯಾದೌ. ತಸ್ಯಾಮಿತಿ ವಿಷಯಸಪ್ತಮೀ; ಅನಾಮಹಾನಿವಿಷಯೇ ಲೋಪ ಏವೇತಿ. ನಞರ್ಥಮುಲ್ಲಿಖ್ಯ ತಾತ್ಪರ್ಯಮಾಹ — ನಚೇತ್ ಇತ್ಯಾದಿ· ಎನ್ನ+ಅರಸಂ ಇತಿ ಅಸಂಹಿತಾಯಾಂ ಯಾದೃಗರ್ಥಃ ಪ್ರತೀಯತೇ, ಸಂಹಿತಾಯಾಂ ಪೂರ್ವಸ್ವರಸ್ಯ ಲೋಪೇ ಎನ್ನರಸಂ ಇತ್ಯತ್ರಾಪಿ ತತ್ಪ್ರತೀತಿಃ ಹೀಯತ ಇತಿ.

ಕ್ರಮದೆ ಇತಿ. ಕ್ರಮಶಬ್ದಾತ್ ಕರಣೇ ಇಮಿ, ಎಶ್ಚಾತೋ ನಪಿ (273) ಇತಿ ಇಮಃ ಏಕಾದೇಶೇ, ದಗಿಮಾದೌ ನಪಿ (೨೬೧) ಇತಿ ದಕಿ ಸತಿ, ಸಿದ್ಧಂ ರೂಪಂ. ಪ್ರತ್ಯುದಾಹರತಿ — ಸತಿಯಿವಳ್, ಪತಿಯೀತಂ ಇತಿ. ಅತ್ರ ಲುಪಂ ವಿಧಾಯ ಸತಿವಳ್, ಪತೀತಂ ಇತ್ಯುಕ್ತೇ ನಾಮ ಹೀಯತ ಇತಿ ನ ಲುಬ್ಭವತಿ; ಕಿಂತು ಯಗೇವೇತಿ.

ನನು ತದೇವ ನ ವಿದ್ಮೋ ವಯಂ ಲೋಪೇ ಸತಿ ಯತ್ರ ಇದಂ ನಾಮ ಹೀಯತೇ ಯತ್ರ ವಾ ಇದಂ ನ ಹೀಯತ ಇತ್ಯನುಯುಂಜಾನಾನ್ ಪ್ರತ್ಯಾಹ—ನಾಮಹಾನಿ ಇತ್ಯಾದಿ; ಪ್ರಯೋಗಶರಣಾ ವೈಯಾಕರಣಾ ಇತಿ.

ನನು ಅನಾಮಹಾನಿವಿಷಯೇ ಸ್ವರೇ ಪರೇ ಸ್ವರಸ್ಯ ಲುಬೇವ ಭವತಿ. ನಾಮಹಾನಿವಿಷಯೇ ತು ಔತ್ಸರ್ಗಿಕೋ ಯಕ್ ಅಪವಾದಿಕೋ ವಗಾದಿಃ ವಕ್ಷ್ಯಮಾಣ ಇತಿ ಪರ್ಯವಸಿತಂ. ತಥಾ ಚ ಲುಬನಾಮಹಾನೌ (36) ಇತ್ಯಯಮೇವ ಯೋಗಃ ಪ್ರಥಮತೋ ವಕ್ತವ್ಯಃ, ಸಾಮಾನ್ಯವಿಷಯತ್ವಾತ್. ಯಕ್ ಸ್ವರೇ ಸ್ವರಸ್ಯ (35) ಇತ್ಯಯಂ ತು ಪಶ್ಚಾದೇವ ವಕ್ತವ್ಯಃ, ವಿಶೇಷವಿಷಯತ್ವಾತ್. ಉಕ್ತಂ ಚ ತಥಾ ದರ್ಪಣಕಾರೇಣ—

ಸ್ವರಮಿದಿರೊಳಿರೆ ವಿಭಕ್ತಿ
ಸ್ವರಕಂ ಪ್ರಕೃತಿಸ್ವರಕ್ಕಮುಕ್ಕುಂ ಲೋಪಂ |
ವರಸಂಸ್ಕೃತ ಕರ್ಣಾಟಕ
ಮೆರಡಱೊಳಂ ನಾಮರೂಢಿಯುೞಿಯದ ಪಕ್ಷಂ || ಇತಿ ;

ತಥಾ—

ಆತ್ವದಿನಿವರ್ಣದಿಂ ಮು
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ |
ಯತ್ವಂ. ಇತಿ ;

ಇತಿ ಚೇನ್ನ. ಯಕೋಽಪಿ ಸಾಮಾನ್ಯವಿಷಯತ್ವಾತ್. ಸ್ವರೇ ಪರೇ ಸ್ವರಸ್ಯ ಯಗ್ಭವತಿ, ಅನಾಮಹಾನಿವಿಷಯೇ ಲುಬ್ಭವತೀತಿ. ಸೂಚಿತಂ ಚ ಏವಂ ದರ್ಪಣಕೃತಾ — ನಾಮರೂಢಿಯುೞಿಯದ ಪಕ್ಷಂ ಇತಿ. ಕಿಂಚ ಸಂಧಿಕಾರ್ಯವಿಷಯೇ ಪ್ರಥಮಮೇವ ಲೋಪಪ್ರದರ್ಶನಂ ಅಮಂಗಲಮಿತಿ ಚ ತನ್ನ ವಕ್ತವ್ಯಂ ಪ್ರಥಮತಃ. ಯಗಾಗಮಸ್ತು ಭಾವರೂಪತ್ವಾತ್ ತತ್ರಾಪಿ—ಮಿತ್ರವದಾಗಮಃ—ಇತಿ ಪ್ರಸಿದ್ಧೇಶ್ಚ ಪ್ರಥಮತೋ ವಕ್ತವ್ಯ ಇತಿ.

# ೧. ಪೀಠಿಕಾಪ್ರಕರಣ

ಭಾಷೆಗೆ ವ್ಯಾಕರಣದಂತೆ ಛಂದಸ್ಸೂ ಸಾಧಕವಾಗಿರುವುದು. ಆದರೆ ವ್ಯಾಕರಣವು ಗದ್ಯಪದ್ಯಗಳೆರಡಕ್ಕೂ, ಛಂದಸ್ಸು ಪದ್ಯಮಾತ್ರಕ್ಕೂ ಸಂಬಂಧಿಸುವುದು. ವಿಸ್ತೃತವಾದ ವಿಷಯವನ್ನು ಸಂಗ್ರಹಿಸಿ ಹೇಳಲೂ, ರಸವತ್ತಾದ ಅಂಶವನ್ನು ಮನೋಹರವಾಗಿ ತಿಳಿಸಲೂ, ಸುಲಭವಾಗಿ ನೆನಪಿನಲ್ಲಿಟ್ಟುಕೊಳ್ಳಲೂ ಪದ್ಯವು ಬಹಳ ಅನುಕೂಲವು. ಪದ್ಯಗಳ ನಿಯಮವನ್ನು ಛಂದಶ್ಶಾಸ್ತ್ರವು ತಿಳಿಸುವುದು.

ಪದ್ಯವು ಪಾದದಿಂದ ಕೂಡಿರುವುದು. ಪದ್ಯದ ಪಾದವು ಗಣ, ಮತ್ತು ಪ್ರಾಸಗಳ ನಿಯಮವುಳ್ಳ ಶಬ್ದಸಂಘಟನೆಯಾಗಿರುವುದು.

ಕನ್ನಡ ಸಾಹಿತ್ಯದಲ್ಲಿ ಸಂಸ್ಕೃತದಿಂದ ತೆಗೆದುಕೊಂಡಿರುವ ಛಂದಸ್ಸುಗಳೂ, ಅಚ್ಚ ಗನ್ನಡ ಛಂದಸ್ಸುಗಳೂ ಉಂಟು.

## 1. ಗಣ

ಗಣವೆಂದರೆ ಕೆಲವು ನಿಯಮಗಳಿಗನುಸಾರವಾಗಿ ವಿಂಗಡಿಸಿದ ಅಕ್ಷರಗಳ ಗುಂಪು. ಅದು ವರ್ಣಗಣ, ಮಾತ್ರಾಗಣವೆಂದು ಎರಡು ವಿಧವು. ವರ್ಣಗಣ ನಿಯಮಕ್ಕೊಳ ಪಟ್ಟ ಪದ್ಯವು ವರ್ಣವೃತ್ತವು. ಮಾತ್ರಾಗಣನಿಯಮಕ್ಕೊಳಗಾದ ಪದ್ಯವು ಮಾತ್ರಾ ವೃತ್ತವು.

ವರ್ಣಗಳನ್ನು ಲಘು ಗುರುಗಳಿಂದ ತಿಳಿಯಬೇಕು.

(i) ಹ್ರಸ್ವಸ್ವರಗಳಿಗೆ ಲಘುವೆಂತಲೂ; ದೀರ್ಘಸ್ವರ, ಪ್ಲುತಸ್ವರ, ಅನುಸ್ವಾರ ವಿಸರ್ಗಗಳಿಂದ ಕೂಡಿದ ಅಕ್ಷರ, ಸಂಯುಕ್ತಾಕ್ಷರಕ್ಕೆ ಹಿಂದಿರುವ ಅಕ್ಷರ—ಇವುಗಳಿಗೆ ಗುರುವೆಂತಲೂ ಸಂಜ್ಞೆ.

ಉದಾ : ಲಘುಗೆ: ಒಲವು ಮಿಗೆ ನೃಪತಿ ಸಲಹುಗೆ.

ಗುರುಗೆ: ಓ, ಸಾರ್ವಭೌಮಾ ! ನೀನ್ ನಂಬೈ, ಆಃ ದೇವಂ ರಕ್ಷಿಪ್ಪಂ.

(ii) ವ್ಯಾಕರಣಶಾಸ್ತ್ರದಲ್ಲಿ ಹೇಳಲ್ಪಟ್ಟಿರುವ ಶೈಥಿಲ್ಯ ಎಂದರೆ ಶಿಥಿಲ ವರ್ಣ ಸಂಯೋಗದ ಹಿಂದಣ ಸ್ವರವು ಲಘುವೆನಿಸುವುದು.

ಉದಾ : ಕುಳಿರ್ಗಾಳಿ, ಅಲರ್ದ, ಬೆಮರ್ವ, ನೆಗಟ್ತೆ, ಎರ್ದೆ.

(iii) ಒಂದು ಅಕ್ಷರವು ಗುರುವಾಗಲು ಹಲವು ಕಾರಣಗಳಿದ್ದರೂ ಆ ಅಕ್ಷರ ವನ್ನು ಒಂದೇ ಗುರುವೆಂದು ಪರಿಗಣಿಸಬೇಕು.

ಉದಾ: ಶಾನ್ತಿ, ಚನ್ದ್ರ, ಸಂಕ್ಷೋಭ, ಪುನಃಪ್ರಾರ್ಥನೆ.

(iv) ಪಾದಾಂತದ ಲಘುವಿಕಲ್ಪದಿಂದ ಗುರುವೆನಿಸುವುದು ಎಂಬ ನಿಯಮವು ಷಟ್ಪದಿ ಮುಂತಾದ ಕೆಲವು ಮಾತ್ರಾವೃತ್ತಗಳ ಅರ್ಧಾಂತದಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ.

(v) ಲಘುಗುರುವರ್ಣಗಳನ್ನ ಮೂರುಮೂರಾಗಿ ವಿಂಗಡಿಸಿದರೆ ಎಂಟುವರ್ಣಗಳಾಗುವುವು.

ಗುರುಲಘು ಮೂರಿರೆ ಮ-ನ-ಗಣ
ಗುರುಲಘು ಮೊದಲಲಿ ಬರಲು ಭ-ಯ-ಗಣಮಕ್ಕುಂ||
ಗುರುಲಘು ನಡುವಿರೆ ಜ-ರ-ಗಣ
ಗುರುಲಘು ಕಡೆಯಲ್ಲಿ ಬರಲು ಸ-ತ-ಗಣಮಕ್ಕು||

ಇಲ್ಲಿ ಲಘುವಿಗೆ ⏑ ಈ ಚಿಹ್ನೆಯನ್ನೂ ಗುರುವಿಗೆ — ಈ ಚಿಹ್ನೆಯನ್ನೂ ಇಟ್ಟುಕೊಂಡಿದೆ.

| ಲಘುಗುರುವಿನ್ಯಾಸ | ಗಣ | ಉದಾಹರಣೆ |
|---|---|---|
| — — — | ಮ ಗ ಣ | ಓದಿಂದಂ ಆನಂದಂ |
| ⏑ ⏑ ⏑ | ನ ಗ ಣ | ಗುಣಮೆ ಪಿರಿದು |
| — ⏑ ⏑ | ಭ ಗ ಣ | ಬೀಣೆಯ ಮೆಲ್ಲುಲಿ |
| ⏑ — — | ಯ ಗ ಣ | ಕುಮಾರಂ ಬಟಲ್ದಂ |
| ⏑ — ⏑ | ಜ ಗ ಣ | ಸುರಾಜ್ಯ ಮದಿರ್ಕೆ |
| — ⏑ — | ರ ಗ ಣ | ಭೂಮಿಪಂ ಪಾಲಿಪಂ |
| ⏑ ⏑ — | ಸ ಗ ಣ | ದಿಟಮೋ ಜಯಿಕುಂ |
| — — ⏑ | ತ ಗ ಣ | ಲೋಕೇಶ ನೋಡೆನ್ನ |

"ಯಮಾತಾರಾಜಭಾನಸಲಗಂ" ಎಂಬ ಸೂತ್ರದಲ್ಲಿ, ಕ್ರಮವಾಗಿ ಮೂರು ಮೂರಕ್ಷರಗಳನ್ನು ತೆಗೆದುಕೊಂಡರೆ ಮೊದಲನೆಯಕ್ಷರವು ಗಣದ ಹೆಸರನ್ನು ಸೂಚಿಸುವುದು.

ಮಾತ್ರಾಗಣವನ್ನು ಮಾತ್ರೆ ಯಿಂದ ತಿಳಿಯಬೇಕು. ಒಂದು ಲಘುವಿಗೆ ಒಂದು ಮಾತ್ರೆಯೆಂದೂ, ಒಂದು ಗುರುವಿಗೆ ಎರಡು ಮಾತ್ರೆಗಳೆಂದೂ ಸಂಕೇತವು. ಮಾತ್ರೆಗಳನ್ನು ಮೂರು ನಾಲ್ಕು ಐದಾಗಿ ವಿಂಗಡಿಸುವುದರಿಂದ ಮಾತ್ರಾಗಣವು ಸಾಮಾನ್ಯವಾಗಿ ಮೂರು ವಿಧವು. ಇವುಗಳಲ್ಲಿ—

(i) ಮೂರು ಮಾತ್ರೆಯ ಗಣವು ಮೂರು ವಿಧ.

| ಲಘುಗುರುವಿನ್ಯಾಸ | ಉದಾಹರಣೆ |
|---|---|
| ⏑ ⏑ ⏑ | ನಿನಗೆ ಸೊಗಮೆ |
| — ⏑ | ಕೀರ್ತಿ ನಿಲ್ಕೆ |
| ⏑ — | ಮರಂ ಜಡಂ |

(ii) ನಾಲ್ಕು ಮಾತ್ರೆಯ ಗಣವು ಐದು ವಿಧ.

| | |
|---|---|
| ⏑ ⏑ ⏑ ⏑ | ನರಪತಿ ನಿರುಕಿಸು |
| — ⏑ ⏑ | ನಾಡಿನ ಏಳ್ಗೆಯ |
| ⏑ — ⏑ | ಜನಕ್ಕೆ ವಿಶೇಷ |
| ⏑ ⏑ — | ಧನಮುಂ ಸುಖಮುಂ |
| — — | ಎಂದುಂ ಬೇಟ್ಕುಂ |

(iii) ಐದು ಮಾತ್ರೆಯ ಗಣವು ಎಂಟು ವಿಧ.

| | |
|---|---|
| ⏑ ⏑ ⏑ ⏑ ⏑ | ಜಗದೊಡೆಯ ಕರುಣಿಸುತೆ |
| — ⏑ ⏑ ⏑ | ನೀನೆಮಗೆ ನಿತ್ಯಸುಖ |
| ⏑ — ⏑ ⏑ | ಮೆನಿಪ್ಪುದು ಅದಾವುದೊ |
| ⏑ ⏑ — ⏑ | ಅದನಿತ್ತು ಪೊರೆಯೆನ್ನ |
| ⏑ ⏑ ⏑ — | ನಿನಗೆ ನಾಂ ಮೊರೆಯಿಡು |
| — — ⏑ | ತ್ತಿರ್ದಪ್ಪೆ ವೇಕಾಗ್ರ |
| ⏑ — — | ಮನಸ್ಕ ರ್ಮಹೇಶಾ |
| — ⏑ — | ರಕ್ಷಿಸೈ ರಕ್ಷ್ಯರಂ |

ಒಂದು ಗುರುವಿನ ಎರಡು ಮಾತ್ರೆಗಳನ್ನು ಬೇರೆ ಬೇರೆ ಮಾತ್ರಾಗಣಗಳಿಗೆ ಹಂಚಕೂಡದು. "ಗುಣವೊಳ್ಳಿತು" ಎಂಬಲ್ಲಿ "ವೊ"ವಿನ ಎರಡು ಮಾತ್ರೆಗಳಲ್ಲಿ ಒಂದನ್ನು ಹಿಂದಕ್ಕೂ ಇನ್ನೊಂದನ್ನು ಮುಂದಕ್ಕೂ ಸೇರಿಸಿ ಮೂರು ಮಾತ್ರೆಗಳ ಎರಡು ಗಣಗಳೆಂದು ಗಣಿಸಲಾಗದು. ಹೀಗೆಯೇ "ಚಂದನಂಗಳಂ, ಪಟ್ಟಣಮೇ ನೆಸೆದುದೊ" ಎಂಬಲ್ಲಿ ಅನುಕ್ರಮವಾಗಿ ಚತುರ್ಮಾತ್ರಾಗಣಗಳೆರಡೂ, ಪಂಚ ಮಾತ್ರಾಗಣಗಳೆರಡೂ ಇರುವುವೆಂದು ಭಾವಿಸಲಾಗದು; ಮತ್ತು "ದೇವನಾವಂ" ಎಂಬಲ್ಲಿ "ನಾ"ವಿನ ಎರಡು ಮಾತ್ರೆಗಳಲ್ಲಿ ಒಂದನ್ನು ಹಿಂದಕ್ಕೂ ಮತ್ತೊಂದನ್ನು ಮುಂದಕ್ಕೂ ಸೇರಿಸಿ ಒಂದೊಂದು ಚತುರ್ಮಾತ್ರಾಗಣವೂ ತ್ರಿಮಾತ್ರಾಗಣವೂ ಆಯಿತೆಂದು ತಿಳಿಯಬಾರದು.

ಅಚ್ಚಗನ್ನಡ ಛಂದಸ್ಸಿನಲ್ಲಿ ⏑ — ಈ ಗಣವೂ, ಈ ಗಣದಿಂದ ಆರಂಭ ವಾಗುವ ಗಣಗಳೂ ಅಪೂರ್ವ.

## 2. ಪ್ರಾಸ

ಪದ್ಯದ ಪ್ರತಿಪಾದದಲ್ಲಿಯೂ ಆದಿಯಲ್ಲಿ ಒಂದೆರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು ಪ್ರಾಸದ ಸಾಮಾನ್ಯ ಲಕ್ಷಣವು. ಇದರಲ್ಲಿ ಸಿಂಹ ಮುಂತಾದ ಆರು ಭೇದಗಳಿವೆ.

(i) ಪ್ರತಿಪಾದದ ಒಂದೆರಡನೆಯ ಸ್ವರಗಳ ನಡುವೆ ಒಂದೇ ವಿಧವಾದ ಒಂದು ವ್ಯಂಜನವು ಬಂದು ಅದರ ಹಿಂದಿನ ಸ್ವರವು ಹ್ರಸ್ವವಾಗಿದ್ದರೆ ಸಿಂಹಪ್ರಾಸ. ದೀರ್ಘವಾಗಿದ್ದರೆ ಗಜಪ್ರಾಸ.

ಸಿಂಹ : ಗಿರಿಗಳ್ ಪರಮಾಣುಗಳೆನೆ
ಸರೋಜಭವನೀ ಕರೀನ್ದ್ರಮಂ ಮಾಡಿದನೆಂ ||
ದಿರದಿದರ ಕಾಯಬಲಮಂ
ನಿರೂಪಿಸಲ್ ನಾಗರಾಜನುಂ ನೆಱೆದಪನೇ ||

—ಪಂಪರಾಮಾಯಣ

ಗಜ :

ಮಾಸು ಮುಸುಂಕೆ ತಾಯೊಡಲೊಳೆಂತಿರವರ್ಪುದು ಮೂತ್ರಮಾರ್ಗದೊಳ್
ಹೇಸದೆ ಬರ್ಪುದೆಂತು ಮಲಮೂತ್ರದೊಳಾಱುತೇಱುತುಂ ||
ಕೂಸೆನಿಸಿರ್ಪುದೆಂತುಟದನಾಂ ಮಱೆದಾಗಳೆ ಟಕ್ಕುಜೌವನಂ |
ಸಾಸದಮೆಂದು ನಚ್ಚಿದೆನಲಾ ಮತಿದೋಱಪರಾಜಿತೇಶ್ವರಾ ||

—ಅಪರಾಜಿತೇಶ್ವರಶತಕ

(ii) ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಒಂದು ವ್ಯಂಜನಕ್ಕಾಗಲಿ, ಅನೇಕ ವ್ಯಂಜನಗಳಿಗಾಗಲಿ ಹಿಂದೆ ಅನುಸ್ವಾರವಿರಲು ವೃಷಭಪ್ರಾಸ. ವಿಸರ್ಗವಿರಲು ಅಜಪ್ರಾಸ.

ವೃಷಭ : ಒಂದು ವ್ಯಂಜನಕ್ಕೆ :
ಕಂಸವಧಂಗೆಯ್ದ ಮುರ
ಧ್ವಂಸಿಗೆ ಪೂಜಾರ್ಥವೆಂದು ಮಾರುತ ಕೊಟ್ಟೆಂ ||
ನೀಂ ಸಭೆಯಂ ಕೊಣ್ಡುಯ್ವುದಿ
ದಂ ಸಲಿಸಿದೆನೆಂದು ವಜ್ರ ನುಡಿವುದುಮಾಗಳ್ ||

—ಜಗನ್ನಾಥವಿಜಯ

ಎರಡು ವ್ಯಂಜನಗಳಿಗೆ :
ಸಂಗ್ರಹಣಶೀಲಮನುಜನ
ವಂಗ್ರಹಯಾಳುವೆನಿಸಿರ್ಕುಮಿಾ ಜನತತಿಯೊಳ್ ||

ಅಜ : ಒಂದು ವ್ಯಂಜನಕ್ಕೆ :
ಅಃಪೊರೆವನಿವನೆ ಪರಮುಯ
ಶಃಪಾತ್ರನೆನಲ್ಕೆ ಜನಮುನಿನಿಸಲಸದೆಯುಂ ||
ಅಃಪೇಟಲದೇನಿವನಿಂ
ಸ್ವಃಪದವಾಚ್ಯಂ ಸಮಂತು ಮೆಱೆವೀದೇಶಂ ||

ಎರಡು ವ್ಯಂಜನಗಳಿಗೆ :

ಆಃಪ್ರಥಮನನುಟಿದಿಂತಯ
ಶಃಪ್ರಾರ್ಥನೆಯಿಂದೆ ಗೆಯ್ವುದುಚಿತಮೆ ನಿನಗಂ ||

(iii) ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ವಿಜಾತೀಯ ಸಂಯುಕ್ತ ವ್ಯಂಜನಗಳು ಬಂದು ಅವುಗಳ ಹಿಂದೆ ಅನುಸ್ವಾರ ವಿಸರ್ಗಗಳಿಲ್ಲದಿರಲು ಶರಭಪ್ರಾಸವಾಗುವುದು.

ಶರಭ : ಎರಡು ವ್ಯಂಜನಗಳ ಸಂಯೋಗಗಳ ಸಂಯೋಗಕ್ಕೆ :

ಆಕ್ಷಣದೊಳ್ ಪರಸ್ಪರನಿರೀಕ್ಷಣದಿಂ ಮುಳಿಸುಳಿಸುಣ್ಮೆ ಪೊಣ್ಮೆ ರ
ಕ್ತೇಕ್ಷಣರಾತ್ಮಶಕ್ತಿಗೆ ಶರೀರಬಲಕ್ಕನುರೂಪಮಪ್ಪುದಂ ||
ಲಕ್ಷಣಯುಕ್ತಮಪ್ಪ ಗದೆಯಂ ತಳೆದಿರ್ವರುಮಿರ್ವಲಂ ಬಿಗು
ರ್ತೀಕ್ಷಿಸೆ ಮಿಾಱಿದರ್ ವಿಕಟಶೃಂಗಸಮಗ್ರಕುಲಾಚಲಂಗಳಂ ||

—ಪಂಪರಾಮಾಯಣ

ಮೂರು ವ್ಯಂಜನಗಳ ಸಂಯೋಗಕ್ಕೆ :

ಇನ್ದ್ರಂಬೊಲ್ ವಿಭವಯುತಂ
ಚನ್ದ್ರಂಬೊಲ್ ಕಾಂತಿವಂತನಾದಿತ್ಯಂಬೊಲ್ ||
ಸಾನ್ದ್ರಪರಿಪೂರ್ಣತೇಜನು
ಪೇನ್ದ್ರಂಬೊಲ್ ನೀತಿನಿಪುಣನಾ ನರನಾಥಂ ||

—ಶಬ್ದಮಣಿದರ್ಪಣ

(iv) ಪ್ರತಿಪಾದದ ಮೊದಲೆರಡು ಸ್ವರಗಳ ನಡುವೆ ಒಂದೇ ವಿಧದ ಸಜಾತೀಯ ಸಂಯುಕ್ತ ವ್ಯಂಜನಗಳು ಬರಲು ಹಯಪ್ರಾಸವೆನಿಸುವುದು.

ನಿನ್ನನೆ ನಚ್ಚಿದಂ ಕುರುಮಹೀಪತಿ ನಿನ್ನ ಶರಾಳಿಗಳ್ಗೆ ಮು
ನ್ನನ್ನಡುಗುತ್ತು ಮಿರ್ಪುದರಿಸಾಧನಸಂಪದಮಂತೆ ಶಸ್ತ್ರಸಂ ||
ಪನ್ನನೆ ಆಗಿ ಶಲ್ಯನನೆ ಸಾರಥಿಯಾಗಿರೆ ಮಾಡಿ ಕಾದು ನೀಂ
ನಿನ್ನಯ ಬಲ್ಲ ಮಾಟಕ್ಕಿಯೊಳಿದಂ ನಿನಗಂಗವಲ್ಲಭಾ ||

—ಪಂಪಭಾರತ

ಮೇಲೆ ಹೇಳಿದಂತೆಯೇ ಪ್ರಾಸವು ಪ್ರಾಯಶಃ ಎಲ್ಲಾ ಕಡೆಯಲ್ಲಿಯೂ ತೋರಿದರೂ, ಕೆಲವು ಕಡೆಗಳಲ್ಲಿ ಕವಿಗಳು ಮೇಲಿನ ನಿಯಮವನ್ನು ಸ್ವಲ್ಪಮಟ್ಟಿಗೆ ಮಿಾರಿರುವರು.

ಹೇಗೆಂದರೆ :

ಒಲವಿಂದರಸಂ ಕಾಂತೆಯ
ಕೆಲದೊಳ್ ಕುಳ್ಳಿರೆ ಸಮಿಾಪದೊಳ್ ಹೇಮವಃಯೋ ||

ಜ್ಜ್ವಲಪಾದಮಂಡಿತಾಸನ
ದೊಳಲ್ಲಿ ಶುಕನಾಸಮಂತ್ರಿಯುಂ ಕುಳ್ಳಿರ್ದಂ ||

—ಕಾದಂಬರಿ

ಹೀಗೆ ಪ್ರಾಸದಲ್ಲಿ ಲಕಾರ ಳಕಾರಗಳನ್ನೂ ;

ಇಱಿಯಲ್ಕೆ ಬಗೆದು ಸಿಂಹೋ
ದರನಿರೆಯುಂ ವಜ್ರಕರ್ಣನೊಳ್ಪನೆ ಬಗೆದಂ ||
ಪರಪೀಡಾಕರಣದೊಳೇಂ
ಪರೋಪಕಾರಪ್ರಿಯಂಗೆ ಬಗೆ ಬಂದಪುದೇ ||

— ಪಂಪರಾಮಾಯಣ

ಹೀಗೆ ಱಕಾರ ರೇಫಗಳನ್ನೂ ;

ಶುಭವಕ್ಕೆ ಸುಜನಕನಿಶಂ
ಸಫಲಂ ತಾನಕ್ಕೆ ಸಕಲಧನಿಕರ ಧನಮುಂ ||
ಪ್ರಭುವಕ್ಕೆ ಭವ್ಯಶೀಲಂ
ವಿಭವಂ ತಾನಕ್ಕೆ ವಿಶ್ವವಿದ್ವಜ್ಜನಕಂ ||

— ಚಿಕ್ಕದೇವರಾಜವಿಜಯ

ಪಾರ್ಥಿವರ ಪಂತಮಲ್ಲೆಂದು ಪೇೞಲ್ಕೆ ಪುರು
ಷಾರ್ಥಮಂ ಮಾೞ್ಪೆಲಾ ನಿನ್ನ ಪೌರುಷವನಪ
ಕೀರ್ತಿಗಂಜುವನಲ್ಲ ಪಿತನಂ ಪಚಾರಿಸುವೆ ಮತ್ತೆ ಕಾಳೆಗಕೆ ಬಂದು ||

—ಜೈಮಿನಿಭಾರತ

ಹೀಗೆ ವರ್ಗೀಯ ವ್ಯಂಜನಗಳನ್ನೂ ;

ಕಟ್ಟಲೆ ಪಿರಿದಾದೊಡಮೇಂ
ಮಾರ್ತಲೆಯೆ ದಿನಾಧಿಪಂಗೆ ಪಿರಿದಾದೊಡಮೇ ||
ನಾರ್ತಪುದೆ ವೈರಿಸೈನ್ಯಮ
ಆರ್ತಿಱಿಯಲಱೇ ಬಾಹುಬಲನಂ ಬಲನಂ ||

— ಪಂಪರಾಮಾಯಣ

ಹೀಗೆ ೞಕಾರ(ರಳ)ದಿಂದ ಕೂಡಿದ ಒತ್ತಕ್ಷರದೊಡನೆ ರೇಫೆಕೂಡಿದ ಒತ್ತಕ್ಷರವನ್ನೂ ಕೆಲವರು ಕವಿಗಳು ಉಪಯೋಗಿಸಿರುವರು ; ಮತ್ತು

ಮನ್ತ್ರಪದಪ್ರವೀಣಬಹುಸಾಧನಹೂಂಕರಣಾಳಿಮನ್ತ್ರಮಾ
ಮನ್ತ್ರಿತಡಾಕಿನೀದಶನಘಟ್ಟನಜಾತವಿಭೀಷಣಂ ಮದ
ಭ್ರಾನ್ತಿನಿಯನ್ತ್ರಿತಾಪ್ಪಶವಮಾಂಸರಸಾಸವಮತ್ತಯೋಗಿನೀ
ತನ್ತ್ರಮಿದೇನಗುರ್ವನೊಳಕೊಣ್ಡುದೊ ಕರ್ಣನ ಗೆಲ್ದ ಕೊಳ್ಗುಳಂ ||

— ಪಂಪಭಾರತ

ಕಣ್ಬರಿಗೆಟ್ಟು ಕಾಮನಿಸೆ ನಾಂಟುವ ಪೂಗಣೆಯಿಂ ಬೞಲ್ದು ನೀಂ
ಬಂಬಲಬಾಡಿದಪ್ಪೆ ದೊರೆಕೊಳ್ಳದ ವಸ್ತುಗಿದೇಕವಸ್ಥೆಯಿರ್ ||
ವಾಣ್ಬೆಸಜಾಕ್ಷಿ ಮುನ್ನ ಕನಸಿಂದಮೆ ಕಣ್ಡನನೀಗ ಚಿತ್ರದೊಳ್
ಕಾಣ್ಬುದೆ ಸಾಲ್ವುದಾರಜೀವರೆತ್ತಣ ಚೆನ್ನಿಗನಾವನೆಂಬುದಂ ||

—ಜಗನ್ನಾಥವಿಜಯ

ದಾಸೋಹಂ ಪುರವರ್ಗಂ
ಭಾಸುರಮುಕಮಾನ್ಯಸತ್ರಮೆಂಬಿವು ಮೊದಲಾ ||
ದಾ ಸಕಲಧರ್ಮಮುಮಂ ಚಿ
ತ್ಕೋಶಂ ಬಸವಾವನೀಶನುರೆ ವಿರಚಿಸಿದಂ ||

—ಕೆಳದಿನೃಪವಿಜಯ

ಅಲ್ಲಿ ಭಜಿಸುವುದಮಲಗಿರಿಜಾ
ವಲ್ಲಭನನಾಮ್ನಾಯ ಜಿಹ್ವೆಗೆ
ದುರ್ಲಭನನಧಿದೈವವನು ಬ್ರಹ್ಮೇಂದ್ರಭಾಸ್ಕರರಾ
ಉತ್ತಮೋತ್ತಮವಿವಕೆ ಮೇಲಣ
ಸತ್ಯಲೋಕಾದಿಗಳ ನೋಡಿ ಧ
ರಿತ್ರಿಯಲಿ ಬಲುಗಾಜಿಕೊಟ್ಟೆನು ಲೋಕಪಾಲಕರ||

—ಭಾರತ

ಹರ್ಮ್ಯಾಗ್ರದೊಳ್ ವಿರಾಜಿಪ ಚಂದ್ರಶಾಲೆಗಳ
ನಿರ್ಮಲಸ್ಥಲದೊಳ್

—ಜೈಮಿನಿಭಾರತ

ಇವು ಮುಂತಾದೆಡೆಯಲ್ಲಿ ಕವಿಗಳು ಮೇಲೆ ಹೇಳಿದ ಪ್ರಾಸಿನ ನಿಯಮಗಳನ್ನು ಅಲ್ಲಲ್ಲಿ ಮೀರಿರುವರು.

ತುಂಬಿವಿಂಡಿನಂತೆ ಪಾಡಿ |
ಜಕ್ಕವಕ್ಕಿಯಂತೆ ಕೂಡಿ ||
ದೆಸೆಯನಿಜ್ಜೆಯಿಂದೆ ನೋಡಿ |
ಸೊಗಯಿಪಂಚೆಯಂತಿರಾಡಿ ||

—ಕಬ್ಬಿಗರ ಕಾವ

ಎಂಬಂತೆ ಆದಿಪ್ರಾಸವನ್ನು ಬಿಟ್ಟು ಅಂತ್ಯಪ್ರಾಸವನ್ನು ಹೇಳಿರುವುದೂ ಉಂಟು. ಈ ಸಂದರ್ಭದಲ್ಲಿ ಕಡೆಯ ವ್ಯಂಜನದ ಮೇಲಿನ ಸ್ವರ ಒಂದೇ ಆಗಿ, ಹಿಂದೆ ದೀರ್ಘ ಹ್ರಸ್ವಗಳಲ್ಲಿ ಸಾಮ್ಯವಿರಬೇಕು. ಕೂಡಿ ಎಂಬುದಕ್ಕೆ ನೋಡು—ಕುಡಿ—ಎಂಬುದು ಪ್ರಾಸವಲ್ಲ.

ನಾಗವರ್ಮನು ಹೇಳಿರುವ ಅನುಗತಾದಿ ಪ್ರಾಸಗಳು ಇಲ್ಲಿ ಮೇಲೆ ಹೇಳಿದ

ಸಿಂಹಾದಿ ಪ್ರಾಸಗಳಂತೆ ಇರಲೇಬೇಕೆಂದು ನಿಯಮಿಸಿ ಹೇಳಲಾಗುವುದಿಲ್ಲವಾದುದರಿಂದಲೂ ಶಬ್ದಾಲಂಕಾರವಾಗಿ ಕಾಣುವುದರಿಂದಲೂ ಅವು ಛಂದಶ್ಶಾಸ್ತ್ರವಿಚಾರಕ್ಕೆ ವಿಷಯವಲ್ಲ.

## 3. ಯತಿ

ಯತಿಯೆಂದರೆ ಪದ್ಯಗಳನ್ನು ಓದುವಾಗ ಅರ್ಥಸ್ಫೂರ್ತಿ ಕೆಡದಂತೆ ಪದ್ಯಪಾದದ ನಿಯತವಾದ ಒಂದೊಂದೆಡೆಯಲ್ಲಿ ನಿಲ್ಲಿಸುವುದು. ಹಾಗೆ ನಿಲ್ಲಿಸುವುದು ಪದದ ಮಧ್ಯದಲ್ಲಿಯಾದರೆ ಅರ್ಥಸ್ಫೂರ್ತಿ ಕೆಡುವುದರಿಂದ ಪದದ ಕೊನೆಯಲ್ಲಿಯೇ ನಿಲ್ಲಿಸಬೇಕು. ಕನ್ನಡವಲ್ಲಿ ಯತಿಯು ಕೆಲವೆಡೆಯಲ್ಲಿ ಮಾತ್ರ ತೋರಬಹುದಲ್ಲದೆ ಸಂಸ್ಕೃತದಲ್ಲಿರುವಂತೆ ಎಲ್ಲಾ ಕಡೆಯಲ್ಲಿಯೂ ನಿಯತವಾಗಿ ತೋರುವುದಿಲ್ಲ. ಹಾಗೆ ತೋರದಿರುವುದಕ್ಕೆ ಇಲ್ಲಿ ಕೆಲವು ಉದಾಹರಿಸಲ್ಪಡುವುವು. ಈ ಉದಾಹರಣೆಗಳಲ್ಲಿ ಆಯಾ ವೃತ್ತದ ಲಕ್ಷಣದಲ್ಲಿ ಹೇಳಿರುವಂತೆ ಯತಿಯ ಸ್ಥಳವನ್ನು * ಈ ಚಿಹ್ನೆಯಿಂದ ತೋರಿಸಿದೆ. ಈ ಸ್ಥಳಗಳಲ್ಲಿ ನಿಲ್ಲಿಸುವುದರಿಂದ ಅರ್ಥಸ್ಫೂರ್ತಿ ಕೆಡುವುದು.

ಮಾಲಿನೀವೃತ್ತ :

ಅಮಲಕನಕದುದ್ಯ*ದ್ವೇದಿಸುತ್ತಿರ್ಪುದೊಪ್ಪ*
ತ್ತಮೆ ರಜತಚುತುದ್ವಾ*ರಂಗಳಿಂ ಮಂಗಳಾದ್ಯ*
ತ್ತಮನವನಿಧಿ........

— ಶಾನ್ತೀಶ್ವರ ಪುರಾಣ

ಹರಿಣೀವೃತ್ತ :

ಪ್ರಥಿತಪದಪೇ*ಶಾಗ್ರಂಶೇಯೂ*ರಮುಂ ತಳೆವಂದದಿಂ

—ಕಾದಂಬರಿ

ಪೃಥ್ವೀವೃತ್ತ :

ಧರಾವಿವರವರ್ತಿಶೇ*ಷನಿಳೆಯುಂ ಗಡಂ ತಾಳ್ದಿದಂ |
ವಿರುದ್ಧಮೆನೆ ರಾಷ್ಟ್ರಕಂ*ಟಕರನೆಯ್ದೆ ಕಿಬ್ಬಿತ್ತಂ ನೃಪಂ ||

—ಮಲ್ಲಿನಾಥಪುರಾಣ

ಮಂದಾಕ್ರಾಂತವೃತ್ತ :

. . . . . ನಯನಸುಖಮುಂ ಮಾಡೆ ಬಂದರ್ಘ್ಯಮುಂ ಯ* |
ಕ್ಷಂ ಕೊಟ್ಟಂ ರಾ*ಘವನ ಚರಣ*ಕ್ಕಿನ್ನರಾರ್ ಧನ್ಯಜನ್ಮರ್ |

—ಪಂಪರಾಮಾಯಣ

ಶಾರ್ದೂಲವಿಕ್ರೀಡಿತ :

ಆಕಾಶಾನ್ತಮನೆಯ್ದೆ ನೀಳ್ದ ವಿಕಟಾ*ಟ್ಟಾಲಂಗಳೊಳ್ ಕೇತನಾ* |
ನೀಕಂಗಳ್ ರವಿರಶ್ಮಿಗಳ್ ಪುಗಲೆವೇ*ಡೀರಶ್ಮಿಗಳ್ ಸಾಲ್ಗುವಿಂ* ||
ತೇಕಜ್ಜಂ ಬೆಳಗೆಂಬವೊಲ್ ತುಱುಗಿ ತ*ಳ್ತಿಂಬಪ್ಪಿನಂ ಕಾಂಚನ |
ಪ್ರಾಕಾರಂ . . . .

—ಆದಿಪುರಾಣ

ಹೀಗೆ ಇನ್ನೂ ಅನೇಕ ಮಹಾಕವಿಗ್ರಂಥಗಳಲ್ಲಿಯೂ ಆಯಾ ಲಕ್ಷಣಕ್ಕನುಸಾರವಾಗಿ ಯತಿಯು ಕಾಣುವುದಿಲ್ಲ. ಆದುದರಿಂದಲೇ

. . . . . ಪೂರ್ವಾಚಾರ್ಯರ್
ದೇಸಿಯೆನೆ ನಿಱಿಸಿ ಖಂಡ
ಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್ ||

—ಕವಿರಾಜಮಾರ್ಗ

ಎಂದು ನೃಪತುಂಗನೂ ;

ಯತಿಯೆಂಬುದು ಗಣನಿಯಮ
ಪ್ರತೀತಮೆಂದರೆಬರೊಲ್ವರಂತದನೆ ಕೆಲರ್ ||
ಶ್ರುತಿಸುಭಗಂ ಸ್ವಚ್ಛಂದಂ
ಯತಿಯೆಂದಾ ಕಪಿಲಪಿಂಗಾಳಾದಿಗಳೊಲ್ಲರ್ ||

—ಛಂದೋಂಬುಧಿ

ಎಂದು ನಾಗವರ್ಮನೂ ;

ಯತಿವಿಲಂಘನದಿಂದರಿದಲ್ತೆ ಕನ್ನಡಂ

—ಶಬ್ದಮಣಿದರ್ಪಣ

ಎಂದು ಕೇಶಿರಾಜನೂ ಕನ್ನಡದ ಯತಿಯ ವಿಷಯವಾದ ತಮ್ಮ ಅಭಿಪ್ರಾಯವನ್ನು ತಿಳಿಸಿರುವರು. ಇದರಿಂದ ಕನ್ನಡದಲ್ಲಿ ಯತಿಯು ಐಚ್ಛಿಕವಾಗಿರುವುದೇ ಹೊರತು ನಿಯತವಾಗಿಲ್ಲವೆಂದು ಹೇಳಬಹುದು.

ಸಂಸ್ಕೃತದಿಂದ ಬಂದ ವೃತ್ತಗಳಲ್ಲಿ ಯತಿಯು ಐಚ್ಛಿಕವಾದರೂ ತ್ರಿಪದಿ ಮುಂತಾದ ಕನ್ನಡ ವೃತ್ತಗಳಲ್ಲಿ ಯತಿ ನಿರ್ಬಂಧವೇ ಸರಿ.

ಉದಾ : ಸಜ್ಜನರ ಸಂಗವದು*ಹೆಜ್ಜೇನು ಸವಿದಂತೆ.

ಇಲ್ಲಿ ಪ್ರಾಸವೇ ಯತಿಯನ್ನು ಎತ್ತಿ ತೋರಿಸುವುದು.

# ೨. ವರ್ಣವೃತ್ತಪ್ರಕರಣ (ಸಂಸ್ಕೃತ ವೃತ್ತಗಳು)

ವರ್ಣವೃತ್ತವು ಸಮ, ಅರ್ಧಸಮ, ವಿಷಮ, ಎಂದು ಸಾಮಾನ್ಯವಾಗಿ ಮೂರು ವಿಧವು. ಇವುಗಳಿಗೆ ನಾಲ್ಕೇ ಪಾದಗಳು. ನಾಲ್ಕು ಪಾದಗಳಲ್ಲಿಯೂ ಒಂದೇ ಲಕ್ಷಣವಿರುವುದು ಸಮವೃತ್ತವು. ೧ ನು ಮೂರನೆಯ ಪಾದಗಳೂ ಎರಡು ನಾಲ್ಕನೆಯ ಪಾದಗಳೂ ಸಮನಾಗಿರುವುದು ಅರ್ಧಸಮವೃತ್ತವು. ನಾಲ್ಕು ಪಾದಗಳೂ ಬೇರೆ ಬೇರೆ ಲಕ್ಷಣದಿಂದ ಕೂಡಿರುವುದು ವಿಷಮವೃತ್ತವು; ಇದು ಕನ್ನಡದಲ್ಲಿ ಬಳಕೆಯಲ್ಲಿಲ್ಲ.

## 1. ಸಮವೃತ್ತಗಳು

ಇವುಗಳಲ್ಲಿ ಪಾದವೊಂದಕ್ಕೆ ಅಕ್ಷರಗಳು ಒಂದರಿಂದ ಇಪ್ಪತ್ತಾರರವರೆಗೂ ಇರುವುವು. ಹೀಗೆ ಪ್ರತಿಪಾದದ ಅಕ್ಷರಸಂಖ್ಯೆಯನ್ನನುಸರಿಸಿ ಸಮವೃತ್ತಗಳು ಸಾಮಾನ್ಯವಾಗಿ ಇಪ್ಪತ್ತಾರು ಗುಂಪುಗಳಾಗಿ ಮಾಡಲ್ಪಟ್ಟಿವೆ. ಈ ಗುಂಪಿಗೂ ಛಂದಸ್ಸು ಎಂದು ಹೆಸರು. ಈ ಛಂದಸ್ಸುಗಳಿಗೆ ಕ್ರಮವಾಗಿ

| | | |
|---|---|---|
| 1 ಉಕ್ತೆ | 10 ಪಂಕ್ತಿ | 19 ಅತಿಧೃತಿ |
| 2 ಅತ್ಯುಕ್ತೆ | 11 ತ್ರಿಷ್ಟುಪ್ಪು | 20 ಕೃತಿ |
| 3 ಮಧ್ಯೆ | 12 ಜಗತಿ | 21 ಪ್ರಕೃತಿ |
| 4 ಪ್ರತಿಷ್ಠೆ | 13 ಅತಿಜಗತಿ | 22 ಆಕೃತಿ |
| 5 ಸುಪ್ರತಿಷ್ಠೆ | 14 ಶಕ್ವರಿ | 23 ವಿಕೃತಿ |
| 6 ಗಾಯತ್ರಿ | 15 ಅತಿಶಕ್ವರಿ | 24 ಸಂಕೃತಿ |
| 7 ಉಷ್ಣಿಕ್ಕು | 16 ಅಷ್ಟಿ | 25 ಅಭಿಕೃತಿ |
| 9 ಅನುಷ್ಟುಪ್ಪು | 17 ಅತ್ಯಷ್ಟಿ | 26 ಉತ್ಕೃತಿ |
| 8 ಬೃಹತಿ | 18 ಧೃತಿ | |

ಎಂಬಿವು ಸಂಜ್ಞೆಗಳು. ಇಲ್ಲಿ ಪ್ರಾಚೀನೋದಾಹರಣೆಗಳು ಸಿಕ್ಕಿದ ಕೆಲವು ಛಂದಸ್ಸುಗಳಲ್ಲಿರುವ ಕೆಲವು ಸಮವೃತ್ತಗಳಿಗೆ ಮಾತ್ರ ಲಕ್ಷಣವು ಹೇಳಲ್ಪಡುವುದು. ಈ ಲಕ್ಷಣ ವಾಕ್ಯಗಳಲ್ಲಿ **ಲ** ಎಂದರೆ ಲಘುವೆಂದೂ **ಗ** ಎಂದರೆ ಗುರುವೆಂದೂ ತಿಳಿಯಬೇಕು.

2ನೆಯ **ಅತ್ಯುಕ್ತೆ**ಯೆಂಬ ಛಂದಸ್ಸಿನಲ್ಲಿ ಪಾದವೊಂದಕ್ಕೆ ಎರಡು ಗುರುಗಳುಳ್ಳ ಪದ್ಯವು **ಗೀಯ**ವೃತ್ತವೆನಿಸುವುದು.

ಇದ್ಧಂ | ಶುದ್ಧಂ || ಸಿದ್ಧಂ | ಬುದ್ಧಂ ||

—ಶಬ್ದಸ್ಮೃತಿ

4ನೆಯ **ಪ್ರತಿಷ್ಠೆ**ಯೆಂಬ ಛಂದಸ್ಸಿನ ಪ್ರತಿಪಾದದಲ್ಲಿಯೂ ಭಗಣ ಮತ್ತು ಒಂದು ಗುರುವುಳ್ಳ ಪದ್ಯವು **ಸೌಂದರವೃತ್ತ**ವೆನಿಸುವುದು.

ತುಂಗಭುಜಂ | ಭೃಂಗಕಚಂ || ಸಂಗಗುಣಂ | ರಂಗವಹಂ ||

—ಕವಿಚಂತ್ರ I

6ನೆಯ **ಗಾಯತ್ರಿ**ಯಲ್ಲಿ :
ಸಯುಗಂ **ಕುಮುದಂ.**

ಚಪಲಾಂಬಕಿಯಿಂ | ತಪರಾಧಮನಾ ||
ಗಿಪ ನಲ್ಲನ ಮೊ | ಟ್ಗಿ ಪದಂ ನುಡಿದಳ್ ||

—ಅಮರುಕ

7ನೆಯ **ಉಷ್ಣಿಕ್ಕು** ಎಂಬ ಛಂದಸ್ಸಿನಲ್ಲಿ :
ಭದ್ವಯುಗಂ **ಕಮಲಂ.**

ಶಿಕ್ಷಿತನಿಂದುಯಶಂ | ಲಕ್ಷಣಯುಕ್ತನಿವಂ ||
ದಕ್ಷನುಮಾಯತನುಂ | ವೀಕ್ಷಿಸೆ ಮಾಚನೃಪಂ ||

—ಕವಿಚಂತ್ರ I

8ನೆಯ **ಅನುಷ್ಟುಪ್ಪು** ಎಂಬ ಛಂದಸ್ಸಿನಲ್ಲಿ :
ಜರಂಲಗಂ **ಪ್ರಮಾಣಿಕಂ.**

ಮುರಾರಿಶಂಬರಾರಿವಾ | ಗ್ವರಾದಿನಿರ್ಜರಾರ್ಚಿತೇ ||
ಧರಾಧರೇಶ್ವರಾತ್ಮಜೇ | ಹರಪ್ರಿಯೇ ಜಯಾಂಬಿಕೇ ||

—ವೃಷಭೇಂದ್ರ ವಿಜಯ

10ನೆಯ **ಪಙ್ಕ್ತಿ**ಯಲ್ಲಿ :
(i) **ವೀರವಿಲಸಿತಂ** ಭಸಂಜಗಂ.
ಶ್ರೀರಮಣನ ದಿವ್ಯಲೀಲೆವೊಲ್ | ಭೂರಿಭುವನಪೋಷಕಂ ಮಹೋ ||
ದಾರನ ಚಿಕದೇವರಾಯನಾ | ವೀರವಿಲಸಿತಂ ವಿರಾಜಿಕುಂ ||

—ಅಪ್ರತಿಮವೀರಚರಿತಂ

(ii) ರಂಸಸಂಗವಿರಲ್ **ಮಣಿರಂಗಂ.**
ತೋರ್ಪುರ್ ತೋರ್ಕೆಯೊಳಂ ಮಿಗೆ ತೋರ್ಕುರ್ಂ | ಕೂರ್ಪುರ್ ನೇಹದೊಳಂ ಕರಮುಕ್ಕುಂ
ಕೆರ್ಪುರ್ ಪಾದುಕೆಯೊಳ್ ತಳೆದಿರ್ಕುಂ | ಕೂರ್ಪುರ್ ಕೂರತೆಯೊಳ್ ಪುದಿದಿರ್ಕುಂ ||

—ಕರ್ಣಾಟಕ ನಿಘಂಟು

(iii) **ಚಿತ್ರಪದಂ** ಭಭಭಂಗವಿರಲ್.

ಅಂಗನೃಪಾಯತಿತುಂಗಭುಜಂ | ಪಿಂಗಜದೊಂಗತಭೃಂಗಕಚಂ ||
ಸಂಗರಕೇಸರಿ ಸಂಗಗುಣಂ | ಸಂಗದಸನ್ಮತಿರಂಗವಹಂ ||

—ಕವಿಚಂತ್ರ I

11ನೆಯ **ತ್ರಿಷ್ಟುಪ್ಪಿನಲ್ಲಿ**:

(i) **ಉಪೇಂದ್ರವಜ್ರಂ** ಜತಜಂಗಯುಗ್ಮಂ.

ಅವರ್ಣವಾದಕ್ಕೆಡೆಯಾಗದೊಳ್ಪಿಂ | ದವರ್ಣಿಕಾಮರ್ ಗುಣವೃದ್ಧಿಭಾಮರ್ ||
ದಿವಾಕರರ್ ವ್ಯಾಕೃತಿನಾಮಿಗಳ್ಪೊಲ್ | ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ ||

—ಶಬ್ದಸ್ಮೃತಿ

(ii) **ಶಾನಿನ್ದ್ರವಜ್ರಂ** ತತಜಂಗಯುಗ್ಮಂ.

ಆಗಳ್ ಜಸಂ ಕೈದುವನಿಕ್ಕಿ ವೀರ | ಶ್ರೀಗಾಣ್ಮನಯ್ ಪಾಣ್ಬತನಕ್ಕೆಳಪ್ಪಯ್ ||
ಪೋಗೇಕೆ ನೀವ್ಮೆಯ್ಯ್ಗರೆದಿರ್ಪೆಯೆಂದಾ | ಭೋಗೀಶ್ವರಂಗಂದು ವಿನಮ್ರನಾದಂ ||

—ಶಬ್ದಸ್ಮೃತಿ

(iii) ರಂನರಂಲೆಗವಿರಲ್ **ರಥೋದ್ಧತಂ**.

ದಾವು ನಿನ್ನ ಕೊರಲೇಱಿತೆನ್ನಗಂ | ಜೀವಮೆನ್ನ ಕೊರಲೇಱಿತನ್ನೆಗಂ ||
ಏವೆನೇವೆನಿನಿತೇಕೆಸಾಹಸಂ | ಭಾವೆಯಿಲ್ಲಿ ಬಱಿದಿಂತು ಪೂಣ್ಬಪಯ್ |

—ಮಿತ್ರವಿಂದಾಗೋವಿಂದ

(iv) **ಸ್ವಾಗತಂ** ರನಭಮುಂಗುರುಯುಗ್ಮಂ.

ಎಂತು ದಾಂಟ್ಪಡೆ ಮಹಾರ್ಣವಮಂ ಬಂ | ದೆಂತು ಪೊಕ್ಕೆ ಪುರಮಂ ರಘುವೀರಂ ||
ಗೆಂತು ನಿನ್ನೊಡನೆ ಕೂಟಮುದಾಯ್ತೆಂ | ಬಂತುಟಂ ತಿಳಿಪು ದೋರ್ಬಲಶಾಲೀ ||

—ಪಂಪರಾಮಾಯಣ

(v) **ವೀರವೃತ್ತ**ಮಿರಲ್ ರಸಸಂಲಗಂ.

ಶೂರನೀತನೆ ಪಂಡಿತನೀತನೇ | ಕ್ಷೀರಗೌರಯಶೋಧಿಕನೀತನೇ ||
ಧಾರಿಣೀತಲದೊಳ್ ಧ್ರುವಮೆಂಬುದಾ | ಧಾರಮಿಂತವಧಾರಣದೊಳ್ ಗುಣಂ ||

—ಕವಿರಾಜಮಾರ್ಗ

(vi) ಅಕ್ಕುಂ **ಕುಸುಮಂ** ತಜಜಂಲಗಮುಂ.

ನೆಯ್ದಿಲ್ಗೆಳೆಯಂ ವಿಧು ಬೆಳ್ಗದಿರಂ | ನೆಯ್ದಿಲ್ಪಗೆಯಂ ರವಿ ಕೆಂಗದಿರಂ ||
ನೆಯ್ದಿಲ್ಗ ಳೊಳುಪ್ಪಳಕೋವಳಿಗಳ್ | ಬಾಯ್ದಾರೆಗಳೆಂದಸಿಧಾರೆಗಳೊಳ್ ||

—ಕರ್ಣಾಟಕನಿಘಂಟು

(vii) ಭತ್ರಯಮಿರ್ಗುರು **ದೋಧಕವೃತ್ತಂ**.

ದೇವನಿಕಾಯಕಿರೀಟಕನದ್ರ | ತ್ನಾವಳಿಸಂಜನಿತಾಂಶುವಜಸ್ರಂ ||
ಶೀವಿ ವಿರಾಜಿಪ ದೇವಿಯ ಪಾದ | ಕ್ಕಾ ವಸುಧಾಪತಿ ಪಾದ್ಯಮನಿತ್ತಂ ||

—ಉದ್ಭಟಕಾವ್ಯ

12ನೆಯ **ಜಗತಿಯಲ್ಲಿ**:

(i) ನೆಗಟ್ದ **ವಂಶಸ್ಥ**ಮಿಗಲ್ ಜತಂಜರಂ.

ಸ್ಫುರದ್ಧನುಶ್ರೀಕರ ಚಂಚಲೇಕ್ಷಣಂ | ಶರಧ್ಯಪಾತ್ರೋರುಶರಂ ಘನಸ್ವನಂ ||
ಹರಿಪ್ರಭಂ ನೀರದರಾಜನಟ್ಟಿದಂ | ಧರಾತಿಸಂತಾಪದನಂ ನಿದಾಘನಂ ||

—ರಾಜಶೇಖರವಿಲಾಸ

(ii) **ದ್ರುತವಿಲಂಬಿತ**ವೊಪ್ಪೆ ನಭಂಭರಂ.

ಮಿಳಿರ್ದು ಮಿಳ್ಳಿಸೆ ವಾನರಕೇತನಂ | ಪ್ರಳಯಕಾಲದ ಮಾರಿಯ ಮೂರಿಯಂ ||
ತಳೆದು ಮಾರುತಿಯೇಱಿದ ತೇರದೇಂ | ತಳರ್ದುದೋ ಧರೆ ಕಂಪಿಸುವನ್ನೆಗಂ ||

—ಪಂಪರಾಮಾಯಣ

(iii) ನಭಜರಂಗಳಿರೆ **ಮತ್ತಕೋಕಿಲಂ.**

ಪಗಲ ತಿಂಗಳವೊಲೇಕೆ ಕಾಂತಿಯಂ | ನಗೆಮೊಗಂ ಕೆದಱಿದಾನೆ ಪೊಕ್ಕ ಬೇ ||
ಸಗೆಯ ಕಾಡ ಕೆಱೆಯಂತೆ ನಾಡೆಯುಂ | ಬಗೆ ಕಲಂಕಿದುದಿದೇಕೆ ಕೋಮಲೇ ||

—ಮಲ್ಲಿನಾಥಪುರಾಣ

(iv) ಸಭರಂಯಂ ಬರೆ **ಬಾಣವೃತ್ತ**ಮಕ್ಕುಂ.

ಬಱಿಕೈದಂತುಟು ರಕ್ಕಸರ್ಕಳಂ ಕ | ಟ್ಟುಱಿದಿಂ ರಾಘವರಿರ್ವರಿಂದಿವರ್ ಬೇ ||
ಸಱಿದಾಂಧ್ರಾವನಿಪಾಲಮೂಲಸೈನ್ಯಂ | ಬಱಿದಪ್ಪಂತೆ ಪುಯಲ್ಚಿ ಪೊಯ್ದು ಗೆಲ್ದರ್

—ಚಿಕ್ಕದೇವರಾಜವಿಜಯ

(v) ಅದು **ತೋಟಕ**ಮೊಪ್ಪಿರೆ ನಾಲ್ಸಗಣಂ.

ಅಚಲಾತ್ಮಕಶೈಲಸುತಾನನಚಂ | ದ್ರಚಕೋರನಿರಾಮಯನಿರ್ಮಲಶ ||
ಕ್ರಚತುರ್ಮುಖವಂದಿತಬಾಲಸುಧಾ | ರುಚಿಶೇಖರ ಶಂಕರ ಶಾಂತ ನಮೋ ||

—ಉದ್ಭಟಕಾವ್ಯ

(vi) **ಪ್ರಮಿತಾಕ್ಷರಂ** ಸಜಸಸಂಗಳಿರಲ್.

ಕಮನೀಯವಿಭ್ರಮಗುಣಾನ್ವಿತೆಯರ್ |
ಪ್ರಮಿತಾಕ್ಷರಾಭರಣಭೂಷಿತೆಯರ್ ||
ತಮರೂರ್ಗೆ ಪೋಪ ದಿವಿಜಾಂಗನೆಯರ್ |
ಕಮಲೋದರಂಗೆ ಪಡೆದರ್ ಮುದಮಂ ||

—ಶಬ್ದಸ್ಮೃತಿ

(vii) **ದ್ರುತಪದಂ** ನಭಜಯಂಗಳಿನಕ್ಕುಂ.

ನೆರಪೆ ತುಂಬಿಗಳನಾತ್ಮಮುಖೋದ್ಯ |
ತ್ಪರಿಮಳಂ ಕಮಲಬಂಧುರಗಂಧಂ ||
ಪರಪೆ ಕೇಕಿಗಳ ತಾಂಡವಮಂ ನು |
ಣ್ಚರದ ತಿಣ್ಪು ಘನಘೋಷಗಭೀರಂ ||

—ಶಬ್ದಸ್ಮೃತಿ

(viii) **ಭುಜಂಗಪ್ರಯಾತಂ** ಬರಲ್ ನಾಲ್ಕುಯಂಗಳ್.

ಚಿದಾಕಾರಲಿಂಗಾಂಘ್ರಿಯೊಳ್ ಚೇತನಾಗ್ರಂ |
ಸದಾನಂದದಿಂ ಬೆಚ್ಚಿರಲ್ ಭಕ್ತಿಯಿಂದಂ ||

ಮದಾನೀಕಮಂ ಮೆಟ್ಟಿ ಮಾಂಗಲ್ಯರೂಪಂ |
ಮುದಂಬೆತ್ತು ಮೇಣುದ್ಭಟಂ ಕಣ್ಗೊಳಿಪ್ಪಂ ||

—ಉದ್ಭಟಕಾವ್ಯ

13ನೆಯ **ಅತಿಜಗತಿ**ಯಲ್ಲಿ :

(i) ಇರೆ **ಮಂಜುಭಾಷಿಣಿ** ಸಜಂಸಜಂಗಮುಂ.

ಪೊಣರ್ದಂದು ನೊಂದು ಮಹಿಶೂರವೀರರಿಂ |
ರಣಭೀತಿವೆತ್ತ ಕೆಳದೀವಜೀರರಿಂ ||
ಪೆಣನಲ್ಲಿದೆಂದಱಿತು ಬಾಯದಿರ್ಪರಂ |
ರಣಭೂಮಿಯಿಂ ತೆಗೆದರಂದು ಶೋಧಕರ್ ||

—ಅಪ್ರತಿಮವೀರಚರಿತಂ

(ii) ನಜಜರಗಂ ಮೆಱೆಯಲ್ **ಪ್ರಭಾತವೃತ್ತಂ.**

ಮೃಗಮದಕಲ್ಪಿತಪತ್ರಭಂಗರಮ್ಯಂ |
ನಗೆಮೊಗಮುಜ್ಜ್ವಲಕಾಂತಿ ನಾಡೆ ಸೌಮ್ಯಂ ||
ಸೊಗಯಿಸುಗುಂ ಮೃಗಲಾಂಛನಾಭಿರಾಮಂ |
ಮೃಗಧರಬಿಂಬಮಿದೆಂಬಿನಂ ನಿಕಾಮಂ ||

—ಕಾವ್ಯಾವಲೋಕನ

(iii) ಕಣ್ಗೊಪ್ಪಲ್ ಮನಜರಗಂ **ಪ್ರಹರ್ಷಣಿ** ತಾಂ.

ಓರೊರ್ಬರ್ ಸೆಣಸಿ ತಗುಳ್ದನೇಕವಾರಂ |
ವಾರಸ್ತ್ರೀಜನಮಿದಿರೊಳ್ ತುಳುಂಕೆ ನೀರಂ ||
ನೀರಂಧ್ರಸ್ತನತಟದೊಳ್ ಕೃತೋಪಹಾರಂ |
ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ ||

—ಶಬ್ದಸ್ಮೃತಿ

14ನೆಯ **ಶಕ್ವರಿ**ಯಲ್ಲಿ :

(i) ಅಕ್ಕುಂ **ವಸಂತತಿಲಕೆ** ತಭಜಂಜಗಂಗಂ.

ಚೆಂಗಾವಿಯಂ ಶುಕದಿನುಜ್ಜ್ವಲಮಾಗಿಯಾಗಳ್ |
ತಾಂ ಗೆಯ್ದು ನೀರೆಱೆತದಿಂ ಸ್ಫುಟಮಾಗಿ ಕಾಣೆ ||
ಪ್ಪಂಗಂಗಳಿಂ ಪವಳವಳ್ಳಿಯ ಬೊಂಬೆವೊಲ್ ಸಾ
ರಂಗಾಕ್ಷಿಯಂಗಜನನರ್ತನೆಗೆಯ್ದುಮಾಗಳ್ ||

—ಮಿತ್ರವಿಂದಾಗೋವಿಂದ

(ii) ಒಪ್ಪೆ ಭಜಸಂನಗಗಮುಂ **ವನಮಯೂರಂ.**

ಕಾಲಯವನಂ ಪಡೆವೆನೆಂದು ನಿಜವಂಶ |
ಕ್ಕಾಲಯವನಂಬುಧಿಶಯಂ ಪುಗುಗುಮಿನ್ನಾ ||

ಕಾಲಯವನಂಚಿತಮೃದಂಗಕಹಳಾಢ।
ಕ್ಕಾಲಯವನಂಜದಿರಿಮೆಂದು ಪೊಱಮಟ್ಟಂ॥

—ಜಗನ್ನಾಥವಿಜಯ

(iii) **ಸುಂದರವೃತ್ತಮದೊಪ್ಪೆ** ಭಂಭರಸಂಲಗಂ.

ಎಂತು ಬಸಂತಮದರ್ಕೆ ತೆಂಬೆಲರೆಂತದ।
ರ್ಕೆಂತು ತಳಿರ್ ತಳಿರ್ಗೆಂತಲರ್ ಕುಸುಮೋತ್ಕರ॥
ಕ್ಕೆಂತಳಿ ಮತ್ತಮದಾಳಿಗೆಂತು ನಿನಾದಮುಂ।
ತಂತೆ ತರಂ ತರಮೊಪ್ಪೆ ತೋಱಿದಳಗ್ಗಳಂ॥

—ಕಾವ್ಯಾವಲೋಕನ

15ನೆಯ **ಅತಿಶಕ್ವರಿಯಲ್ಲಿ:**

(i) ನನಮಯಯುಗಣಂಗಳ್ **ಮಾಲಿನೀವೃತ್ತ**ಮುಕ್ಕುಂ.

ಬಿಡಿದೆಸಪೆಲರಿಂಪಂ ಪೊಣ್ಮುತಿರ್ಪಚ್ಚಗಂಪಂ।
ಪಿಡಿದಲರ್ಗಳ ಜೊಂಪಂ ಜೋಲ್ದು ಚೆಲ್ವಾಗೆ ಬಿಣ್ಪಂ॥
ದಿಡಿದ ಮರಗಳಿಂದಂ ಬೆಳ್ಳಿವೆಟ್ಟಕ್ಕೆ ನಿಚ್ಚಂ।
ಪಡಿಯೆನಿಸುವುದೆತ್ತಂ ರನ್ನಗಲ್ಲೆಂಬ ಬೆಟ್ಟಂ॥

—ಕಬ್ಬಿಗರ ಕಾವ

(ii) ಸಜಸಂಸಯುಂ ನೆರೆದಿರಲ್ **ವಿಧಿವೃತ್ತ**ಮುಕ್ಕುಂ.

ನಲವಿಂದಮಾಂ ಮುಗುಳೆ ಬಂದೆಲೆ ಪದ್ಮಿನೀ ನೀಂ।
ಮಲಗಿರ್ದೊಡಂ ಭರದಿನೆಟ್ಟಿಸುವೆಂ ದಲೇಕಿಂ॥
ತಲೆಗೊಳ್ವೆ ನಂಬಿರೆನುತಸ್ತಮಹೀಧ್ರದುರ್ಕಿಂ।
ತಲೆಮುಟ್ಟೆ ಸೂರುಳಿಸುವಂತಿನನೊಪ್ಪೆ ತೋರ್ಕುಂ॥

—ಮಿತ್ರವಿಂದಾಗೋವಿಂದ

(iii) ಅಪ್ಪುದಾ **ಮಣಿವಿಭೂಷಣ**ಮೇ ರನಭಂಭರಂ.

ಇದಕ್ಕೆ ಛಂದವೃತ್ತವೆಂದು ಬೇರೊಂದು ಹೆಸರು.

ನೇಸಱಂ ಪೆಱಗುಮಾಡಿ ಜಯಾವಹಮೆಂಬಿನಂ।
ಬೀಸೆ ಬೆಂಬಳಿಯಿನೊಯ್ಯನೆ ಗಾಳಿ ರಣಾಜಿರೋ॥
ದ್ಭಾಸಿ ಫಲ್ಗುನನ ಚೋದಿಸೆ ಭೋಂಕನೆ ನೂಱಿ ನೂ।
ರ್ಬ್ಬಾಸಿರಂಗಳವೊಲಾಯ್ತು ರಥಂ ಕಡುವೇಗದಿಂ॥

—ಶಬ್ದಸ್ಮೃತಿ

(iv) **ನವನಳಿನಂ** ಮೆಱೆಗುಂ ನಜಂಜಭರಂ ಬರಲ್.

ಕುರುಕುಲಶೋಣಿತಪಾದಪದ್ಮತಲಂ ತಲೋ।
ದರಿಗೆ ವೃಕೋದರನಾಗಿಪಂ ಕಚಬಂಧಬಂ॥

ಧುರತೆಯನಾತನ ಪೂಣ್ದ ಪೂಣ್ಕೆ ಶಿಲಾತಲಾ |
ಕ್ಷರವೆನಿಸಿರ್ಪ ಜನೋಕ್ತಿಯಂ ಪುಸಿಮಾಳ್ಪನೇ ||

—ಗದಾಯುದ್ಧ

(v) ಮನುಲಘುವಿರೆ ಗುರು **ಮಣಿಗಣ**ವೆನಿಸಿಕುಂ.

ಹರಿವಿಧಿಸುರಪತಿನತಪದವನಜೇ |
ಕರತಲಚಲದಸಿಹೃತಖಲದನುಜೇ ||
ವರವಿತರಣಜಿತದಿವಿಷದವನಿಜೇ |
ಪೊರೆ ಶರಣಜನವನಗವರತನುಜೇ ||

—ವೃಷಭೇಂದ್ರ ವಿಜಯ

(vi) ರಂಜರಂಜರಂಬರಲ್ ವಿರಾಜಿಸಿರ್ಪು**ದುತ್ಸವಂ.**

ಭಾಸುರೇಭವಾಜಿವಾಹಿನೀಸಮೇತನಾಗಿ ತಾಂ |
ಸಾಸದಿಂದಿರ್ಚಿದಾ ಬರೀದಬಾದಷಾಹನಂ ||
ಗಾಸಿಮಾಡಿ ಗೆಲ್ದು ಯುದ್ಧರಂಗದೊಳ್ ತುರುಷ್ಕಸೇ |
ನಾಸಮುದ್ರಮಂ ಕಲಂಕಿದಂ ಸದಾಶಿವೋರ್ವಿಪಂ ||

—ಕೆಳದಿನೃಪವಿಜಯ

16ನೆಯ ಅಷ್ಟಿಯಲ್ಲಿ:

(i) ಜರಂಜರಂಜಗಂಬರಲ್ ನೆಗಲ್ದ **ಪಂಚಚಾಮರಂ.**

ಚಿದಂಬರಸ್ವರೂಪೆ ಚಿತ್ತಜನ್ಮವಂದ್ಯೆ ಚಿನ್ಮಯೀ |
ಕದಂಬವಾಟಿಕಾನಿವಾಸೆ ಕಾಳಿ ಕಾಲಭಂಜನೇ ||
ಸದಂಬುಜಾಯುತಾಕ್ಷಿ ಚಕ್ರಪಾಣಿ ಚಕ್ರಸೇವಿತೇ ||
ಮುದಂಬೆ ರಕ್ಷಿಸೆನ್ನನಿಂದುಮೌಳಿಪತ್ನಿ ಪಾರ್ವತೀ ||

—ವೃಷಭೇಂದ್ರ ವಿಜಯ

(iii) ಐದಿರೆ ಭಂಗಳುಮೊರ್ಗುರುವುಂ **ಬರಲಂಗರುಚಂ.**

ಇದಕ್ಕೆ ಜಗದ್ವಿಸಿತ ಎಂದು ಬೇರೊಂದು ಹೆಸರು.
ತುಂಗಭುಜಂ ಕಲಿಯಿಂಗಿತಶಿಕ್ಷಿತನಿಂದುಯಶಂ |
ಭೃಂಗಕಚಂ ಕಲಿ ಮಂಗಳಲಕ್ಷಣಯುಕ್ತನಿವಂ ||
ಸಂಗಗುಣಂ ಬಲಿ ಶೃಂಗರದಕ್ಷನುಮಾಯತನುಂ |
ರಂಗವಹಂ ಸಲೆ ಭಂಗಿಯನೀಕ್ಷಿಸೆ ಮಾಚನೃಪಂ ||

—ಕವಿಚರಿತ್ರೆ, I

(iii) ನಭಜಂಜಗಮುಮೊಂದಿರಲಪ್ಪುದು **ಮಂಗಳಂ.**

ನೃಪನುಮಂ ಪ್ರಜೆಯುಮಂ ಪರಿವಾರಮುಮಂ ಮಹಾ |
ಕೃಪೆಯಿನಾ ಗೊರವರುಂ ಸುರರುಂ ಗುಣವೃದ್ಧರುಂ ||

ವಿಪುಲರಾಗಪರರಾಗಿಸುಗೆಂದು ಸಮುಚ್ಚಯ |
ಕ್ಕುಪಚಿತೋರುಗುಣಮಂ ಮಿಗೆ ಪೇೞ್ಗೆ ಕವೀಶ್ವರರ್ ||

—ಕವಿರಾಜಮಾರ್ಗ

17ನೆಯ **ಅತ್ಯಷ್ಟಿಯಲ್ಲಿ:**

(i) **ಹರಿಣಿ**ಯೆನಿಪಾವೃತ್ತಂ ತೋಱಲ್ ನಸಂಮರಸಂಲಗಂ.

ಇದನ್ನು ಹರಿಣೀಪ್ಲುತ ಎಂದೂ ಹೇಳುವರು.

ಮಥಿತರಿಪುಭೂಪಾಲಂ ಲೀಲಾವಶೀಕೃತಮಣ್ಡಲಂ
ಪ್ರಥಿತಪೃಥಿವೀಪಾಲೌಘಾನಮ್ರಮೌಳಿಮಣಿಪ್ರಭಾ ||
ಗ್ರಥಿತಪದಪೀಠಾಗ್ರಂ ಕೇಯೂರಮಂ ತಳೆವಂದದಿಂ |
ಪೃಥುಲಭುಜದಿಂ ಪೃಥ್ವೀಶಂ ತಾಳ್ದಿದಂ ನೆಲನೆಲ್ಲಮಂ ||

—ಕಾದಂಬರಿ

(ii) ಜಸಂಜಸಯಲಂಗವೊಂದಿದೊಡೆ **ಪೃಥ್ವಿ**ಯೆಂಬರ್ ಬುಧರ್.

ಧರಾವಿವರವರ್ತಿ ಶೇಷನಿಳೆಯಂ ಗಡಂ ತಾಳ್ದಿದಂ |
ವಿರುದ್ಧಮೆನೆ ರಾಷ್ಟ್ರಕಂಟಕರನೆಯ್ದೆ ಕಿೞ್ತಂನೃಪಂ ||
ಹಿರಣ್ಯಧನಧಾನ್ಯ ಕೃಷ್ಯಫಲವೃಷ್ಟಿಸಂಪೂರ್ಣಮಂ |
ಧರಾವಲಯಮಂ ಪ್ರಚಂಡಭುಜದಂಡದೊಳ್ ತಾಳ್ದಿದಂ ||

—ಮಲ್ಲಿನಾಥಪುರಾಣ

(iii) ಯಮಂನಂಸಂ ತೋರಲ್ **ಶಿಖರಿಣಿ**ಯದೊಂದಲ್ ಭಲಗಮುಂ.

ಕಳಾರುಂದ್ರಂ ಚಂದ್ರಂ ಬೆಳಗೆ ನಭಮಂ ಕಾನ್ತಿವಿಸರಂ |
ಗಳಿಂ ನೆಯ್ದಲ್ಗೆಯ್ದಲ್ ಮೊಗಸಿ ನಳಿನೀಬೃಂದದಳಿನೀ ||
ಕುಳಂಕೋಕಂ ಶೋಕಂಬಡೆಯೆ ಮನದೊಳ್ ಪುಟ್ಟೆ ಜನದೊಳ್
ಬಳಾತ್ಕಾರಂ ಮಾರಂಗದಟನ ತಿರುಳ್ ರಂಜಿಸಿತಿರುಳ್ ||

—ಪುಷ್ಪದಂತಪುರಾಣ

(iv) ನಜಭಜಜಂಲಗಂ ಬರೆ **ಸುಮಂಗಲಿ**ಯೆಂಬರದಂ.

ಇದಕ್ಕೆ ನರ್ಕುಟಕ ಎಂದು ಮತ್ತೊಂದು ಹೆಸರು.

ಭಗಣಲತಾಂತಸಂತತಿಗೆ ಪಾಯ್ವ ವನೇಜವನಂ |
ಮುಗಿಯೆ ಮರಲ್ದು ಬಿಟ್ಟು ಬಿಸುಟೆಯ್ದೆ ಮದಶ್ರಮುಮಂ ||
ದಿಗಿಭದ ಕರ್ಣತಾಳಕಗಿದೆೞ್ದಳಿಜಾಲದವೋಲ್ |
ಗಗನದೊಳುರ್ವಿಯೊಳ್ ನೆಱೆಯೆ ಪರ್ಬಿದುದಂದು ತಮಂ ||

—ಲೀಲಾವತಿ

(v) **ಮನ್ದಾಕ್ರಾನ್ತಂ** ನೆರೆಯೆ ಮಭನಂತದ್ವಯಂಗದ್ವಯಂ ಮೇಣ್.

ಕಿಂಕುರ್ವಾಣಪ್ರವಣರರೆಬರ್ ಬರ್ಪಿನಂ ಕಾದು ತನ್ನಂ |
ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾ ||
ಲಂಕಾರಂಗಳ್ ನಯನಸುಖಮಂ ಮಾಡೆ ಬಂದರ್ಘ್ಯಮಂ ಯ |
ಕ್ಷಂ ಕೊಟ್ಟಂ ರಾಘವನ ಚರಣಕ್ಕಿನ್ನರಾರ್ ಧನ್ಯಜನ್ಮರ್ ||

—ಪಂಪರಾಮಾಯಣ

18ನೆಯ **ಧೃತಿಯಲ್ಲಿ** :

(i) **ಮಲ್ಲಿಕಾಯುತಮಾಲೆಯಪ್ಪುದು** ರಂಸಜಂಜಭರಂ ಬರಲ್.

ನೀರಜೋತ್ಪಲವರ್ಣನಾಡಿದನಾಡಿದಂ ಕಮಲೇಕ್ಷಣಂ |
ಚಾರುಹಾಸವಿಲಾಸನಾಡಿದನಾಡಿದಂ ಸುಭಗಂ ಶುಭಾ ||
ಕಾರನಾಡಿದನೆಂದು ಗೋಪಿಯರಾಡಿಸುತ್ತುಮಿರಲ್ಕೆ ಸಂ |
ಸಾರನಾಟಕಸೂತ್ರಧಾರಿ ಮುರಾರಿ ಕೈಪಱಿಗಾಡಿದಂ ||

—ಜಗನ್ನಾಥವಿಜಯ

19ನೆಯ **ಅತಿಧೃತಿಯಲ್ಲಿ** :

(i) ಕಣ್ಗೊಪ್ಪಲ್ ಮಸಜಂಸತಂತಗಮುಮಾ **ಶಾರ್ದೂಲವಿಕ್ರೀಡಿತಂ.**

ಕಲ್ಲೊಳ್ ತೋರ್ಪ ಪೊಗರ್ ಸುವರ್ಣದ ಗುಣಂ ಕಾಷ್ಠಂಗಳೊಳ್ ತೋರ್ಪ ಕಿ |
ಚ್ಚೆಲ್ಲಾ ಕಿಚ್ಚಿನ ಚಿಹ್ನಮಾ ಕೆನೆಯಿರಲ್ ಪಾಲೊಳ್ ಘೃತಚ್ಛಾಯೆಯೆಂ ||
ದೆಲ್ಲರ್ ಬಣ್ಣಿಪರಂತುಟೇ ತನುವಿನೊಳ್ ಚೈತನ್ಯಮುಂ ಬೋಧಮುಂ |
ಸೊಲ್ಲುಂ ಜೀವಗುಣಂಗಳೆಂದಱಿಪಿದಯ್ ರತ್ನಾಕರಾಧೀಶ್ವರಾ ||

—ರತ್ನಕರಾಧೀಶ್ವರಶತಕ

(ii) **ತರಳವೃತ್ತಮೆನಿಪ್ಪುದೊಪ್ಪಿರೆ** ನಂಭರಂಸಜಜಂಗಮುಂ.

ಮದನಮೋಹನಮಂತ್ರನಾದಮೊ ಸೇತುಗಟ್ಟಿದ ಕಾಮಸಂ |
ಮುದಸುಧಾಬ್ಧಿತರಂಗನಾದಮೊ ಲೋಕಮೆಲ್ಲಮನಿಕ್ಕಿ ಮೆ ||
ಟ್ಟಿದ ಮನೋಭವಸಿಂಹನಾದಮೊ ಪೇಟಿನಲ್ ರಸಗೀತದೊಳ್ |
ಪುದಿದು ವಾದ್ಯದೊಳೊಂದಿ ತಳ್ತುದು ಕಿಂಕಿಣೀಕಲಝುಂಕೃತಂ ||

—ಮಲ್ಲಿನಾಥಪುರಾಣ

(iii) ಒಪ್ಪಿರಲ್ ರಸಸಂತಜಜಂಗಂ ಪುಟ್ಟುವುದಾ **ಖಚರಪ್ಲುತಂ.**

ಬೀರವಟ್ಟಮನಾನಿರೆ ನೀನೀ ಸೂತಸುತಂಗೆಡೆಗೊಂಡು ಕೈ |
ವಾರದಿಂದೊಸೆದಿತ್ತೊಡಮೇನಾಯ್ತಾ ಖಳನಿಲ್ಲಿ ಧನಂಜಯ ||
ಕ್ರೂರಬಾಣಗಣಾವಳಿಯಿಂದಳ್ಕಾಡಿದೊಡಲ್ಲದೆ ವೈರಿಸಂ |
ಹಾರಕಾರಣಚಾಪಮನಾನೀ ಸಂಗರದೊಳ್ ಪಿಡಿಯೆಂ ಗಡಾ ||

—ಪಂಪಭಾರತ

20ನೆಯ **ಕೃತಿಯಲ್ಲಿ** :

(i) **ಉತ್ಪಲಮಾಲೆ**ಯಪ್ಪುದು ಭರಂನಭಭಂರಲಗಂ ನೆಗೞ್ದಿರಲ್.

ಸೊರ್ಕೆ ಶರೀರನಾರಿಧನಮೆನ್ನಪಿವೆಂದವರಲ್ಲಿ ಕಣ್ಮನಂ |
ಸಿರ್ಕೆ ವಿವೇಕಿಗಳ್ ನುಡಿದ ಧರ್ಮಮನೊಲ್ಲದೆ ಕೂಟಿ ಕೊರ್ಬಿನೊಳ್ ||
ಕರ್ಕಶವೃತ್ತಿಯೊಳ್ ನಡೆವ ಕಾಮುಕರಂತಕನೊಯ್ವ ಕಾಲದೊಳ್ |
ಮರ್ಕಟನಂತೆ ಪಲ್ಗಿರಿವರೇತಱ ಬಾೞಪರಾಜಿತೇಶ್ವರಾ ||

—ಅಪರಾಜಿತೇಶ್ವರ ಶತಕ

(ii) ಸಭರಂನಂಮಯಲಂಗಮುಂ ಬಗೊಳಲ್ **ಮತ್ತೇಭವಿಕ್ರೀಡಿತಂ.**

ಬಿಸಿಲಿಂ ಕಂದದ ಬೆಂಕಿಯಿಂ ಸೂಡದ ನೀರಿಂ ನಾಂದದುಗ್ರಾಸಿ ಭೇ |
ದಿಸಲುಂ ಬಾರದ ಚಿನ್ಮಯಂ ಮಱೆದು ತನ್ನೊಳ್ಪಂ ಪರಧ್ಯಾನದಿಂ ||
ಪಸಿವಿಂದಂ ಬಹುಬಾಧೆಯಿಂ ರುಜೆಗಳಿಂ ಕೇಡಾಗುವೀ ಮೆಯ್ಗೆ ಸಂ |
ದಿಸಿದಂ ತನ್ನನೆ ಚಿಂತಿಸಲ್ ಸುಖಿಯಲಾ ರತ್ನಾಕರಾಧೀಶ್ವರಾ ||

—ರತ್ನಾಕರಾಧೀಶ್ವರ ಶತಕ

(iii) ನಭಭಮಂಸಸಲಂಗಮುಮೊಪ್ಪಲ್ ಪೇೞ್ದಪರಾ **ಅನವದ್ಯ**ಮಂ.

ದ್ರುತವಿಲಂಬಿತಮಧ್ಯಲಯಂ ತತ್ಪಾನುಗತಾಳಗತಿತ್ರಯಂ |
ಜತಿಯೊಳೊಂದುವಿನಂ ಪದಿನೆಣ್ಬಂ ಚಾರಿ ಮನೋಹರಮಾಗೆ ವಿಂ ||
ಶತಿವಿಭೇದದಲಂಕೃತಿ ವಿದ್ಯಾಲಕ್ಷ್ಮಿಗಲಂಕೃತಿಯಾಗೆ ಭಾ |
ರತಿಕನೋಱೆಗೆ ಬಾಜಿಸಿದಂ ಚಿತ್ತಕ್ಕೆ ಚಮತ್ಕೃತಿಯಪ್ಪಿನಂ ||

—ಮಲ್ಲಿನಾಥಪುರಾಣಂ

(iv) ಭತ್ರಯಮುಂ ಮಸಸಂಲಗಮೊಪ್ಪಲ್ ತೋರ್ಪುದು ವೃತ್ತಮ**ದುಜ್ವಲಂ.**

ಅಯ್ದುಱಿವಾಡದೊಳಯ್ವರುಮಂ ನೀಂ ಕೂರ್ತಿರಿಸೆಂದೊಡಮೆಂತುಮೀ |
ಗೆಯ್ದುದನೊಲ್ಲದ ಕಾರಣದಿಂದಂ ನೋಡಿನಿತಾದುದು ನಿನ್ನೊಳೇ ||
ಗೆಯ್ದವನಲ್ಲನೆ ಧರ್ಮತನೂಜಂ ಪೇೞ್ದುದನಿನ್ನೆಮಗಿಂಬುಕೆಯ್ |
ಸಯ್ದರಿಯಾಗುಱಿದಾರೊಳಮೇವಂಗೊಳ್ಳದಿರಿಂ ಫಣಿಕೇತನಾ ||

—ಪಂಪಭಾರತ

(v) ರಂನಭಂಮಸಸಲಂಗಮೆ **ಛಂದೋವೃತ್ತ**ಮದೆಂದುಱೆಪೇೞ್ದಪರ್.

ಚನ್ದ್ರಕಾನ್ತಶಿಲೆಯಲ್ಲಿ ನವಶ್ರೀಖಂಡಮನಿಟ್ಟು ಕರಾಬ್ಜದಿಂ |
ಚನ್ದ್ರಿಕಾಲಸದಪಾಂಗೆಯರುದ್ಧೃತಸೌರಭವಿಶ್ವಸಿತಾಂಗಿಯರ್ ||

ಸಾನ್ದ್ರಚಂದನದ ಘಟ್ಟಿಗೆ ನೀರಂ ಪಾರದೆ ಮಾಱ್ಪುದನೀಕ್ಷಿಸು |
ತ್ತಿನ್ದ್ರನಂದನನ ಪೋಲ್ವ ಭುಜಂಗರ್ ಕೌತುಕದಿಂ ತಲೆದೂಗುವರ್ ||

—ರಾಜಶೇಖರವಿಲಾಸ

21ನೆಯ ಪ್ರಕೃತಿಯಲ್ಲಿ :

(i) ತೋಱಲ್ ಮಂರಂಭ ಮೂಯಗಣಮುಮದೆ ತಾಂ
ಸ್ರಗ್ಧರಾವೃತ್ತಮಕ್ಕುಂ.

ಈ ವಜ್ರಾವರ್ತಕೋದಂಡಮನವಯವದಿಂದೇಱಿಸಲ್ ಸಾಲ್ವ ದೋರ್ದಂ|
ಡಾವಷ್ಟಂಭಪ್ರಚಂಡಂ ಜನಕಜೆಗೆ ವರಂ ಬರ್ಪುದೆಂಬೀವ್ಯವಸ್ಥಾ ||
ರಾವಂ ಕರ್ಣಾವತಂಸಂ ಪಸರಿಸೆ ನಿಜಪೀಠಂಗಳಿಂದೆಳ್ದುದಾಗಳ್ |
ತೀವ್ರತ್ವರ್ಪರ್ಣ್ಣೆಗಂ ಭೂಷಣರುಚಿ ಕಕುಭಾನೀಕಮಂ ರಾಜಲೋಕಂ ||

—ಪಂಪರಾಮಾಯಣ

(ii) ನಜಭಜಜಂಜರಂ ಬಗೆಗೊಳುತ್ತಿರೆ **ಚಂಪಕಮಾಲೆ**ಯೆಂದಪರ್.

ಎನಗನುಕೂಲಮಕ್ಕೆ ಗುಣವರ್ಮನ ಜಾಣ್ನುಡಿ ಪಂಪನಿಂಪು ಪೊ |
ನ್ನನ ಬಗೆ ನಾಗವರ್ಮನ ಬಹುಜ್ಞತೆ ರನ್ನನ ಕಾನ್ತಿ ನಾಗಚಂ ||
ದ್ರನ ರಸಭಾವಮುಗ್ಗಳನ ವಕ್ರತೆ ನೇಮಿಯ ದೇಸೆ ಪುಷ್ಪ ಬಾ |
ಣನ ಮೃದುಬಂಧಮಿಾ ಕವಿಗಳಲ್ತೆ ಜಿನೇಂದ್ರಪುರಾಣಕರ್ತೃಗಳ್ ||

(ಜನ್ನ) ಕವಿಚರಿತ್ರೆ I

22ನೆಯ ಆಕೃತಿಯಲ್ಲಿ :

(i) ಸತತಂನಂಸಂರರಂಗಂ ನೆರೆದೆಸೆಯೆ **ಮಹಾಸ್ರಗ್ಧರಾವೃತ್ತ**ಮಕ್ಕುಂ.

ಮೊದಲೊಳ್ ರಾಜ್ಯಾಭಿಷೇಕಪ್ರಬಲಜಲಮೆ ಕರ್ಚಿತ್ತು ದಾಕ್ಷಿಣ್ಯಮಂ ಹೋ|
ಮದ ಧೂಮಂ ಚಿತ್ತದೊಳ್ ತೊಟ್ಟನೆ ಮಲಿನತೆಯಂ ಪೊರ್ದಿಸಿತ್ತೊಪ್ಪಿರಲ್ ಕ ||
ಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱೆಯಿಸಿತಧಿಕಕ್ಷಾನ್ತಿಯಂ ವಿಪ್ರವರ್ಗಾ|
ಸ್ಪದದರ್ಭಾನೀಕಸಮ್ಮಾರ್ಜನಿ ಕಳೆದುದೆನಲ್ ದುಷ್ಕರಪ್ಪರ್ ನೃಪಾಲರ್ ||

—ಕಾದಂಬರಿ I

(ii) ಏೞ್ ಭಗಣಂಗಳುಮೊರ್ಗುರುವುಂ ಬರಲಾ **ವನಮಂಜರಿ**
ಯಪ್ಪುದು ಕೇಳ್.

ಮಂದರಭೂಧರಮಂದಿರಭಾಸುರಶಾಂಕರಿ ಶಂಭುಸುಖಂಕರಿ ಸಂ |
ಕ್ರಂದನವಂದಿತೆ ಚಂದನಗಂಧಿ ಸುಧಾಕರಕೇಳಿಶುಭಾಕರಪೂ ||
ರ್ಣೇಂದುಮುಖಾನ್ವಿತೆ ಕುಂದದರಸ್ಮಿತರಾಜಿತೆ ನಿರ್ಜರಪೂಜಿತೆ ಸೈ|
ಪಿಂದಮೆ ರಕ್ಷಿಪುದಿಂದಿರೆಗಾದ್ಯೆ ಜಗನ್ನುತೆ ಪರ್ವತರಾಜಸುತೇ ||

—ವೃಷಭೇಂದ್ರವಿಜಯ

25ನೆಯ **ಅಭಿಕೃತಿಯಲ್ಲಿ :**

**ಕ್ರೌಂಚಪದಂ** ತಾನೆಂದಪರಾರ್ಯರ್ ಭಮಸಭನನನನಗಮಿವು ನೆರೆದಿರಲ್.
ಇದಕ್ಕೆ ಚಿತ್ರಲತಿಕೆಯೆಂದು ಬೇರೊಂದು ಹೆಸರು.

ಕೇದಗೆಪೂವಿಂ ಚಾದಗೆ ಬಾಯಂ ಬಿಡೆ ಬಿಡುತರೆ ಬಿಡುವನಿ ಕಡುವಿಸಿಲಂ |
ಸೋದು ಪಸುರ್ಪಿಂ ಜಾದಿಯ ಕಂಪಿಂ ಕಡವಿನ ಕೊಡಸಿಗೆಯಲರ್ಗಳ ಸೊವಡಿಂ ||
ಕೋದಿದಿರ್ಗೊಳ್ವಾಹ್ಲಾದಕರಂ ಸೋಗೆಯ ದನಿ ಪೊಱಮಡೆ ಪಡುವಣ ದೆಸೆಯಿಂ |
ದೂದೆ ಸಮೃದ್ಧಾವೋದಮೆಲರ್ ಬಂದುದು ಮಱಿ ಪಸರಿಸೆ ಮಿಸುಗುವ
ಪೊಸಕಾರ್ ||

—ನೇಮಿನಾಥಪುರಾಣ

26ನೆಯ **ಉತ್ಕೃತಿಯಲ್ಲಿ :**

ಜಸಂನಭಜಸಂನಭಲಗಂ ಬಗೆಗೊಳಲ್ ಥೊಗಯಿಸಿರ್ಪುದು **ಶಂಭುನಟನಂ.**

ಅಳಿಪ್ರಭಲಲಾಟಗಚಲಾಲಕೆ ಖಲಾಪಹೆ ಬಲಾನ್ವಿತೆ ಮಿಲದ್ಘನಗುಣೇ |
ಬಳಾನುಜಬಲಿಪ್ರಿಯೆ ತಲಾಂಚಿತಜಲೋದ್ಭವೆ ಬಲಾಹಿತಮುಖಾಮರನತೇ ||
ಗಳಾನ್ವಿತಹಲಾಹಲಬಿಲೇಶಯ ಕಳೇಬರವಿಳಾಸದೆ ಕಳಂಕರಹಿತೇ |
ಕಳಾಧರಕಳಾಧರೆ ಸುಲೋಚನೆ ಕಲೋಜ್ವಲೆ ಶಿಲೋಚ್ಚಯಸುತೇ ಜಯಜಯ ||

—ರಾಜಶೇಖರವಿಲಾಸ

## 2. ಅರ್ಧಸಮವೃತ್ತಗಳು

ಇವು ನಾಲ್ಕು ಮಾತ್ರ ಈಗ ದೊರೆತಿವೆ. ಯಾವುವೆಂದರೆ :

(i) **ನಾಗ**—

ಒಂದು ಮೂರನೆಯ ಪಾದಗಳಲ್ಲಿ ಒಂದು ತಗಣವೂ ಒಂದೊಂದು ಗುರು ಲಘುಗಳೂ ; ಎರಡು ನಾಲ್ಕನೆಯ ಪಾದಗಳಲ್ಲಿ ಒಂದು ತಗಣವೂ ಒಂದು ಗುರುವೂ ಇರುವುವು.

ಎನ್ನೊಲ್ದು ಬೇಟ್ದು | ದನ್ನೆಟ್ಟನೀ ||
ಗುನ್ನಾಲ್ವರೆಣ್ಬ | ರುನ್ನಾಗರೊಳ್ ||

—ಶಬ್ದಸ್ಮೃತಿ

(ii) **ವಿನಿಯೋಗಿನಿ**—

ಇದರ ವಿಷಮಪಾದಗಳಲ್ಲಿ ಸಸಜಗಣಗಳೂ ಒಂದು ಗುರುವೂ ; ಸಮಪಾದಗಳಲ್ಲಿ ಸಭರಗಣಗಳೂ ಒಂದು ಲಘುವೂ ಒಂದು ಗುರುವೂ ಇರುವುವು.

ಬಸವಟ್ಟಿದು ಚೆನ್ನಪಟ್ಟಣಂ |
ಪೊಸತಾಂಧ್ರಂಗೆ ಪೊದಳ್ದುದಿಟ್ಟಣಂ ||

ಅಸಿದಾದುವಂಗೆ ಮಂಗಲಂ |
ಬೆಸದಿಂ ಪಿಂಗಿತು ನಾಗಮಂಗಲಂ ||

—ಚಿಕ್ಕದೇವರಾಜವಿಜಯ

(iii) **ವಸಂತಮಾಲಿಕೆ—**

ಇದರ ವಿಷಮಪಾದಗಳಲ್ಲಿ ಸಸಜಗಣಗಳೂ ಎರಡು ಗುರುಗಳೂ, ಸಮಪಾದಗಳಲ್ಲಿ ಸಭರಯಗಣಗಳೂ ಬರುವುವು.

ಎಳಗಲ್ಲದೊಳಿಟ್ಟ ದಿಟ್ಟಬಟ್ಟಂ
ಕೆಳೆಗೊಣ್ಡೊಪ್ಪುವ ಪಚ್ಚೆಗನ್ನ ವಚ್ಚಂ ||
ಪೊಳೆವಲ್ ಪೊಗವಟ್ಟನಂದದಿಂದೊಂ |
ದೆಳಗಂದಂ ಕಳೆಗುಂ ಜಗಕ್ಕೆ ಕಂದಂ ||

—ಚಿಕ್ಕದೇವರಾಜವಿಜಯ

(vi) **ಪುಷ್ಪಿತಾಗ್ರ—**

ಇದರ ವಿಷಮಪಾದಗಳಲ್ಲಿ ನನರಯಗಣಗಳೂ, ಸಮಪಾದಗಳಲ್ಲಿ ನಜಜರ ಗಣಗಳೂ ಒಂದು ಗುರುವೂ ಬರುವುವು.

ಪರಿವೃತನೃಪತುಂಗದೇವಮಾರ್ಗಾಂ |
ತರಗತಬೋಧವಿಶೇಷಯಾನಪಾತ್ರಂ ||
ಪರಮಗುಣಪರೀತಕಾವ್ಯರತ್ನಾ |
ಕರದುರುಪಾರಮನೆಯ್ದುಗುಂ ಮಹಾತ್ಮಂ ||

—ಕವಿರಾಜಮಾರ್ಗ

## ಪರಿಶಿಷ್ಟ

ಮೇಲೆ ಹೇಳಿದ ವರ್ಣವೃತ್ತಪ್ರಕರಣದಲ್ಲಿ ಪ್ರಸಿದ್ಧವಾಗಿರುವ ಕೆಲವು ಸಮವೃತ್ತಗಳು ಮಾತ್ರ ಹೇಳಲ್ಪಟ್ಟವೆಯಷ್ಟೆ. ಆದರೆ ಇನ್ನೂ ಅನೇಕ ಕೋಟಿ-ಸಂಖ್ಯೆಯ ಸಮವೃತ್ತಗಳು ಉಕ್ತೆ ಮೊದಲಾದ ಇಪ್ಪತ್ತಾರು ಛಂದಸ್ಸುಗಳಲ್ಲಿರುವುವು. ಆ ವಿಷಯದ ಗಣಿತವಿಚಾರವು ಛಂದಶ್ಶಾಸ್ತ್ರದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಅದರಲ್ಲಿ ಮುಖ್ಯವಾದ ಭಾಗವೇನೆಂದರೆ :

(i) ಯಾವುದಾದರೂ ಒಂದು ಸಮವೃತ್ತವು ಉಕ್ತೆ ಮೊದಲಾದ ಛಂದಸ್ಸುಗಳಲ್ಲಿ ಯಾವ ಛಂದಸ್ಸಿನದು ?

(ii) ಈ ಸಮವೃತ್ತವು ಈ ಛಂದಸ್ಸಿನಲ್ಲಿ ಎಷ್ಟನೆಯದು ?

(iii) ಇಪ್ಪತ್ತಾರು ಛಂದಸ್ಸುಗಳಲ್ಲಿ ಯಾವ ಯಾವುದರಲ್ಲಿ ಎಷ್ಟೆಷ್ಟು ಸಮವೃತ್ತಗಳಿರುವುವು ?

(iv) ಈ ಛಂದಸ್ಸುಗಳಲ್ಲಿ ಯಾವುದಾದರೂ ಒಂದು ಛಂದಸ್ಸಿನ ಎಷ್ಟನೆಯ ದಾದರೂ ಒಂದು ಸಮವೃತ್ತದ ಸ್ವರೂಪವೇನು ?

ಎಂಬೀ ಅಂಶವನ್ನು ತಿಳಿಯುವ ಬಗೆಯು ಇಲ್ಲಿ ವಿವರಿಸಲ್ಪಡುವುದು.

(i) ನಮಗೆ ಬೇಕಾದ ಸಮವೃತ್ತದ ಒಂದು ಪಾದಕ್ಕೆ ಎಷ್ಟು ಅಕ್ಷರಗಳಿವೆಯೋ ಅಷ್ಟನೆಯ ಛಂದಸ್ಸಿನದು ಆ ವೃತ್ತವೆಂದು ಅರಿಯಬೇಕು.

1. ಚಪಲಾಂಬಕಿಯಿಂ.
2. ಮಿಳಿರ್ದು ಮಿಳ್ಳಿಸೆ ವಾನರಕೇತನಂ.

ಇವುಗಳಲ್ಲಿ ಮೊದಲನೆಯದಕ್ಕೆ ಆರು ಅಕ್ಷರಗಳಿರುವುದರಿಂದ ಅದು ಆರನೆಯ ಛಂದಸ್ಸಿನದು (ಗಾಯತ್ರಿ). ಎರಡನೆಯದಕ್ಕೆ ಹನ್ನೆರಡಕ್ಷರಗಳಿರುವುದರಿಂದ ಅದು ಹನ್ನೆರಡನೆಯ ಛಂದಸ್ಸಿನದು (ಜಗತಿ).

(ii) ನಮಗೆ ಬೇಕಾದ ಸಮವೃತ್ತದ ಒಂದು ಪಾದದ ಅಕ್ಷರಗಳ ಮೇಲೆ ಮೊದಲನೆಯ ಅಕ್ಷರದಿಂದ ಒಂದನ್ನು ಆರಂಭಿಸಿ ದ್ವಿಗುಣಗಳಾದ ಸಂಖ್ಯೆಗಳನ್ನು ಕ್ರಮವಾಗಿ ಬರೆದು ಲಘ್ವಕ್ಷರಗಳ ಮೇಲಿರುವ ಸಂಖ್ಯೆಗಳ ಮೊತ್ತಕ್ಕೆ ಒಂದನ್ನು ಸೇರಿಸಲು ಅದು ಆ ವೃತ್ತದ ಸಂಖ್ಯೆಯಾಗುವುದು. ಈ ಉಪಾಯಕ್ಕೆ ಉದ್ದಿಷ್ಟವೆಂದು ಹೆಸರು.

| | | | | | | | | | | | |
|---|---|---|---|---|---|---|---|---|---|---|---|
| 1 | 2 | 4 | 8 | 16 | 32 | 64 | 128 | 256 | 512 | 1024 | 2048 |
| ಮಿ | ಳಿ | ರ್ದು | ಮಿ | ಳ್ಳಿ | ಸೆ | ವಾ | ನ | ರ | ಕೇ | ತ | ನಂ |

ಇದರಲ್ಲಿ ಲಘುಗಳ ಮೇಲಣ ಸಂಖ್ಯೆಗಳ ಒಟ್ಟು $1+2+4+16+32+128+256+1024=1463$ ; ಇದಕ್ಕೆ ಒಂದನ್ನು ಸೇರಿಸಲು 1464.

ಆದುದರಿಂದ ಈ ವೃತ್ತವು ಜಗತೀ ಛಂದಸ್ಸಿನಲ್ಲಿ 1464ನೆಯದೆಂದು ತಿಳವುದು.

(iii) ಉಕ್ತೆ ಮೊದಲಾದ ಆಯಾ ಛಂದಸ್ಸಿನ ಅಕ್ಷರಗಳ ಸಂಖ್ಯೆಯಷ್ಟು ಗುರುಗಳನ್ನು ಮೊದಲು ಸಾಲಾಗಿ ಬರೆದು ಅವುಗಳ ಮೊದಲನೆಯ ಸ್ಥಾನದಲ್ಲಿ ಒಂದು ಗುರುವಿನ ಕೆಳಗೆ ಒಂದು ಲಘುವೂ ಎರಡನೆಯ ಸ್ಥಾನದಲ್ಲಿ ಎರಡು ಗುರುಗಳ ಕೆಳಗೆ ಎರಡು ಲಘುಗಳೂ, ಮೂರನೆಯ ಸ್ಥಾನದಲ್ಲಿ ನಾಲ್ಕು ಗುರುಗಳ ಕೆಳಗೆ ನಾಲ್ಕು ಲಘುಗಳೂ ಹೀಗೆ ಮುಂದುಮುಂದಕ್ಕೆ ಇಪ್ಪತ್ತಾರರವರೆಗೂ ಆಯಾ ಸ್ಥಾನದಲ್ಲಿ ಗುರುಲಘುಗಳು ಅದರ ಹಿಂದಿನ ಸ್ಥಾನಕ್ಕಿಂತ ದ್ವಿಗುಣವಾಗಿರುವಂತೆ ಕಡೆಗೆ ಎಲ್ಲವೂ ಲಘುಗಳಾಗುವವರೆಗೆ ಗುರುಲಘುಗಳನ್ನು ಸಾಲುಸಾಲಾಗಿ ಬರೆವುದು. ಇದಕ್ಕೆ ಪ್ರಸ್ತಾರವೆಂದು ಹೆಸರು.

ಇಲ್ಲಿ ಮೊದಲ ನಾಲ್ಕು ಛಂದಸ್ಸುಗಳ ಪ್ರಸ್ತಾರವನ್ನು ಮಾದರಿಗಾಗಿ ತೋರಿಸಿದೆ.

| ಉಕ್ತೆ | ಅತ್ಯುಕ್ತೆ | ಮಧ್ಯೆ | ಪ್ರತಿಷ್ಠೆ |
|---|---|---|---|
| 1 — | 1 — — | 1 — — — | 1 — — — — |
| 2 ⌣ | 2 ⌣ — | 2 ⌣ — — | 2 ⌣ — — — |
| | 3 — ⌣ | 3 — ⌣ — | 3 — ⌣ — — |
| | 4 ⌣ ⌣ | 4 ⌣ ⌣ — | 4 ⌣ ⌣ — — |
| | | 5 — — ⌣ | 5 — — ⌣ — |
| | | 6 ⌣ — ⌣ | 6 ⌣ — ⌣ — |
| | | 7 — ⌣ ⌣ | 7 — ⌣ ⌣ — |
| | | 8 ⌣ ⌣ ⌣ | 8 ⌣ ⌣ ⌣ — |
| | | | 9 — — — ⌣ |
| | | | 10 ⌣ — — ⌣ |
| | | | 11 — ⌣ — ⌣ |
| | | | 12 ⌣ ⌣ — ⌣ |
| | | | 13 — — ⌣ ⌣ |
| | | | 14 ⌣ — ⌣ ⌣ |
| | | | 15 — ⌣ ⌣ ⌣ |
| | | | 16 ⌣ ⌣ ⌣ ⌣ |

ಇದರಿಂದ ಉಕ್ತಾಛಂದಸ್ಸಿನಲ್ಲಿ ಎರಡು ವೃತ್ತಗಳು, ಅತ್ಯುಕ್ತೆಯಲ್ಲಿ ನಾಲ್ಕು ವೃತ್ತಗಳು, ಮಧ್ಯಾಛಂದಸ್ಸಿನಲ್ಲಿ ಎಂಟು ವೃತ್ತಗಳು, ಪ್ರತಿಷ್ಠೆಯಲ್ಲಿ ಹದಿನಾರು ವೃತ್ತಗಳು ಎಂದು ತಿಳಿಯಬರುವುದು. ಇದರಂತೆ ಉಳಿದ ಛಂದಸ್ಸುಗಳಿಗೂ ಪ್ರಸ್ತಾರ ಹಾಕುವುದರಿಂದ ಆಯಾ ಛಂದಸ್ಸುಗಳಲ್ಲಿರುವ ವೃತ್ತಗಳನ್ನು ಕಂಡುಹಿಡಿಯಬಹುದು. ಹೀಗೆ ಇಪ್ಪತ್ತಾರು ಛಂದಸ್ಸುಗಳಲ್ಲಿಯೂ ಉಂಟಾಗುವ ವೃತ್ತಗಳ ಒಟ್ಟು ಸಂಖ್ಯೆಯು 13,42,17,726.

(iv) ನಮಗೆ ಬೇಕಾದ ವೃತ್ತದ ಸ್ವರೂಪವನ್ನು ಮೇಲೆ ಹೇಳಿದ ಪ್ರಸ್ತಾರದಿಂದಲೇ ತಿಳಿಯಬಹುದಾದರೂ ಅದಕ್ಕಿಂತ ಸುಲಭೋಪಾಯದಿಂದ ಕಂಡುಹಿಡಿಯಬಹುದು. ಹೇಗೆಂದರೆ—ನಮಗೆ ಬೇಕಾದ ವೃತ್ತದ ಸಂಖ್ಯೆಯನ್ನು ಆ ವೃತ್ತದ ಛಂದಸ್ಸು ಎಷ್ಟನೆಯದೋ ಅಷ್ಟು ಸಾರಿ ಅರ್ಧಿಸುವುದು. ಅರ್ಧಿಸಲ್ಪಡುವ ಸಂಖ್ಯೆಯು ವಿಷಮವಾದರೆ ಅದಕ್ಕೆ ಒಂದನ್ನು ಸೇರಿಸಿ ಅರ್ಧಿಸಬೇಕು. ಹಾಗೆ ಅರ್ಧಿಸುವಲ್ಲಿ ಒಂದನ್ನು ಸೇರಿಸಿದರೆ ಗುರುವೆಂದೂ, ಒಂದನ್ನು ಸೇರಿಸದಿರಲು ಲಘುವೆಂದೂ ತಿಳಿಯಬೇಕು. ಈ ಉಪಾಯಕ್ಕೆ ನಷ್ಟವೆಂದು ಹೆಸರು.

ಮಧ್ಯಾಛಂದಸ್ಸಿನ ಐದನೆಯ ವೃತ್ತದ ಸ್ವರೂಪವೇನು ? ಎಂಬುದನ್ನು ತಿಳಿಯೋಣ. ಮಧ್ಯಾಛಂದಸ್ಸು ಇಪ್ಪತ್ತಾರು ಛಂದಸ್ಸುಗಳಲ್ಲಿ ಮೂರನೆಯದಾದುದರಿಂದ

ನಮಗೆ ಬೇಕಾದ ವೃತ್ತದ ಸಂಖ್ಯೆಯಾದ ಐದನ್ನು ಮೂರು ಸಾರಿ ಅರ್ಧಿಸಬೇಕು. ಐದು ವಿಷಮವಾದುದರಿಂದ ಒಂದನ್ನು ಸೇರಿಸಿ ಅರ್ಧಿಸಬೇಕು.

| | | |
|---|---|---|
| $5+1=6\div2=3$ | ಒಂದನ್ನು ಸೇರಿಸಿ ಅರ್ಧಿಸಿದುದರಿಂದ ಮೊದಲನೆಯ ಅಕ್ಷರ ಗುರು | — |
| $3+1=4\div2=2$ | ಇಲ್ಲಿಯೂ ಒಂದನ್ನು ಸೇರಿಸಿ ಅರ್ಧಿಸಿದುದರಿಂದ ಎರಡನೆಯ ಅಕ್ಷರವೂ ಗುರು | — |
| $2\div2=1$ | ಈ ಸಾರಿ ಒಂದನ್ನು ಸೇರಿಸದೆ ಅರ್ಧಿಸಿದುದರಿಂದ ಮೂರನೆಯ ಅಕ್ಷರವು ಲಘು | ⏑ |

ಆದುದರಿಂದ ಆ ವೃತ್ತದ ಸ್ವರೂಪವು — — ⏑ ಎಂದು ತಿಳಿವುದು.

## ೩. ಮಾತ್ರಾವೃತ್ತಪ್ರಕರಣ

ಕವಿಗಳು ಇಚ್ಛಾನುಸಾರವಾಗಿ ಹೊಸಹೊಸ ಮಾತ್ರಾವೃತ್ತಗಳನ್ನು ಕಲಿಸಿರುವರು. ಹಾಗೆ ಇನ್ನೂ ಅನೇಕ ವಿಧವಾಗಿ ಕಲ್ಪಿಸಲೂಬಹುದು. ಇಲ್ಲಿ ಪ್ರಸಿದ್ಧವಾಗಿರುವ ಕೆಲವು ಮಾತ್ರಾವೃತ್ತಗಳಿಗೆ ಮಾತ್ರ ಲಕ್ಷಣೋದಾಹರಣೆಗಳು ತಿಳಿಸಲ್ಪಡುವುವು.

### 1. ಲಲಿತ

ಪ್ರತಿಪಾದದಲ್ಲಿಯೂ ಪಂಚಮಾತ್ರಾಗಣ ಮೂರೂ, ಚತುರ್ಮಾತ್ರಾಗಣವೊಂದೂ ಇರುವ ನಾಲ್ಕು ಪಾದಗಳುಳ್ಳುದ್ದು.

ಸಂಕುಗೊರಲೊಳ್ ತಳ್ತ ಮುತ್ತಿನ ಸರಂಗಳ್ |
ಕೊಂಕಿಡಿದ ಪೆರ್ಬುಲಿಯುಗುರ್ ಸೊಬಗು ವತ್ಸಂ ||
ಕೆಂಕವಣೆ ಕೆತ್ತಿಸಿದ ತಾಳಿ ಪದಕಂಗಳ್ |
ಸೋಂಕಲೆರ್ದೆಗೊಣ್ಡುವನ ಪೆಣ್ಗಳೆರ್ದೆಗೊಣ್ಡಂ ||

—ಜಗನ್ನಾಥವಿಜಯ

### 2. ಉತ್ಸಾಹ

ಪ್ರತಿಪಾದದಲ್ಲಿಯೂ ತ್ರಿಮಾತ್ರಾಗಣವೇಳೂ, ಒಂದು ಗುರುವೂ ಇರುವ ನಾಲ್ಕು ಪಾದಗಳುಳ್ಳುದ್ದು.

ಅನ್ತಕಾನ್ತಕಂ ದಿಟಕ್ಕೆ ದೇವ ನೀನೆ ಭಾವಿಸಂ |
ದನ್ತಜಿಂದೆ ಕಾವುದೆನ್ನನಾವತೆಱದೊಳಂ ಭಯ |
ಭ್ರಾನ್ತನಂ ಬಱಿಕ್ಕಮೆನ್ತುಮಾಪದರ್ಥಯುಕ್ತರೊಳ್ |
ಶಾನ್ತಿಯಂ ಸಮನ್ತು ಮಾಡುವುದು ಗುಣಂ ಮಹತ್ತರಂ ||

—ಚಂದ್ರಪ್ರಭಪುರಾಣ

### 3. ಅಕ್ಕರಿಕೆ

ಪ್ರತಿಪಾದದಲ್ಲಿಯೂ ಚತುರ್ಮಾತ್ರಾಗಣ ಆರೂ, ಒಂದು ಗುರುವೂ ಇರುವ ನಾಲ್ಕು ಪಾದಗಳುಳ್ಳುದ್ದು.

ಸುರನುತಚರಣೇ ವರಗುಣಭರಣೇ ಖರರುಚಿಬಿಂಬಗತೇ |
ಸರಸಿಜವದನೇ ಸುರುಚಿರರದನೇ ಪುರಹರಣಾಂಗಯುತೇ ||
ಕರಧೃತನಲಿನೇ ಪರಿಹೃತಮಲಿನೇ ಹರಿವಿಧಿಶಕ್ರನುತೇ |
ಕರಿರಿಪುಗಮನೇ ಹರಿರಿಪುಶಮನೇ ಪೊರೆ ಗಿರಿರಾಜಸುತೇ ||

—ರಾಜಶೇಖರವಿಲಾಸ

## 4. ಲಯಗ್ರಾಹಿ

ಪ್ರತಿಪಾದದಲ್ಲಿಯೂ ಐದು ಮಾತ್ರೆಯ ಗಣವೇಳೂ, ನಾಲ್ಕು ಮಾತ್ರೆಯ ಗಣವೊಂದೂ ಇರುವ ನಾಲ್ಕು ಪಾದಗಳುಳ್ಳದ್ದು.

ಒಂದುದೆಸೆಯೊಳ್ ತುರುಕರೊಂದುಕಡೆಯೊಳ್ ಮೊರಸರೊಂದೆಸೆಯೊಳಾರೆಯರ
ಬೃಂದಮಳವಿಂ ಬೇ |
ಱೊಂದುಬಳಿಯೊಳ್ ತಿಗುಳರೊಂದಿರವಿನೊಳ್ ಕೊಡಗರೊಂದು ಕೆಲದೊಳ್
ಮಲೆಪರೊಂದುವೆರೆದೆಲ್ಲರ್ ||
ಸಂದಣಿಸಿ ಕಾಳೆಗಕೆ ಮುಂದುವರಿವನ್ನ ಮದಟಿಂದವರ ತಟ್ಟುಗಳ ಪಂದಲೆಗಳಂ ದಿ |
ಗ್ಬಲಿಂದಬಲಿಯಿತ್ತು ನಲವಿಂದೆ ಚಿಕದೇವನೃಪನಂದವಿುಗೆ ಪೆರ್ಜಸಮನೊಂದಿ
ಸೊಗವಾಳ್ಗುಂ ||

—ಚಿಕ್ಕದೇವರಾಜಬಿನ್ನಪಂ

## 5. ಲಯೋತ್ತರ

ಪ್ರತಿಪಾದದಲ್ಲಿಯೂ ತ್ರಿಮಾತ್ರಾಗಣವು ಹದಿನಾಲ್ಕೂ, ಪಂಚಮಾತ್ರಾಗಣವೊಂದೂ ಇರುವ ನಾಲ್ಕು ಪಾದಗಳುಳ್ಳದ್ದು.

ತುಱುಗೆ ತುಂಬಿಗುರುಳ ಬಂಬಲಿದೆ ಕಪೋಲರಂಗಮೊಳ್ ತುಱುಂಕೆ ಪೊಂಗರಂಗ
ದೊಳ್ ಮಲಂಗೆ ವಿಜಯಮಂಗದೊಳ್ |
ಮಿಱುಗೆ ಪಲ್ಲ ಚವಿಗಳೊಲೆದು ನೆಲಸೆ ಚೆಲ್ವು ಯಾನದೊಳ್ ಬೆಡಂಗು ಬಳೆಯೆ
ಮಾನದೊಳ್ ಮನಂ ತೊಡಂಕೆ ದಾನದೊಳ್ ||
ನೆಱೆಯೆ ನವಪಯೋಧರೋತ್ಥಕುಂಭಮುಲಿಯೆ ಪಾದದೊಳ್ ಚಲಾಂದುಕಂ
ವಿನೋದದೊಳ್ ಕಡಂಗೆ ಮಧುರವೋದದೊಳ್ |
ಮೆಱೆದು ಪುಗುಗುಮಂಗನೆಯರುಮಂಕದಾನೆಯುಂ ನಮನ್ನಿಕಾಮನಿಖಿಲ
ಭುವನಮುಂ ತದೀಯರಾಜಭವನಮಂ ||

—ಲೀಲಾವತಿ

ಮೇಲಿನವು ಐದು ವೃತ್ತಗಳಲ್ಲಿಯೂ ⏑ —, ⏑ — ⏑, ⏑ — ⏑⏑, ⏑ — —. ಈ ಗಣಗಳು ಬರಕೂಡದು.

## 6. ಕಂದ

ಚತುರ್ಮಾತ್ರಾಗಣವು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಪೂರ್ವೋತ್ತರಾರ್ಧಗಳ ವಿಷಮಸ್ಥಾನಗಳಲ್ಲಿ ಮಧ್ಯಗುರುವುಳ್ಳ ಗಣಗಳು ಬರಕೂಡದು. ಆರನೆಯ ಸ್ಥಾನದಲ್ಲಿ (⏑ — ⏑) ಜ ಗಣವಾಗಲಿ ನಾಲ್ಕು ಲಘುವುಳ್ಳ (⏑ ⏑ ⏑ ⏑) ಗಣ

ವಾಗಲಿ ಬಂದು ಮೊದಲಿನ ಹ್ರಸ್ವದ ಮುಂದೆ ಯತಿ ಇರಬೇಕು. ಎಂಟನೆಯ ಸ್ಥಾನಗಳಲ್ಲಿ ಅಂತ್ಯ ಗುರುವುಳ್ಳ (⌣ ⌣ —, — —) ಗಣಗಳೇ ಬರಬೇಕು.

ಇರದೊಯ್ವುದು ತನ್ನಿಚ್ಚೆಗೆ |
ವರಯೌವನವಂ ಪುರುಷನಂ ಪ್ರಕೃತಿ ರಜಂ ||
ಬೊರೆದು ತಿರಿಪುತ್ತ ಸುಟ್ಟುಱಿ |
ತೆರಳ್ಚಿ ತಱಗೆಲೆಯನುಯ್ವ ತೆಱದಿಂದೆತ್ತಂ ||

—ಕಾದಂಬರಿ

## 7. ಷಟ್ಪದಿ

ಇದು ಆರು ಪಾದಗಳುಳ್ಳ ಮಾತ್ರಾವೃತ್ತವು. ಇದರಲ್ಲಿ ಒಂದೆರಡು ನಾಲ್ಕೈದನೆಯ ಪಾದಗಳು ಸಮಾನಗಳಾಗಿಯೂ, ಮೂರಾರನೆಯ ಪಾದಗಳು ಮಿಕ್ಕ ಪಾದದ ಒಂದೂವರೆಯಷ್ಟು ಗಣಗಳೂ ಒಂದು ಗುರುವೂ ಉಳ್ಳುವಾಗಿಯೂ ಇರುವುವು. ಇದು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ, ಎಂದಾರು ವಿಧವು.

### ಶರಷಟ್ಪದಿ

ನಾಲ್ಕು ಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ಎರಡೆರಡೂ, ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರಲು ಶರಷಟ್ಪದಿಯೆನಿಸುವುದು. ⌣ — ⌣ ಈ ಗಣವು ಬರಕೂಡದು.

ಈಶನ ಕರುಣೆಯ
ನಾಶಿಸು ವಿನಯದಿ
ದಾಸನ ಹಾಗೆಯೆ ನೀ ಮನವೇ |
ಕ್ಲೇಶದ ವಿಧವಿಧ
ಪಾಶವ ಹರಿದು
ಲಾಸದಿ ಸತ್ಯವ ತಿಳಿ ಮನವೇ ||

—ಪದ್ಯಸಾರ

### ಕುಸುಮಷಟ್ಪದಿ

ಅಯ್ದು ಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ಎರಡೆರಡೂ, ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರಲು ಕುಸುಮಷಟ್ಪದಿಯಾಗುವುದು. ⌣ — ⌣ ⌣, ⌣ — — ಈ ಗಣಗಳು ಬರಕೂಡದು.

ನಾಡು ಮನಸಿಜನೊಲವಿ
ನಾಡುವೆಡೆ ಸಂತತಂ
ಬೀಡು ರತಿಪತಿಗೆ ಸತತಸಿಧಾನವು ||
ನೋಡಿದನಿಮಿಷಪತಿಗೆ
ಮಾಡುವುದು ವಿನಯುವನು
ನಾಡಾಡಿಯುವರ್ಗೆ ಬಣ್ಣಿಸಲು ಪೊಗ್ಗೇ ||

—ಕುಮುದೇಂದುರಾಮಾಯಣ

## ಭೋಗಷಟ್ಪದಿ

ಮೂರುಮಾತ್ರೆಯ ಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ನಾಲ್ಕು ನಾಲ್ಕು, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬರಲು ಭೋಗ ಷಟ್ಪದಿಯಾಗುವುದು.

ಮೆಱೆಯುತಿದ್ದ ಭಾಗ್ಯವೆಲ್ಲ
ಹಱಿದುಹೋಯಿತೆನುತ ತಿರುಕ
ಮಱಳಿ ನಾಚಿ ಪೋಗುತಿದ್ದ ಮರುಳನಂತೆಯೇ ||
ಧರೆಯ ಭೋಗವನ್ನು ಮೆಚ್ಚಿ
ಪರವ ಮಱೆತು ಕೆಡಲುಬೇಡ
ಧರೆಯ ಭೋಗ ಕನಸಿನಂತೆ ಕೇಳು ಮಾನವಾ ||

—ಮುಪ್ಪಿನ ಷಡಕ್ಷರಿಯ ವಚನ

## ಭಾಮಿನೀಷಟ್ಪದಿ

ಮೂರುಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣವು ಬರುವ ಹಾಗೆ ಈ ಗಣಗಳು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ಎರಡೆರಡೂ, ಮೂರಾರನೆಯ ಪಾದಗಳಲ್ಲಿ ಮೂರು ಮೂರೂ ಒಂದು ಗುರುವೂ ಇರುವುದು ಭಾಮಿನೀಷಟ್ಪದಿಯೆನಿಸುವುದು. ಇದರಲ್ಲಿ ⏑ —, ⏑ — ⏑ ಈ ಗಣಗಳು ಬರಲಾಗದು.

ಕೇಳು ಜನಮೇಜಯಧರಿತ್ರೀ
ಪಾಲ ಕೌರವನೃಪನ ತಂದು ಕೃ
ಪಾಳುವಿನ ಚರಣಾಗ್ರದಲಿ ಕೆಡಹಿದನು ಕಲಿ ಪಾರ್ಥ ||
ತೋಳ ಹಿಂಗಟ್ಟುಗಳ ಮೋರೆಯ
ಕಾಳಿಕೆಯ ಬಿಡುದಲೆಯ ನೀರೊರೆ
ವಾಲಿಗಳ ಕುರುಭೂಪನಿದ್ದನು ತಮ್ಮದಿರು ಸಹಿತ ||

—ಮಹಾಭಾರತ

**ಪರಿವರ್ಧಿನೀಷಟ್ಪದಿ :**

ಚತುರ್ಮಾತ್ರಾಗಣವು ಒಂದೆರಡು ನಾಲ್ಕಯ್ದನೆಯ ಪಾದಗಳಲ್ಲಿ ನಾಲ್ಕು ನಾಲ್ಕು, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಬಂದರೆ ಪರಿವರ್ಧಿನೀ ಷಟ್ಪದಿಯಾಗುವುದು. ಇದರಲ್ಲಿ ⌣ — ⌣ ಈ ಗಣವು ಬರಕೂಡದು.

ದುರಿತವನಂ ಬೆಳೆವುದೆ ಪೊಲಂ ಕೊಲೆ
ಪರಕಲಿಸಿದ ನವದೋಹಳಮನೃತಂ
ಪರಿಕಾಲುದಕಮುದಕೆ ಕಳವನ್ಯಸ್ತ್ರೀಸಂಗವೆಂ ಗೆಯ್ಮೆ ||
ಪರಿರಕ್ಷಣೆಯತಿಕಾಂಕ್ಷೆಯದಱಿನವು
ನಿರುತಂ ಪೊರ್ದದೊಡಿಲ್ಲಂ ಸಂಸೃತಿ
ಯುಗುಕಿಲ್ಬಿಷಮೆಲ್ಲಿಯದು ವಿಚಾರಿಸೆ ಭವ್ಯಜನೋತ್ತಂಸಾ ||

—ಜಯನೃಪಕಾವ್ಯ

**ವಾರ್ಧಕಷಟ್ಪದಿ :**

ಪಂಚಮಾತ್ರಾಗಣವು ಒಂದೆರಡು ನಾಕ್ಕೈದನೆಯ ಪಾದಗಳಲ್ಲಿ ನಾಲ್ಕು ನಾಲ್ಕು, ಮೂರಾರನೆಯ ಪಾದಗಳಲ್ಲಿ ಆರಾರೂ ಒಂದು ಗುರುವೂ ಇದ್ದರೆ ವಾರ್ಧಕ ಷಟ್ಪದಿಯಾಗುವುದು. ಇದರಲ್ಲಿ ⌣ — ⌣ ⌣, ⌣ — — ಈ ಗಣಗಳು ಬರಲಾಗದು.

ಕೆತ್ತ ಬಲ್ಗತ್ತಲೆಗೆ ತರಣಿ ಮುಂಗಾಣದಿರೆ
ಪೊತ್ತುವೆಳಗಂ ಬೇರೆ ತೋರ್ಪರಾರ್ ಬಿಡದೆ ಘ
ರ್ಮೋತ್ತರಕೆ ಮಾರುತಂ ಬೆಮರ್ದೊಡಾರ್ ಬೀಸುವರ್ ಬಳಿಕಾಲವಟ್ಟದಿಂದಂ |
ಕೃತ್ರಿಮದ ವಿಷದ ಸೋಂಕಿಗೆ ಗರುಡನಳವಳಿಯೆ
ಮತ್ತೆ ರಕ್ಷೆಗೆ ಮಂತ್ರಿಸುವರಾರು ಭೂಪನೀ
ನೊತ್ತುವನುತಾಪಕೆಡೆಗೊಟ್ಟೊಡಿರ್ ಬಿಡಿಸುವರ್ ಪೇಳೆಂದನಾ ಮುನಿಪನು ||

—ಜೈಮಿನಿಭಾರತ

## 8. ರಗಳೆ

ಸಮಾನವಾದ ಮಾತ್ರಾಗಣಗಳುಳ್ಳ ಬಹುಪಾದಗಳಿಂದ ಕೂಡಿದ ವೃತ್ತವು ರಗಳೆಯೆನಿಸುವುದು. ಇದರಲ್ಲಿ ಪ್ರಾಸವು ಇತರ ವೃತ್ತಗಳಲ್ಲಿರುವಂತೆ ನಿಯತವಾದ ಸ್ಥಾನದಲ್ಲಿರುವುದಿಲ್ಲ. ಒಂದೇ ಪಾದದಲ್ಲಿಯಾಗಲಿ, ಅನೇಕ ಪಾದಗಳಲ್ಲಿಯಾಗಲಿ; ಪಾದದ ಆದಿ ಮಧ್ಯಗಳಲ್ಲಿಯಾಗಲಿ, ಮಧ್ಯಾಂತಗಳಲ್ಲಿಯಾಗಲಿ, ಆದ್ಯಂತಗಳಲ್ಲಿಯಾಗಲಿ; ಪ್ರಾಸಾಕ್ಷರವು ಒಂದೇ ಆಗಲಿ, ಅನೇಕವಾಗಲಿ—ಈ ರೀತಿ ಯಥೇಷ್ಟ

ವಾಗಿರುವುದು. ಉತ್ಸಾಹ, ಮಂದಾನಿಲ, ಲಲಿತ ಎಂದು ಮೂರು ವಿಧವಾದ ರಗಳೆಗಳು ಪ್ರಸಿದ್ಧವಾಗಿರುವುವು.

**ಉತ್ಸಾಹರಗಳೆ :**

ಪಾದವೊಂದಕ್ಕೆ ತ್ರಿಮಾತ್ರೆಯ ನಾಲ್ಕು ಗಣಗಳಾಗಲಿ, ಮೂರು ಗಣಗಳೂ ಒಂದು ಗುರುವೂ ಆಗಲಿ ಇರಲು ಅದು ಉತ್ಸಾಹರಗಳೆಯೆನಿಸುವುದು. ನಾಗವರ್ಮನು (ಎರಡು ಸಾಲುಗಳನ್ನು ಒಂದಾಗಿ ಭಾವಿಸಿ) ಪಾದವೊಂದಕ್ಕೆ ಇಪ್ಪತ್ತುನಾಲ್ಕು ಮಾತ್ರೆಗಳಿರಬೇಕೆನ್ನುವನು.

ಒಂದನೆಯ ರೀತಿಗೆ :

ಕುಳಿರ್ವ ಪೂಗೊಳಂಗಳಲ್ಲಿ
ತಳಿರ ಕಾವಣಂಗಳಲ್ಲಿ
ತುಂಬಿವಿಂಡಿನಂತೆ ಪಾಡಿ
ಜಕ್ಕವಕ್ಕಿಯಂತೆ ಕೂಡಿ

—ಕಬ್ಬಿಗರ ಕಾವ

ಎರಡನೆಯ ರೀತಿಗೆ :

ಮಾವಿನಡಿಯೊಳಾಡುತುಂ
ಪಾಡನೆಯ್ದೆ ಕೇಳುತಂ
ಪೂಟ್ಟಿನಿಂತು ಕಳೆಯುತುಂ
ತೊಲಗದಿರ್ದರೆಸೆಯುತುಂ ||

—ಕಬ್ಬಿಗರಕಾವ

**ಮಂದಾನಿಲರಗಳೆ**

ಪಾದವೊಂದಕ್ಕೆ ಚತುರ್ಮಾತ್ರಾಗಣವು ನಾಲ್ಕಾಗಲಿ, ಮೂರುಮಾತ್ರೆಯ ಗಣದ ಮುಂದೆ ಐದುಮಾತ್ರೆಯ ಗಣವು ಬರುವಂತೆ ಗಣಗಳೆರಡೆರಡಾಗಲಿ ಬರಲು ಅದು ಮಂದಾನಿಲರಗಳೆಯೆನಿಸುವುದು. ಇದಕ್ಕೆ ಮಟ್ಟರಗಳೆ ಎಂಬ ಹೆಸರೂ ಉಂಟು.

ಒಂದನೆಯ ರೀತಿಗೆ :

ಆ ವೇಳೆಯೊಳತಿಸಂಭ್ರಮಸೆದಿರೆ
ಪೂವಲಿ ಪುರವೀಥಿಗಳೊಳ್ ನೆರೆದಿರೆ
ಪವಳದ ರನ್ನದ ಗುದಿಗಳ ಗುಡಿಗಳ್
ನವಮೌಕ್ತಿಕರಂಗದ ದಾಂಗುಡಿಗಳ್
ಮೆಱೆದುವು ಮಿಱುಗುವ ಮಿಸುನಿಯ ತೋರಣ

ಮಱಿಕೆಯ ಪುರಜನದುತ್ಸವದೋರಣ
ಮಾನೆಯ ಮೇಲಣ ಪಳವಿಗೆ ಮಿಳಿರ್ದಿರೆ
ನಾನಾವಿಧವಾದಧ್ವನಿಯಳುರ್ದಿರೆ
ಪೊಸಮೇಳದ ತಾಳದ ಮೃದುನಿನದಂ
ಪಸರಿಸೆ ಗೀತರವ ಕಡುಬಿನದಂ
ಬಡೆದಿದಿರ್ವಂದುದು ರಾಜಪ್ರಚಯಂ
ಬಿಡದೊಡವಂದುದು ನಾರೀನಿಚಯಂ ||

—ರಾಜಶೇಖರವಿಲಾಸ

ಪೊಟಲ ಬೆಡಂಗಂ ಮಿಗೆ ಮೆಚ್ಚಿ ನೋಡಿ
ದಿವಿಜೇನ್ದ್ರವಿಲಾಸಮೊಳಿಂತು ಕೂಡಿ
ಕರುಮಾಡಮನಾದರದಿಂದಮೇಱಿ
ಕೆಲದೊಳ್ ಮಾಡಂಗಳನಱಿದು ತೋಱಿ
ಕರಿತುರಗಬಲಂಗಳ್ ಪೆರ್ಚುವಂತು
ಮಲೆಯುಂ ಮಂಡಲಮುಂ ಬೆರ್ಚುವಂತು
ನೆಲನಂ ಪರಿಪಾಲಿಸೆ ಧರ್ಮಸೂನು
ಸುಖಮಿರ್ದಂ ರಿಪುಬಲತಿಮಿರಭಾನು ||

—ಪಂಪಭಾರತ

ಎರಡನೆಯ ರೀತಿಗೆ :

ನಂದನಂಗಳೊಳ್ ಸುಟಿವ ಬಿರಯಿಯಿಂ
ಕಂಪು ಕಣ್ಮಲೆಯೆ ಪೂತ ಸುರಯಿಯಿಂ
ಸುತ್ತಲುಂ ಪರಿವ ಜರಿವೊನಲ್ಗಳಿಂ
ಎತ್ತಲುಂ ನಲಿವ ಪೊಸನವಿಲ್ಗಳಿಂ
ಬೆಳದು ಮುಗಮುಗಿಪ ಗಂಧಶಾಲಿಯಿಂ
ಅಲ್ಲಿ ಸುಟಿವ ವಿಂಡಿನೋಳಿಯಿಂ
ಧನದರನ್ನರಿವರೆನಿಪ ಪರದರಿಂ
ದೇವರನ್ನರಿವರೆನಿಪ ಬಿರುದರಿಂ
ನೆಱೆಯೆ ಸೊಗಯಿಪಾ ಏಕಚಕ್ರಮುಂ
ಮೆಚ್ಚಿದಂ ಹರಿಗನಮಿತವಿಕ್ರಮುಂ ||

—ಪಂಪಭಾರತ

## ಲಲಿತರಗಳೆ

ಪಾದವೊಂದಕ್ಕೆ ಐದು ಮಾತ್ರೆಯ ಗಣವು ನಾಲ್ಕಿರಲು ಲಲಿತರಗಳೆಯಾಗುವುದು.

ವಿ. ನರಸಿಂಹ ಮೂರ್ತಿ
ಬೆಂಗಳೂರು ಉಪ್ಪಾರಪೇಟೆ ಗಾಂಧಿನಗರ,



ವಿಷಯವಿಷವಲ್ಲಿಯಂ ಪೆರ್ಚಿಸುವ ಜಲದಾರೆ
ಸಾಧುತ್ವಮಂ ಕಿಡಿಸಿ ನಡೆಸುವ ದುರಾಚಾರೆ
ಕಪಟನಾಟಕತತಿಗೆ ತಾನೆ ನೆಲೆಯೆನಿಸುವಳ್
ಕೋಪಗ್ರಹಾವೇಶಜನ್ಮನಿಧಿಯೆನಿಸುವಳ್
ಶಾಸ್ತ್ರದೃಷ್ಟಿಗೆ ತಿಮಿರಪಟಲತತಿಯೆನಿಸುವಳ್
ದೋಷಮೆಂಬಾಶೀವಿಷಕ್ಕೆ ಪುತ್ತೆನಿಸುವಳ್

—ಕಾದಂಬರಿ

ಮೇಲೆ ಹೇಳಿದ ಮೂರು ರಗಳೆಗಳಲ್ಲಿ ಸೇರದೆ ನಾಲ್ಕನೆಯ ವಿಧವಾದ ಅದೊಂದು ರಗಳೆಯು ಪಂಪಭಾರತದ ಒಂದನೆಯ ಆಶ್ವಾಸದಲ್ಲಿ ಕಾಣಬರುವುದು :

(ಲಯೋತ್ತರ ವೃತ್ತವನ್ನು ಇದು ಹೋಲುವುದು.)

ಅದಱ ಪೊರವೊೞಲ ವಿಶಾಲಕನಕಕೃತಕಗಿರಿಗಳಿಂ ಫಲಪ್ರಕೀರ್ಣತರುಗಳಿಂ |
ನನೆಯ ಕೊನೆಯ ತಳಿರ ಮುಗುಳ ವನಲತಾನಿಕುಂಜದಿಂ ಲಸತ್ಪ್ರಸೂನಪುಂಜದಿಂ |
ಗಗನತಲಮೆ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ
ತೆಗೆಯದಬ್ದಸಮಿತಿವೋಲೆ ಪರಿವ ಮದಗಜಂಗಳಿಂ ತರತ್ತುರಂಗಮಂಗಳಿಂ |
ಲವಣಜಲಧಿ ಬಳಸಿದಂತೆ ಬಳಸಿದಗಳ ನೀಳದಿಂದುದಗ್ರಕನಕಸಾಳದಿಂ |
ಕನಕಶೈಲಮೆನಿಸಿ ನೆಗೞ್ದ ಭೂಮಿಪಾಲಭವನದಿಂ ಸಮಸ್ತವಸ್ತುಭುವನದಿಂ ||

## ೯. ದಂಡಕ

ನಿಯತವಾದ ಗಣಗಳಿಂದ ಕೂಡಿ ಪಾದವಿಭಾಗವಿಲ್ಲದೆ ದಂಡಾಕಾರವಾಗಿರುವ ಶಬ್ದರಚನಾವಿಶೇಷವು ದಂಡಕವೆನಿಸುವುದು.

ಶ್ರೀಹೇಮಕೂಟೋನ್ನತಕ್ಷೋಣಿಭೃಚ್ಚೂಳಿಕಾವಾಸ, ಸರ್ವೇಶ, ಪಂಪಾಂಬಿಕಾ ವಕ್ತ್ರಸಂಪೂರ್ಣಶೀತಾಂಶುಸಂಜಾತಮಂದಸ್ಮಿತಜ್ಯೋತ್ಸ್ನಿಕಾಪುಂಜಭುಂಜಚ್ಚಕೋರಾಯ ಮಾಣ, ಸ್ತುತಾಮ್ನಾಯಸಂತಾನಚಂಚಚ್ಛಿರಶ್ಚಂದ್ರಲೇಖಾಮಯೂಖಾವಳೀಚ್ಛಾದಿ ತಸ್ವಚ್ಛಗೀರ್ವಾಣಗಂಗಾತರಂಗೌಘಸಂಘಟ್ಟನೋದ್ಭೂತವಾರ್ಬಿಂದುಸಂದೋಹ ಸಂಧೌತಸವ್ಯಗ್ಜಟಾಜೂಟಕೋಟೀರಭಾರ, ಪ್ರಸೂನಾಸ್ತ್ರಸಂಹಾರ . . . . . . . . .

—ಉದ್ಭಟಕಾವ್ಯ

ಈ ದಂಡಕದಲ್ಲಿ ಐದು ಮಾತ್ರೆಯ ಗಣವು ಬಂದಿದೆ. ಇದರಂತೆ ಇನ್ನೂ ಅನೇಕ ವಿಧದಿಂದ ದಂಡಕಗಳನ್ನು ರಚಿಸಬಹುದು.

## 10. ಹಾಡಿನ ಮಾತ್ರಾವೃತ್ತಗಳು

ಕನ್ನಡದಲ್ಲಿ ದ್ವಿಪದಿ, ಚೌಪದಿ, ಸಾಂಗತ್ಯ, ತ್ರಿಪದಿ ಮುಂತಾದ ಕೆಲವು ಮಾತ್ರಾ

ವೃತ್ತಗಳು ಹಾಡಿನ ರೂಪದಿಂದಿರುವುವು. ಅವುಗಳಲ್ಲಿ ಮಾತ್ರಾಗಣಗಳು ಕೆಲವೆಡೆ ಸ್ಪಷ್ಟವಾಗಿ ತೋರುವುವು. ಮತ್ತೆ ಕೆಲವೆಡೆಯಲ್ಲಿ ಹೇಳುವಾಗ ಲಯವನ್ನನುಸರಿಸಿ ಅಕ್ಷರಗಳನ್ನು ಎಳೆಯುವುದರಿಂದ ಮಾತ್ರಾಗಣಗಳನ್ನು ತಿಳಿಯಬೇಕು. ಷಟ್ಪದಿಗಳೂ ಹಾಡಿನ ರೂಪದಲ್ಲಿರುವುದುಂಟು.

**ದ್ವಿಪದಿ** : ಎರಡು ಪಾದಗಳುಳ್ಳದ್ದು.

ಮೋಸಗಾರರ ಕೂಡೆ ಬೆರಸದಿರಬೇಕು
ಭಾಷೆ ಕೊಟ್ಟ ಬಳಿಕ ನಿಜವಿರಲುಬೇಕು ‖ ೧ ‖
ಕುಳ್ಳಿರ್ದ ಸಭೆಯೊಳಗೆ ಕುತ್ಸಿತವು ಬೇಡ
ಒಳ್ಳೆಯವ ನಾನೆಂದು ಹೆಮ್ಮೆ ಪಡಬೇಡ ‖ ೨ ‖
ಹಿರಿಯತನ ಬಂದಾಗ ಧಿಕ್ಕರಿಸಬೇಡ
ಸಿರಿ ಬಂದ ಕಾಲದೊಳು ನೀ ಮೆಱೆಯಬೇಡ ‖ ೩ ‖

—ದಾಸರ ಪದ

ಇವುಗಳ ಪ್ರತಿಪಾದದಲ್ಲಿಯೂ ಐದುಮಾತ್ರೆಯ ಗಣ ಮೂರೂ, ನಾಲ್ಕು ಮಾತ್ರೆಯ ಗಣವೊಂದೂ ಇರುವುದು.

ಮಗನೆ ನೀನಿಂತಳಿಯೆ ಸೈರಿಪೆನೆಂತೋ ಪೇಳ್ವೆ ಶಂಕರಾ
ಸುಗುಣನಿಧಿ ನೀನೆನ್ನ ಮೊಱೆಗಳನೊರ್ಮೆ ಕೇಳ್ವೆ ಶಂಕರಾ ‖ ೧ ‖
ಪರಸಿ ಪಾಡಿ ಮಹೇಶನಿಂದಮೆ ಬೇಡಿ ಮುನ್ನಂ ಶಂಕರಾ
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ ‖ ೨ ‖
ಎಂತು ಮಱೆವೆನೊ ಸವಿಯ ಸಾಲಿಡುವಮರ್ದುನಗೆಯಂ ಶಂಕರಾ
ಕಾಂತಿ ಶೋಭಿಸೆ ಮುದ್ದುವೀಱುವ ಮೊಗದ ಬಗೆಯಂ ಶಂಕರಾ ‖ ೩ ‖

—ರಾಜಶೇಖರ ವಿಲಾಸ

ಇವುಗಳ ಪ್ರತಿಪಾದದಲ್ಲಿಯೂ 3-4-3-4-3-4-3 ಈ ರೀತಿಯ ಗಣಗಳೂ ಒಂದು ಗುರುವೂ ಬಂದಿದೆ.

**ಚೌಪದಿ** : ನಾಲ್ಕು ಪಾದಗಳುಳ್ಳದ್ದು.

ಮೋಸದಲಿ ಕೊಲುವವಗೆ ಧರ್ಮ ತಾನೇಕೆ ।
ಭಾಷೆ ತಪ್ಪುವ ನರಗೆ ನಂಬುಗೆಯದೇಕೆ ‖
ಕ್ಲೇಶ ಮನದಿರೆ ತೀರ್ಥಯಾತ್ರೆಗಳದೇಕೆ ।
ಆಶೆ ಬಿಡದಿರ್ದವಗೆ ಸಂನ್ಯಾಸವೇಕೆ ‖ ೨ ‖
ಸ್ವಾಮಿನಾಮವ ಬಿಡದೆ ಭಜಿಸದವ ಮೂರ್ಖ ।
ಹೇಮವನು ಗಳಸಿಯುಣದಾತನೇ ಮೂರ್ಖ ‖

ನೇಮದಲಿ ಹಿರಿಯರಿಗೆ ನಮಿಸದವ ಮೂರ್ಖ |
ತಾಮಸರ ಕೂಡುವವ ಕಡುಮೂರ್ಖನಯ್ಯ || ೨ ||

—ದಾಸರ ಪದ

ಇವುಗಳ ಪ್ರತಿಪಾದದಲ್ಲಿಯೂ ಪಂಚಮಾತ್ರಾಗಣ ಮೂರೂ ಮತ್ತು ಚತುರ್ಮಾತ್ರಾಗಣವೊಂದೂ ಬಂದಿವೆ.

ಖಂಡವಿದ ಕೋ ಮಾಂಸವಿದ ಕೋ
ಗುಣ್ಡಿಗೆಯ ಬಿಸುರಕ್ತವಿದ ಕೋ ||
ಚಣ್ಡವ್ಯಾಘ್ರನೆ ನೀನಿದೆಲ್ಲವ
ನುಣ್ಡು ಸಂತಸದಿಂದಿರು || ೧ ||
ಪುಣ್ಯಕೋಟಿಯ ಮಾತ ಕೇಳಿ
ಕಣ್ಣಿನೊಳಗೆ ನೀರ ಸುರಿಸುತ ||
ಕನ್ನೆಯಿವಳನು ಕೊನ್ದು ತಿನ್ದರೆ
ತನ್ನ ಮೆಚ್ಚನು ದೇವನು || ೨ ||

—ಗೋವಿನ ಕಥೆ

ಇವುಗಳ ಮೊದಲ ಮೂರು ಪಾದಗಳಲ್ಲಿ 3, 4, 3, 4 ಈ ರೀತಿಯ ಗಣಗಳೂ, ನಾಲ್ಕನೆಯ ಪಾದದಲ್ಲಿ 3, 4, 3 ಈ ರೀತಿಯ ಗಣಗಳೂ ಮತ್ತು ಒಂದು ಗುರುವೂ ಬಂದಿವೆ.

**11. ತ್ರಿಪದಿ, ಪಿರಿಯಕ್ಕರ** ಎಂಬ ಮಾತ್ರಾವೃತ್ತಗಳ ಲಕ್ಷಣಗಳನ್ನು ನಾಗವರ್ಮನು ಒಂದು ರೀತಿಯಿಂದ ಹೇಳಿರುವನು. ಅದು ಹೇಗೆಂದರೆ :

(i) ಬಿಸರುಹೋದ್ಭವಗಣಂ ರಸದಶಸ್ಥಾನದೊಳ್ |
ಬಿಸರುಹನೇತ್ರಗಣಮೆ ಬರ್ಕುೞಿದುವು |
ಬಿಸರುಹನೇತ್ರೇ ತ್ರಿಪದಿಗೆ ||

(ತ್ರಿಪದಿಯನ್ನು ಹೇಳುವಾಗ ಎರಡನೆಯ ಪಾದದಲ್ಲಿ ಮೂರು ಗಣಗಳವರೆಗೆ ಹೇಳಿ ಮತ್ತೆ ಆಯೆರಡನೆಯ ಪಾದವನ್ನು ಮೊದಲಿಂದ ಹೇಳುವ ವಾಡಿಕೆಯಿರುವುದು)

(ii) ಮೊದಲೊಳಜಗಣಂ ಕುಂದದೆ ಬರ್ಕೆತ್ತಮಯ್ದು ಗಣಂಗಳೆ
ವಿಷ್ಣುವಕ್ಕುಂ |
ತುದಿಯೊಳೆಂಬಾತಾಣದೊಳೆಲ್ಲಿಯುಂ ಕಂದರ್ಪರಿಪುಗಣಂ
ನೆಲಸಿ ನಿಲ್ಕೆ ||

ಪದದೊಳೆರಡೆಂಬ ಸಂಖ್ಯೆಯೊಳಾಱಱೊಳಜಗಣಂ ಸಮುಪೇತ
ಮಪ್ಪೊಡಕ್ಕುಂ |
ಸದಮಲೇಂದುನಿಭಾನನೇ ಕರ್ತೃವಿನಿಷ್ಟದಿನಱಿವುದು
ಪಿರಿಯಕ್ಕರಂ ||

ಮೇಲೆ ಹೇಳಿದ ಲಕ್ಷಣಪದ್ಯಗಳೇ ಈ ವೃತ್ತಗಳ ಉದಾಹರಣೆಗಳೂ ಆಗುವುವು. ಇವುಗಳಲ್ಲಿ ಬ್ರಹ್ಮಗಣ, ವಿಷ್ಣುಗಣ, ರುದ್ರಗಣ ಎಂಬುದಾಗಿ ಬೇರೆ ಮೂರು ವಿಧವಾದ ಗಣಗಳು ಹೇಳಲ್ಪಟ್ಟಿರುವುವು. ಆ ಗಣಗಳನ್ನು ಈ ಕೆಳಗೆ ಬರೆದಿರುವಂತೆ ಲಘು ಗುರ್ವಕ್ಷರಗಳ ಕ್ರಮದಿಂದ ತಿಳಿಯಬೇಕು.

ಬ್ರಹ್ಮಗಣ :

— — ಬ್ರಹ್ಮಂ
∪ ∪ — ಸುರಪಂ
— ∪ ಧಾತೃ
∪ ∪ ∪ ಅಜನೆ ಈ ರೀತಿಯಾಗಿ ನಾಲ್ಕು ವಿಧವು.

ವಿಷ್ಣುಗಣ :

— — — ಗೋವಿಂದಂ
∪ ∪ — — ಹೃದಯೇಶಂ
— ∪ — ನಾಕಿಗಂ
∪ ∪ ∪ — ವರಹಿತಂ
— — ∪ ಕಂಸಾರಿ
∪ ∪ — ∪ ನರಕಾರಿ
— ∪ ∪ ಶ್ರೀಪತಿ
∪ ∪ ∪ ∪ ಮುರಹರ ಈ ರೀತಿಯಾಗಿ ಎಂಟು ವಿಧವು.

ರುದ್ರಗಣ :

— — — — ಗಂಗಾಧೀಶಂ
— ∪ ∪ ∪ ಗಿರಿಜಾನಾಥಂ
— ∪ — — ನೀಲಕಂಠಂ
∪ ∪ ∪ — — ವೃಷಭಲಕ್ಷ್ಯಂ
— — ∪ — ಕಾಮಾಂತಕಂ
∪ ∪ — ∪ ∪ ಪ್ರಮಥಾಧಿಪಂ

— ⏑ ⏑ — ಶೂಲಧರಂ
⏑ ⏑ ⏑ ⏑ — ಪುರಮಥನಂ
— — — ⏑ ಕಂದರ್ಪಾರಿ
⏑ — — ⏑ ಮದನಧ್ವಂಸಿ
— ⏑ — ⏑ ಚಂದ್ರಮೌಳಿ
⏑ ⏑ ⏑ — ⏑ ಭುಜಗಧಾರಿ
— — ⏑ ⏑ ಭೂತಾಗ್ರಣಿ
⏑ ⏑ — ⏑ ⏑ ತ್ರಿಜಗದ್ಗುರು
— ⏑ ⏑ ⏑ ಕಾಮರಿಪು
⏑ ⏑ ⏑ ⏑ ⏑ ಮದನರಿಪು ಈ ರೀತಿಯಾಗಿ ಹದಿನಾರು ವಿಧವು.

(iii) **ಸಾಂಗತ್ಯ :**

ಇದರ ಒಂದು ಮೂರನೆಯ ಪಾದಗಳಲ್ಲಿ ನಾಲ್ಕು ವಿಷ್ಣುಗಣಗಳೂ, ಎರಡು ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳೂ, ಕೊನೆಯಲ್ಲಿ ಒಂದು ಬ್ರಹ್ಮ ಗಣವೂ ಇರಬೇಕು. ವಿಷ್ಣುಗಳಿಗೆ ಪ್ರತಿಯಾಗಿ ಅಲ್ಲಲ್ಲಿ ಬ್ರಹ್ಮಗಣವೂ ಬರಬಹುದು.

ಕುವರನಾದೊಡೆ ಬಂದ ಗುಣವೇನದರಿಂದೆ | ಕುವರಿಯಾದೊಡೆ ಕುಂದೇನು ||
ಇವರಿರ್ವರೊಳೇಟಿಗೆವಡೆದವರಿಂದೆ | ಸವನಿಪುದಿಹಪರಸೌಖ್ಯ || ೧ ||
ಎರನೆಳ್ಳನಿತಿಲ್ಲದೊರ್ವರೊರ್ವರೊಡ | ವೆರೆದಿರ್ಪ ಸತಿಪತಿಗಳಿಗೆ ||
ದೊರೆಕೊಳ್ವುದು ಸಂಸಾರಸುಖದ ಸುಗ್ಗಿ | ಪರದೊಳಾನಂದ ಪರ್ಬುವುದು || ೨ ||

—**ಹದಿಬದೆಯ ಧರ್ಮ**

## 12. ಶ್ಲೋಕವೃತ್ತ

ವರ್ಣವೃತ್ತಗಳಲ್ಲಿಯೂ ಮಾತ್ರಾವೃತ್ತಗಳಲ್ಲಿಯೂ ಸೇರದಿರುವ ಕೆಲವು ವೃತ್ತ ಗಳನ್ನು ಸೇರಿಸಿ ಸಂಸ್ಕೃತದವರು ಅನುಷ್ಟುಪ್ಪ್ರಕರಣವೆಂಬೊಂದು ಭಾಗವನ್ನು ಹೇಳಿರು ವರು. ಅಂತಹ ವೃತ್ತಗಳಲ್ಲಿಯೂ ಒಂದೆರಡನ್ನು ಕನ್ನಡಿಗರು ಉಪಯೋಗಿಸಿರುವರು.

ಇದರಲ್ಲಿ ಎಂಟೆಂಟಕ್ಷರಗಳುಳ್ಳ ನಾಲ್ಕು ಪಾದಗಳಿರಬೇಕು. ಪ್ರತಿಪಾದದ ಮೊದಲನೆಯಕ್ಷರದ ಮುಂದೆ ನಗಣ ಸಗಣಗಳು ಬರಕೂಡದು. ಸಮಪಾದಗಳಲ್ಲಿ ಏಳನೆಯಕ್ಷರವು ಲಘುವಾಗಿರಬೇಕು. ವಿಷಮಪಾದಗಳಲ್ಲಿ ನಾಲ್ಕನೆಯಕ್ಷರದ ಮುಂದೆ ಯಗಣವು ಬರಬೇಕು.

ಅಜೇಯಂ ಪೋಲ್ಗುಮಾ ಮತ್ತ | ಗಜಂ ವಾರಿಜನಾಭನಂ |
ತ್ರಿಜಗನ್ಮಾದನಂ ಮತ್ತಂ | ನಿಜನೀಲಘನಾಭನಂ ||

—ಕವಿರಾಜಮಾರ್ಗ

ಏನನೇನಂ ಮಹಾಘೋರಂ | ನ ನಾಜನ್ಮಾಂತರಂಗಳೊಳ್ |
ತಾನಾಗಿಸದು ಸಂಸಾರಿ | ಗಾನಿರ್ವಾಣಪದಂಬರಂ ||

—ಕಾವ್ಯಾವಲೋಕನ

## ೪. ಕನ್ನಡ ಛಂದಸ್ಸಿನ ಚರಿತ್ರೆ

ಇನ್ನು ಕನ್ನಡ ಛಂದಸ್ಸನ್ನು ಚರಿತ್ರೆಯ ದೃಷ್ಟಿಯಿಂದ ವಿಮರ್ಶಿಸಿ, ಸಂಸ್ಕೃತ ದಿಂದ ತೆಗೆದುಕೊಂಡ ಛಂದಸ್ಸು, ಕನ್ನಡದಲ್ಲಿಯೇ ಹುಟ್ಟಿ ಬೆಳೆದು ದ್ರಾವಿಡ ಭಾಷೆ ಗಳಿಗೆ ಸಹಜವಾದ ಛಂದಸ್ಸು ಎಂದು ಎರಡು ಭಾಗವಾಗಿ ಒಡೆಯಬಹುದು.

### 1. ಸಂಸ್ಕೃತ ಛಂದಸ್ಸು

ಕನ್ನಡ ಕವಿಗಳೆಲ್ಲಾ ಆದಿಯಲ್ಲಿ ಸಂಸ್ಕೃತದಲ್ಲಿ ಪಾಂಡಿತ್ಯವುಳ್ಳವರಾಗಿಯೂ, ಸಂಸ್ಕೃತದಲ್ಲಿರುವ ರಾಮಾಯಣ, ಮಹಾಭಾರತ, ಭಾಗವತ, ಪುರಾಣಗಳು, ಮಹಾ ಕಾವ್ಯಗಳು, ನಾಟಕಗಳು ಇವುಗಳ ಪ್ರಭಾವಕ್ಕೆ ಒಳಪಟ್ಟು ತಮ್ಮ ಚಂಪೂಕಾವ್ಯ ಗಳನ್ನು ರಚಿಸಿದವರಾಗಿಯೂ ಇರುವುದರಿಂದ, ಸಂಸ್ಕೃತ ಶೈಲಿ ಹೇಗೋ ಹಾಗೆ ಸಂಸ್ಕೃತ ಛಂದಸ್ಸನ್ನೂ ತಮ್ಮ ಕಾವ್ಯಗಳಲ್ಲಿ ಬಹು ಮುಖ್ಯವಾಗಿ ಉಪಯೋಗಿಸಿರುತ್ತಾರೆ. ಕನ್ನಡಕ್ಕೆ ಆದಿಕವಿಯೆನಿಸಿದ ಪಂಪನ ಆದಿಪುರಾಣ, ವಿಕ್ರಮಾರ್ಜುನ ವಿಜಯ ಈ ಎರಡು ಗ್ರಂಥಗಳಲ್ಲಿಯೂ ಸಂಸ್ಕೃತ ಛಂದಸ್ಸಿಗೆ ಪ್ರಾಧಾನ್ಯವೇ ಹೊರತು ಕನ್ನಡ ಛಂದಸ್ಸಿಗಲ್ಲ. ಶಾಸನಗಳಲ್ಲಿಯೂ ಹೀಗೆಯೇ. ಈಚೆಯ ಚಂಪೂಕರ್ತರೆಲ್ಲರೂ ಇವೇ ಪದ್ಧತಿಯನ್ನನುಸರಿಸುತ್ತಾರೆ.

ಮುಖ್ಯವಾಗಿ, ಹೀಗೆ ತೆಗೆದುಕೊಂಡ ಛಂದಸ್ಸುಗಳೆಂದರೆ—ಶಾರ್ದೂಲ ವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ, ಮಹಾ ಸ್ರಗ್ಧರೆ; ಮತ್ತು ಕಂದ.

ಪಿಂಗಳ ಛಂದಸ್ಸೇ ಈ ವೃತ್ತಗಳ ಲಕ್ಷಣಕ್ಕೆ ಆಧಾರ. ಭರತನ ನಾಟ್ಯಶಾಸ್ತ್ರ, ಕಾಳಿದಾಸನ (ಆತನದೇ ಆದರೆ) ಶ್ರುತಬೋಧ ಮುಂತಾದ ಗ್ರಂಥಗಳನ್ನೂ ನೋಡ ಬಹುದು.

#### (i) ವೈದಿಕ ಛಂದಸ್ಸು :

ಸಂಸ್ಕೃತದಲ್ಲಿ ವೈದಿಕ ಛಂದಸ್ಸೆಂದೂ ಲೌಕಿಕ ಛಂದಸ್ಸೆಂದೂ ಎರಡು ವಿಧ. ವೈದಿಕ ಛಂದಸ್ಸು ವೇದಗಳಲ್ಲಿ ಕಾಣುವುದು. ಲೌಕಿಕ ಛಂದಸ್ಸು ಇತಿಹಾಸ ಪುರಾಣ ಕಾವ್ಯ ನಾಟಕಗಳಲ್ಲಿರುವುದು.

ವೈದಿಕ ಛಂದಸ್ಸುಗಳನ್ನು ಕನ್ನಡ ಕವಿಗಳು ಉಪಯೋಗಿಸಿಲ್ಲವಾದರೂ, ಲೌಕಿಕ ಛಂದಸ್ಸುಗಳಿಗೆ ಅವು ಮೂಲವಾಗಿರುವುದರಿಂದಲೂ, ಅವುಗಳಲ್ಲಿ ಗಣನಾರ್ಹವಾದ ತೇಜಸ್ಸೂ ಗಾಂಭೀರ್ಯವೂ ಸೌಂದರ್ಯವೂ ಕಾಣಬರುವುದರಿಂದಲೂ, ಅವುಗಳಲ್ಲಿ ಮುಖ್ಯ ವಾದ ವೃತ್ತಗಳನ್ನು ಕನ್ನಡ ಕವಿಗಳು ಮುಂದಾದರೂ ಗಮನಿಸಬೇಕು.

ವೈದಿಕ ಛಂದಸ್ಸಿನ ಮೂಲದ ಓಟವನ್ನು **ಈ** ಪಾದಗಳಲ್ಲಿ **ಕಾಣಬಹುದು :**

ವಿ ವೋ ಮ ದೇ | ವಿ ವ ಕ್ಷ ಸೇ |
ಮ ರು ದ್ಭಿ ರ . ಗ್ನ ಆ ಗ ಹಿ |
ಮ ಹೇ ರ ಣಾ | ಯ ಚ ಕ್ಷ ಸೇ |

ಈ ಓಟದ ಬಗೆಬಗೆಯ ಮಾರ್ಪಾಟುಗಳಿಂದಾದ ವೈದಿಕ ಛಂದಸ್ಸಿನಲ್ಲಿ ಅತಿ ಪ್ರಸಿದ್ಧವಾದ ವೃತ್ತಗಳು ನಾಲ್ಕು :

1. **ಗಾಯತ್ರಿ** : ೮ ಅಕ್ಷರವುಳ್ಳ ೩ ಪಾನಗಳು; ಪ್ರತಿಯೊಂದು ಪಾದವನ್ನು ೪ ಅಕ್ಷರದ ೨ ಗಣಗಳಾಗಿ ಒಡೆಯಬಹುದು.

ಅ ಗ್ನಿ ಮೀ ಳೇ | ಪು . ರೋ ಹಿ ತಂ |
ಯ ಜ್ಞ ಸ್ಯ ದೇ | ವ ಮೃ ತ್ವಿ ಜಂ |
ಹೋ ತಾ ರಂ ರ | ತ್ನ ಧಾ ತ ಮಂ ||

ಕೊನೆಯಗಣ ⏑ — . ⏑ — ಈ ಲಕ್ಷಣವುಳ್ಳದ್ದನ್ನು ಗಮನಿಸಿ : ಇದನ್ನು ಶ್ಲಿಲಗು ಎಂದು ಕರೆಯಬಹುದು. ಹೀಗೆಯೇ :

ತ ತ್ಸ ವಿ ತು ರ್ | ವ ರೇ ಣಿ ಯಂ | (ಣ್ಯಂ)
ಭ ರ್ಗೋ ದೇ ವ | ಸ್ಯ ಧೀ ಮ ಹಿ |
ಧಿ ಯೋ ಯೋ ನಃ | ಪ್ರ ಚೋ ದ ಯಾ ತ್ ||

2. **ಅನುಷ್ಟುಭ್** : ನಾಲ್ಕು ಪಾದದ ಗಾಯತ್ರಿ : ೮ ಅಕ್ಷರವುಳ್ಳ ೪ ಪಾದಗಳು.

ಆ ತೂ ನ ಇಂ | ದ್ರ ಕೌ ಶಿ ಕ |
ಮಂ ದ ಸಾ ನಃ ಸು ತಂ ಪಿ ಬ
ನ ವ್ಯ ಮಾ ಯುಃ | ಪ್ರ ಸೂ ತಿ ರ |
ಕೃ ಧೀ ಸ ಹ | ಸ್ರ ಸಾ ವೃ ಷಿಂ ||

**ಶ್ಲೋಕ:** ಕಡೆಕಡೆಗೆ ಇದು ಎರಡೇ ಪಾದಗಳಾಗಿ, ಮೊದಲನೆಯ ಮತ್ತು ಮೂರನೆಯ ಪಾದಗಳ ಕಡೆಯ ಗಣದ ದ್ವಿಲಗು (⏑ —. ⏑ —) ಲಕ್ಷಣ ಮಾರ್ಪಟ್ಟು, ಲೌಕಿಕ ಕಾವ್ಯದ ಶ್ಲೋಕವಾಯಿತು. ಉದಾ:

— — — ⏑ —. ⏑ —
ಹಿರಣ್ಮಯೇ | ನ ಪಾ ತ್ರೇ ಣ | ಸತ್ಯಸ್ಯಾಪಿ | ಹಿ ತಂ ಮು ಖಂ |
⏑ —. ⏑ — ⏑ —. ⏑ —
ತತ್ ತ್ವಂ ಪೂಷ | ನ್ನ ಪಾ ವೃ ಣು | ಸತ್ಯಧರ್ಮಾ | ಯ ದೃ ಷ್ಟ ಯೇ ||
⏑ — — — ⏑ —. ⏑ —
ಸತ್ಯಂ ಮಾತಾ | ಪಿತಾ ಜ್ಞಾನಂ | ಧರ್ಮೋ ಭ್ರಾತಾ | ದ ಯಾ ಸ ಖಾ |
⏑ — ⏑ —
ಶಾಂತಿಃ ಪತ್ನಿ ಃ | ಕ್ಷಮಾ ಪುತ್ರಃ | ಷಡೇತೇ ನು | ಮ ಬಾಂಧವಾಃ ||
⏑ — — ⏑ ⏑ —. ⏑ —
ಶ್ಲೋಕಾರ್ಧೇನ | ಪ್ರ ವ ಕ್ಷ್ಯಾಮಿ | ಯದುಕ್ತಂ ಗ್ರಂ | ಥಕೋಟಿಭಿಃ |
— — — ⏑ ⏑ —. ⏑ —
ಪರೋಪಕಾ | ರಃ ಪು ಣ್ಯಾಯ | ಪಾಪಾಯ ಪ | ರ ಪೀ ಡ ನಂ ||

ಈ ಅನುಷ್ಟುಪ್ಪು ಅಥವಾ ಶ್ಲೋಕ ಸಂಸ್ಕೃತ ಕಾವ್ಯಗಳಲ್ಲೆಲ್ಲಾ ಬಹು ಪ್ರಚಾರವುಳ್ಳದ್ದು. ಇತಿಹಾಸ ಪುರಾಣ ಕಾವ್ಯಗಳಲ್ಲಿ, ಶಾಸ್ತ್ರಗಳಲ್ಲಿ, ನಿಘಂಟುಗಳಲ್ಲಿ ಎಲ್ಲೆಲ್ಲೂ ಅದರದೇ ಕೆಲಸ, ಓಡಾಟ.

ಕನ್ನಡ ಕವಿಗಳು ಮೊದಲು ಈ ಶ್ಲೋಕವನ್ನು ಹೆಚ್ಚಾಗಿ ಬಳಸಿಕೊಂಡರೋ ಇಲ್ಲವೋ ಹೇಳುವುದು ಕಷ್ಟ; ಸಾಕಾದಷ್ಟು ನಿದರ್ಶನಗಳಿಲ್ಲ. ಆದರೆ ಕವಿರಾಜಮಾರ್ಗದಲ್ಲಿ ಇದರ ಸುಳಿವು ಕಾಣುತ್ತದೆ: ಯಾವುದೋ ರಾಮಾಯಣದಿಂದ ಇವು ತೆಗೆದ ಹಾಗಿವೆ: (೨.೧೧೦-೧೩೪)

ಪೆಱನಾವನ್ ಧರಾಚಕ್ರಕ್ಕೆಱೆಯಂ ಕೆಳೆಯಪ್ಪವಂ |
ನೆಱೆಯಾರೆಣೆಯೆಂಬನ್ನಂ ಕುಱಿತಬ್ಧಿಗೆ ಬನ್ನಮಂ || ೧೨೫ ||
**ತಾರಾ** ಜಾನಕಿಯಂ ಪೋಗಿ **ತಾರಾ** ತರಳ ನೇತ್ರೆಯಂ |
**ತಾರಾ**ಧಿಪತಿ ತೇಜಸ್ವಿ **ತಾರಾ**ದಿವಿಜಯೋದಯಾ || ೧೨೮ ||

ಸೂತ್ರಗಳಲ್ಲಿ ಕವಿಯೇ ಕೆಲವು ಕಡೆ ಶ್ಲೋಕವನ್ನು ಪ್ರಯೋಗಿಸಿರುವನು

**ಇವು** ದುಷ್ಕರ ಕಾವ್ಯಂಗಳ್ ಸವಿಶೇಷ ವಿವರ್ತಿಗಳ್ |
ಸುವಿಚಾರಮಿ ತೋರ್ಪೆಮಿ**ವ**ಱಾ ಲಕ್ಷ್ಯಭೇದಮಂ || ೧೧೧ ||
ಯ**ಮ**ಕಂ ಪದ ಪಾದಾರ್ಧಂ ಸ**ಮ**ಶ್ಲೋಕಮಗೋಚರಂ |
ಪ್ರ**ಮಿ**ತಾದ್ಯಂತದೂಷ್ಯೋಪಕ್ರ**ಮಾ**ನೇಕಪ್ರಕಲ್ಪಿತಂ || ೧೨೭ ||

(ಪ್ರಾಸಗಳನ್ನು ಲಕ್ಷಿಸಿ.)

ಒಂದು ವೇಳೆ ಅನುಷ್ಟುಪ್ಪನ್ನು ಪ್ರಯೋಗಿಸಿ ನೋಡಿ ಕನ್ನಡ ಭಾಷೆಗೆ ಹೊಂದು ವುದಿಲ್ಲವೆಂದು ಬಿಟ್ಟಿರಬಹುದು.

(3) **ತ್ರಿಷ್ಟುಭ್ :** ೧೧ ಅಕ್ಷರದ ೪ ಪಾದಗಳು : ಒಂದು ಪಾದಕ್ಕೆ ೩ ಗಣ. ಕೊನೆಯ ಗಣ : ⏑ — —.

ಉದಾ :

ಕಸ್ಯ ನೂನಂ | ಕತಮಸ್ಯಾ ! ವೃತಾನಾಂ |
ಮನಾಮಹೇ | ಚಾರು ದೇವ | ಸ್ಯನಾಮ |
ಕೋ ನೋ ಮಹ್ಯಾ | ಅದಿತಯೇ | ಪು ನ ರ್ದಾ ತ್ |
ಪಿತರಂ ಚ | ದೃಶೇಯಂ ಮಾ | ತ ರಂ ಚ ||
ನಾಯಮಾತ್ಮಾ | ಪ್ರವಚನೇ | ನ ಲ ಭ್ಯಃ |
ನ ಮೇಧಯಾ | ನ ಬಹುನಾ | ಶ್ರುತೇನ |
ಯಮೇವೈಷ | ವೃಣುತೇ ತೇ | ನ ಲ ಭ್ಯಃ |
ತಸ್ಯೈಷ ಆ | ತ್ಮಾ ವೃಣುತೇ | ತ ನೂಂ ಸ್ವಾಂ ||
ಏಕೋ ದೇವ | ಸ್ಸರ್ವಭೂತೇ | ಷು ಗೂ ಢಃ |
ಸರ್ವವ್ಯಾಪೀ | ಸರ್ವಭೂತಾಂ | ತ ರಾ ತ್ಮಾ |
ಕರ್ಮಾಧ್ಯಕ್ಷ | ಸ್ಸರ್ವಭೂತಾ | ಧಿ ವಾ ಸಃ |
ಸಾಕ್ಷೀ ಚೇತಾ | ಕೇವಲೋ ನಿ | ರ್ಗು ಣ ಶ್ಚ ||

(4) **ಜಗತಿ :** ೧೨ ಅಕ್ಷರದ ೪ ಪಾದಗಳು : ಒಂದು ಪಾದಕ್ಕೆ ೩ ಗಣ. ಕೊನೆಯ ಗಣ : ⏑ —. ⏑ —.

ತುವ (ತ್ವ) ಮಗ್ನೇ | ಪ್ರಥಮೋ ಅಂ | ಗಿ ರಾ ಋ ಷಿಃ |
ದೇವೋ ದೇವಾ | ನಾಮಭವಃ | ಶಿ ವಃ ಸ ಖಾ |

◡ —· ◡ —
ತವ ವ್ರತೇ | ಕವಯೋ ವಿ | ದ್ಮ ನಾ ಪ ಸೋ |
◡ —· — —
ಅಜಾಯಂತ | ಮರುತೋ ಭ್ರಾ | ಜ ದೃ ಷ್ಟ ಯಃ ||
◡ —· ◡ —
ಅಶಬ್ದಮ | ಸ್ಪರ್ಶಮರೂ | ಪ ಮ ವ್ಯ ಯಂ |
ತಥಾರಸಂ | ನಿತ್ಯಮಗಂ | ಧವಚ್ಚ ಯತ್ |
ಅನಾದ್ಯನಂ | ತಂ ಮಹತಃ | ಪರಂ ಧ್ರುವಂ |
ನಿಚಾಯ್ಯ ತ | ನ್ಮೃತ್ಯುಮುಖಾತ್ | ಪ್ರಮುಚ್ಯತೇ ||

ಜಗತಿಯ ಪಾದವೂ ತ್ರಿಷ್ಟುಭ್ ಪಾದವೂ ಬೆರಸಿ ಬರುವುದುಂಟು :

◡ — ◡ —
ಕ್ಷುರಸ್ಯ ಧಾ | ರಾ ನಿಶಿತಾ | ದು ರ ತ್ಯ ಯಾ |
◡ — —
ದುರ್ಗಂ ಪಥ | ಸ್ತತ್ಕವಯೋ | ವ ದಂ ತಿ ||

(5) **ಪ್ರಗಾಥ:** ೮ ಮತ್ತು ೧೨ ಅಕ್ಷರಗಳ ಪಾದಗಳನ್ನು ಬೆರಸಿ ನಾಲ್ಕು ಪಾದದ ವೃತ್ತವನ್ನು ಏಳರವರೆಗೆ ವಿಸ್ತರಿಸಿ ಪ್ರಗಾಥಗಳನ್ನು ವೈದಿಕ ಕವಿಗಳು ರಚಿಸಿರುತ್ತಾರೆ. ಇವು ಬಹು ಗಂಭೀರವಾಗಿಯೂ ಉತ್ಸಾಹಪೂರಿತವಾಗಿಯೂ ಇರುತ್ತವೆ.

ಉದಾ :

◡ —· ◡ —
ಯುವಾಂ ಸ್ತೋಮೇ | ಭಿರ್ ದೇವಯಂ | ತ ಅ ಶ್ವಿ ನಾ | ೧೨
◡ —· ◡ —
ಆಶ್ರಾವಯಂ | ತ ಇವ ಶ್ಲೋ | ಕ ಮಾ ಯ ವಃ | ೧೨
◡ —· ◡ —
ಯುವಾಂ ಹವ್ಯಾ | ಭಿ ಆ ಯ ವಃ | ೮
◡ —· ◡ —·
ಯುವೋರ್ ವಿಶ್ವಾ | ಅ ಧಿ ಶ್ರಿ ಯಃ ೮
◡ —· ◡ —·
ಪೃಕ್ಷಶ್ಚ ವಿ | ಶ್ವ ವೇ ದ ಸಾ | ೮
◡ —· ◡ —
ಪ್ರುಷಾಯಂತೇ | ವಾಂಪವಯೋ | ಹಿ ರ ಣ್ಯ ಯೇ | ೧೨
◡ —· ◡ —·
ರಥೇ ದಸ್ರಾ | ಹಿ ರ ಣ್ಯ ಯೇ || ೮

ಇಲ್ಲಿಯ ಪಲ್ಲವಿ ಪದಗಳನ್ನು ಗಮನಿಸಿ.

ಈ ವೈದಿಕ ವೃತ್ತಗಳು ಸಂಸ್ಕೃತದಲ್ಲಿಯೇ ಮುಂದೆ **ಬಿಟ್ಟುಹೋದುವು.** ಕನ್ನಡ ಕವಿಗಳಿಗೂ ಕಣ್ಮರೆಯಾದುವು. ಶ್ಲೋಕವೊಂದು ಸ್ವಲ್ಪ ಆಸೆದೋರಿಸಿ ದಕ್ಕದೆ ಹೋದಹಾಗೆ ಕಾಣುತ್ತದೆ. ಮುಂದೆ ಬರುವ ಕವಿಗಳಾದರೂ ಜೀವ ಕಳೆಯಿಂದ ನಲಿಯುವ ಈ ವೈದಿಕ ಛಂದಸ್ಸಿನ ಸೌಂದರ್ಯದ ಕಡೆಗೆ ಕಣ್ಣು ತಿರುಗಿಸಬಹುದಲ್ಲವೆ?

(ii) **ಲೌಕಿಕ ಛಂದಸ್ಸು, ವೃತ್ತಗಳು :**

ನಾಲ್ಕಕ್ಷರದ ಗಣ ಹೋಗಿ ಯ ಗಣ ಮೊದಲಾದ ೩ ಅಕ್ಷರದ ಗಣಗಳಿಂದ ಲೌಕಿಕ ವೃತ್ತಗಳನ್ನು ಅಳೆಯುವುದು ಸಂಪ್ರದಾಯವಾಗಿದೆ. ಈ ವೃತ್ತಗಳು ಛಂದೋಗ್ರಂಥಗಳಲ್ಲಿ ೧೫೦ರ ಮೇಲೆ ಹೇಳಿದ್ದರೂ, ಕನ್ನಡ ಕವಿಗಳು (ತೆಲುಗು ಕವಿಗಳಂತೆ) ಆರು ವೃತ್ತಗಳನ್ನು ಮಾತ್ರ ವಿಶೇಷವಾಗಿ ಬಳಸುವರು. ೭೦೦-೯೫೦ರ ಕಾಲದ ಶಾಸನಗಳಲ್ಲಿಯೂ ಇವು ಸಿಕ್ಕುತ್ತವೆ. ಛಂದೋಂಬುಧಿಯ ಈ ಪದ್ಯದಲ್ಲಿ ಈ ಆರನ್ನು ಹೇಳಿದೆ :

ಗುರುವೊಂದಾದಿಯೊಳುತ್ಪಲಂ, ಗುರು ಮೊದಲ್ ಮೂಱಾಗೆ ಶಾರ್ದೂಲಮಾ
ಗುರು ನಾಲ್ಕಾಗಿರಲಂತು ಸ್ರಗ್ಧರೆ, ಲಘುದ್ವಂದ್ವಂ ಗುರುದ್ವಂದ್ವಮಾ
ಗಿರೆ ಮತ್ತೇಭ, ಲಘುದ್ವಯ ತ್ರಿಗುರುವಿಂದಕ್ಕುಂ ಮಹಾಸ್ರಗ್ಧರಂ,
ಹರಿಣಾಕ್ಷೀ, ಲಘು ನಾಲ್ಕು ಚಂಪಕಮಿವಾಱುಂ ಖ್ಯಾತಕಾರ್ಣಾಟಕಂ||

ಉತ್ಪಲ, ಶಾರ್ದೂಲ, ಸ್ರಗ್ಧರೆ—ಇವುಗಳ ಮೊದಲಿನ ಗುರುವಿಗೆ ಎರಡು ಲಘುಗಳನ್ನು ಇಟ್ಟು, ಚಂಪಕ, ಮತ್ತೇಭ, ಮಹಾಸ್ರಗ್ಧರೆಗಳನ್ನು ಕನ್ನಡ ಕವಿಗಳು ಮಾಡಿಕೊಂಡಂತೆ ಕಾಣುವುದು.

ಇವುಗಳ ಜೊತೆಗೆ ಅಲ್ಲಲ್ಲಿ ಅಪೂರ್ವವಾಗಿ ಕೆಲವು ವೃತ್ತಗಳು ಕಾಣಿಸುವುವು. ಇವು—ಮಾಲಿನಿ, ಪೃಥ್ವಿ, ಶಿಖರಿಣಿ, ಮಂದಾಕ್ರಾಂತ, ಹರಿಣಿ, ಮಲ್ಲಿಕಾಮಾಲೆ, ತರಳ—ಮುಂತಾದುವು. ತ್ರಿಷ್ಟುಬ್, ಜಗತೀ ಜಾತಿಗೆ ಸೇರಿ ಅಕ್ಷರಬದ್ಧವಾಗಿ ಏರ್ಪಟ್ಟ (ಗುರುಸ್ಥಾನ ಲಘುಸ್ಥಾನಗಳು ಇವೇ ಎಂದು ಕಟ್ಟುನಿಟ್ಟುಳ್ಳ) ಉಪೇಂದ್ರವಜ್ರ, ಇಂದ್ರವಜ್ರ, ವಂಶಸ್ಥ, ವಸಂತ ತಿಲಕ ಮುಂತಾದುವು ಸಂಸ್ಕೃತದಲ್ಲಿ ಹೆಚ್ಚು ಪ್ರಯೋಗವುಳ್ಳುವು ಕನ್ನಡದಲ್ಲಿ ಅಪೂರ್ವ. ಉದಾ :

ಅವರ್ಣವಾದಕ್ಕೆಡೆಯಾಗದೊಳ್ಪಿಂ
ದವರ್ಣಿಕಾಮುರ್ ಗುಣವೃದ್ಧಿಧಾಮುರ್
ದಿವಾಕರರ್ ವ್ಯಾಕೃತಿ ನಾಮಿಗಳ್ವೋಲ್
ದಿವಕ್ಕೆ ಪನ್ನಿರ್ವರೆ ಮುಖ್ಯರಾದರ್ ||

(ಶ. ಮ. ದರ್ಪಣ, ಸೂತ್ರ ೯ರ ಕೆಳಗೆ)

ಎನಿತ್ತೆನಿತ್ತಂಬುಜಪತ್ರನೇತ್ರೆಯಾ . . .

(ಸೂ. ೧೧೪ರ ಕೆಳಗೆ)

ವೆ. ನರಸಿಂಹ ಮೂರ್ತಿ
ಕೆಂಗೇರಿ ಉಪ ನಗರ.



ವೃತ್ತಗಳನ್ನು ಕನ್ನಡಕ್ಕೆ ತೆಗೆದುಕೊಳ್ಳುವುದರಲ್ಲಿ ಪ್ರಾಸ ಸೇರಿತು: ಯತಿ ಮೀರಿತು: ಪಾದಗಳ ಕೊನೆಯಲ್ಲಿ ನಿಲವು ಸಾಧಾರಣವಾಗಿ ಇಲ್ಲ: ಅಲ್ಲಿ ದೀರ್ಘ ವಾಗಬಹುದಾದ ಹ್ರಸ್ವ ಬರಲು ಎಡೆಯಿಲ್ಲ, ಮುಂದಕ್ಕೋಡುವುದರಿಂದ. ಎಲ್ಲಕ್ಕಿಂತ ಹೆಚ್ಚಾಗಿ ವೃತ್ತದ ಧಾಟಿ ಘೋಷಗಳನ್ನು ಪಾಲಿಸುವುದಕ್ಕಾಗಿ ಹೆಚ್ಚು ಹೆಚ್ಚಾಗಿ ಸಂಸ್ಕೃತದ ದೀರ್ಘಸಮಾಸಗಳನ್ನು ಹೆಣೆಯುವಂತಾಯಿತು; ಕನ್ನಡ ನುಡಿಗಳು ತಮ್ಮ ಸ್ವರಗಳೊಡನೆ ಎದ್ದು ನಿಂತು ಕಾಣದಂತಾಯಿತು. ಉದಾಹರಣೆಗಾಗಿ ಆದಿಕವಿ ಪಂಪನ ಆದಿಪುರಾಣದಿಂದಲೂ ನಾಗವರ್ಮನ ಛಂದೋಂಬುಧಿಯಿಂದಲೂ ಮೊದಲ ನೆಯ ಮಂಗಳಶ್ಲೋಕವನ್ನು ತೆಗೆದುಕೊಳ್ಳೋಣ:

ಶ್ರೀದೇವೇಂದ್ರಮುನೀಂದ್ರವಂದಿತಗುಣವ್ರಾತಂ ಜಗತ್ಸ್ವಾಮಿಃ ಸಂ
ದಾದಿಬ್ರಹ್ಮನಗಾಧಬೋಧನಿಳಯಂ ದುರ್ವಾರಸಂಸಾರವಿ
ಚ್ಛೇದೋಪಾಯನಿಯುಕ್ತಸೂಕ್ತಿವೃಷಮಾರ್ಗಾಗ್ರೇಸರಂ ಪಾಪಹೃ
ತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ||

ಶ್ರೀವಧುವಂ ಪಯೋಧಿಮಥನೋದ್ಭವವಸ್ತುಸಮೂಹದೊಳ್ ಮಹಾ
ದೇವಸಮೇತಮಿರ್ದಸುರರುಂ ಸುರರುಂ ಕುಡೆ ತನ್ನ ಮೆಚ್ಚುಗೊಂ
ಡಾವನಶೇಷಭೂಭುವನಮಂಡಲವಲ್ಲಭನಾದ ದೇವನೀ
ಗಾವಗಮೆಮ್ಮ ಬೇಟ್ಪ ವರದುನ್ನತಿಯಂ ಸುಕವೀಂದ್ರವಲ್ಲಭಂ ||

ಕನ್ನಡದ ಪ್ರಾಶಸ್ತ್ಯವನ್ನು ಉಳಿಸಿಕೊಳ್ಳಲು ಪ್ರಯತ್ನಪಟ್ಟ ಆಂಡಯ್ಯನ ಮಂಗಳಶ್ಲೋಕವನ್ನು ಇಲ್ಲಿ ಉದಾಹರಿಸಬಹುದು:

ಆವನ ಗಾಡಿ ನೋಡಿದವರಂ ಸಲೆ ಸೋಲಿಸುತಿರ್ಪುದುರ್ಕಿನಿಂ
ದಾವನ ಪೂವಿನಂಬದಟರಂ ತಲೆವಾಗಿಸುತಿರ್ಪುದೇಟ್ಗೆಯಿಂ
ದಾವನ ಪಜ್ಜಳಿಪ್ಪ ಜಸಮೆಣ್ದೆಸೆಯೊಳ್ ನೆಲಸಿರ್ಪುದಾತನೀ
ಗಾವಗಮೆನ್ನ ಜಾಣ್ನುಡಿಗೆ ಮೆಯ್ಸಿರಿಯಂ ನನೆವಿಲ್ಲ ಬಲ್ಲಹಂ ||

ಇಲ್ಲಿ ವೃತ್ತ ಧಾಟಿ ಸಂಸ್ಕೃತ: ಮಾತುಗಳು ಕನ್ನಡ.

ಪಂಪಾದಿಗಳೂ ಕನ್ನಡವನ್ನು ಬಿಟ್ಟುಬಿಟ್ಟರೆಂದಲ್ಲ: ಆದರೆ ಅವರ ಶೈಲಿ ಸಾಮಾನ್ಯವಾಗಿ ಸಂಸ್ಕೃತ "ಮಾರ್ಗ"ವನ್ನು ಅನುಸರಿಸುತ್ತದೆ: ವೃತ್ತವೂ ಆ ಕಡೆಗೆ ಅವರನ್ನು ಸೆಳೆಯುತ್ತದೆ. "ದೇಸಿ"ಗೆ ಉದಾ:

ಒಡಲೊಳೆ ಜೀವಮಿರ್ದು ಗಡ ಸಂಚಿಸುತಿರ್ಪುದು ಪುಣ್ಯಪಾಪಮಂ
ಗಡ ಬಟ್ಟಕತ್ತ ಬೇಱೆ ಪೆಱತೊಂದೊಡಲೊಳ್ ಗಡ ತಾನೆ ನಿಂದೊಡಂ

ಬಡಿಪುದು ಧರ್ಮಕರ್ಮಫಲವಮಂ ಗಡ ಸತ್ತನೆ ಮತ್ತೆ ಪುಟ್ಟುವಂ
ಗಡ ಪುಸಿ ಕಾಣ ಡಂಬಮಿದು ಖೇಚರ ನೀನಿದನೆಂತು ನಂಬಿದೋ ||

—ಆದಿಪುರಾಣ. ೨, ೩೮

ತೆಂಕಣ ಗಾಳಿ ಸೋಂಕಿದೊ ಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂ ಕೆಳಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ ||

—ಪಂಪಭಾರತ, ೪, ೩೦

ಅಕ್ಷರವೃತ್ತಗಳೆಂದು ಲಕ್ಷಣ ಹೇಳುವ ವೃತ್ತಗಳಲ್ಲಿ ಇನ್ನೊಂದು ವಿಶೇಷವುಂಟು : ಕೆಲವು ಮಾತ್ರಾವೃತ್ತಗಳಾಗಿ ಪರಿಣಮಿಸಿರುವುವು. ಉದಾ :

ಮಲ್ಲಿಕಾಮಾಲೆ : ನೀರ | ಜೋತ್ಪಲ | ವರ್ಣ | ನಾಡಿದ | ನಾಡಿ | ದಂ
(೩ ೪ ೩ ೪ ೩)
ಕಮ | ಲೇಕ್ಷ | ಣಂ ||
(೪ ೩ ೨)

ತರಳ : ಮದನ | ಮೋಹದ | ಮಂತ್ರ | ನಾದಮೊ | ಸೇತು |
ಗಟ್ಟಿದ | ಕಾಮ | ಸಂ || (ಪುಟ : ೮೬)

ಕ್ರೌಂಚ : ಕೇದಗೆ | ವೂವಿಂ | ಚಾದಗೆ | ಬಾಯಂ | ಬಿಡೆ ಬಿಡು |
(೪ ೪ ೪ ೪ ೪)
ತರೆ ಬಿಡು | ವನಿ ಕಡು | ವಿಸಿಲಂ || (ಪುಟ : ೮೮)
(೪ ೪ ೪)

ಶಂಭುನಟನ : ಅಳಿಪ್ರಭ | ಲಲಾಟಗ | ಚಲಾಲಕೆ | ಖಲಾಪಹೆ |
(೫ ೫ ೫ ೫)
ಬ[illegible]ಾನ್ವಿತೆ | ಮಿಲದ್ಘನ | ಗುಣೇ | (ಪುಟ : ೮೯)
([illegible] ೫ ೩)

ಮೂರಕ್ಷರದ ಯ ಗಣ ಮುಂತಾದ ಎಂಟು ಗಣಗಳಿಂದ ವೃತ್ತಗಳ ಪಾದಗಳನ್ನು ವಿಭಾಗಮಾಡಿ ಲಕ್ಷಣ ಹೇಳುವುದು ಅಷ್ಟು ಸಹಜವಾಗಿ ಕಾಣುವುದಿಲ್ಲ. ವೃತ್ತಗಳ ನಿಜಸ್ವರೂಪವಾಗಲಿ, ರಚನೆಯ ರಹಸ್ಯವಾಗಲಿ ಈ ಪದ್ಧತಿಯಿಂದ ತಿಳಿಯುವುದಿಲ್ಲ. ಅಕ್ಷರಗಣಲಕ್ಷಣಗಳನ್ನು ಕಂಠಪಾಠಮಾಡುವುದಕ್ಕಿಂತಲೂ ಪ್ರಸಿದ್ಧ ಕವಿಗಳ ಒಂದೊಂದು ಪಾದವನ್ನು ನೆನಪಿನಲ್ಲಿಟ್ಟುಕೊಳ್ಳುವುದು ಒಳ್ಳೆಯದು.

ಉದಾ :

ಮಾಲಿನಿ : ಸರಸಿಜಮನುವಿದ್ಧಂ ಶೈವಲೇನಾಪಿ ರಮ್ಯಂ. (ಶಾಕುಂತಲ)

ಮಂದಾಕ್ರಾಂತ :

ಕಶ್ಚಿತ್ ಕಾಂತಾವಿರಹಗುರುಣಾ ಸ್ವಾಧಿಕಾರಾತ್ ಪ್ರಮತ್ತಃ ||
ಮೇಘಾಲೋಕೇ ಭವತಿ ಸುಖಿನೋಽಪ್ಯನ್ಯಥಾವೃತ್ತಿ ಚೇತಃ ||
(ಮೇಘಸಂದೇಶ)

ಶಿಖರಿಣಿ :

ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ |
(ಉತ್ತರರಾಮಚರಿತ)

### (iii) ಲೌಕಿಕ ಛಂದಸ್ಸು, ಕಂದ :

ಸಂಸ್ಕೃತದ ಆರ್ಯಾ ಅಥವಾ ಗಾಥಾ ವೃತ್ತವು ಪ್ರಾಕೃತದಲ್ಲಿ ಆರ್ಯಗೀತ ಅಥವಾ ಸ್ಕಂಧಕವೆಂಬ ೬೪ ಮಾತ್ರೆಯ ವೃತ್ತವಾಗಿ ಕನ್ನಡದಲ್ಲಿ ಮತ್ತು ತೆಲುಗಿನಲ್ಲಿ ವಿಶೇಷವಾಗಿ ಕಂದ ಎಂಬ ಹೆಸರಿನಲ್ಲಿ ಪ್ರಚಾರದಲ್ಲಿದೆ. ಚಂಪೂಕಾವ್ಯವೆಂದರೆ ಮುಕ್ಕಾಲುಪಾಲು ಕಂದ, ಕಾಲುಪಾಲು "ಆರು ವೃತ್ತಗಳು." ಉದಾಹರಣೆಗಾಗಿ, ಪಂಪಭಾರತದಲ್ಲಿ ವೃತ್ತ ಕಂದಗಳ ಪ್ರಮಾಣ :

| | ಒಟ್ಟು ಪದ್ಯ | ಕಂದ | ಚಂಪಕ | ಉತ್ಪಲ | ಮತ್ತೇಭ | ಶಾರ್ದೂಲ |
|---|---|---|---|---|---|---|
| ಆಶ್ವಾಸ ೧— | ೧೪೬ | ೮೨ | ೨೯ | ೧೫ | ೧೨ | ೧ |
| ೮— | ೮೨ | ೨೯ | ೨೧ | ೮ | ೧೦ | .. |
| ೯— | ೧೦೫ | ೪೫ | ೧೪ | ೧೮ | ೨೧ | ೩ |

ಈ ಮೂರು ಆಶ್ವಾಸಗಳಿಂದ—ಸ್ರಗ್ಧರೆ, ಮಹಾಸ್ರಗ್ಧರೆ, ಶಿಖರಿಣಿ, ಪೃಥ್ವಿ, ತರಳ, ಮಲ್ಲಿಕಾಮಾಲೆ, ಹರಿಣೀಪ್ಲುತ ಇವು ಒಂದು, ಎರಡು. ತೆಲುಗಿನಲ್ಲಿಯೂ ಚಂಪೂಕಾವ್ಯಗಳು ಹೀಗೆಯೇ.

ಕಾದಂಬರಿಯಿಂದ ಆರ್ಯೆಗೆ ಉದಾಹರಣೆ: (೫೭ ಮಾತ್ರೆಗಳು.)

೪ ೪ ೪
ದೂರಂ | ಮುಕ್ತಾ | ಲತಯಾ |

೪ ೪ ೪ ೪ ೨
ಬಿಸಸಿತ | ಯಾ ವಿ | ಪ್ರಲೋಭ್ಯ | ಮಾನೋ | ಮೇ || (೩೦)

೪ ೪ ೪
ಹಂಸ ಇ | ವ ದರ್ಶಿ | ತಾಶೋ |

೪ ೪ ೧ ೪ ೨
ಮಾನಸ | ಜನ್ಮಾ | ತ್ವ | ಯಾ ನೀ | ತಃ || (೨೭)

ಅದರ ಭಾಷಾಂತರ, ಕಂದ : (೬೪ ಮಾತ್ರೆಗಳು ೩೨+೩೨)

ಎನಗಾ | ಸೆದೋಜು | ಬಿಸಸಿತ |
ಮೆನಿಸುವ | ನಿಜತಾ | ರಹಾರ | ಲತೆಯಿಂ | ದಂ ಹಂ || (೩೨)

ಸನವೋಲ್ | ಮಾನಸ | ಸಂಭವ |
ಮೆನಿಪ ಮ | ದೀಯಾ | ಭಿಮಾನ | ಮಂ ಕ | ಟ್ಟೆಯ್ದಾ || (೩.೨)

ಈ ಮಾತ್ರಾಗಣಗಳ ಥಾಟಿ ಕನ್ನಡಕ್ಕೆ ಹೊಂದಿಕೊಂಡಿದ್ದರಿಂದ ಕಂದ ಹಳಗನ್ನಡಕ್ಕೆ ಸೊಗಸಾಯಿತು.

ಶುದ್ಧ ಹೊಸಗನ್ನಡದಲ್ಲಿ ಕಂದವನ್ನು ಬರೆಯುವುದು ಅಷ್ಟು ಸುಲಭವಲ್ಲ. ಕೆಲವರು ನಿಯಮ ನಿರ್ಬಂಧಗಳನ್ನು ತಪ್ಪಿಸಿಕೊಳ್ಳಲು ಪ್ರಯತ್ನಪಟ್ಟಿದ್ದಾರೆ. ಕೆಲವು ಕಡೆ, ಗಣವಿಭಾಗಕ್ಕೆ ಲಕ್ಷ್ಯಕೊಟ್ಟಿಲ್ಲ. ಎರಡನೆಯ ಪದದ ಕೊನೆಯ ಗುರುವಿನ ಸ್ಥಾನದಲ್ಲಿ ಎರಡು ಹ್ರಸ್ವಗಳನ್ನು ಹಾಕಿರುತ್ತಾರೆ. ಉದಾ :

— ⌣ —
ಶ್ರೀವಿರೂಪಾಕ್ಷದೇವನಿ
— ⌣ ⌣
ನಾವೀರಂ ಪುಟ್ಟಿ ವಿಬುಧನುತನಾದಂದದೊ
— ⌣ —
ಳಾ ವಿರೂಪಾಕ್ಷ ನೃಪನಿಂ
ದೀ ವೀರಂ ಜನಿಸಿ ವಿಬುಧನುತನಾಗಿರ್ಪಂ ||

—ವೀರಭದ್ರವಿಜಯ, ೧, ೩೮

ಗಲ್ಲಂ ಮಲ್ಲಂ ತೋರಣ
⌣ —⌣—⌣ ⌣ — ⌣ ⌣
ಮಲ್ಲಣಿಯುಮಂಕ ಪ ಟ್ಟೆ ನೆಯೆಂಬಿವು ಸಂ ಸ್ಕೃ ತ
ದಲ್ಲಿಯುಮೀ ಕರ್ಣಾಟಕ
ದಲ್ಲಿಯುಮೊಂದೇ ಸಮಾಸಮೆಲೆ ಚತುರಾಸ್ಯಾ ||

—ಚತುರಾಸ್ಯನಿಘಂಟು,

— ⌣ —
ಮ ತ್ತ ಮಾ ಕೆಳದಿಯೊಳ್ ಜೆ
ಲ್ಪೆತ್ತು ವಿರಾಜಿಸುತುಮಿಹ ಮಹತ್ತಿನ ಮಠಮಂ
— ⌣ —
ಬಿ ತ್ತ ರಂ ಗೈಸಿ ಜಂ..ಮ
ಕುತ್ತಮತರ ದಾನಧರ್ಮಗಳನಾಗಿಸಿಡಂ ||

—ಕೆಳದಿನೃಪವಿಜಯ, ೨, ೬೭

⌣ ⌣ ⌣ —
ತಿ ವಿ ರ ಡ ಂ ಗಿ ದು ದು ಚೇತ
ಸ್ತ್ರಿವಿರಾತ್ಮಧ್ಯಾನದಿಂದೆ ಭಗಕರ್ಗಾಗಳ್
ತವಿಪಂತೆ ವಿಶ್ವಪತಿಯು
ಪ್ಪವಡಿಸೆ ತಾವೆಯ್ದೆ ಪಾಡಿದರ್ ಭಾವಕಿಯರ್ ||

—ವೀರಭದ್ರವಿಜಯ, ೭, ೧೩

ಈ ಪ್ರಯೋಗಗಳು ಚೆನ್ನಲ್ಲ: ನಿಲ್ಲತಕ್ಕುವಲ್ಲ.

ಕಂದದಲ್ಲಿಯೂ ಸಂಸ್ಕೃತ ಶೈಲಿ, ಕನ್ನಡ ಶೈಲಿಗಳಿಗೆ ಉದಾಹರಣೆಗಳನ್ನು ತೋರಬಹುದು :

ಮಾರ್ಗಕ್ಕೆ :

ಬಾದೇಂ ಮದೀಯಕರ್ಮಘ
ಔಘೋದಿತ ಸಂತಾಪರೂಪ ಪಾಪಕಳಾಪ
ಚ್ಛೇದನಕರಮಾಯ್ತು ಭವ
ತ್ಪಾದಪ್ರಕ್ಷಾಳನೋದಕಂ ಮುನಿನಾಥಾ ||

—ಪಂಪಭಾರತ, ೬, ೧೩

ದೇಸಿಗೆ :

ಕುಡವೇಟ್ಟ್ವನ ಕುಡುವನ ಕುಡೆ
ಪಡೆವನ ಪೆಂಪೇಂ ನೆಗೞ್ತೆವಡೆಗುವೊ ಪೇೞ್ವಂ
ಕುಡವೇೞ್ಗೆಮ ಕುಡುವಣ್ಣಂ
ಕುಡುಗೆಮ ಕುಡೆ ಕೊಳ್ವ ಕಲಿಯುನಱಿಯಲ್ಕಕ್ಕುಂ ||

—ಅದೇ, ೬, ೪೯

ಹಿತವಾದ ಬೆರಕೆಗೆ :

ಆವಲರುಂ ಪಣ್ಣುಂ ಬೀ
ತೋವವು ಗಡ ಬೀಯವಲ್ಲಿ ಮಲ್ಲಿಗೆಗಳು ಸಿ
ಮ್ಮಾವುಗಳುಮೆಂದೊಡಿನ್ ಪೆಱ
ತಾವುದು ಸಂಸಾರಸಾರಸರ್ವಸ್ವಫಲಂ ||

ಷಡಕ್ಷರಿಯ ರಾಜಶೇಖರವಿಲಾಸದಿಂದ ಕಂದದ ಈ ಶೈಲಿಗಳಿಗೆ ಉದಾಹರಣೆ :

ವಿತತ ಪುರಾತನ ಕವಿಕೃತ
ಕೃತಿ ಭೂಷಣ ಭೂಷಿತಾಂಗಿ ಭಾಸತಿ ಭುವನ
ಸ್ತುತಕಾಂತಿಗುಣವಿಳಿತವು
ತ್ಕೃತಿ ನವಸೀಮಂತರತ್ನಮಂ ತಳೆದೆಸೆವಳ್ ||
ಎಳವರೆಯದೊಳೆಳೆಯರ್ಕಳ
ನೆಳಸುತೆ ನಳಿತೋಳ್ಗಳಿಂದೆ ಬಿಗಿದಪ್ಪಿ ಮನಂ
ಗೊಳೆ ತಳ್ತು ನೋಡಿ ಮುದ್ದಿಪ
ವಿಳಾಸಮೊಂದಕ್ಕೆ ನೋಂತುದಿಲ್ಲಾನ್ ಕೆಳದೀ ||
ಆರಾರೇೞಿರ್ ಶಾಸ್ತ್ರ
ಶ್ರೀರೋಹಣಗಿರಿಯನಲ್ಲಿ ನವಕವಿತಾ ಚಿಂ
ತಾರತ್ನಂ ದೊರೆಗುಮೆ ಮಾ
ರಾರಿಯ ಕೃಪೆಯಿಲ್ಲದಂಗೆ ಧರಣೀತಲದೊಳ್ ||

## ವೃತ್ತಕಂದಗಳ ಪ್ರಯೋಗದ ಮೇಲೆ ಭಾಷಾವ್ಯತ್ಯಾಸದ ಪರಿಣಾಮ :

ಹಳಗನ್ನಡ ಹೊಸಗನ್ನಡಕ್ಕೆ ತಿರುಗಿ ಹಳಗನ್ನಡ ಪ್ರತ್ಯಯಗಳೂ ಶಬ್ದರೂಪಗಳೂ ಹೊಸಗನ್ನಡದ ರೂಪಾಂತರಗಳನ್ನು ಪಡೆದ ಮೇಲೆ, ಹಳಗನ್ನಡದ ಮಿಶ್ರಣವಿಲ್ಲದೆ ವೃತ್ತಕಂದಗಳನ್ನು ರಚಿಸುವುದು ಕಷ್ಟವಾಗುತ್ತ ಬಂತು. ಮತ್ತು ಈ ಸಂಸ್ಕೃತ ಛಂದಸ್ಸು ಕನ್ನಡಕ್ಕೆ ಸಹಜವಾದ ಛಂದಸ್ಸಲ್ಲವೆಂಬುದೂ ಸ್ಪಷ್ಟವಾಗುತ್ತಾ ಬಂತು. ಸುಮಾರು ೧೧ನೆಯ ಶತಮಾನದವರೆಗೆ ಕನ್ನಡದ ಪದ್ಯಗಳು ಸಾಹಿತ್ಯದಲ್ಲಿ ಎಲ್ಲೋ ಅಲ್ಲೊಂದು ಇಲ್ಲೊಂದು ಕಾಣಿಸಿಕೊಳ್ಳುತ್ತವೆ. ೧೨ನೆಯ ಶತಮಾನದಲ್ಲಿ ವೀರಶೈವ ಕವಿಗಳು ಕನ್ನಡದ ಛಂದಸ್ಸನ್ನೇ ಮುಂದಕ್ಕೆ ತಂದು ಪ್ರಾಶಸ್ತ್ಯದ ಸ್ಥಾನದಲ್ಲಿ ನಿಲ್ಲುವಂತೆ ಮಾಡಿದರು. ಆಗ ಮಧುರಕವಿಯ ಧಿಕ್ಕಾರದ ಮಾತು ಛಂದಸ್ಸಿನ ವಿಷಯದಲ್ಲಿ ಹಿಮ್ಮೆಟ್ಟಿತು :

ಪಂಡಿತರುಂ ವಿವಿಧಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ಡುಂಡುಚಿಯೇ ಬೀದಿವಱಿಯೆ ಬೀರನ ಕತೆಯೇ ?

"ಒನಕೆವಾಡು" ಮುಂತಾದುವುಗಳಲ್ಲಿ ಜನಸಾಮಾನ್ಯರೂ ಹೆಂಗಸರೂ ತ್ರಿಪದಿ ಮುಂತಾದ ಕನ್ನಡ ಛಂದಸ್ಸನ್ನೇ ಬಳಸುತ್ತಿದ್ದರು. ಈ ಹರೆ ಬಡಿದು, ರಾಗಿ ಬೀಸಿ, ಒನಕೆ ಕುಟ್ಟಿ, ಬೀದಿಯಲ್ಲಿ ಕುಣಿದು, ಹಾಡಿದ ಕನ್ನಡ ಮಟ್ಟುಗಳನ್ನು, ಹಾಡುಗಳನ್ನು ಈಗ ವಿಚಾರಕ್ಕೆ ತೆಗೆದುಕೊಳ್ಳೋಣ. ಈ ಜನಪದ ಸಾಹಿತ್ಯ ಮತ್ತೆ ಕನ್ನಡದ ಪ್ರೌಢಸಾಹಿತ್ಯಕ್ಕೂ ಹೇಗೆ ತಳಹದಿಯಾಯಿತೆಂಬುದನ್ನು ನೋಡೋಣ.

## 2. ಕನ್ನಡ ಛಂದಸ್ಸು

(i) **ನಾಗವರ್ಮನ ಛಂದೋಂಬುಧಿ :** ಇದುವರೆಗೆ ಹೇಳಿದ ವೃತ್ತಕಂದಗಳ ಲಕ್ಷಣಗಳಿಗೆ ಇದು ಕನ್ನಡದಲ್ಲಿರುವ ಅತಿ ಪ್ರಾಚೀನ ಗ್ರಂಥ. ೧ನೆಯ ಅಧಿಕಾರದಲ್ಲಿ—

ಇಂದುಧರನುಮೆಗೆ ಪೇಳ್ದಾ
ಛಂದಂ ಪಿಂಗಳನಿನವನಿಯೊಳ್ ಪರಪಿದೊಡಾ
ಛಂದೋಂಬುರಾಶಿಯೊಳ್ ಮೊಗೆ
ತಂದದನಾತ್ಮೀಯ ಸತಿಗೆ ನಾಕಿಗನುಸಿರ್ದಂ || ೧, ೩೦ ||

ಎಂದು ನಾಗವರ್ಮನು ಹೇಳುತ್ತಾನೆ. ತನ್ನ ಹಿಂದೆ ಕನ್ನಡದಲ್ಲಿದ್ದಿರಬಹುದಾದ

(ಗುಣಗಾಂಕೀಯಂ ?) ಯಾವ ಕನ್ನಡ ಛಂದೋಗ್ರಂಥವನ್ನೂ ಹೇಳದೆ, ಸಂಸ್ಕೃತದ ಪಿಂಗಳನಿಂದ ತೆಗೆದು ಹೇಳುತ್ತೇನೆಂದು ತಿಳಿಸಿ, ಅದಕ್ಕೆ ತಕ್ಕಂತೆ, ಮ-ಯ-ರ-ಸ-ತ-ಜ-ಭ-ನ-ಲ-ಗಾಕ್ಷರಗಳನ್ನೂ, ಪ್ರಸ್ತಾರವನ್ನೂ (೩೨-೪೧), ಯತಿಯನ್ನೂ (೪೫-೪೬) ಹೇಳಿ, ಸಂಸ್ಕೃತ ಪ್ರಾಕೃತ ಮುಂತಾದ ಸರ್ವವಿಷಯಭಾಷಾಜಾತಿಗಳಾದ ವೃತ್ತ ಸ್ಕಂಧಕಾದಿಗಳನ್ನು ನಿರ್ದೇಶಿಸಿ, ದೇಶಭಾಷೆಗಳಲ್ಲಿರುವ, ಎಂದರೆ, ಕನ್ನಡ ದಲ್ಲಿರುವ ಪದ್ಯಗಳನ್ನೂ ಹೆಸರಿಸುತ್ತಾನೆ.

ಮದನವತಿಯಕ್ಕರಂ ಚೌ
ಪದಿ ಗೀತಿಕೆಯೇಳೆ ತಿವದಿಯುತ್ಸಾಹಂ ಷ
ಟ್ಪದಿಯಕ್ಕರಿಗೆ ಕರಂ ಚೆ
ಲ್ವೊದವಿದ ಛಂದೋವತಂಸಮಬ್ಜದಳಾಕ್ಷೀ (೪೭)

ಮುಂದೆ ೨, ೩, ೪ ನೆಯ ಅಧಿಕಾರಗಳಲ್ಲಿ ವೃತ್ತ ಶ್ಲೋಕ ಕಂದಗಳನ್ನೂ ೬ನೆಯದರಲ್ಲಿ ಷಟ್ಪ್ರತ್ಯಯಗಳನ್ನೂ ಹೇಳಿರುತ್ತಾನೆ. ೫ನೆಯ ಅಧಿಕಾರದಲ್ಲಿ ಕರ್ಣಾಟಕ ವಿಷಯ ಜಾತಿಯನ್ನು ವಿವರಿಸಿದ್ದಾನೆ: ಎಂದರೆ ಗ್ರಂಥದ ಅಲ್ಪಭಾಗ ವನ್ನು ಮಾತ್ರ ಈ ಅಚ್ಚಗನ್ನಡ ಛಂದಸ್ಸಿಗೆ ವಿನಿಯೋಗಿಸಿದ್ದಾನೆ. ೧೦ನೆಯ ಶತಮಾನದ ವರೆಗಿನ ಕಾವ್ಯ ಶಾಸನಗಳನ್ನು ನೋಡಿದರೂ ಇದೇ ಭಾವನೆ ಹುಟ್ಟು ತ್ತದೆ—ಏನೆಂದರೆ ಸಂಸ್ಕೃತ ಛಂದಸ್ಸೇ ಕನ್ನಡದಲ್ಲಿ ಪ್ರಧಾನವೆಂದೂ, ಕನ್ನಡ ಛಂದಸ್ಸು ಅತಿ ವಿರಳವೆಂದೂ, ಕಡೆಗೆ ಅದು ಉಂಟೋ ಇಲ್ಲವೋ, ಇದ್ದರೂ ಅಷ್ಟು ಮಹತ್ತಿನದಲ್ಲವೆಂದೂ ಬುದ್ಧಿಗೆ ಭಾಸವಾಗುತ್ತದೆ. ಆದರೂ ಮೇಲೆ ಹೇಳಿದಂತೆ, ಈ ಕನ್ನಡ ಛಂದಸ್ಸೇ ನಿಜವಾದ ಕನ್ನಡ ಭಾಷೆಯ, ಕನ್ನಡ ಜನರ ಛಂದಸ್ಸೆಂದೂ, ಇದು ಜನರಲ್ಲಿ (ಪ್ರಾಯಶಃ ಉಳಿಯದೆ ಹೋದ ಜನಪದ ಸಾಹಿತ್ಯದಲ್ಲಿ) ಪ್ರಚಾರ ದಲ್ಲಿತ್ತೆಂದೂ, ತೆಲುಗು ತಮಿಳುಗಳೊಡನೆ ಹೋಲಿಸಿ ನೋಡಿದರೆ ಇದೇ ಮುಂದೆ ವೀರಶೈವ ಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ 'ತಾಯಿ' ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು. ಅದರಲ್ಲಿಯೂ ತಮಿಳಿನ ಛಂದಸ್ಸುಗಳೊಡನೆ ಹೋಲಿಸಿ ನೋಡಬೇಕು: ಏಕೆಂದರೆ ತೆಲುಗೂ ಕನ್ನಡದಂತೆ ಸಂಸ್ಕೃತ ಛಂದಸ್ಸನ್ನೇ ಶರಣುಹೊಕ್ಕು ತನ್ನ "ಸ್ವದೇಶಿ"ಯನ್ನು ಹಿಂದಕ್ಕೆ ಹಾಕಿತು. ತಮಿಳು ಸ್ವದೇಶಿ ಭಾವನೆಯನ್ನೂ ಸ್ವತಂತ್ರದ ಬೆಳವಣಿಗೆ ಯನ್ನೂ ಬಿಡದೆ, ಗೌರವ ಕೊಟ್ಟು, ಪ್ರತಿಜ್ಞೆ ಮಾಡಿಯೋ ಎಂಬಂತೆ ಸಾಧಿಸಿ ನಿಲ್ಲಿಸಿಕೊಂಡಿತು. ಆದರೆ ಸೂಕ್ಷ್ಮವಾಗಿ ಪರಿಶೀಲಿಸತಕ್ಕವರಿಗೆ ಈ ಮೂರು ಭಾಷೆಗಳಲ್ಲಿಯೂ ಸಂಸ್ಕೃತ ಭಿನ್ನವಾದ, ದ್ರಾವಿಡಭಾಷೆಯಂತೆಯೇ ಸಹಜವಾದ ಒಂದು ದ್ರಾವಿಡ ಛಂದಸ್ಸಿನ ಮೂಲಾಧಾರಗಳು ದೊರೆಯುತ್ತವೆ. ಮಲೆಯಾಳ ದಲ್ಲಿಯೂ, ಕೊಡಗು ತುಳು ಮುಂತಾದ ಸಾಹಿತ್ಯಕ್ಕೇರದ ಭಾಷೆಗಳ ಹಾಡು

ಗಳಲ್ಲಿಯೂ ದ್ರಾವಿಡ ದೇಶಗಳ ಎಲ್ಲಾ ಜನಪದ ಸಾಹಿತ್ಯಗಳಲ್ಲಿಯೂ, ಹೆಂಗಸರ ಹಾಡುಗಳಲ್ಲಿಯೂ, ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು. ಈ ದೃಷ್ಟಿ ಹುಟ್ಟಿದ ಮೇಲೆ ಈ ಬಗೆಯ ಸಾಹಿತ್ಯಗಳ ಸಂಗ್ರಹಕಾರ್ಯವೂ, ಈ ದ್ರಾವಿಡ ಛಂದಸ್ಸಿನ ಸ್ವರೂಪನಿರ್ಣಯ ಕಾರ್ಯವೂ ಪ್ರಾರಂಭವಾಗಿವೆ.

**(ii) ಕನ್ನಡ ಪದ್ಯಗಳು—ಇವುಗಳ ದ್ರಾವಿಡ ಮೂಲ :**

೧೦ನೆಯ ಶತಮಾನದವರೆಗೆ ಶಾಸನಗಳಲ್ಲಿ, ಪಂಪಾದಿ ಕವಿಗಳಲ್ಲಿ ಮತ್ತು ನಾಗವರ್ಮನಲ್ಲಿ ಕಾಣಬರುವ ಮುಖ್ಯವಾದ ಕನ್ನಡ ಪದ್ಯಗಳು ಯಾವುವೆಂದರೆ : (೧) ತ್ರಿಪದಿ, (೨) ಅಕ್ಕರ, (೩) ರಗಳೆ, (೪) ಷಟ್ಪದಿ. ಇವಕ್ಕೆ, ಮುಂದೆ ಪ್ರಸಿದ್ಧವಾಗಿ, ಈ ಕಾಲದಲ್ಲಿಯೇ ಪ್ರಚಾರದಲ್ಲಿದ್ದಿರಬಹುದಾದ ಸಾಂಗತ್ಯವನ್ನೂ ಸೇರಿಸಬಹುದು.

೧೨ನೆಯ ಶತಮಾನದಿಂದೀಚೆಗೆ ಷಟ್ಪದಿ ಒಂದಿದ್ದುದು ಆರು ಬಗೆಯಾಯಿತು. ಯಕ್ಷಗಾನ ಪ್ರಸಂಗಗಳಲ್ಲಿ ತಾಳವನ್ನೂ, ದ್ರಾವಿಡ ಗಣ ಸ್ವರೂಪವನ್ನೂ ಅನುಸರಿಸಿ ಹೊಸ ಹೊಸ ಪದ್ಯಗಳು ನಿರ್ಮಿತವಾದುವು (ಸೀಸಪದ್ಯ ತೆಲುಗಿನಿಂದ ಸೇರಿದ ಹಾಗೆ ಕಾಣುತ್ತದೆ).

೧೯ನೆಯ ಶತಮಾನದ ಅಂತ್ಯಭಾಗದಲ್ಲಿ ಇಂಗ್ಲೀಷ್ ಸಾಹಿತ್ಯದ ಅನುಭವವುಳ್ಳವರು ಈ ಪೂರ್ವದ ತಳಹದಿಯ ಮೇಲೂ, ನಾಗವರ್ಮನು ಕಾಣದ, ೮೦೦ ವರ್ಣಗಳ ಹೊಸ ಹಾಡು ಕಟ್ಟುಗಳ ದಾರಿತೋರಿಕೆಯ ಮೇಲೂ, ಇಂಗ್ಲಿಷ್ ಛಂದಸ್ಸಿನ ಸ್ವಾತಂತ್ರ್ಯ ವೈವಿಧ್ಯ ಸೌಂದರ್ಯಗಳ ಪ್ರೇರಣೆಯ ಮೇಲೂ, ಅವಲಂಬಿಸಿ ಹೊಸ ರೀತಿಯ ಪದ್ಯಗಳನ್ನೂ, ಪಾದಗಳ ವಿನ್ಯಾಸವನ್ನೂ, ಪ್ರಾಸದ ನಿರಾಕರಣ ಮತ್ತು ಹೊಸಬಗೆಯ ವಿನಿಯೋಗವನ್ನೂ, ನಾಲ್ಕು ಆರು ಪಾದಗಳನ್ನೂ ಮೀರಿ ಎಷ್ಟು ದೂರ ಬೇಕಾದರೆ ಅಷ್ಟು ದೂರ ಓಡಬಲ್ಲ ಪದ್ಯರಚನೆಯನ್ನೂ, ಸರಳ ರಗಳೆಯನ್ನೂ, ಪ್ರಯೋಗಿಸುತ್ತಾ ಇದ್ದಾರೆ. ಇವು ಹೊಸದೆಂದು ಆಕ್ಷೇಪಿಸುತ್ತಿದ್ದವರು ಕೂಡ ಇವೂ ಹಳದೇ ಎಂದು ಒಪ್ಪುವ ಕಾಲವೂ ಬಂದಿದೆ.

ಈ ಬಗೆಬಗೆಯಾದ ಕನ್ನಡ ಪದ್ಯಗಳ ಛಂದಸ್ಸನ್ನು ಈಗ ಪರಿಶೀಲಿಸೋಣ.

(iii) **ದ್ರಾವಿಡ ಗಣ :** ಮೊದಲು ಗಣಸ್ವರೂಪವನ್ನೂ ಮತ್ತು ಇವು ಹೇಗೆ ದ್ರಾವಿಡದ ಮೂಲಗಣವೆಂದು ಹೇಳಬಹುದೆಂಬುದನ್ನೂ ನೋಡೋಣ.

ನಾಗವರ್ಮನೇ ಈ ಗಣಸ್ವರೂಪವನ್ನು ಸ್ಪಷ್ಟಪಡಿಸಿದ್ದಾನೆ :

ಎರಡುಂ ಮೂಱುಂ ನಾಲ್ಕುಂ
ಗುರುವಿಂ ಪ್ರಸ್ತರಿಸಲಂಬುನಿಧಿ ಗಜ ಧರಣೀ

ಕ್ಷ್ವರಗಣವೊಗೆಗುಮವರ್ಕಂ
ಸರಸಿಜಭವ ವಿಷ್ಣು ರುದ್ರ ಸಂಜ್ಞೆಗಳಕ್ಕುಂ || ೫, ೨೪೦ ||

ಈ ಬ್ರಹ್ಮ, ವಿಷ್ಣು, ರುದ್ರಗಣಗಳನ್ನು* ಮೇಲೆ ೧೦೬-೧೦೭ನೆಯ ಪುಟಗಳಲ್ಲಿ ನಿರೂಪಿಸಿದೆ. ಬ್ರಹ್ಮಗಣ ೪ ಬಗೆ; ವಿಷ್ಣುಗಣ ೮; ರುದ್ರಗಣ, ೧೬. ಇವಕ್ಕೆ ತೆಲುಗಿನಲ್ಲಿ ಕ್ರಮನಾಗಿ ಸೂರ್ಯ, ಇಂದ್ರ, ಚಂದ್ರಗಣಗಳೆಂದು ಹೆಸರು ಕೊಟ್ಟಿದ್ದಾರೆ. ತಮಿಳಿನಲ್ಲಿ ಈರಶೈಶೀರ್, ಮೂವಶೈಶೀರ್, ನಾಲಶೈಶೀರ್ ಎಂದು ಹೆಸರು.

ತಮಿಳಿನ ಕ್ರಮವನ್ನು ಅನುಸರಿಸಿ ಹೀಗೆ ಹೇಳಬಹುದು. ಗಣದಲ್ಲಿ ಅಂಶಗಳುಂಟು. ಗಣಕ್ಕೆ ಮೂಲಾಂಶ ಒಂದು ಗುರು (ಲಘುವಲ್ಲ)—. ಇದೇ ಗಣವಾಗಲಾರದು. ಆದರೆ ಪಾದಾಂತದಲ್ಲಿ ಗಣಸ್ಥಾನದಲ್ಲಿ ನಿಲ್ಲಬಹುದು (ಷಟ್ಪದಿಯ ಅರ್ಧದ ಕೊನೆಯಂತೆ).

ಮೊದಲಿನ ಮೂಲಾಂಶವಾದ ಗುರುವಿಗೆ, ಒಂದು, ಎರಡು, ಮೂರು ಗುರುಗಳನ್ನು ಎಂದರೆ ಅಂಶಗಳನ್ನು ಸೇರಿಸಿದರೆ ಮೂರು ಬಗೆಯ ಗಣಗಳು ಹುಟ್ಟುವುವು: ಯಾವುವೆಂದರೆ—

— . — (ಎರಡಂಶದ ಗಣ : ಬ್ರಹ್ಮ, ಸೂರ್ಯ)
— . — . — (ಮೂರಂಶದ ಗಣ : ವಿಷ್ಣು, ಇಂದ್ರ)
— . — . — . — (ನಾಲ್ಕಂಶದ ಗಣ : (ರುದ್ರ, ಚಂದ್ರ)

ಮೊದಲನೆಯ ಅಂಶಕ್ಕೆ **ಮಾತ್ರ**, ಎಂದರೆ ಗುರುವಿಗೆ ಬದಲಾಗಿ, ಎರಡು ಲಘುವನ್ನು ಹಾಕಬಹುದು. ಎರಡನೆಯ, ಮೂರನೆಯ, ನಾಲ್ಕನೆಯ ಅಂಶಗಳು ಲಘುವಾಗಿಯೂ ಇರಬಹುದು: ಹೀಗೆ, ಗಣಗಳು ಈ ರೀತಿ ಆಗುವುವು:

ಬ್ರಹ್ಮ: (ಒಂದು ಮೂಲಾಂಶಕ್ಕೆ ಒಂದು ಗುರು ಅಥವಾ ಒಂದು ಲಘು ಸೇರಿ)

| ಅಂಶ | ೧ | , | ೨ |
|---|---|---|---|
| (೧) | — | . | — |
| (೨) | ⏑ ⏑ | . | — |
| (೩) | — | . | ⏑ |
| (೪) | ⏑ ⏑ | . | ⏑ |

---

*ಇವನ್ನು ಅಕ್ಷರಗಣ ಎನ್ನುವುದಕ್ಕಿಂತಲೂ ಅಂಶಗಣ ಎಂದು ಹೇಳುವುದು ಉತ್ತಮ. ಸಂಸ್ಕೃತದ ಅಕ್ಷರಗಣಕ್ಕೂ ಇವಕ್ಕೂ ಭ್ರಮೆಯಾಗಬಹುದಲ್ಲದೆ ಅಕ್ಷರವೆಂದರೆ ಒಂದೇ ಅಕ್ಷರ (ವರ್ಣ) ಎಂಬ ಭ್ರಾಂತಿಯೂ ಹುಟ್ಟಬಹುದು.

ವಿಷ್ಣು : (ಮೇಲಿನ ೪ ಬ್ರಹ್ಮಗಳಿಗೆ ಒಂದು ಗುರು ಅಥವಾ ಒಂದು ಲಘು ಸೇರಿ)

ಅಂಶ ೧ , ೨ , ೩

(೧) — . — . —
(೨) — . — . ⏑
(೩) ⏑⏑ . — . —
(೪) ⏑⏑ . — . ⏑
(೫) — . ⏑ . —
(೬) — . ⏑ . ⏑
(೭) ⏑⏑ . ⏑ . —
(೮) ⏑⏑ . ⏑ . ⏑

ರುದ್ರ : (ಮೇಲಿನ ೧ ವಿಷ್ಣುಗಳಿಗೆ ಒಂದು ಗುರು ಅಥವಾ ಒಂದು ಲಘು ಸೇರಿ)

ಅಂಶ ೧ , ೨ , ೩ , ೪

(೧) — . — . — . —.
(೨) — . — . — . ⏑
(೩) ⏑⏑ . — . — . —
(೪) ⏑⏑ . — . — . ⏑

ಹೀಗೆಯೇ ಮುಂದಕ್ಕೂ.

ಮೂಲಾಂಶದ ಮೇಲೇರಿದ ಅಂಶಗಳಿಗೆ ಬದಲಾಗಿ ಎರಡು ಲಘುಗಳ ಪ್ರಯೋಗ ಇಲ್ಲ. ಅಂಶಗಣಗಳು ಸ್ವಚ್ಛವಾಗಿ ಹಾಗೇ ಇರುವವರೆಗೂ ಈ ನಿಯಮವಿತ್ತು. ಆದರೆ ಕ್ರಮೇಣ, ಮೊದಲನೆಯ ಸ್ಥಾನದ ತೆ, ಮಿಕ್ಕ ಸ್ಥಾನಗಳಲ್ಲಿಯೂ ಈ ಬದಲಾವಣೆ ಹಬ್ಬಿಕೊಂಡು ಅಂಶಗಣವಾಗಿದ್ದದ್ದು ಮಾತ್ರಾಗಣವಾಗಿ ಪರಿಣಮಿಸಿತು. ಆಗ ಬ್ರಹ್ಮ ವಿಷ್ಣು, ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ ೩, ೪, ೫ ಮಾತ್ರೆಗಳುಳ್ಳ ಮೂರು ಗಣಗಳು ಉಳಿದುವು: ಇವಕ್ಕೆ ಉತ್ಸಾಹಗಣ, ಮಂದಾನಿಲಗಣ, ಲಲಿತಗಣ ಎಂದು ಆಯಾ ರಗಳೆಗಳ ಮೇಲೆ ಹೆಸರು ಕಟ್ಟಬಹುದು. ಇವು ಬ್ರಹ್ಮ, ವಿಷ್ಣುಗಳ ಪ್ರತಿಯಾಗಿ ನಿಂತುವು. ರುದ್ರಗಣ ಬ್ರಹ್ಮ+ವಿಷ್ಣುವಾಗಿ (೩+೪) ಒಡೆದು ನಿಜಸ್ವರೂಪದಲ್ಲಿ ಕಣ್ಮರೆಯಾಯಿತು; ಪಾದಗಳ ಕೊನೆಯಲ್ಲಿ ವಿಷ್ಣು+ಗುರು ಆಯಿತು (ಕೇವಲ ಗೀತದಲ್ಲಿ ಇದರ ಪ್ರಯೋಗ ಯಾವಾಗಲೂ ಸಾಧ್ಯ).

ಇಲ್ಲಿ ಇನ್ನು ಹೆಚ್ಚು ವಿವರಕ್ಕೆ ಹೋಗಲಾಗುವುದಿಲ್ಲ: ಮುಖ್ಯವಾಗಿ ವಿದ್ಯಾರ್ಥಿಗಳು ಒಂದು, ಎರಡು, ಮೂರು ಅಂಶದ ಗಣಗಳನ್ನೂ, ಮೊದಲನೆಯ ಅಂಶ ಒಂದು ಗುರು ಅಥವಾ ಎರಡು ಲಘುವಾಗಿರಬಹುದು, ಮಿಕ್ಕ ಅಂಶಗಳು ಒಂದು ಗುರು

ಅಥವಾ ಒಂದು ಲಘುವಾಗಿರಬೇಕು ಎಂಬ ತತ್ವವನ್ನೂ, ಅಂಶ ಗಣಗಳು ಕಾಲಕ್ರಮದಲ್ಲಿ ಮಾತ್ರಾ ಗಣಗಳಾದುವೆಂಬುದನ್ನೂ, ಮೊದಲ ಅಂಶಕ್ಕೆ ಮಾತ್ರ ಎರಡು ಲಘುವಿನ ಸಮಾನತೆ ಇದ್ದದ್ದು ಸರ್ವತ್ರ ಹರಡಿ ಈ ಬದಲಾವಣೆಗೆ ಅವಕಾಶ ಕೊಟ್ಟಿರಬಹುದೆಂಬುದನ್ನೂ ಗಮನದಲ್ಲಿಟ್ಟರೆ ಸಾಕು.

ಈಗ ಕನ್ನಡ ಪದ್ಯಗಳ ಲಕ್ಷಣ ಮತ್ತು ಚರಿತ್ರೆಯನ್ನು ವಿಮರ್ಶಿಸೋಣ :

**1. ತ್ರಿಪದಿ :**

(i) ತ್ರಿಪದಿಯೆಂದರೆ ಕನ್ನಡದಲ್ಲಿ ಸರ್ವಜ್ಞಮೂರ್ತಿಯ ಪದಗಳು ಮೊದಲು ನೆನಪಿಗೆ ಬರುತ್ತವೆ : ಇವುಗಳನ್ನು ಹಾಡುವ ಧಾಟಿಯೂ ಕನ್ನಡಿಗರಿಗೆಲ್ಲಾ ಗೊತ್ತಿದೆ.

೫ ೫ ೫ ೫
ಒಬ್ಬನ | ಲ್ಲದೆ ಜಗಕೆ | ಇಬ್ಬರುಂ | ಟೇ ಮತ್ತೆ |
೫ ೪ ೪ + ೧ ೫
ಒಬ್ಬ ಸ | ರ್ವಜ್ಞ | ಕರ್ತ ⋮ ನು || ಜಗಕೆಲ್ಲ |
೫ ೪ ೪ + ೧
ಒಬ್ಬನೇ | ದೈವ | ಸರ್ವ ⋮ ಜ್ಞ ||
೫ ೫ ೫ ೫
ಸಾಲವನು | ಕೊಂಬಾಗ | ಹಾಲೋಗ | ರುಂಡಂತೆ |
೫ ೪ ೪ + ೧ ೫
ಸಾಲಿಗರು | ಬಂದು | ಎಳೆವಾ ⋮ ಗ || ಕಿಬ್ಬದಿಯ
೫ ೪ ೪ + ೧
ಕೀಲುಮುರಿ | ದಂತೆ | ಸರ್ವ ⋮ ಜ್ಞ ||

ಇಲ್ಲಿರುವುವು ಮಾತ್ರಾಗಣಗಳು : ಒಂದನೆಯ ಪಾದದಲ್ಲಿ ಎರಡು ೫ ಮಾತ್ರೆಗಳ ಗಣಗಳು, ಯತಿ, ಮತ್ತೆ ಒಳಪ್ರಾಸ, ಎರಡು ೫ ಮಾತ್ರೆಯ ಗಣಗಳು; ಎರಡನೆಯ ಪಾದದಲ್ಲಿ, ಮೊದಲನೆಯದು ೫ ಮಾತ್ರೆಗಳ ಗಣ; ಎರಡನೆಯದು ೪ ಮಾತ್ರೆಗಳ ಗಣ : ಮೂರಿದ್ದರೂ ಎಳೆದು ೪ ಮಾಡಿಕೊಳ್ಳಬೇಕು; ಮೂರನೆಯದರಲ್ಲಿ ವಿಶೇಷವೇನೆಂದರೆ ಮೊದಲು, ಎರಡನೆಯ ಗಣದಂತೆ ಅಂದು, ಒಂದು ಅಂಶವನ್ನು ಹೆಚ್ಚು ಸೇರಿಸಿ, ಆಮೇಲೆ ಹಿಂದಿನಿಂದ ಮತ್ತೆ ಅಂದು ಒಟ್ಟು ೫ ಮಾತ್ರೆಯಾಗುವಂತೆ ಮಾಡಿ ಮುಂದಕ್ಕೆ ಹೋಗಿ ನಾಲ್ಕನೆಯ ೫ ಮಾತ್ರೆಯ ಗಣವನ್ನು ಹೇಳಬೇಕು.

ಹೇಗೆಂದರೆ—ಒಬ್ಬ ಸ | ರ್ವಜ್ಞಾ | ಕರ್ತಾ ⋮ ನು ||
ಒಬ್ಬ ಸ | ರ್ವಜ್ಞಾ | ಕರ್ತಾನು | ಜಗಕೆಲ್ಲ |

ಮೂರನೆಯ ಪಾದವನ್ನು ಎರಡನೆಯ ಪಾದವನ್ನು ಮೊದಲನೆಯ ಸಾರಿ ಅಂದಂತೆ ಅನ್ನಬೇಕು :

ಕೀಲುಮುರಿ | ದಂತೇ | ಸರ್ವ ⋮ ಜ್ಞ ||

(ಕೆಲವರು ಕರ್ತಾರ | ನು ||; ಕರ್ತಾರನು ಜಗಕೆಲ್ಲ—ಅಥವಾ ಜಗಕೆಲ್ಲ: ಜಗಕ್ಕೆಲ್ಲ ಒಬ್ಬನೇ, ಹೀಗೆ ಪುನರಾವೃತ್ತಿ ಮಾಡುವರು. ಮತ್ತು ಮೂರನೆಯ ಪಾದದ ಮೂರನೆಯ ಗಣವನ್ನು ಸರ್ವಜ್ಞ | ಎಂದು ಒಟ್ಟಿಗೆ ೫ ಮಾತ್ರೆಯಾಗಿ ಉಚ್ಚರಿಸುವರು.)

ಅಂತೂ ತ್ರಿಪದಿಗೆ ಈ ಲಕ್ಷಣ ಏರ್ಪಟ್ಟಿತು :

೫ | ೫ ||*೫ | ೫ || (*ಯತಿ, ಒಳಪ್ರಾಸ)
೫ | ೪ | ೪+೧ || ೫ |
೫ | ೪ | ೪+೧.

ಸರ್ವಜ್ಞಮೂರ್ತಿಗೆ ಈಚಿನ ತ್ರಿಪದಿಗಳೆಲ್ಲಾ ಸಾಮಾನ್ಯವಾಗಿ ಹೀಗಿರುವುವು :
ಉದಾ : ಷಡಕ್ಷರಿಯ ರಾಜಶೇಖರ ವಿಲಾಸ :

ಮದನಂಗೆ | ಜಯಮಕ್ಕೆ || ಮಧುಗೆ ಸಂ | ಪದಮಕ್ಕೆ |
ಬಿದುಗದಿ | ರಿಂತು ನೆಲಸಿ ⋮ ಕ್ಕೆ | ರತಿಗೆ ಸಂ |
ಮದಮೆಂದು | ತೊಲಗ | ದಿರುತಿ ⋮ ರ್ಕೆ ||

(ii) ಈಗ ಹನ್ನೆರಡನೆಯ ಶತಮಾನದ ಮತ್ತು ಅದರ ಹಿಂದಿನ ಕಾವ್ಯಗಳನ್ನು ನೋಡೋಣ :

ಅಗ್ಗಳನ ಚಂದ್ರಪ್ರಭಪುರಾಣ .

ಕೇಡನಾ | ಗೆಂದಂಗೆಂ || ಕೇಡೆಂದು | ವಿಪರೀತಂ |
ಮಾಡಿಯೆ | ನೆಗಬ್ದಿ | ಜಡಜಂ ⋮ ತು || ಮೂಡಿ ಮು
ಚ್ಚಾಡುಗುಂ | ಜನ್ಮ | ಜಡಧಿ ⋮ ಯೊಳ್ || ೪, ೫೪ ||

ಪೊನ್ನನ ಶಾಂತಿಪುರಾಣ :

ಸಹಕಾರಾ | ಸಾರಾನೋ || ಕಹದ ಮ | ದಪಿಕನಿ ||
ವಹ ಭಾಷ | ಣಂಗ | ಳುಮೆಸೆದು ⋮ ವು || ಕಿನ್ನರ | (ಕಿ ?)
ಕುಹರಣ | ದೊಡನೆ | ಸೆಣಸು ⋮ ತ್ತುಂ || ೨, ೯೨ ||

ಮದನ ದಾ | ವಾಗ್ನಿಯಂ || ನದಿಪೆ ಮಾ | ಡಿದ ಕಾಮು ||
ನದಿಯೆನಿ | ಸುವುವು | ದಿವಿಜ ⁝ ದಂ | ಪತಿ ಶತ |
ದೊದವಿದ | ರತದ ಪದನ ⁝ ಲ್ಲಿ || ೨, ೯೩ ||

೬ ೪
ಎಯ್ದ್ದದ ಬಗೆಯನೆ || ಮೆಯ್ದ್ದಪ್ಪಂ | ತೆನಿತು |
೪
ಮೆಯ್ದ್ದರೆ | ವಧುವರ್ | ಬಂಧ ⁝ ರೂ | ಪಿಂಗಾ |
ಯ್ಪೊದ್ದನ್ನ | ನಪ್ಪ | ಪರಮು ⁝ ನಂ || ೧೦, ೯೧ ||
ಅಂತುಮಾ | ರೂಪನೆ || ಚಿಂತಿಸಿ | ಚಿಂತಿಸಿ |
ಕಾಂತೆಯುರ್ | ಪತಿಗೆ | ರತಿಸೋ ⁝ ಲ್ತ | ಕೆಂದಳಿ |
ರಂತಲ | ಗರ್ಣೆಗೆ | ಡೊಣೆಯಾ ⁝ ದರ್ || ೧೦, ೯೨ ||

ಪಂಪನ ಆದಿಪುರಾಣ :

೬ ೬
ವರದತ್ತಂ | ಮೊದಲಾಗೆ || ಧರಣೀಶ | ರವರ್ಗೆಲ್ಲಂ |
೬
ಸುರಲೋಕಂ | ಸುವಿಧಿ | ಯೊಡನಾ ⁝ ದು | ದಂತುಟಿ |
೪
ನೆರೆದ | ರನಿತೀ | ಸುರಲೋ ⁝ ಕಂ || ೬, ೧೪ ||
ಸುರಯಿಯೊಳ್ | ಗಿಳಿ ಮಗು || ಟ್ಟಿರಗಿಳಿ | ಬಿರಯಿಗೆ |
೪
ಮೊರೆವಂತೆ | ಮೊರೆವ | ಮಱಿದುಂ ⁝ ಬಿ | ತಳಿರೊಳ್ |
ಪರಭೃತಂ | ಮಗುಟ್ಟ | ಪರಭೃ ⁝ ತಂ || ೬, ೧೦೦ ||

ಈ ತ್ರಿಪದಿಗಳಲ್ಲಿ ೫ ಮಾತ್ರೆಗಳ ಗಣದ ಓಟವಿಲ್ಲ : ಕೆಲವು ಕಡೆ ೫ ಮಾತ್ರೆ ಇರಬೇಕಾದಲ್ಲಿ, ೬ ಅಥವಾ ೪ ಮಾತ್ರೆ ಕಾಣುತ್ತವೆ. ಇವು ಮಾತ್ರಾಗಣದ ಮೇಲೆ ಕಟ್ಟಿದುವಲ್ಲ; ಅಂಶಗಣದ ಮೇಲೆ ಕಟ್ಟಿದುವು : ಹೇಗೆಂದರೆ—ಗೆಂ. ದಾ. ಗಂ. | ವಿಪರೀ. ತಂ | ಸಹ. ಕಾ. ರಾ | ಸಾ. ರಾ. ನೋ | ಮೆ. ಯ್ದ್ದ. ಪ್ಪಂ | ವರ. ದ. ತ್ತಂ | ರವ. ರ್ಗೆ. ಲ್ಲ | ಸುರ. ಲೋ. ಕಂ || ಇವೆಲ್ಲಾ ಮೂರಂಶದ ಗಣಗಳು - ಕಹ. ದ. ಮು | ವಹ. ಭಾ. ಷ | ವಾ. ಗ್ನಿ. ಯಂ | ಎ. ಯ್ದ್ದ. ದ | ಕಾಂ. ತೆ. ಯರ್ | ಪರ. ಭೃ. ತಂ || ಎಂಬುವೂ ಮಾತ್ರೆಯ ವಿವಕ್ಷೆಯಿಲ್ಲದೆ ಅಂಶದ ವಿವಕ್ಷೆಯಿಂದ ಮೂರಂಶದ ಗಣಗಳು. ಈ ತ್ರಿಪದಿಗಳಲ್ಲಿ ಎರಡಂಶ ಮೂರಂಶದ ಗಣಗಳು (ಎಂದರೆ ಬ್ರಹ್ಮ, ವಿಷ್ಣುಗಳು) ಬೆರೆದಿವೆ.

ನಾಗವರ್ಮನು ಹೇಳಿರುವ ಲಕ್ಷಣ ಹೀಗಿದೆ:

ಬಿಸರುಹೋ। ದ್ಭವಗಣಂ॥ ರಸದಶ। ಸ್ಥಾನದೊಳ್।
ಬಿಸರುಹ। ನೇತ್ರ। ಗಣಮೆ ಬ। ರ್ಕುೞಿದುವು।
ಬಿಸರುಹ। ನೇತ್ರ। ತ್ರಿಪದಿಗೆ॥ ೫, ೨೪೮॥

ಇದು—ವಿ। ವಿ॥ ವಿ। ವಿ।

೬
ವಿ। ಬ್ರ। ವಿ। ವಿ।
೧೦
ವಿ। ಬ್ರ। ವಿ॥

ಎಂದು ಹೇಳಿದ ಹಾಗಾಯಿತು.

ಮೇಲೆ ನಾವು ನೋಡಿದ್ದರಲ್ಲಿ ೬, ೧೦ನೆಯ ಸ್ಥಾನದಲ್ಲಿ ನಿಯತವಾಗಿ ಬರುವುದಲ್ಲದೆ, ಬ್ರಹ್ಮಗಣ (ಎಂದರೆ ಎರಡಂಶದ ಗಣ) ಮಿಕ್ಕ ಕಡೆಯಲ್ಲೂ, ವಿಷ್ಣು ಎಂದರೆ ಮೂರಂಶದ ಗಣವಿರಬೇಕಾದಲ್ಲಿಯೂ ವಿಕಲ್ಪದಿಂದ ಬರಬಹುದಾಗಿದೆ: (೪ ಎಂದು ಗುರುತು ಮಾಡಿರುವ ತೆನಿ. ತು। ಪಿಂ. ಗಾ। ನೆರೆ. ದ। ತಳಿ. ರೊಳ್). ಇದಲ್ಲದೆ ಪುನರಾವೃತ್ತಿಯ ವಿಷಯವನ್ನೂ ನಾಗವರ್ಮನು ಎತ್ತಿಲ್ಲ. ಮತ್ತು ಅವನ ಪದ್ಯವನ್ನೂ, ಮೇಲೆ ಕೊಟ್ಟಿರುವ ಪದ್ಯಗಳಲ್ಲಿ ದಿವಿಜದಂ। ಬಂಧ ರೂ। ಯೊಡನಾದು। ಎಂಬ ಸ್ಥಳಗಳನ್ನೂ ನೋಡಿದರೆ, ಜನರ ಹಾಡಿನ ಧಾಟಿಯನ್ನು ಈ ಕವಿಗಳು ಗಮನಿಸಿದರೇ ಎಂಬ ಪ್ರಶ್ನೆ ಏಳುತ್ತದೆ. ಕೆಲವು ಕಡೆ ನಿಯತವಾದ ಯತಿಯನ್ನೂ ಮೀರಿದ್ದಾರೆ.

(iii) ಈಗ ಹಳಗನ್ನಡದ ಕಾಲದ ಶಾಸನಗಳಲ್ಲಿ ದೊರೆತಿರುವ ಕೆಲವು ತ್ರಿಪದಿಗಳನ್ನು ಪರೀಕ್ಷಿಸೋಣ:

ಬಾದಾಮಿಯ ಶಾಸನ: ಸುಮಾರು ಕ್ರಿ.ಶ. ೭೦೦: (ಶಾಸನ ಪದ್ಯಮಂಜರಿ ೪, ಪುಟ ೨).

ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯ್ಯಂ।
ಬಾಧಿಪ್ಪ ಕಲಿಗೆ ಕಲಿಯುಗ। ವಿಪರೀತನ್
ಮಾಧವನೀತನ್ ಪೆಱನಲ್ಲ॥

(ಗೆರೆಗಳು ಮೂಲದಲ್ಲಿದ್ದಂತೆ ಕೊಟ್ಟಿದೆ. ಎರಡನೆಯ ಪಂಕ್ತಿಯ ಗೆರೆ ಪುನರಾವೃತ್ತಿಯನ್ನು ಸೂಚಿಸುತ್ತದೆ.)

ಒಳ್ಳಿತ್ತ*। ಕೆಯ್ವೊರಾರ್। ಪೊಲ್ಲದು। ಮದಱಂತೆ। *(ತ್ತನ್? ತ್ತು?)
ಬಲ್ಲಿತ್ತು। ಕಲಿಗೆ। ವಿಪರೀ ⋮ ತಾ*। ಪುರಾಕೃತ *(ತಂ?)
ಮಲ್ಲಿಸಂ। ಧಿಕ್ಕು। ಮದು ಬಂ ⋮ ದು॥

ಕಟ್ಟಿದ | ಸಿಂಘಮನ್ | ಕೆಟ್ಟೊದೇ | ನೆಮಗೆಂದು
ಬಿಟ್ಟವೋಲ್ | ಕಲಿಗೆ | ವಿಪರೀತಂ | ಗಹಿತರ್ಕಳ್
ಕೆಟ್ಟರ್ ಮೇಣ್ | ಸತ್ತ | ರವಿಚಾರಂ ||

ಶಿಕಾರಿಪುರದ ಶಾಸನ: ಸುಮಾರು ಕ್ರಿ.ಶ. ೧೦೭೧: (ಶಾಸನಪದ್ಯಮಂಜರಿ, ೩೦. ಪುಟ ೧೯).

ಮುಕ್ತಿ ಶ್ರೀ ಸತಿಗನು || ರಕ್ತಂ ಸಂಹಾರ ವಿ |
ರಕ್ತಂ ನಿರ್ವಿಷಯ ನಿರಪೇಕ್ಷಂ ಶುಚಿಜೀವ |
ನ್ಮುಕ್ತಂ ನಿರ್ವಾಣಿ ಗುಣಗಳ್ಳಂ ||
ಆಱುವಣ್ಮು ವೈರಾಗ್ಯಂ | ತಱುಸಲವಭ್ಯಾಸಂ |
ನೆಱೆ ಭಕ್ತಿ ಶಾಂತಿ ಧೃತಿ ತುಷ್ಟಿಯೆಂಬಿವ |
ಕೆಱುವೆವಟ್ಟಾಗಿರ್ದಂ ಗುಣಗಳ್ಳಂ ||

(ಗೆರೆಗಳು ಮೂಲದಲ್ಲಿದ್ದಂತೆ ಕೊಟ್ಟಿದೆ. ಒಂದನೆಯ ಪಂಕ್ತಿಯ ಗೆರೆ ಯತಿಯನ್ನು ಸೂಚಿಸುತ್ತದೆ.)

ಈ ತ್ರಿಪದಿಗಳೂ ಕಾವ್ಯಗಳ ತ್ರಿಪದಿಗಳಂತೆ ಅಂಶಗಣಗಳಿಂದ ಕಟ್ಟಿದುವು. ಇಲ್ಲಿಯೂ ಯತಿಯನ್ನು ಮೀರಿರುವುದು ಕಾಣುವುದು. ಮೊದಲನೆಯದರಲ್ಲಿ ಒಂದನೆಯ ಪಾದದಲ್ಲಿ ಒಳಪ್ರಾಸಕ್ಕೂ ಭಂಗ ಬಂದಿದೆ.

ಒಟ್ಟಿನ ಮೇಲೆ ಈ ವಿಮರ್ಶೆಯಿಂದ ತ್ರಿಪದಿ ಅಂಶಗಣದಿಂದ ಮಾತ್ರಾಗಣಕ್ಕೆ ತಿರುಗಿರುವುದೂ, ಅದರ ಯತಿ, ಒಳಪ್ರಾಸ, ಪುನರಾವೃತ್ತಿ ಮುಂತಾದ ಮುಖ್ಯ ಲಕ್ಷಣಗಳೂ ಈಗಲೂ ಉಳಿದಿರುವುದೂ ವ್ಯಕ್ತವಾಗದೆ ಇರಲಾರದು.

ಇದಲ್ಲದೆ, ಮೇಲೆ ೬, ೧೦ನೆಯ ಸ್ಥಳಗಳಲ್ಲಲ್ಲದೆಯೂ ವಿಷ್ಣುಗಣಕ್ಕೆ ಬದಲು ಬ್ರಹ್ಮಗಣ ಬಂದಿರುವುದನ್ನು, ಮತ್ತು ನಾಗವರ್ಮನ

ಚಿತ್ರ: (ಛ.೨೪೯)

ರು | ವಿ | ವಿ | ವಿ
ವಿ | ಬ್ರ | ವಿ | ವಿ |
ವಿ | ಬ್ರ | ವಿ ||

ಮತ್ತು ಚಿತ್ರಲತಿಕೆ (ಛ.೨೫೦)

ರು | ವಿ| ವಿ | ವಿ |
ವಿ | ಬ್ರ | ವಿ | ವಿ |
ವಿ | ಬ್ರ | ರು ||

—ಈ ಪದ್ಯಗಳ ಲಕ್ಷಣವನ್ನು ನೋಡಿದರೆ ಮೊದಲು ಮೊದಲು ತ್ರಿಪದಿಯ ವಿಷ್ಣುಗಳಿಗೆ ಬದಲಾಗಿ ಬ್ರಹ್ಮ ಅಥವಾ ರುದ್ರ ಗಣಗಳು ಬರಬಹುದಾಗಿದ್ದಿತೆಂದು ತೋರುತ್ತದೆ; ಸಂಗತಿ ಹಾಕಿ, ಹಾಡಿನ ಧಾಟಿ ಕೂಡಿಬಂದರೆ ಸರಿ.

ತ್ರಿಪದಿಯ ರಚನೆಯನ್ನು ನೋಡಿದರೆ ಇದು ಮೊದಲು ಎರಡು ಸಾಲಿನ ಹಾಡಾಗಿದ್ದು, ಈಗಿನ ಎರಡನೆಯ ಸಾಲಿನ ೩ನೆಯ ಗಣದಿಂದ ಕೊನೆಗಂಡು, ಆಮೇಲೆ ಮತ್ತೊಂದು ಮೂರಂಶದ ಗಣ ಸೇರಿ, ಎರಡನೆಯ ಪೂರ್ವದ ಪಾದ ಮತ್ತೊಮ್ಮೆ ಮಗುಚಿಬಂದು, ಮೂರು ಸಾಲಾಯಿತೆಂದು ಊಹಿಸಬಹುದಾಗಿದೆ.

ಹೇಗೆಂದರೆ: ೩ | ೩ || ೩ | ೩ |
೩ | ೩ | ೨+೧.
+೩
೩ | ೩ | ೨+೧.

ಈಗಲೂ ಈ ವಟ್ಟನ್ನು ರಾತ್ರಿ ಕಾಲದಲ್ಲಿ ಬಂಡಿ ಹೊಡೆಯುವವರು ಹೇಳುವ ಪದಗಳಲ್ಲಿಯೂ ಲಾವಣಿಗಳಲ್ಲಿಯೂ ಗುರುತಿಸಬಹುದಾಗಿದೆ. ೩ನೆಯ ಗಣದ ಕೊನೆಯಲ್ಲಿ ನಿಲ್ಲಿಸಿ, ಪುನರಾವೃತ್ತಿ ಮಾಡುವುದಕ್ಕೆ ಈ ಉತ್ಪತ್ತಿ ಕಾರಣವಿರಬಹುದು. ಪುನರಾವೃತ್ತಿಯಿಂದ ಮೊದಲನೆಯ ಪದ್ಯವನ್ನು ಎರಡು ಸಲ ಹೇಳಿದಂತಾಗುತ್ತದೆ.

ತಮಿಳಿನಲ್ಲಿ ಕುಱಳ್ ಮತ್ತು ವೆಣ್ಬಾವೃತ್ತಗಳನ್ನು ಹೋಲಿಸಿದರೆ ಈ ರಹಸ್ಯ ಮನದಟ್ಟಾಗುವುದು. ಇದನ್ನು ಮುಂದೆ ಹೇಳಲಾಗುತ್ತದೆ.

## 2. ಅಕ್ಕರ :

ನಾಗವರ್ಮನು ೫ ಅಕ್ಕರಗಳನ್ನು ಹೇಳಿರುವನು : ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱುಕ್ಕರ. ಇವಕ್ಕೆ ತೆಲುಗಿನಲ್ಲಿ ಕ್ರಮವಾಗಿ, ಮಹಾಕ್ಕರ, ಮಧ್ಯಾಕ್ಕರ, ಮಧುರಾಕ್ಕರ, ಅಂತರಾಕ್ಕರ, ಅಲ್ಪಾಕ್ಕರ ಎಂದು ಹೆಸರು. (ಮಧ್ಯಾಕ್ಕರ, ಮಧುರಾಕ್ಕರ ಎಂಬ ಹೆಸರುಗಳು ಹೊಂದಿಕೆಯಿಲ್ಲ) ಇವುಗಳ ಲಕ್ಷಣ :

| ಹೆಸರು | ಗಣ | ನಾಗವರ್ಮ | ಅಪ್ಪಕವಿ | |
|---|---|---|---|---|
| 1. ಪಿರಿಯಕ್ಕರ | ೭ | ೧ ಬ್ರ. ೫ ವಿ. ೧ ರು. | ೧ ಸೂ. ೫ ಇಂ. ೧ ಚ. | ಯತಿ ೪ನೆಯ ಗಣದ ಮುಂದೆ |
| 2. ದೊರೆಯಕ್ಕರ | ೬ | ೨ ವಿ. ೧ ಬ್ರ. ೨ ವಿ. ೧ ಬ್ರ. | | ಯತಿ ೩ನೆಯ ಗಣದ ಮುಂದೆ |
| 3. ನಡುವಣಕ್ಕರ | ೫ | ೧ ಬ್ರ. ೩ ವಿ. ೧ ರು. | (ನಾಗವರ್ಮನಂತೆಯೇ ; ಗಣಗಳಿಗೆ ಸೂರ್ಯ, | ಯತಿ ೩ನೆಯ ಗಣದ ಮುಂದೆ |

ರಸವೆಂದರೇನು, ರಸಕ್ಕೂ ಆನಂದಕ್ಕೂ ಏನುಸಂಬಂಧವೆಂಬ ವಿಚಾರವು ಮುಂದೆ ಬರುವುದು ; ಅದಿರಲಿ ; ಪ್ರಪಂಚದಲ್ಲಿ, ದುಃಖವಿರುವಂತೆ ಸುಖವೂ ಇರುತ್ತದೆ. ಇದು ನಾನಾವಿಧ ; ಸುಂದರವಾದ ರೂಪ, ಮಧುರವಾದ ಸಂಗೀತ, ರುಚಿಯಾದ ಭಕ್ಷ್ಯಭೋಜ್ಯಗಳು, ಮೃದುವಾದ ಸ್ಪರ್ಶ, ಮನೋಹರವಾದ ವಾಸನೆ ಇವುಗಳಿಂದ ಒಂದೊಂದು ವಿಧವಾದ ಸುಖವುಂಟಾಗುತ್ತದೆ. ಇವೆಲ್ಲಾ ಬಾಹ್ಯೇಂದ್ರಿಯುಗಳ ಮೂಲಕ ಮನಸ್ಸಿನಲ್ಲಿ ಉಂಟಾಗತಕ್ಕವು. ಇವಲ್ಲದೆ ಆನಂತರವಾದ ಕೆಲವು ಸುಖಗಳುಂಟು ; ಒಳ್ಳೆಯ ವರ್ತಮಾನವನ್ನು ಅಥವಾ ಮಾತನ್ನು ಕೇಳಿದರೆ, ನಮ್ಮಲ್ಲಿ ಯಾರಾದರೂ ಪ್ರೀತಿಪ್ರಣಯವಾತ್ಸಲ್ಯಗಳನ್ನು ತೋರಿಸಿದರೆ, ಅಥವಾ ನಾವು ಯಾರಾದರೂ ಒಂದು ಅದ್ಭುತವಾದ ಸಂಗತಿಯನ್ನಾಗಲಿ ವಿನೋದವಾದ ಸಂಗತಿಯನ್ನಾಗಲಿ ನೋಡಿದರೆ, ಒಳ್ಳೆಯ ಕಾವ್ಯವನ್ನು ಓದಿದರೆ, ತೊಡಕುಂಟಾದ ಸಮಸ್ಯೆಯನ್ನು ಬಿಡಿಸಿದರೆ, ನಮ್ಮನ್ನು ಹೊಗಳಿದರೆ—ಉಂಟಾಗುವ ಸುಖವನ್ನು ಆಂತರಸುಖವೆಂದು ಹೇಳಬಹುದು. ಇವುಗಳಲ್ಲದೆ ಅಖಂಡಬ್ರಹ್ಮಾನಂದವೆಂಬುದೊಂದುಂಟೆಂದು ವೇದಾಂತಿಗಳು ಹೇಳುವರು. ಇವು ಇಂದ್ರಿಯ ಮನಸ್ಸು ದೇಹ ಇವುಗಳಿಂದ ಅನುಭವಿಸಲಳವಲ್ಲ ; ಆದರೂ ಇದಕ್ಕೆ ಸಂಬದ್ಧವಾಗಿರುವಂತೆ ಇರುವ ಆಧ್ಯಾತ್ಮಿಕ ಸುಖವೊಂದಿದೆ ಎಂದು ಹೇಳಬಹುದು. ಧರ್ಮಬುದ್ಧಿ ಇರತಕ್ಕವನು ಧರ್ಮಸಂಕಟಕ್ಕೆ ಸಿಕ್ಕಿ ಧರ್ಮವನ್ನು ಬಿಡದೆ ನಡೆದುಕೊಂಡು ಕೊನೆಗೆ ಅದರಿಂದ ಪಾರಾದರೆ ಅವನಲ್ಲಿ ಕೊನೆಗೆ ಉಂಟಾಗತಕ್ಕ ಸುಖವು ಇಂತಹದೆಂದು ಹೇಳಬಹುದು. ಉದಾಹರಣೆ, ಹರಿಶ್ಚಂದ್ರ. ಇವು ಪ್ರತಿಯೊಬ್ಬನಿಗೂ ಅವನವನ ವಯಸ್ಸು ಸ್ವಭಾವ ಸಂಸ್ಕಾರಗಳಮೇಲೆ ಹೆಚ್ಚು ಕಡಿಮೆಯಾಗುತ್ತವೆ. ಈ ಸುಖಗಳ ಭೇದ ಜಾತಿ ತಾರತಮ್ಯ ಹೇಗಾದರೂ ಇರಲಿ, ಇವುಗಳಲ್ಲೆಲ್ಲಾ ಸುಖಕೊಡತಕ್ಕ ಅಂಶವು ಒಂದು ಇದೆ. ಇದನ್ನು 'ರಮಣೀಯತೆ' ಎಂದು ಕರೆಯಬಹುದು.

ಈ ರಮಣೀಯತೆ ಬ್ರಹ್ಮಸೃಷ್ಟವಾದ ಜಗತ್ತಿನಲ್ಲಿ ಸ್ವತಸ್ಸಿದ್ಧವಾಗಿರಬಹುದು —ಲತೆ ಫಲ ಪುಷ್ಪ ಪಕ್ಷಿಗಳ ಗಾನ ಬೆಳದಿಂಗಳು ಜೀವನಸಮಸ್ಯೆ ಸಂಸಾರಮಾಯೆ ಬಾಲಲೀಲೆ ವಿಷಯಸುಖ ಮುಂತಾದವುಗಳಲ್ಲಿ ಇಲ್ಲದಿದ್ದರೆ, ಈ ರಮಣೀಯತೆಯನ್ನು ಅನುಭವಿಸಿ ಅದು ಇರುವ ಬ್ರಹ್ಮಸೃಷ್ಟವಾದ ಪ್ರಪಂಚವನ್ನೋ ತತ್ಸದೃಶವಾದ ಕಲ್ಪಿತ ಪ್ರಪಂಚವನ್ನೋ ಶಬ್ದ, ರೇಖೆ, ಬಣ್ಣ ಮುಂತಾದುವುಗಳಿಂದ ಕಲಾನಿಪುಣನು ರಚಿಸಿದ ಕುಶಲಕರ್ಮದಲ್ಲಿರಬಹುದು.[3] ಈ ರಮಣೀಯತೆಯುಳ್ಳ

3 ಈ ಕುಶಲ ಕರ್ಮದಲ್ಲಿ ನಾವು ಸುಖಪಡುವುದು ಎರಡರಿಂದ : ಒಂದು ಕಡೆ ಪ್ರಪಂಚದಲ್ಲಿ ಯಾವುದನ್ನು ಅನುಭವಿಸಿದರೆ ನಮಗೆ ಸುಖವಾಗುತ್ತದೆಯೋ ಅಂಥ ಬಾಲಲೀಲೆ, ತಾಯಿಮಕ್ಕಳ ಪ್ರೇಮ, ಧೈರ್ಯ, ಶೌರ್ಯ, ಹಾಸ್ಯ ವಿನೋದ ಪ್ರೇಮ ಮುಂತಾದವುಗಳು ಈ ಕಲ್ಪಿತವಾದ ವಾಕ್ಪ್ರಪಂಚದಲ್ಲಿಯೂ ಇರುವುದರಿಂದ, ನಮ್ಮಲ್ಲಿರತಕ್ಕ ಸಂಸ್ಕಾರಗಳು ಉದ್ಬುದ್ಧ

ನಗರ,



ಸಂಗತಿಯನ್ನು ಶಬ್ದಗಳಿಂದ ರಮಣೀಯವಾದ ರೀತಿಯಲ್ಲಿ ರಚಿಸಿದರೆ ಆಗ ಕಾವ್ಯವಾಗುತ್ತದೆ. ಈ ರಮಣೀಯತೆಯನ್ನು ಅನುಭವಿಸಿ ತನ್ನ ಅನುಭವಕ್ಕೆ ರೂಪುಗೊಟ್ಟು ರಮಣೀಯವಾಗಿರುವಂತೆ ಭಾಷೆಯಲ್ಲಿ ತಿಳಿಸಬಲ್ಲವನೇ ಕವಿ; ಅವನ ಕುಶಲಕರ್ಮವೇ ಕಾವ್ಯ. ಕಾವ್ಯಗಳ ಸಮುದಾಯವೇ 'ಸಾಹಿತ್ಯ'.

ಅಲಂಕಾರ ಗ್ರಂಥಗಳಲ್ಲಿ ಕಾವ್ಯಕ್ಕೆ ಒಬ್ಬೊಬ್ಬರು ಒಂದೊಂದು ಲಕ್ಷಣವನ್ನು ಹೇಳಿದ್ದಾರೆ; ಅವುಗಳಲ್ಲಿ ಮುಖ್ಯವಾದ ಕೆಲವನ್ನು ಇಲ್ಲಿ ಕೊಡಬಹುದು :

1. **ಭರತ**—ಭರತನು ಕಾವ್ಯಲಕ್ಷಣವನ್ನು ಹೇಳಿಲ್ಲ ; ಆದರೆ ಕಾವ್ಯದಲ್ಲಿ ರಸಕ್ಕೆ ಪ್ರಾಶಸ್ತ್ಯವನ್ನು ಹೇಳಿದ್ದಾನೆ (ಆತನ ಗ್ರಂಥದಲ್ಲಿ ಕಾವ್ಯವೆಂದರೆ ದೃಶ್ಯ ಕಾವ್ಯವೆಂದೇ ಅರ್ಥ).[4]

2. **ಭಾಮಹ**—(ಸಾಲಂಕಾರವಾಗಿಯೂ ನಿರ್ದುಷ್ಟವಾಗಿಯೂ ಇರುವ) ಶಬ್ದಾರ್ಥಗಳ ಸಮೂಹವೇ ಕಾವ್ಯ.[5]

3. **ದಂಡಿ**—'ಇಷ್ಟ' (ಪ್ರಿಯ)ವಾದ ಅರ್ಥದಿಂದ ಕೂಡಿದ ಪದಸಮೂಹವೇ ಕಾವ್ಯಶರೀರ. ಹತ್ತು ಗುಣಗಳೇ ಪ್ರಾಣ.[6]

4. **ಅಗ್ನಿಪುರಾಣ**—ಅಲಂಕಾರಗಳಿಂದ ಶೋಭಿತವಾಗಿಯೂ ಗುಣಗಳಿಂದ ಕೂಡಿಯೂ ದೋಷಗಳಿಲ್ಲದೆಯೂ, 'ಇಷ್ಟ'ವಾದ ಅರ್ಥವುಳ್ಳದ್ದಾಗಿಯೂ ಇರುವ ಪದ ಸಮೂಹವೇ ಕಾವ್ಯ.[7]

5. **ವಾಮನ**—ಗುಣಾಲಂಕಾರಗಳಿಂದ ಶೋಭಿತವಾದ ಶಬ್ದಾರ್ಥಗಳೇ ಕಾವ್ಯ. (ಕಾವ್ಯವು ಅಲಂಕಾರವಿರುವುದರಿಂದ ಗ್ರಾಹ್ಯವಾಗುತ್ತದೆ. ಅಲಂಕಾರವೆಂದರೆ ಸೌಂದರ್ಯ; ....'ರೀತಿ'ಯು ಕಾವ್ಯದ ಆತ್ಮ).[8]

---

ವಾಗಿ ಸುಖವಾಗುವುದು ಸ್ವಾಭಾವಿಕ ; ಮತ್ತೊಂದು ಕಡೆ ಇವುಗಳ ಸ್ವರೂಪವೂ, ಇಂಥ ಪ್ರಪಂಚವನ್ನು ಸೃಷ್ಟಿಮಾಡಿದ ಶಿಲ್ಪಿಯ ಶಕ್ತಿಸಾಮರ್ಥ್ಯಗಳೂ ನಮ್ಮಲ್ಲಿ ಆಶ್ಚರ್ಯವನ್ನು ಉಂಟುಮಾಡಿ ಸುಖಗೊಳಿಸುತ್ತವೆ.

[4] ಯೋಽರ್ಥೋ ಹೃದಯಸಂವಾದೀ ತಸ್ಯ ಭಾವೋ ರಸೋದ್ಭವಃ ।
ಶರೀರಂ ವ್ಯಾಪ್ಯತೇ ತೇನ ಶುಷ್ಕಕಾಷ್ಠಮಿವಾಗ್ನಿನಾ ॥

[5] ಶಬ್ದಾರ್ಥೌ ಸಹಿತೌ ಕಾವ್ಯಂ

[6] ಇಷ್ಟಾರ್ಥವ್ಯವಚ್ಛಿನ್ನಾ ಪದಾವಳೀ ।
ಕಾವ್ಯಂ ಸ್ಫುರದಲಂಕಾರಂ ಗುಣವದ್ದೋಷವರ್ಜಿತಂ ।
....ಪ್ರಾಣಾ ದಶಗುಣಾಸ್ಸ್ಮೃತಾಃ ॥

[7] ,, ,,

[8] i ಕಾವ್ಯಂ ಗ್ರಾಹ್ಯಮಲಂಕಾರಾತ್. ii ಸೌಂದರ್ಯಮಲಂಕಾರಃ
[i ರ ಮೇಲಣ ವೃತ್ತಿ—ಕಾವ್ಯಶಬ್ದೋಽಯಂ ಗುಣಾಲಂಕಾರಸಂಸ್ಕೃತಯೋಃ ಶಬ್ದಾರ್ಥಯೋರ್ವರ್ತತೇ...] iii ರೀತಿರಾತ್ಮಾ ಕಾವ್ಯಸ್ಯ.

6. **ಹೇಮಚಂದ್ರ, ವಿದ್ಯಾನಾಥ**—ಗುಣಾಲಂಕಾರಗಳಿಂದ ಕೂಡಿಯೂ, ದೋಷಗಳಿಲ್ಲದೆಯೂ ಇರುವ ಶಬ್ದಾರ್ಥಗಳೇ ಕಾವ್ಯ.[9]

7. **ಮಮ್ಮಟ**—ದೋಷವಿಲ್ಲದೆಯೂ ಗುಣಾಲಂಕಾರಗಳಿಂದ ಕೂಡಿಯೂ ಇರುವ ಶಬ್ದಾರ್ಥಗಳೇ ಕಾವ್ಯ ; ಕೇವು ಕಡೆ ಅಲಂಕಾರವಿಲ್ಲದೇ ಇದ್ದರೂ, ಕಾವ್ಯ ವಾಗುತ್ತದೆ.[10]

8. **ಕುಂತಲ**—ವಕ್ರೋಕ್ತಿಯುಳ್ಳ ವಾಕ್ಯವಿನ್ಯಾಸದಲ್ಲಿ ಸೇರಿರುವ ಶಬ್ದಾರ್ಥ ಗಳು (ಒಟ್ಟಿಗೆ) ಕಾವ್ಯ.[11]

9. **ಆನಂದವರ್ಧನ**—ಕಾವ್ಯಕ್ಕೆ ಧ್ವನಿಯೇ ಆತ್ಮ; ರಸವೇ ಪ್ರಾಣ.[12]

10. (ಜೈನ) **ವಾಗ್ಭಟ, ಜಯದೇವ, ಭೋಜ**—ದೋಷವಿಲ್ಲದೆಯೂ ಗುಣ ಅಲಂಕಾರ ರೀತಿ ಇವುಗಳಿಂದ ಕೂಡಿಯೂ ಇರುವ ಶಬ್ದಾರ್ಥಗಳು ಕಾವ್ಯ.[13]

11. **ವಿಶ್ವನಾಥ**—ರಸಾತ್ಮಕವಾದ ವಾಕ್ಯವು ಕಾವ್ಯ ; ಅದು ದೋಷದಿಂದ ಕೀಳೂ, ಗುಣಾಲಂಕಾರ ರೀತಿಗಳಿಂದ ಮೇಲೂ ಆಗುತ್ತದೆ.[14]

12. **ಜಗನ್ನಾಥ**—ರಮಣೀಯವಾದ ಅರ್ಥವನ್ನು ಪ್ರತಿಪಾದಿಸುವ ಶಬ್ದವು ಕಾವ್ಯ.[15]

---

[9] ಅದೋಷೌ ಸಗುಣೌ ಸಾಲಂಕಾರೌ ಚ ಶಬ್ದಾರ್ಥೌ ಕಾವ್ಯಂ. —ಹೇಮಚಂದ್ರ
ಗುಣಾಲಂಕಾರಸಹಿತೌ ಶಬ್ದಾರ್ಥೌ ದೋಷವರ್ಜಿತೌ ।
ಗದ್ಯಪದ್ಯೋಭಯಮಯಂ ಕಾವ್ಯಂ ಕಾವ್ಯವಿದೋ ವಿದುಃ ॥ —ವಿದ್ಯಾನಾಥ

[10] ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ.

[11] . . . .ಸಾಲಂಕಾರಸ್ಯ ಕಾವ್ಯತಾ ।
ಶಬ್ದಾರ್ಥೌ ಸಹಿತೌ ವಕ್ರಕವಿವ್ಯಾಪಾರಶಾಲಿನೀ ।
ಬಂಧೇ ವ್ಯವಸ್ಥಿತಾ ಕಾವ್ಯಂ ತದ್ವಿದಾಹ್ಲಾದಕಾರಿಣೀ ॥

[12] ಕಾವ್ಯಸ್ಯಾತ್ಮಾ ಧ್ವನಿರಿತಿ ಬು ್ಧೈರ್ಯಸ್ಸಮಾಮ್ನಾತಪೂರ್ವಃ. . . .

[13] ಸಾಧುಶಬ್ದಾರ್ಥಸಂದರ್ಭಂ ಗುಣಾಲಂಕಾರಭೂಷಿತಂ ।
ಸ್ಫುಟರೀತಿರಸೋಪೇತಂ ಕಾವ್ಯಂ ಕುರ್ವೀತ ಕೀರ್ತಯೇ ॥ —ವಾಗ್ಭಟ

ನಿರ್ದೋಷಾ ಲಕ್ಷಣವತೀ ಸರೀತಿಗುಣಭೂಷಿತಾ ।
ಸಾಲಂಕಾರರಸಾನೇಕವೃತ್ತಿರ್ವಾಕ್ ಕಾವ್ಯನಾಮಭಾಕ್ ॥ —ಜಯದೇವ

ನಿರ್ದೋಷಂ ಗುಣವತ್ಕಾವ್ಯಂ ಅಲಂಕಾರೈರಲಂಕೃತಂ ।
ರಸಾನ್ವಿತಂ ಕವಿಃ ಕುರ್ವನ್ ಕೀರ್ತಿಂ ಪ್ರೀತಿಂ ಚ ವಿಂದತಿ ॥ —ಭೋಜ

[14] ವಾಕ್ಯಂ ರಸಾತ್ಮಕಂ ಕಾವ್ಯಂ ದೋಷಾಸ್ತಸ್ಯಾಪಕರ್ಷಕಾಃ ।
ಉತ್ಕರ್ಷಹೇತವಃ ಪ್ರೋಕ್ತಾಃ ಗುಣಾಲಂಕಾರರೀತಯಃ ॥

[15] ರಮಣೀಯಾರ್ಥಪ್ರತಿಪಾದಕಶ್ಶಬ್ದಃ ಕಾವ್ಯಂ.

13. **ನೃಪತುಂಗ**—“ ಕಾವ್ಯಂ ಸವಿಶೇಷಶಬ್ದರಚನಂ ವಿವಿಧಾರ್ಥವ್ಯಕ್ತಿವರ್ತಿತಾಲಂಕಾರಂ” (I. ೨೨)

14. **ನಾಗವರ್ಮ**—“ ಇರೆ ಶಬ್ದಾರ್ಥಂಗಳ್ ತ। ತ್ಪರತೆಯಿನದು ಕಾವ್ಯಮದಱೊಳುಚಿತೈಕಾರ್ಥಂ || ತರವಾಚಿ ಶಬ್ದಮುವಭಾ। ಸರೂಪಮಾಹ್ಲಾದಕಾರಿಯಪ್ಪುದದರ್ಥಂ” (II. ೪೩೦)

15. **ಉದಯಾದಿತ್ಯ**—“ ಪಡೆದರ್ಥಮನಳವಡಿಸಿದ ಪದಾಳಿ ಕಾವ್ಯದ ಶರೀರಮೆನಿಕುಂ || ಅಸುಗಳೆನಿಕ್ಕುಂ . . . . . . ಈಪ್ಪದುಗುಣಂ.” (ಪುಟ. ३, ೧೪)

16. **ತಿರುಮಲಾರ್ಯ**—“ತದದೋಷೌ ಶಬ್ದಾರ್ಥೌ ಸಗುಣಾವನಲಂಕೃತೀ ಪುನಃ ಕ್ವಾಪಿ ||”[16]

ಇವರಲ್ಲಿ ಎಲ್ಲರೂ ಕಾವ್ಯವು ಶಬ್ದರೂಪವೆಂದೂ ಅದಕ್ಕೆ ಅರ್ಥವುಂಟೆಂದೂ ಒಪ್ಪುತ್ತಾರೆ. ಆದರೆ ಅರ್ಥ ಮುಖ್ಯವೆಂದು ಕೆಲವರು, ಶಬ್ದ ಮುಖ್ಯವೆಂದು ಕೆಲವರು, ಎರಡೂ ಮುಖ್ಯವೆಂದು ಕೆಲವರು ಹೇಳುತ್ತಾರೆ. ಗುಣಾಲಂಕಾರಗಳು ಇರಬೇಕೆಂದು ಅನೇಕರ ಅಭಿಪ್ರಾಯ. ಕೆಲವರು ‘ ಪ್ರಾಯಃ ’ ಅಲಂಕಾರವಿರಬೇಕೆಂದೂ, ಕೆಲವೆಡೆಗಳಲ್ಲಿ ಇಲ್ಲದಿದ್ದರೂ ಆಗಬಹುದೆಂದೂ ಹೇಳಿದ್ದಾರೆ. ಇದರಂತೆ, ದೋಷಗಳಿರಕೂಡದೆಂದೂ ಹಲವರು ಹೇಳಿದ್ದಾರೆ. ಅರ್ಥವು ‘ ರಮಣೀಯ ’ ವಾಗಿರಬೇಕೆಂದು ಕೆಲವರೂ, ‘ ಇಷ್ಟ ’ವಾಗಿರಬೇಕೆಂದು ಕೆಲವರೂ, ‘ ರಸಾತ್ಮಕ ’ ವಾಗಿರಬೇಕೆಂದು ಕೆಲವರೂ ಹೇಳಿದ್ದಾರೆ; ಕಾವ್ಯಶರೀರಕ್ಕೆ ‘ ಗುಣ ’ಗಳು ಪ್ರಾಣವೆಂದೂ ಒಬ್ಬರೂ, ‘ ರೀತಿ ’ಯು ಆತ್ಮವೆಂದು ಮತ್ತೊಬ್ಬರೂ, ‘ ವಕ್ರೋಕ್ತಿ ’ಯೇ ಸರ್ವಸ್ವವೆಂದು ಮತ್ತೊಬ್ಬರೂ, ‘ ಧ್ವನಿ ’ ಆತ್ಮವೆಂದು ಮತ್ತೊಬ್ಬರೂ, ‘ ರಸ ’ವು ಆತ್ಮವೆಂದು ಮತ್ತೊಬ್ಬರೂ ಅಭಿಪ್ರಾಯಪಡುತ್ತಾರೆ.

ಅರ್ಥವಿಲ್ಲದ ಶಬ್ದವಿಲ್ಲ; ಆದ್ದರಿಂದ ಶಬ್ದಮೂಲಕವಾಗಿಯೇ ಅರ್ಥವನ್ನು ತಿಳಿಸತಕ್ಕ ಕಾವ್ಯದಲ್ಲಿ ಯಾವುದು ಮುಖ್ಯವೆಂದು ಹೇಗೆ ಹೇಳುವುದು? ಒಂದು ಗಿಡವಾಗಬೇಕಾದರೆ, ಬೀಜವೆಷ್ಟು ಮುಖ್ಯವೋ ಭೂಮಿಯೂ ಅಷ್ಟು ಮುಖ್ಯವೇ. ಸಂಗೀತ, ಚಿತ್ರ, ಶಿಲ್ಪ, ಅಭಿನಯ ಈ ಕುಶಲಕಲೆಗಳಿಗೂ ಕಾವ್ಯಕ್ಕೂ ಇರುವ ಮುಖ್ಯ ವೈಲಕ್ಷಣ್ಯವು ಅದರ ಶರೀರರೂಪವಾದ ‘ ಶಬ್ದ ’ದಲ್ಲಿ, ಎಂದರೆ ಭಾಷೆಯಲ್ಲಿ; ಸಂಗೀತಾದಿಗಳಲ್ಲಿ ಅರ್ಥವು ಬೋಧೆಯಾಗಬಹುದು; ಆದರೆ ಅಲ್ಲಿ ಬೋಧಿತವಾಗುವುದು ಭಾಷೆಯ ಮೂಲಕವಲ್ಲ—ಸ್ವರ, ಬಣ್ಣ, ರೇಖೆ, ಅಂಗಚೇಷ್ಟೆ ಮುಂತಾದುವುಗಳಿಂದ. ರೀತಿ ಗುಣಾಲಂಕಾರಗಳು ಆನಂದದಾಯಕವೇನೋ ಹೌದು; ಆದ್ದ

---

[16] ಮಮ್ಮಟನ ಮತ

ರಿಂದಲೇ ಎಂಥ ಶುಷ್ಕವಾದ ಸಂಗತಿಯಾಗಿರಲಿ, ಅದನ್ನು ತೆಗೆದುಕೊಂಡು ಉತ್ತಮವಾದ 'ರೀತಿ' ಯಿಂದ ಹೇಳಿದರೆ ಸೊಗಸಾಗಿ ಕಾಣುತ್ತದೆ.

ಉದಾಹರಣೆ

(i) 'ಗುಡುಗಿತು' ಎಂಬುದನ್ನು
"ರೋದೋಭಾಗದೊಳ್ ಘೂರ್ಣಿಸಿದುದಭಿನವಾಂಭೋದಗಂಭೀರನಾದಂ"
ಎಂದೂ
—ಪಂಪರಾಮಾಯಣ

(ii) 'ನೀರು ಹರಿಯುತ್ತಿದೆ' ಎಂಬುದನ್ನು
"ಮೊರೆಯುತೆ ಸರಿಯುತೆ ಭರದಿಂ
ಪರಿದೋಡುತೆ ಜಾರಿ ಪಾರಿ ಮುಕ್ತಾಂಜಲಿಯಂ।
ಎರಚುತಲೆರಗುತೆ ರಭಸದಿ
ಬರುತಿರ್ಪಾ ಜಲವಿಲಾಸಮೇನತಿಶಯಮೋ ||" ಎಂದೂ,

(iii) 'ಜಿಂಕೆ ಹೆದರಿಕೊಂಡು ಓಡಿಹೋಗುತ್ತಿದೆ' ಎಂಬುದನ್ನು
"ಕೊರಲಂ ತಾಂ ಕೊಂಕುಗೆಯ್ಯುತ್ತಡಿಗಡಿಗೊಡನೈತರ್ಪ ತೇರಲ್ಲಣಂ ನ
ಟ್ಟಿರೆ ನೋಟಂ ಬಾಣಪಾತಕ್ಕಗಿದಿರುಕಿಸುತಂ ಪೃಷ್ಠಮಂ ಮಾರ್ಗದೊಳ್ತೀ
ವಿರೆ ನೀಡುಂ ಬಿಟ್ಟ ಬಾಯಿಂ ಶ್ರಮದುದಿರ್ವರೆಮೆಲ್ದಿರ್ದ ದರ್ಭಾಂಕುರಂಗಳ್
ಧರೆಯಲ್ಲೋರೊರ್ಮೆ ಕಾಲಿಟ್ಟಹಹ ನಿರುಕಿಸೈ ಬಾನೊಳೇ ಪಾರಿಪೋಕುಂ ||"

ಎಂದೂ ಹೇಳಿದರೆ ಕಾವ್ಯವಾಗುತ್ತದೆ. ಇದರಂತೆಯೇ, ಮಾಧುರ್ಯಾದಿ ಕೆಲವು ಗುಣಗಳೂ ಶಬ್ದಾಲಂಕಾರಗಳೂ ಕಿವಿಗೆ ಇಂಪನ್ನು ತಂದು ಸಂತೋಷಗೊಳಿಸುತ್ತವೆ. ಅಲ್ಲದೆ ರೀತಿ, ಗುಣ ಅಲಂಕಾರ ಇವು ಮೂರೂ ಚಮತ್ಕಾರಜನಕಗಳಾದ ಕವಿಯ ಬುದ್ಧಿಶಕ್ತಿ ಚಾತುರ್ಯಗಳನ್ನು ವ್ಯಕ್ತಗೊಳಿಸಿ ನಮಗೆ ಆಶ್ಚರ್ಯವನ್ನೂ ಆನಂದವನ್ನೂ ಉಂಟುಮಾಡುತ್ತವ. ಆದರೆ, ಗುಣ ರೀತಿ ಅಲಂಕಾರಗಳಲ್ಲಿ ಯಾವುದು ಇಲ್ಲದೆ ಇದ್ದರೂ ರಸವಿದ್ದರೆ ಸಾಕು, ಕಾವ್ಯವಾಗುತ್ತದೆ. ಅದರಿಂದಲೇ ಕೆಲವು ಕಥೆಗಳು ಅಲಂಕಾರರಹಿತವಾದ ಗದ್ಯದಲ್ಲಿ ಬರೆಯಲ್ಪಟ್ಟಿರಬಹುದಾದರೂ ಆದರಕ್ಕೆ ಪಾತ್ರವಾಗುವುವು. ಇಂಪಾದ ಸ್ವರವನ್ನು ಕೇಳಿ ಪಡೆಯುವ ಆನಂದವೂ ರಸಾನುಭವದಿಂದ ಪಡೆಯುವ ಆನಂದವೂ ಸ್ವರೂಪದಲ್ಲಿ ಬೇರೆಬೇರೆ. ಇವುಗಳಲ್ಲಿ ರಸಾನಂದವನ್ನೇ ಕಾವ್ಯಕ್ಕೆ ಹೆಗ್ಗುರುತಾಗಿ ಇಟ್ಟುಕೊಳ್ಳುವ ಪಕ್ಷಕ್ಕೆ 'ಮಾಧವ ಮುರಾರೇ, ಕೃಷ್ಣ ಮುರಾರೇ' ಎಂದು ಸಂಗೀತಗಾರರು ಒಂದು ಗಂಟೆ ಹೊತ್ತು ಹಾಡುವ 'ಪಲ್ಲವಿ' ಯೂ, ಗ್ರಹಣ ಹಿಡಿಯುವ ಹೊತ್ತನ್ನು ಒಂದು ನಿಮಿಷ ಹೆಚ್ಚು ಕಡಮೆ ಇಲ್ಲದಂತೆ ಲೆಕ್ಕಾಚಾರಮಾಡಿ ಹೇಳಬಹುದಾದ ಗಣಿತಸೂತ್ರಗಳೂ

ಕಾವ್ಯವಾಗಬೇಕಾಗುತ್ತದೆ. ಅರ್ಥಾಲಂಕಾರಗಳು ರಸಪುಷ್ಟಿಯನ್ನುಂಟು ಮಾಡುವ ಕಡೆಗಳಲ್ಲಿ ಮಾತ್ರ ಅವುಗಳಿಂದ ಕಾವ್ಯಾನಂದವು ಉಂಟಾಗುತ್ತದೆ. ಗುಣಗಳೂ ಅಷ್ಟೇ; ಇದನ್ನು ಮಮ್ಮಟ ಮುಂತಾದ ನವೀನಾಲಂಕಾರಿಕರು ಗ್ರಹಿಸಿ ಗುಣಗಳು 'ರಸಧರ್ಮ'ಗಳೆಂದು ನಿಷ್ಕರ್ಷಿಸಿದ್ದಾರೆ. ಪ್ರಾಚೀನರು ಪ್ರಾಶಸ್ತ್ಯ ಕೊಡುವ ರೀತಿ ಗುಣಾಲಂಕಾರಗಳು ಬೊಂಬೆಗೆ ಮಾಡುವ ಶೃಂಗಾರಗಳ ಹಾಗೆ; ಆದ್ದರಿಂದ ರೀತಿಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು ಒಂದು ಪಕ್ಷ ಕಾವ್ಯವಾದರೂ 'ಚಿತ್ರಕಾವ್ಯ'ವಾಗಬಹುದೇ ಹೊರತು ಉತ್ತಮ ಕಾವ್ಯವಾಗಲಾರವು.[17] ಉತ್ತಮ ಕಾವ್ಯದಲ್ಲಿ ರಸವತ್ತಾದ ಅರ್ಥವಿರಬೇಕು. ಕಾವ್ಯದಲ್ಲಿ 'ರಸ'ವೇ ರಮಣೀಯವೆಂದೂ ಅದಿದ್ದರೇ ಅರ್ಥವು 'ಇಷ್ಟ'ವಾಗುವುದೆಂದೂ ರಸವು ಯಾವಾಗಲೂ 'ವ್ಯಂಗ್ಯ' ಅಥವಾ 'ಧ್ವನಿತ'ವಾಗುವುದೆಂದೂ ಹೇಳಿಬಿಟ್ಟರೆ ಕಾವ್ಯಾತ್ಮ ವಿಚಾರವಾಗಿ ಇರತಕ್ಕ ಪರಸ್ಪರ ಭಿನ್ನಾಭಿಪ್ರಾಯಗಳು ಹೋದಂತಾಗುತ್ತದೆ.[18]

ರಸ (ಅಥವಾ 'ಭಾವ'ವಾದರೂ ಸರಿಯೆ) ಇಲ್ಲದಿದ್ದರೆ ಕಾವ್ಯವೇ ಆಗುವುದಿಲ್ಲವೆಂದು ಕೆಲವರು ಹೇಳುತ್ತಾರೆ. ಆದರೆ ಹೀಗೆ ಹೇಳುವುದು ಅನುಚಿತ. ಏಕೆಂದರೆ ಆಗ ಜಲಪಾತ, ಬಾಲಲೀಲೆ, ಮುಂತಾದ ರಮಣೀಯ ವಸ್ತುಗಳ ವರ್ಣನೆಯು ಪ್ರಧಾನವಾಗಿ ಉಳ್ಳ ಗ್ರಂಥಗಳು ಕಾವ್ಯಗಳಲ್ಲದೆ ಹೋಗಬೇಕಾಗುತ್ತದೆ. ಕೇವಲ ವಸ್ತ್ವಲಂಕಾರ ಪ್ರಧಾನವಾದ ಕಾವ್ಯಗಳಿಗಿಂತ, ರಸಪ್ರಧಾನವಾದ ಕಾವ್ಯಗಳು ಹೆಚ್ಚಾಗಿ ಆನಂದದಾಯಕಗಳೆಂದು ಹೇಳಿದರೆ ಅದನ್ನು ಒಪ್ಪಬಹುದು. ಇದನ್ನೇ ರಸಗಂಗಾಧರಕಾರನು "ಹೀಗೆ ಐದು ವಿಧವಾದ 'ಧ್ವನಿ'ಯಲ್ಲಿ 'ರಸ ಧ್ವನಿ'ಗೇ ಪರಮರಮಣೀಯತೆ" ಎಂದು ಹೇಳಿದ್ದಾನೆ (ಪುಟ ೨೧).

ಪ್ರಾಯಶಃ ಅಲಂಕಾರಿಕರು ಈ ಸಂದರ್ಭದಲ್ಲಿ ಕಾವ್ಯಕ್ಕೆ ಕಾರಣವನ್ನೂ ಫಲವನ್ನೂ ಹೇಳುವರು. ಅವನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಸಬಹುದು. 'ಪ್ರತಿಭಾ' ಅಥವಾ ಸ್ವತಸ್ಸಿದ್ಧವಾದ ಕವಿತಾಶಕ್ತಿ, ನಾನಾಶಾಸ್ತ್ರಜ್ಞಾನ ಪ್ರಪಂಚಾನುಭವಗಳಿಂದ ಬಂದ ನೈಪುಣ್ಯ, ಕಾವ್ಯಜ್ಞರಿಂದ ಶಿಕ್ಷೆಹೊಂದಿ ಮಾಡಿದ ಅಭ್ಯಾಸ ಇವು

---

[17] ರಸಭಾವಾದಿವಿಷಯವಿವಕ್ಷಾವಿರಹೇ ಸತಿ ।
ಅಲಂಕಾರನಿಬಂಧೋ ಯಃ ಸ ಚಿತ್ರವಿಷಯೋ ಮತಃ ॥ ಧ್ವನ್ಯಾಲೋಕ

[18] (i) 'ವಕ್ರೋಕ್ತಿ'ಯೂ ಒಂದು ರೀತಿಭೇದ ಅಥವಾ ಅಲಂಕಾರಭೇದವಲ್ಲ ಪರಿಣಮಿಸುತ್ತದೆ (ಸಾಹಿತ್ಯದರ್ಪಣ ೧೪ ನೋಡಿರಿ).

(ii) ರೀತಿ ವಿನೂತನವಸ್ತುಕಲ್ಪಿತಗೊಳ್ಳುವ ಮಾರ್ಗ ರಸಭಾವಮನ್ನುದ್ದೀಪಿಸುತ್ತಿರುವ ಬೀಜಂ. . . .
(ಕಾವ್ಯಾವಲೋಕನ ೭೮೦)

ಮೂರೂ ಒಟ್ಟಿಗೆ ಕಾರಣವೆಂದು ಅನೇಕರು ಅಭಿಪ್ರಾಯಪಡುತ್ತಾರೆ.[19] ಆದರೆ ಪ್ರತಿಭೆಯೇ ಮೂಲಕಾರಣವಾದ 'ಬೀಜ'ವೆಂದೂ ಆದ್ದರಿಂದ ಮುಖ್ಯವೆಂದೂ, ಮಿಕ್ಕವು ಇದಕ್ಕೆ ಸಂಸ್ಕಾರಗಳೆಂದೂ ಹೇಳುವುದು ಸೂಕ್ತವಾಗಿದೆ.[20]

ಕಾವ್ಯಕ್ಕೆ 'ಕೀರ್ತಿ' 'ಪ್ರೀತಿ' 'ಆನಂದ'ಗಳೇ ಫಲವೆಂದು ಪ್ರಾಚೀನರು ಹೇಳಿದ್ದಾರೆ. ಕ್ರಮೇಣ ಇವು ಬೆಳೆದು ಕಾವ್ಯಪ್ರಕಾಶಕಾರನ ಮತದಲ್ಲಿ ಪರಿಣಮಿಸಿದೆ.[21] ಆತನು ಹೇಳುವುದೇನೆಂದರೆ :

'ಕಾವ್ಯದಿಂದ ಯಶಸ್ಸು, ಧನ, ಲೋಕವ್ಯವಹಾರಜ್ಞಾನ, ಅಮಂಗಳ ಪರಿಹಾರ, ಪರಮಾನಂದ, ಕಾಂತಾಸಮ್ಮಿತದಿಂದ ಉಪದೇಶ, ಇವು ಲಭಿಸುತ್ತವೆ.'

ಇವುಗಳಲ್ಲಿ ಎಲ್ಲವೂ ನಿಯತವಲ್ಲ; ಫಲವನ್ನು ಹೇಳುವಾಗ ನಿಯತವಾದ ಫಲವನ್ನೂ ಇತರ ಕಡೆಗಳಿಂದ ಬರದೇ ಕಾವ್ಯದಿಂದ ಮಾತ್ರ ಬರತಕ್ಕ ಫಲವನ್ನೂ ಹೇಳುವುದು ನ್ಯಾಯವಾದದ್ದು ; ಆದ್ದರಿಂದ, ಆನಂದವೇ ಮುಖ್ಯ ಫಲವೆಂದು[22] ಹೇಳುವುದು ಯುಕ್ತವಾಗಿದೆ. ಇದರ ಜೊತೆಗೆ ಸಂದರ್ಭವಿದ್ದ ಹಾಗೆ ಯಾವ ಯಾವ ಇತರ ಫಲಗಳು ಬೇಕಾದರೂ ಬರಬಹುದು.

ಕಾವ್ಯವು 'ಉಪದೇಶ'ದಾಯಕವಾಗಿರಬೇಕೇ ಎಂಬುದೊಂದು ವಿಚಾರ. 'ಉಪದೇಶ'ವು ಕೆಲವು ವೇಳೆ ಫಲವಾಗಬಹುದು. ಆದರೆ ಅದು ಕಾವ್ಯದ ಉದ್ದೇಶಗಳಲ್ಲಿ ಒಂದಾಗಿರಬೇಕೆಂದು ಹೇಳುವುದು ಯುಕ್ತವಾಗಿ ತೋರುವುದಿಲ್ಲ.

---

[19] ಪ್ರತಿಭೆಯುಂ ಅಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ—ಶಬ್ದಮಣಿದರ್ಪಣ ಪುಟ ೧೭೫.

ಪ್ರತಿಭಾನಂ ಕಾವ್ಯವಿದ್ಯಾಪ್ರಚಯ ಪರಿಚಯಂ ವೃದ್ಧಸೇವಾನುರಾಗಂ ಸತತಾಭ್ಯಾಸ ಪ್ರಯತ್ನಂ ಕವಿತೆಗೆ ನಿಯತಂ ಕಾರಣಂ. . . . (ಕಾವ್ಯಾವಲೋಕನ ೪೨೪).

[20] ಅದಕ್ಕೆ (ಕಾವ್ಯಕ್ಕೆ) ಕವಿಯಲ್ಲಿರುವ ಕೇವಲ ಪ್ರತಿಭೆಯೇ ಕಾರಣ ; ಕಾವ್ಯವಾಗುವುದಕ್ಕೆ ಅನುಕೂಲವಾದ ಶಬ್ದಾರ್ಥಗಳು ಹೊಳೆಯುವುದೇ ಅ (ಪ್ರತಿಭೆ). . . . ಮೂರೂ (ಕಾರಣ) ಅಲ್ಲ. —ರಸಗಂಗಾಧರ ೮.

ಪ್ರತಿಭಾಲಕ್ಷಣವನ್ನು ". . . . ನವನವೋನ್ಮೇಷಶಾಲಿನೀ ಪ್ರತಿಭಾ" (ಹೊಸ ಹೊಸ ಸಂಗತಿಗಳು ಸ್ಫುರಿಸುವಂತೆ ಮಾಡತಕ್ಕದ್ದು) ಎಂದು ಅನೇಕರೂ, "ಯಾ ಶಬ್ದಗ್ರಾಮಮರ್ಥಸಾರ್ಥಂ ಅಲಂಕಾರತಂತ್ರಂ ಉಕ್ತಿಮಾರ್ಗಂ ಅನ್ಯದಪಿ ತಥಾವಿಧಮಧಿಹೃದಯಂ ಪ್ರತಿಭಾಸಯತಿ ಸಾ ಪ್ರತಿಭಾ" (ಶಬ್ದಸಮೂಹ, ಅರ್ಥಸಂಪತ್ತು, ಅಲಂಕಾರವೈಚಿತ್ರ್ಯ, ಉಕ್ತಿಕ್ರಮ ಮುಂತಾದವು ಮನಸ್ಸಿನಲ್ಲಿ ಪ್ರತಿಫಲಿಸುವಂತೆ ಮಾಡತಕ್ಕದ್ದೇ ಪ್ರತಿಭೆ) ಎಂದು ರಾಜಶೇಖರನೂ ಹೇಳಿದ್ದಾರೆ.

[21] ಕಾವ್ಯಂ ಯಶಸೇಽರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ।
ಸದ್ಯಃ ಪರನಿರ್ವೃತಯೇ ಕಾಂತಾಸಮ್ಮಿತತಯೋಪದೇಶಯುಜೇ ॥

[22] ಹೇಮಚಂದ್ರ (೩) ಮತ್ತು ಅಭಿನವಗುಪ್ತರ ಧ್ವನ್ಯಾಲೋಕವ್ಯಾಖ್ಯಾನ.

ಏಕೆಂದರೆ ಉಪದೇಶಮಾಡುವುದಕ್ಕೆ ಹೊರಟು ಕಾವ್ಯದ ಅಪೂರ್ವಲಕ್ಷಣವಾದ ಆನಂದವು ಹುಟ್ಟದೇ ಹೋಗುವುದುಂಟು. ಆಧ್ಯಾತ್ಮಿಕವಿಚಾರವು ಬರುವ ಕೆಲವು ಕಾವ್ಯಗಳಲ್ಲಿ ಈ ಉಪದೇಶವು ಮುಖ್ಯವಾಗಿ ತೋರುತ್ತಿರಬಹುದು. ಆದರೆ ಕಾವ್ಯ ಸಾಮಾನ್ಯದ ಲಕ್ಷಣವನ್ನೂ ಫಲವನ್ನೂ ವಿಚಾರಮಾಡುವಲ್ಲಿ ಉಪದೇಶವಿರಲೇ ಬೇಕೆಂದರೆ ಅಸಂಗತವಾಗಬಹುದು. ಕಾವ್ಯವು ಒಂದು ಹೂವಿನ ಹಾಗೆ; ಅದರ ಕೆಲಸವು ಮನೋಹರವಾದ ರೂಪಿನಿಂದಾಗಲಿ ಸುವಾಸನೆಯಿಂದಾಗಲಿ ಇವೆರಡ ರಿಂದಾಗಲಿ ಪ್ರೀತಿಯನ್ನುಂಟುಮಾಡತಕ್ಕದ್ದು. ಆದರೆ ಅದು ಔಷಧಕ್ಕೂ ಉಪಯೋಗ ವಾಗಬೇಕೆಂದು ಹೇಳುವುದು ನ್ಯಾಯವಲ್ಲ; ಗುಲಾಬಿಯ ಹೂವು ಸುಂದರವೂ, ಸುಗಂಧಿಯೂ, ಔಷಧಕ್ಕೆ ಉಪಯುಕ್ತವೂ ಆಗಿರಬಹುದು; ಆದರೆ ಇದರಂತೆಯೆ ಎಲ್ಲಾ ಹೂವೂ ಔಷಧಕ್ಕೆ ಉಪಯುಕ್ತವಾಗಿರುವುದಿಲ್ಲ; ಔಷಧಕ್ಕೆ ಉಪಯೋಗವೇ ಹೂವಿನ ಅಸಾಧಾರಣಲಕ್ಷಣವಲ್ಲ; ಅದು ಮೂಲಿಕೆಯ ಲಕ್ಷಣ. ಆದ್ದರಿಂದ ಕಾವ್ಯ ದಲ್ಲಿ—ಅಷ್ಟೇಕೆ, ಎಲ್ಲಾ ಕುಶಲ ಕಲೆಯಲ್ಲಿಯೂ—ಆನಂದವೇ ಮುಖ್ಯಫಲವೆಂದು ಹೇಳಬಹುದಾಗಿದೆ.

# ೩. ಶಬ್ದಾರ್ಥಸ್ವರೂಪ

ಕಾವ್ಯವು ಶಬ್ದರೂಪವಾದದ್ದು; ಶಬ್ದವು ಅರ್ಥವುಳ್ಳದ್ದು. ಈ ಶಬ್ದಾರ್ಥಗಳ ಸ್ವರೂಪ ಮತ್ತು ಗುಣಗಳ ಮೇಲೆ ಕಾವ್ಯದ ಸ್ವರೂಪ ಮತ್ತು ಗುಣಗಳು ಹೆಚ್ಚು ಕಡಮೆಯಾಗುತ್ತವೆ. ಆದ್ದರಿಂದ, ಶಬ್ದಾರ್ಥಗಳ ಸ್ವರೂಪವನ್ನು ತಿಳಿದುಕೊಳ್ಳ ಬೇಕು.

ಶಬ್ದಕ್ಕೆ ಅರ್ಥಕೊಡುವ ಸಾಮರ್ಥ್ಯವಿದೆ. ಈ ಸಾಮರ್ಥ್ಯಕ್ಕೆ 'ವೃತ್ತಿ' ಯೆಂದು ಹೆಸರು. ಒಂದು ಶಬ್ದವನ್ನು ಕೇಳಿದ ಕೂಡಲೇ ತಟ್ಟನೆ ಮನಸ್ಸಿಗೆ ಹೊಳೆಯುವ ಅದರ ಸುಪ್ರಸಿದ್ಧವಾದ ಅರ್ಥವು ಮುಖ್ಯಾರ್ಥ ಅಥವಾ ವಾಚ್ಯಾರ್ಥ ವೆನ್ನಿಸುತ್ತದೆ. ಉದಾಹರಣೆ: ಕಣ್ಣು, ಊರು, ಚಂದ್ರ, ಇತ್ಯಾದಿ. ಕೆಲವು ಸಂದರ್ಭಗಳಲ್ಲಿ ಇಂಥ ಶಬ್ದಗಳಿಗೆ 'ಮುಖ್ಯಾರ್ಥ' ಅಥವಾ 'ವಾಚ್ಯಾರ್ಥ'ವು ಹೊಂದುವುದಿಲ್ಲ. ಉದಾಹರಣೆ :—"ಜಂಬೂಸವಾರಿಯ ಉತ್ಸವವನ್ನು ನೋಡು ವುದಕ್ಕೆ ಊರಿಗೆ ಊರೇ ಬಂದಿತ್ತು"; "ಕಣ್ಣಲ್ಲಿ ಬೆಂಕಿಯನ್ನು ಸುರಿಸುತ್ತ ಗರ್ಜಿಸಿದನು." ಇಲ್ಲಿ 'ಊರು' ಬರುವುದೂ ಮನುಷ್ಯನು ಕಣ್ಣಿನಲ್ಲಿ ಬೆಂಕಿಯನ್ನು ಸುರಿಸುತ್ತ ಗರ್ಜಿಸುವುದೂ ಅಶಕ್ಯ; ಆದ್ದರಿಂದ ಇಲ್ಲಿ 'ಊರು' ಎಂಬುದಕ್ಕೆ 'ಊರಿನಲ್ಲಿರುವ ಜನರು' ಎಂದೂ 'ಬೆಂಕಿಯನ್ನು ಸುರಿಸುತ್ತ ಗರ್ಜಿಸಿದನು' ಎಂಬುದಕ್ಕೆ 'ಕೆಂಪಾದ ಕಣ್ಣಿನಿಂದ ಕೋಪವನ್ನು ಸೂಚಿಸುತ್ತ ಗಟ್ಟಿಯಾಗಿ ಕೂಗಿದನು' ಎಂದೂ ಅರ್ಥಮಾಡಬೇಕು. ಆದರೆ ಹೀಗೆ ಜನಗಳು ಮಾತನಾಡು ವುದು ರೂಢಿಯಾಗಿದೆ. ಈ ರೀತಿಯಲ್ಲಿ ಮಾತನಾಡುವುದಕ್ಕೆ ಅರ್ಥಪುಷ್ಟಿ ರೂಪವಾದ ಪ್ರಯೋಜನವುಂಟು. ಇಂಥ ಬೇರೆ ಅರ್ಥಗಳು ವಾಚ್ಯಾರ್ಥಗಳಿಂದ 'ಸೂಚ್ಯ'ವಾಗಿ ಲಕ್ಷ್ಯಾರ್ಥವೆನಿಸುವುವು.[1]

'....ಊರಿನಲ್ಲಿದ್ದ ಜನಗಳು ಬಂದಿದ್ದರು' 'ಕೋಪದಿಂದ ಕೂಗಿಕೊಂಡನು' ಎಂಬುದಕ್ಕೂ 'ಊರಿಗೆ ಊರೇ ಬಂದಿತ್ತು' 'ಕಣ್ಣಿನಲ್ಲಿ ಬೆಂಕಿಯನ್ನು ಸುರಿಸುತ್ತ ಗರ್ಜಿಸಿದನು' ಎಂಬುದಕ್ಕೂ ಅರ್ಥದಲ್ಲಿ ಎಷ್ಟೋ ವ್ಯತ್ಯಾಸವು ಬರುತ್ತದೆ. 'ಊರು' ಎಂಬುದರಿಂದ, ಕಿಕ್ಕಿರಿದು ತುಂಬಿಹೋಗಿದ್ದ ಜನಸಂದಣಿ, ಅದರಲ್ಲಿರುವ ಜನಬಾಹುಳ್ಯ, ಊರಿನ ಇತರ ಭಾಗಗಳೆಲ್ಲಾ ಬರಿದಾಗಿರುವಿಕೆ ಇವೂ, 'ಬೆಂಕಿ' ಎಂಬುದರಿಂದ ತೀಕ್ಷ್ಣತೆ, 'ಗರ್ಜನೆ' ಎಂಬುದರಿಂದ ಸಿಂಹದ ನೆನಪು ಇವೇ ಮುಂತಾದುವುಗಳೂ ಕೇಳುವವನ ವಯಸ್ಸು ಅನುಭವ ಬುದ್ಧಿಗಳ ಮೇಲೆ ಹೆಚ್ಚು

---

1 ಇದನ್ನೇ ಕಾವ್ಯಪ್ರಕಾಶದ

ಮುಖ್ಯಾರ್ಥಬಾಧೇ ತದ್ಯೋಗೇ ರೂಢಿತೋಽಥ ಪ್ರಯೋಜನಾತ್ ।
ಅನ್ಯಾರ್ಥೋ ಲಕ್ಷ್ಯತೇ ಯತ್ಸಾ ಲಕ್ಷಣಾಽಽರೋಪಿತಾ ಕ್ರಿಯಾ ॥

ಎಂಬ ಶ್ಲೋಕವು ತಿಳಿಸುತ್ತದೆ.

ಕಡಮೆಯಾಗಿ ಮನಸ್ಸಿಗೆ ಗೋಚರವಾಗುತ್ತವೆ. ಇವು ಮುಖ್ಯಾರ್ಥವೂ ಆಗುವುದಿಲ್ಲ, ಲಕ್ಷ್ಯಾರ್ಥವೂ ಆಗುವುದಿಲ್ಲ; ಇಂಥ ಅರ್ಥವು 'ವ್ಯಂಗ್ಯಾರ್ಥ'ವೆನ್ನಿಸುತ್ತದೆ. ಇದಕ್ಕೆ 'ಧ್ವನಿ', 'ಧ್ವನನ', 'ದ್ಯೋತನ' ಮುಂತಾದ ಹೆಸರುಗಳೂ ಉಂಟು.

ವ್ಯಂಗ್ಯಾರ್ಥವು ಲಕ್ಷ್ಯಾರ್ಥಮೂಲಕವಾಗಿಯೇ ತೋರಬೇಕೆಂಬ ನಿಯಮವಿಲ್ಲ; ಅದು ವಾಚ್ಯಾರ್ಥದಿಂದಲೂ ತೋರುತ್ತಿರಬಹುದು. ಇಲ್ಲಿ 'ಮುಖ್ಯಾರ್ಥ ಬಾಧ' ವಿರುವುದಿಲ್ಲ. ಮುಖ್ಯಾರ್ಥವು ಹೊಂದಿಕೆಯಾಗಿರುತ್ತ ಅದರ ಜೊತೆಗೆ ಅದಕ್ಕಿಂತ ಅತಿಶಯವಾದ ಅಥವಾ ವಕ್ತೃವಿಗೆ ವಿವಕ್ಷಿತವಾದ ಅರ್ಥವು ವ್ಯಂಗ್ಯವಾಗಿರುತ್ತದೆ.

ಉದಾಹರಣೆ: "ಮರಗಳು ತಮ್ಮ ಹಣ್ಣುಗಳನ್ನು ತಾವೇ ಕೊಟ್ಟುಬಿಡುವುದರಿಂದ ಜನರು ಅವನ್ನು ಹಿಂಸಿಸುವುದಿಲ್ಲ; ಕಬ್ಬು ತನ್ನ ರಸವನ್ನು ಕೊಡದೆ ತಾನೇ ಇಟ್ಟುಕೊಳ್ಳುವುದರಿಂದ ಜನರು ಅದನ್ನು ಕಡಿದು ಗಾಣಕ್ಕೆ ಕೊಟ್ಟು ಹಿಪ್ಪೆಮಾಡಿ ಹಾಕುತ್ತಾರೆ."

ಇಲ್ಲಿ ಮುಖ್ಯಾರ್ಥಬಾಧವಿಲ್ಲ; ಜೊತೆಗೆ ದಾನಶೀಲನ ಮತ್ತು ಜಿಪುಣನ ಸ್ಥಿತಿಗತಿಗಳು ವ್ಯಂಗ್ಯವಾಗುತ್ತವೆ. ಇವುಗಳಿಂದ ಮತ್ತೆ, ಉದಾರಿಯ ಸ್ವಾತಂತ್ರ್ಯ ನಿಶ್ಚಿಂತತೆ ಶಾಂತಿ-ಮಹತ್ವ ಮುಂತಾದವೂ, ಜಿಪುಣನ ಪಾರತಂತ್ರ್ಯ ಭಯ ಕೀಳುತನ ಕಾಠಿಣ್ಯ ಮುಂತಾದವೂ ವ್ಯಂಗ್ಯವಾಗುತ್ತವೆ.

ಕಾಳಿದಾಸನು ಶಾಕುಂತಲ ನಾಟಕದಲ್ಲಿ 'ಎಲೈ ಅಂಬಿಗನೇ, ಈಗಲೀಗ ನೀನು ನನಗೆ ಪರಮಮಿತ್ರನಾದೆ. ಮದ್ಯಸಾಕ್ಷಿಕವಾಗಿ ನಾವು ಕೆಳೆತನಕ್ಕೆ ಮೊದಲು ಮಾಡಬೇಕು. ಆದ್ದರಿಂದ ನಡೆ, ಮದ್ಯದ ಅಂಗಡಿಗೆ ಹೋಗೋಣ', ಎಂಬ ಮಾತಿನಿಂದ ನಗರಾಧಿಕಾರಿಯ ನಡೆ ನುಡಿ, ಆಗಿನ ಕಾಲದ ಸ್ಥಿತಿಗತಿ ಮುಂತಾದವುಗಳನ್ನೂ; ಧನಮಿತ್ರನ ಆಸ್ತಿಯ ವಿಚಾರವಾಗಿ 'ತಂದೆಯ ದ್ರವ್ಯಕ್ಕೆ ಗರ್ಭಕ್ಕೂ ಬಾಧ್ಯತೆಯುಂಟಲ್ಲವೇ? ನಡೆ, ಈ ಮಾತನ್ನು ಅಮಾತ್ಯನಿಗೆ ಹೇಳು' ಎಂಬ ಮಾತಿನಿಂದ ದುಷ್ಯಂತನ ರಾಜಗುಣ, ಪ್ರಜಾವಾತ್ಸಲ್ಯ, ಬುದ್ಧಿಶಕ್ತಿ ಮುಂತಾದ ಗುಣಗಳನ್ನೂ; 'ಓಹೋ! ನನಗೆ ಬಹು ಭಯವುಂಟಾಯಿತು (ಎಂದು ತುಟಿಯನ್ನು ತೋರಿಸುವನು)' ಎಂಬ ಮಾತಿನಿಂದ ಅಂಕುರಸ್ಥಿತಿಯಲ್ಲಿರುವ ಸರ್ವದಮನನ ಧೈರ್ಯಶೌರ್ಯಾದಿಗಳನ್ನೂ, ವಾಚ್ಯವಾಗಿ ಹೇಳುವುದಕ್ಕಿಂತ ಎಷ್ಟೋ ಸಂಗ್ರಹವಾಗಿ, ಆದರೆ ಎಷ್ಟೋ ಅತಿಶಯವಾಗಿ, ವ್ಯಂಗ್ಯವಾಗುವಂತೆ ತಿಳಿಸಿದ್ದಾನೆ.

ಹೀಗೆ ಅರ್ಥವು ಮುಖ್ಯವಾಗಿ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂದು ಮೂರು ವಿಧ; ಈ ಅರ್ಥಗಳನ್ನು ಕೊಡುವ ಶಬ್ದಗಳಿಗೆ (ಕ್ರಮವಾಗಿ) ವಾಚಕ, ಲಕ್ಷಕ, ವ್ಯಂಜಕಗಳೆಂದೂ, ಅವುಗಳಲ್ಲಿರುವ ಸಾಮರ್ಥ್ಯಕ್ಕೆ (ಅಥವಾ ವೃತ್ತಿಗೆ-ಕ್ರಮವಾಗಿ) ಅಭಿಧಾವೃತ್ತಿ, ಲಕ್ಷಣಾವೃತ್ತಿ, ವ್ಯಂಜನಾವೃತ್ತಿ ಎಂದೂ ಹೆಸರು.

# ೪. ಕಾವ್ಯವಿಭಾಗಗಳು

ಪ್ರಾಚೀನಾಲಂಕಾರಿಕರು ಕಾವ್ಯವನ್ನು (೧) ಗದ್ಯ, ಪದ್ಯ ಮತ್ತು ಮಿಶ್ರವೆಂದೂ, (೨) ದೃಶ್ಯ, ಶ್ರವ್ಯವೆಂದೂ ಎರಡು ಪ್ರಕಾರವಾಗಿ ಭಾಗಿಸುತ್ತಾರೆ. ಸಂಸ್ಕೃತದಲ್ಲಿಯೂ ಹಳಗನ್ನಡದಲ್ಲಿಯೂ ಗದ್ಯಕಾವ್ಯಗಳು ತೀರ ಕಡಮೆ. ಈಗಿನ ಕಾಲದಲ್ಲಿ ಸಾಧಾರಣ ವಾಗಿ ಗದ್ಯರೂಪದಲ್ಲಿ ಬರೆಯುವ ನಿಘಂಟುಗಳೂ ಸಂಸ್ಕೃತದಲ್ಲಿ ಪದ್ಯರೂಪವಾಗಿಯೇ ಇವೆ. ಇವುಗಳಲ್ಲಿ ಹಲವು, ಸೂತ್ರರೂಪವಾಗಿರುವುದು ನಿಜ; ಆದರೆ ಪದ್ಯವಲ್ಲದಿರುವುದ ರಿಂದ ಸೂತ್ರಗಳನ್ನು ಗದ್ಯವೆನ್ನಬೇಕೇ ಹೊರತು ಅವುಗಳಲ್ಲಿ ಆಧುನಿಕ ಗದ್ಯದ ಅರ್ಥ ವ್ಯಕ್ತಿ ಪ್ರಸಾದ ಮುಂತಾದ ಗುಣಗಳೂ, ವಿಷಯಪ್ರತಿಪಾದನಕ್ರಮವೂ ಇಲ್ಲ. ಈ ಸೂತ್ರಗಳ ವ್ಯಾಖ್ಯಾನವಾದ ಭಾಷ್ಯಗಳಲ್ಲಿ ಬಹು ಮನೋಹರವಾಗಿಯೂ ತಿಳಿ ಯಾಗಿಯೂ ತಿರುಳುಳ್ಳದ್ದಾಗಿಯೂ ಇರುವ ಗದ್ಯಶೈಲಿಯು ಕಂಡುಬರುತ್ತದೆ. ಇವುಗಳ ಶೈಲಿಗೂ 'ಕಾದಂಬರಿ' 'ಹರ್ಷಚರಿತ' ಮುಂತಾದ ಗದ್ಯಕಾವ್ಯಗಳ ಶೈಲಿಗೂ ಸಂಬಂಧವೇ ಇಲ್ಲ. ಗದ್ಯ ಕಾವ್ಯದ ಸ್ವರೂಪ, ಸ್ವಭಾವ, ಉದ್ದೇಶಗಳ ವಿಷಯದಲ್ಲಿ ಪ್ರಾಚೀನರ ಅಭಿಪ್ರಾಯವೇ ಬೇರೆಯಿದ್ದಂತೆ ತೋರುತ್ತದೆ. ಮಾತನಾಡುವಂತೆಯೇ ಬರೆದರೆ ಅದರಲ್ಲಿ ಚಮತ್ಕಾರವೇನು ಬಂತು? ಕವಿಯ ಸಾಮರ್ಥ್ಯವನ್ನೇನು ತೋರಿಸಿದ ಹಾಗಾಯಿತು? ಆದ್ದರಿಂದ ಗದ್ಯಕಾವ್ಯವೆಂದರೆ 'ಮಾತನಾಡಿದರೆ ಮುತ್ತು ಸುರಿಯ ಬೇಕು' ಎಂದೂ, ಪದ್ಯಕ್ಕಿಂತಲೂ ಗದ್ಯವೇ ಕಷ್ಟವೆಂದೂ ಅವರು ಯೋಚಿಸಿದ್ದಂತೆ ತೋರುವುದು. "ಗದ್ಯಂ ಕವೀನಾಂ ನಿಕಷಂ ವದಂತಿ"–ಗದ್ಯವು ಕವಿಸಾಮರ್ಥ್ಯವನ್ನು ತಿಳಿಯತಕ್ಕ ಒರೆಗಲ್ಲು—ಎಂದು ಮುಂತಾದ ಪ್ರಾಚೀನರ ವಾಕ್ಯಗಳು ಅವರ ಅಭಿ ಪ್ರಾಯವನ್ನು ಸೂಚಿಸುತ್ತವೆ.

ಇದರಿಂದ, ಸುಲಭವಾದ ಗದ್ಯಶೈಲಿಯು ಪ್ರಾಚೀನರಿಗೆ ಅಪರಿಚಿತವಾಗಿತ್ತೆಂದು ಅರ್ಥವಲ್ಲ; ಹುಟ್ಟಿದ್ದು ಹುಟ್ಟಿದಂತೆ ತೋರುವ ಸರಳಶೈಲಿಯು ಚಮತ್ಕಾರ ಜನಕವಲ್ಲ ವೆಂದೂ, ಗದ್ಯಕಾವ್ಯವು ಚಮತ್ಕಾರಗಳಿಂದ ತುಂಬಿ ತುಳುಕುತ್ತ, ಅಂಗಾಂಗಗಳಲ್ಲೆಲ್ಲ ಆಭರಣಗಳು ನಿಬಿಡವಾಗಿ ತುಂಬಿರುವ ಪ್ರತಿಮೆಯಂತೆ, ಉಗುರು ಊರುವುದಕ್ಕೂ ಸ್ಥಳವಿಲ್ಲದ ಹಾಗೆ ಸಣ್ಣ ಕೆತ್ತನೆಯ ಕೆಲಸಮಾಡಿದ ಕಟ್ಟಡದಂತೆ, ಇರಬೇಕೆಂದೂ ಅವರು ಯೋಚಿಸಿದ್ದಂತೆ ತೋರುತ್ತದೆ.

ಸುಲಭವಾದ ಗದ್ಯಶೈಲಿಗೆ 'ಚೂರ್ಣ'ವೆಂದು ಹೆಸರು. ಇದರಲ್ಲಿ ಪದಗಳು ಸಮಾಸವಾಗದೇ (ಅಥವಾ ದೊಡ್ಡ ಸಮಾಸಗಳಿರದೆ) ಬಿಡಿಬಿಡಿಯಾಗಿ ಇರುತ್ತವೆ. ಇದಕ್ಕೆ ವಿರುದ್ಧವಾಗಿ, ಸಮಾಸಗಳಿಂದ ತುಂಬಿ ಗಂಟುಗಂಟಾಗಿರುವುದು 'ಉತ್ಕಲಿಕಾಪ್ರಾಯ'. ಪದ್ಯರೂಪವಾಗಿ ಹೊರಟು ಮಧ್ಯೆ ಛಂದೋರೂಪಕ್ಕೆ ತಿರುಗಿ

ವೃತ್ತಪಾದಗಳೂ ಪಾದಭಾಗಗಳೂ ಆಗಿ ಪ್ರವಹಿಸುವ ಗದ್ಯಶೈಲಿಗೆ 'ವೃತ್ತಗಂಧಿ' ಎಂದು ಹೆಸರು.[1]

ಉದಾಹರಣೆ

**ಚೂರ್ಣ**

"ತೊಳಗಿ ಬೆಳಗುವ ರವಿಯ ಕಿರಣಂಗಳೆತ್ತಂ ಪೊಱೆಯೆ ಜಲದೊಳ್ ಮಾರ್ಪೊಳೆಯಲೊಡಂ ಪಾಲ್ಗೊಱೆಯೆನೆ ಗಂಗೆ ಪರಿಸುತಿರ್ಕುಂ. ನೇಸಱ ಕಾಯ್ಪಿನ ಸೂಡಿಂ ಬೆಂದು ಕುಂದಿ ನಂದಿ ಕಾಲ್ಗೆಟ್ಟು ಪವನನಾಗಳ್ ಬೆಚ್ಚನೆ ಬೀಸುತಿರ್ದಂ. ಗಂಗೆಯ ತಡಿಯೊಳಿರ್ಕೆಲನೊಳಂ ಬಿಸಿಲ ಜಳಕ್ಕೆ ನೀರಡಿಸಿ ಹರಿಣಗಣಂ ಬಂದು ನಿಂದು ಮುಂಗಾಲಂ ನೀರೊಳೂಱಿ ಪಿಂಗಾಲಂ ನೆಲದೆ ಪಿಂತಿಟ್ಟು ಮುಸುಂಡಂ ನೀಡಿ ಕಣ್ಮುಚ್ಚಿ ನೀರಂ ಕುಡಿದು ತಣಿದು ಮರಲ್ವುವು."

ರಾಮಾಶ್ವಮೇಧ ೩೫

**ಉತ್ಕಲಿಕಾಪ್ರಾಯ**

"ಅದೆಂತೆಂದೊಡೆ ........ ಕೀಲಾಲವಕ್ಷಸ್ಥಲಕೀಲಾಲನಪ್ಪೆನಗೆ ಕಾಕಪಕ್ಷಧಾರಿಯೊಳ್ ಸಾಮುವಪ್ಪುದಕಾರ್ಯಮುಂ, ಪ್ರಕಂಪನಜೀವಪ್ರಕಂಪನನಪ್ಪೆನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಮುಂ, ಪುರಮಥನಮಿತ್ರಪುರಮಥನನಪ್ಪೆನಗೆ ನವನೀತಚೋರನೊಳ್ ಪ್ರದಾನಮಪ್ರಯೋಜನಮುಂ, ಉಗ್ರಸಂಗ್ರಾಮೋಗ್ರನಪ್ಪೆನಗೆ ಗೋನಿಯೋಗದಂಡಧರನೊಳ್ ದಂಡಮಪಹಾಸ್ಯಮುಮಪ್ಪುದು."

—ಜಗನ್ನಾಥವಿಜಯ ೧೧೪

**ವೃತ್ತಗಂಧಿ**

ಪೆಱವರ ಕಿಡುದೆಸೆಯೊಳ್ ಕಡುಸಂತಸಕ್ಕೆಡೆಗುಡದಿರ್ ; ಸಗ್ಗಿಗರಾಣ್ಮನ ಘನಕರಿ ಘಟೆಗಳ್ ಬೇಸಗೆಯ ಬಿಸರಕ್ಕೆ ಬಸವಱಿದು....ಈವುಪಚಾರದಿನಾತನ ಪಸಿವುಂ ಬಱಲ್ಕೆಯುಂ ಮುಡಿಯೆ ಕೆಳದಿ ನಱುದಂಬುಲಮಂ ಸವಿಯಲ್ಕೆಂದು ಮಡಿದೀಯುತುಮಿರೆ ಇಂತು ಸುಖಸಲ್ಲಾಪಂಗೊಳುತಿರ್ದರ್. ಇಂತುಮಾಗಲೊಡಮೆಚ್ಚ ಮಾರ್ಗಣಂಗಳಂ ಮಾರ್ಗಣೆಗಳಿಂ ತುಂಡಿಸಿಯುಂ....ಚಿತ್ರಂ ಚಿತ್ರತರಮಾಗೆ ಕೈಗೆಯ್ಯುತಿರ್ದಂ. ಆದೊಡಮಿಾತಂಗೊಗೆತನದ ಗುಣ್ಪಿಂಗೆ ನೇರ್ಪಡುವೊಂದು ಬಱಿಯ ಬಳವಿಯ ಪುಟ್ಟೆನೊಂದು ಸೊಗಂ ತಾಱಿದುದು.

—ರಾಮಾಶ್ವಮೇಧ ೧-೩-೪-೧೨೨-೧೩೦

ಕಥೆಯನ್ನು ಹೇಳುವುದೂ, ಕೇಳುವುದೂ, ಆಬಾಲವೃದ್ಧರಿಗೂ ಇಷ್ಟವಾದದ್ದು. ಆದ್ದರಿಂದ ಇದು ಎಲ್ಲಾ ದೇಶದಲ್ಲಿಯೂ, ಕಾವ್ಯ ಹುಟ್ಟಿದಂದಿನಿಂದ, ಪ್ರಚಾರದಲ್ಲಿ

---

[1] ಕೆಲವರು ಮುಕ್ತಕ, ವೃತ್ತಗಂಧಿ, ಉತ್ಕಲಿಕಾಪ್ರಾಯ, ಚೂರ್ಣಕ ಎಂಪು ನಾಲ್ಕು ಭಾಗ ಮಾಡಿ, ಅವುಗಳಲ್ಲಿ ಮುಕ್ತಕವು ಸಮಾಸರಹಿತವಾದದ್ದೆಂದೂ ಚೂರ್ಣಕವು ಅಲ್ಪ ಸಮಾಸಕವೆಂದೂ ಹೇಳುತ್ತಾರೆ.

—ಸಾಹಿತ್ಯದರ್ಪಣ ೩೩೨

ದ್ದಂತೆ ತೋರುತ್ತದೆ. ಪಂಡಿತರಿಗೆ ಮಾತ್ರವಲ್ಲದೆ ಜನಸಾಮಾನ್ಯಕ್ಕೂ ತಿಳಿಸುವುದು ಕಥೆಗಾರನ ಉದ್ದೇಶವಾದ್ದರಿಂದ ಕಥೆಯನ್ನು ಗದ್ಯದಲ್ಲಿ ಬರೆಯುವುದು ಸಹಜವಾಗಿದೆ. ಹೀಗೆ ಸಂಸ್ಕೃತದಲ್ಲಿಯೂ ಹಿಂದೆ ಗದ್ಯದಲ್ಲಿ—ಮುಖ್ಯವಾಗಿ—ಕಥೆಗಳನ್ನು ಬರೆದಿದ್ದಂತೆ ತೋರುತ್ತದೆ. ವು ಆಖ್ಯಾಯಿಕೆ, ಕಥೆ, ಖಂಡಕಥೆ, ಪರಿಕಥೆ, ಕಥಾನಿಕೆ ಎಂಬಂತೆ ಐದು ವಿಧವಾಗಿದ್ದಂತೆ ಅಗ್ನಿಪುರಾಣವು ತಿಳಿಸುತ್ತದೆ.[2] ಆದರೆ ದಂಡಿಯು (1. ೨೩....) ಗದ್ಯಕಾವ್ಯವು ಆಖ್ಯಾಯಿಕೆ, ಕಥೆ ಎಂಬುದಾಗಿ ಎರಡು ವಿಧವೆಂದು ಹೇಳಿ ಕೊನೆಗೆ ಇವುಗಳಿಗೂ ಹೆಚ್ಚು ಭೇದವಿಲ್ಲವೆಂದೂ, ಎರಡೂ ಒಂದೇ ಎಂದೂ ತೋರಿಸಿ ಮಿಕ್ಕ "ಆಖ್ಯಾನಜಾತಿ"ಗಳೆಲ್ಲಾ ಇದರಲ್ಲಿಯೇ ಅಡಕವಾಗುವುವೆಂದು ಹೇಳಿದ್ದಾನೆ. ಈಗ ಇರುವ ಕಾದಂಬರೀ (ಕಥೆ) ಹರ್ಷಚರಿತ (ಆಖ್ಯಾಯಿಕೆ)ಗಳನ್ನು ನೋಡಿದರೆ ಅವರ ಕರ್ತೃಗಳು ಕಥೆ ಆಖ್ಯಾಯಿಕೆ ಇವುಗಳಿಗೆ ಇರಬೇಕಾದ ಸೂಕ್ಷ್ಮವೈಲಕ್ಷಣ್ಯಗಳನ್ನು ಎದುರಿಗೆ ಇಟ್ಟುಕೊಂಡು ಬರೆದಂತಿಲ್ಲ. ದಂಡಿಗೆ ಪರಿಚಿತವಾಗಿದ್ದ ಗದ್ಯಜಾತಿಯ ಗ್ರಂಥಗಳು ಈಗ ಸಂಸ್ಕೃತದಲ್ಲಿಯೂ ಇಲ್ಲದಿರುವುದರಿಂದಲೂ ಹಳಗನ್ನಡದಲ್ಲಿಯೂ ಈ ಲಕ್ಷಣಕ್ಕೆ ಸರಿಯಾದ ಉದಾಹರಣ ಗ್ರಂಥಗಳು ದೊರೆಯದಿರವುದರಿಂದಲೂ[3] ಇದರ ವಿಸ್ತೃತ ವಿಚಾರವು ಇಲ್ಲಿ ಅನಾವಶ್ಯಕ.

ಪದ್ಯಕಾವ್ಯಗಳಲ್ಲಿ ಸುಪ್ರಸಿದ್ಧವಾದದ್ದು ಮಹಾಕಾವ್ಯ; ಅದರಲ್ಲಿ ಆಶ್ವಾಸ ಸಂಧಿ ಮುಂತಾದ ವಿಭಾಗಗಳಿರುತ್ತವೆ; ಮೊದಲಲ್ಲಿ ಆಶೀರ್ವಾದ ನಮಸ್ಕಾರ ಅಥವಾ ವಸ್ತು ನಿರ್ದೇಶನವಿರುತ್ತದೆ; ಅದರ ವಸ್ತುವು (ಕಥಾಭಾಗವು) ಪುರಾಣೇತಿಹಾಸಗಳಿಂದಾಗಲಿ ಮತ್ತಾವುದಾದರೂ ಪ್ರಸಿದ್ಧವಾದ ಗ್ರಂಥದಿಂದಾಗಲಿ ತೆಗೆದುಕೊಂಡದ್ದು; ಚತುರ್ವಿಧ ಪುರುಷಾರ್ಥಪ್ರಾಪ್ತಿಯುಂಟುಮಾಡುವ ಉದ್ದೇಶವುಳ್ಳದ್ದು; ಚತುರನೂ ಉದಾತ್ತನೂ ಆದ ನಾಯಕನುಳ್ಳದ್ದು; ಪಟ್ಟಣ, ಸಮುದ್ರ, ಪರ್ವತ, ಋತು, ಚಂದ್ರೋದಯ, ಸೂರ್ಯೋದಯ, ಉದ್ಯಾನ, ಜಲಕ್ರೀಡೆ, ಮಧುಪಾನ, ಸಂಭೋಗ-ವಿಪ್ರಲಂಭ-ಶೃಂಗಾರ, ವಿವಾಹ, ಪುತ್ರೋತ್ಪತ್ತಿ, ಮಂತ್ರಾಲೋಚನೆ, ದ್ಯೂತ, ಪ್ರಯಾಣ, ಯುದ್ಧ, ನಾಯಕನ ಜಯಪ್ರಾಪ್ತಿ, ಈ ಹದಿನೆಂಟು ವಿಷಯಗಳ ವರ್ಣನೆಗಳಿಂದ ಕೂಡಿದ್ದು[4]; ವಸ್ತುವಿವರಣವು ಕೇವಲ ಸಂಕ್ಷೇಪ

[2] ೩೩೬-೧೨.

[3] ಹಳಗನ್ನಡದಲ್ಲಿ ಚಾವುಂಡರಾಯಪುರಾಣ, ಚಿಕ್ಕದೇವರಾಯವಂಶಾವಳಿ ಈ ಗದ್ಯಗ್ರಂಥಗಳಿದ್ದರೂ ಇವುಗಳಲ್ಲಿ ಮೇಲೆ ಹೇಳಿರುವ ಲಕ್ಷಣಗಳಲ್ಲಿ ಯಾವುದೂ ಸಮನ್ವಯವಾಗುವುದಿಲ್ಲ.

[4] ವಾರಿಧಿ ಪರ್ವತಂ ಪುರಮಧೀಶ್ವರನುದ್ವಹನಂ ಕುಮಾರನಂ
ಭೋರುಹವೈರಿಮಿತ್ರರುದಯಂ ಋತು ನಂದನಮಂಬು ಸೀಧು ಕಾಂ ॥
ತಾರತಿ ಚಿಂತೆ ಮಂತ್ರಚರಯಾನವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್ ॥

—ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವ

ವಾಗಿರದೆಯೂ ಆಶ್ವಾಸಾದಿ ವಿಭಾಗಗಳು ಕೇವಲ ವಿಸ್ತಾರವಾದವುಗಳಲ್ಲದೆಯೂ ಇರತಕ್ಕದ್ದು. ಶ್ರಾವ್ಯವಾದ ವೃತ್ತಗಳಿಂದಲೂ ಒಳ್ಳೆಯ ಸಂಧಿ[5]ಗಳಿಂದಲೂ ಕೂಡಿದ್ದು; ಆಶ್ವಾಸಾಂತ್ಯದಲ್ಲಿ ಬೇರೆ ವೃತ್ತವುಳ್ಳದ್ದು; ಅಲಂಕಾರಗಳಿಂದ ಯುಕ್ತವಾದದ್ದು.

ವರ್ಣಿಸಿರುವಷ್ಟು ಅಂಶಗಳು ಸಹೃದಯಾನಂದದಾಯಕವಾಗಿದ್ದರೆ, ಮೇಲಿನ ಅಂಶಗಳಲ್ಲಿ ಕೆಲವು ಇಲ್ಲದಿದ್ದರೂ ಬಾಧಕವಿಲ್ಲ. ನಾಯಕನಾದವನ ಅಭ್ಯುದಯವನ್ನು ಎರಡು ವಿಧದಲ್ಲಿ ಪ್ರತಿಪಾದಿಸಬಹುದು-ನಾಯಕನ ಗುಣಗಳನ್ನು ಸಾಕ್ಷಾತ್ತಾಗಿ ವರ್ಣಿಸಬಹುದು; ಇಲ್ಲವೆ, ಅವನ ಶತ್ರುವಿನ ಮಹತ್ವವನ್ನು ತಿಳಿಸಿ ಅಂಥವನನ್ನು ನಾಯಕನು ಗೆದ್ದನೆಂದು ವರ್ಣಿಸಬಹುದು. ಇವುಗಳಲ್ಲಿ ಮೊದಲನೆಯದು 'ಪ್ರಕೃತಿ ಸುಂದರ.'

ಈಚಿನ ಆಲಂಕಾರಿಕರು ಇವುಗಳಲ್ಲಿ ಕೆಲವು ಅಂಶಗಳನ್ನು ಸ್ವಲ್ಪ ವ್ಯತ್ಯಾಸಪಡಿಸಿ, ಜೊತೆಗೆ ಮತ್ತೆ ಕೆಲವು ಅಂಶಗಳನ್ನು ಸೇರಿಸಿರುತ್ತಾರೆ:

ಇದರ ನಾಯಕನು ಒಬ್ಬ ದೇವತೆಯಾಗಲಿ ಧೀರೋದಾತ್ತನಾದ ಕ್ಷತ್ರಿಯನಾಗಲಿ ಆಗಿರುತ್ತಾನೆ; ಒಂದೇ ವಂಶದಲ್ಲಿ ಹುಟ್ಟಿದ ಅನೇಕ ರಾಜರು ಬೇಕಾದರೂ ಇರಬಹುದು. ಶೃಂಗಾರ ವೀರ ಅಥವಾ ಶಾಂತ ಈ ಮೂರರಲ್ಲಿ ಯಾವುದಾದರೂ ಒಂದು ರಸವು ಪ್ರಧಾನವಾಗಿಯೂ ಇತರ ರಸಗಳು ಅದಕ್ಕೆ ಅಂಗವಾಗಿಯೂ ಇರುತ್ತವೆ. ಕೆಲವು ವೇಳೆ ದುರ್ಜನರ ದೂಷಣವೂ ಸಜ್ಜನರ ಗುಣಕೀರ್ತನವೂ ಬರುತ್ತದೆ—ಇತ್ಯಾದಿ.

(ಸಾಹಿತ್ಯದರ್ಪಣ VI, ೩೧೫-೩೨೪).

ಗದ್ಯಪದ್ಯಗಳೆರಡೂ ಇರತಕ್ಕ 'ಮಿಶ್ರ'ಕಾವ್ಯವು 'ಚಂಪು' ಎನ್ನಿಸುತ್ತದೆ. ನಾಟಕಾದಿ ದೃಶ್ಯಪ್ರಬಂಧಗಳಲ್ಲಿಯೂ ಗದ್ಯಪದ್ಯಗಳೆರಡೂ ಬರುವುದರಿಂದ ಇವುಗಳನ್ನೂ ಮಿಶ್ರಕಾವ್ಯಗಳಲ್ಲಿಯೇ ಸೇರಿಸಬಹುದು.

ಕಾವ್ಯಗಳನ್ನು ದೃಶ್ಯಗಳೆಂದೂ ಶ್ರವ್ಯವೆಂದೂ ಭಾಗಮಾಡುವುದು ಎರಡನೆಯ ಕ್ರಮ. 'ದೃಶ್ಯ'ಕ್ಕೆ 'ಅಭಿನೇಯ'ವೆಂದೂ ಹೆಸರು. ನಾಟಕಾದಿ ರೂಪಕಗಳು 'ದೃಶ್ಯ'ವೆನಿಸುತ್ತವೆ. ಇವುಗಳನ್ನು ಮಹಾಕಾವ್ಯದಂತೆ ಓದಿಯೂ ಕೇಳಿಯೂ ಸಂತೋಷಪಡಬಹುದು. ಆದರೆ ಇವನ್ನು ದೃಶ್ಯವೆಂದೇ ಹೇಳಿರುವುದರಿಂದ, ಇವು ಅಭಿನಯಿಸಲ್ಪಡತಕ್ಕವುಗಳೆಂದೂ, ಅಭಿನಯಿಸಲ್ಪಟ್ಟಾಗಲೇ ಇವುಗಳ ಯೋಗ್ಯತೆ ಗೊತ್ತಾಗುವುದೆಂದೂ ಆಲಂಕಾರಿಕರ ಅಭಿಪ್ರಾಯವಾಗಿರುವಂತೆ ತೋರುತ್ತದೆ.

---

[5] ೧. ಒಂದು ಸರ್ಗದ ಕೊನೆಯಲ್ಲಿ ಮುಂದಿನ ಸರ್ಗದ ಸೂಚನೆಯುಳ್ಳದ್ದು.

೨. ಮುಖಾದಿ ನಾಟಕ ಸಂಧಿಗಳುಳ್ಳದ್ದು. ೩. ಶ್ರಾವ್ಯವಾದ (ಕಿವಿಗೆ ಹಿತವಾದ) ಸಂಧಿಗಳುಳ್ಳದ್ದು—ಎಂದು ಮುಂತಾಗಿ 'ಸುಸಂಧಿಭಿಃ' ಎಂಬುದಕ್ಕೆ ಅರ್ಥಮಾಡುತ್ತಾರೆ. ಆದರೆ ಕಾವ್ಯಕಥೆಯು ಬೇರೆ ಬೇರೆ ಭಾಗಗಳು ಒಂದಕ್ಕೊಂದಕ್ಕೆ ಸಂಬಂಧವಿಲ್ಲದಂತಿರದೆ ಸುಸಂಬದ್ಧವಾಗಿರಬೇಕೆಂಬುದೇ ದಂಡಿಯ ಆಶಯವೆಂದು ತೋರುತ್ತದೆ.

'ಶ್ರವ್ಯ'ವೆಂದರೆ ಕೇಳುವುದಕ್ಕೆ ಅನುಕೂಲವಾದವುಗಳು. ಮಹಾಕಾವ್ಯ, ಖಂಡ ಕಾವ್ಯ[6] ಕಥೆ ಮುಂತಾದ ಗ್ರಂಥಗಳೆಲ್ಲಾ ಈ ಪಂಗಡಕ್ಕೆ ಸೇರುತ್ತವೆ. ರೂಪಕ ವಿಚಾರವು ಹೆಚ್ಚಾಗಿರುವುದರಿಂದ ಮುಂದೆ ಒಂದು ಅಧ್ಯಾಯವು ಅದಕ್ಕೇ ಕೊಡಲ್ಪಟ್ಟಿದೆ.

ಆನಂದವರ್ಧನಾಚಾರ್ಯರು ಧ್ವನ್ಯಾಲೋಕವನ್ನು ಬರೆದು ಧ್ವನಿಗೆ ಪ್ರಾಶಸ್ತ್ಯ ಕೊಟ್ಟನಂತರ ನವೀನಾಲಂಕಾರಿಕರು ಕಾವ್ಯದಲ್ಲಿ ಧ್ವನಿತಾರ್ಥಕ್ಕೆ ಇರುವ ಪ್ರಾಧಾನ್ಯದ ಮೇಲೆ ಕಾವ್ಯಗಳನ್ನು ವಿಭಾಗಮಾಡಿರುತ್ತಾರೆ. ಒಂದು ಕಾವ್ಯದಲ್ಲಿ ವಾಚ್ಯಕ್ಕಿಂತಲೂ ವ್ಯಂಗ್ಯಾರ್ಥವೇ ಅತಿಶಯವಾಗಿದ್ದರೆ ಆ ಕಾವ್ಯವು 'ಧ್ವನಿಕಾವ್ಯ' ಅಥವಾ 'ಉತ್ತಮ ಕಾವ್ಯ'ವಾಗುವುದು. ವ್ಯಂಗ್ಯಾರ್ಥವಿದ್ದು ಅದಕ್ಕಿಂತ ವಾಚ್ಯವೇ ಅತಿಶಯವಾಗಿದ್ದರೆ 'ಗುಣೀಭೂತವ್ಯಂಗ್ಯ' ಅಥವಾ 'ಮಧ್ಯಮಕಾವ್ಯ'ವಾಗುವುದು; ವ್ಯಂಗ್ಯಾರ್ಥವೇ ಇಲ್ಲದೆ ಇದ್ದರೆ 'ಚಿತ್ರ' ಅಥವಾ 'ಅಧಮಕಾವ್ಯ' ವಾಗುವುದು. ಈ ಧ್ವನಿಕಾವ್ಯದಲ್ಲಿ ಧ್ವನಿಯು ರಸರೂಪವಾಗಿಯೂ, ಅಲಂಕಾರಿಕವಾಗಿಯೂ, ವಸ್ತುರೂಪವಾಗಿಯೂ ಇರುತ್ತದೆ.

ಸಂಸ್ಕೃತ ಸಾಹಿತ್ಯವೂ ಅದರ ಪದ್ಧತಿಯೂ ಪ್ರಾಬಲ್ಯಕ್ಕೆ ಬರುವುದಕ್ಕೆ ಮುಂಚೆ ಶುದ್ಧ ಕನ್ನಡ ಸಂಪ್ರದಾಯದಲ್ಲಿ ಕನ್ನಡ ಸಾಹಿತ್ಯವು ಹುಟ್ಟಿ ಬೆಳೆದು ಬಂದಿತ್ತೇ ?— ಇದು ತಿಳಿಯುವುದು ಕಷ್ಟ. ಅಂತು ಈಗ ಇರುವ ಹಳಗನ್ನಡ ಗ್ರಂಥಗಳು, ಅದರಲ್ಲಿಯೂ ಪ್ರೌಢವಾದ ಪ್ರಾಚೀನ ಕಾವ್ಯಗಳು, ಸಂಸ್ಕೃತ ಮಾರ್ಗವನ್ನು ಅನುಸರಿಸಿಯೇ ಬರೆದವುಗಳು. ಆಲಂಕಾರಿಕರು ಕಾವ್ಯದಲ್ಲಿ ರಸ ಧ್ವನಿ ಮುಂತಾದ ಯಾವ ಅಂಶಕ್ಕೇ ಪ್ರಾಧಾನ್ಯವನ್ನು ಹೇಳುತ್ತಿರಲಿ, ನೃಪತುಂಗನ ಕಾಲಕ್ಕೆ ಹಿಂದೆಯೇ ಸಂಸ್ಕೃತ ಕವಿಗಳು ಚಮತ್ಕಾರಪ್ರಿಯರಾಗಿ ಬಾಣನ ಕಾವ್ಯಗಳಿಗೆ ಅಗ್ರಸ್ಥಾನವನ್ನು ಕೊಟ್ಟು "ಬಾಣೋಚ್ಛಿಷ್ಟಂ ಜಗತ್ಸರ್ವಂ" ಎಂದು ಹೇಳುತ್ತಿದ್ದರು. ಕನ್ನಡಿಗರೂ ಇವರ ಮಾರ್ಗವನ್ನೇ ಅನುಸರಿಸಿ ಪಂಡಿತರಂಜಕವಾದ ಘನವಾದ ಚಂಪೂಕಾವ್ಯಗಳನ್ನು ಬರೆದರು. ಸಂಸ್ಕೃತ ಸಾಹಿತ್ಯದಲ್ಲಿ ನಾಟಕಕ್ಕೆ ಮೊದಲಿನಿಂದಲೂ ಪ್ರಾಧಾನ್ಯ ಬಂದಿದ್ದರೂ[7] ಅಲ್ಲಿ ಸುಪ್ರಸಿದ್ಧ ನಾಟಕಗಳೆಲ್ಲವೂ ಈ ಕಾಲಕ್ಕೆ ಹಿಂದೆಯೇ ಬರೆಯಲ್ಪಟ್ಟಿದ್ದವು. ಆಗ ನಾಟಕದಲ್ಲಿ ಜನರಿಗೆ ವಿಶೇಷ ಅಭಿರುಚಿ ಇದ್ದಂತೆ ತೋರುವುದಿಲ್ಲ. ಇದ್ದದ್ದೆಲ್ಲಾ ಮಹಾಕಾವ್ಯ. ಇದರಿಂದಲೇ ಕನ್ನಡ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದವರೆಗೆ ಕಂಡುಬರುವುದು ಮುಖ್ಯವಾಗಿ

---

6 ಆಶ್ವಾಸಾದಿ ವಿಭಾಗಮಾಡುವಷ್ಟು ದೊಡ್ಡದಾಗಿಲ್ಲದ ಕಾವ್ಯ.
ಉದಾಹರಣೆ : ಕಬ್ಬಿಗರ ಕಾವ.

7 "ಸಂದರ್ಭೇಷು ದಶರೂಪಕಂ ಶ್ರೇಯಃ"—ವಾಮನ.
"ಕಾವ್ಯೇಷು ನಾಟಕಂ ರಮ್ಯಂ."

ಮಹಾಕಾವ್ಯವೇ. ರತ್ನಾವಳಿಯ ಪರಿವರ್ತನೆಯೆನಿಸುವ 'ಮಿತ್ರವಿಂದಾಗೋವಿಂದ'ವನ್ನು ಬಿಟ್ಟರೆ ಹಿಂದಿನ ಕನ್ನಡ ಸಾಹಿತ್ಯದೊಳಗಾಗಿ ಒಂದು ನಾಟಕವೂ ಸಿಕ್ಕಿಲ್ಲ.

ಆದರೂ ಶುದ್ಧದ್ರಾವಿಡಪದ್ಧತಿಯೊಂದು ಮೊದಲಿಂದಲೂ ಸೂಕ್ಷ್ಮವಾದ ರೀತಿಯಲ್ಲಿ ಇದ್ದಿರಬೇಕೆಂದು ಊಹಿಸಬಹುದು. ಸಂಸ್ಕೃತದಲ್ಲಿಲ್ಲದ 'ಅಕ್ಕರ' ಮುಂತಾದ ಕೆಲವು ವೃತ್ತಗಳೂ ದಶಾವತಾರದ ಆಟಗಳು (ಬೈಲಾಟ) ಮುಂತಾದ ರೂಪಕಗಳೂ ಇಂದಿಗೂ ಕನ್ನಡದಲ್ಲಿ ಇರುವುದು ಇದಕ್ಕೆ ಒಂದು ನಿದರ್ಶನವಾಗಿದೆ. ನೃಪತುಂಗ ನಾಗವರ್ಮರು ಚತ್ತಾಣ, ಬೆದಂಡೆಗಬ್ಬ, ಪದ, ಮೆಲ್ವಾಡು, ಬಾಜನೆಗಬ್ಬ, ಪಾಡುಗಬ್ಬ ಎಂಬ ಕಾವ್ಯಭೇದಗಳಿರುವುದಾಗಿ ಹೇಳುತ್ತಾರೆ. ಇವುಗಳಲ್ಲಿ ಕೆಲವಾದರೂ ಶುದ್ಧ ಕನ್ನಡ ಜಾತಿಗಳೆಂದು ತೋರುತ್ತದೆ.

ಇವುಗಳ ಲಕ್ಷಣವೇನೆಂದರೆ :

1. **ಚತ್ತಾಣ**

ಕಂದಂಗಳ್ ಪಲವಾಗಿರೆ
ಸುಂದರವೃತ್ತಂಗಳಕ್ಕರಂ ಚವುಪದಿ ಮು |
ತ್ತಂ ದಲ್ಗೀತಿಕೆ ತಿವದಿಗ
ಳಂದಂಬೆತ್ತೆಸೆಯೆ ಪೇೞ್ದೊಡದು **ಚತ್ತಾಣಂ** ||

—ಕವಿರಾಜಮಾರ್ಗ I, ೩೫

2. **ಬೆದಂಡೆಗಬ್ಬ**

ಕಂದಮುಮಮಳಿನ ವೃತ್ತಮು
ಮೊಂದೊಂದೆಡೆಗೊಂದು ಜಾತಿ ಜಾಣೆಸೆಯೆ ಬೆಡಂ |
ಗೊಂದಿವಱೊಳಮರೆ ಪೇೞಲ್
ಸುಂದರರೂಪಿಂ **ಬೆದಂಡೆಗಬ್ಬ**ಮದಕ್ಕುಂ ||

—ಕವಿರಾಜಮಾರ್ಗ,I, ೩೪

3-4. **ಪದ, ಮೆಲ್ವಾಡು**

ಸಂದಿಸಿರೆ ಕಂದಮುಂ ಪೆಱ
ತೊಂದಱಿಕೆಯ ವೃತ್ತಜಾತಿಯುಂ **ಪದ**ಮವು ತ |
ಳ್ತೊಂದಿರೆ ಪನ್ನೆರಡುವರಂ
ಸಂದುದು **ಮೆಲ್ವಾಡೆ**ನಿಕ್ಕುಮದು ಕನ್ನಡದೊಳ್ ||

—ಕಾವ್ಯಾವಲೋಕನ ೯೫೨

5. **ಪಾಡು**

ಪದಿನಯ್ದು ಮಿರ್ಪತಯ್ದುಂ
ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್ |

ಪುದಿದೊವಿ ನೆಗೞ್ದೊಪ್ಪಂತದು
ಸವಲಂಕಾರಂ ರಸಾಸ್ಪದಂ **ಪಾಡಕ್ಕುಂ** ||

—ಕಾವ್ಯಾವಲೋಕನ ೯೫೨

### 6. ಪಾಡುಗಬ್ಬ

ಪಾಡುಗಳಿಂದಂ ತಱಿಸಲೆ
ಮಾಡಿದುದಂ **ಪಾಡುಗಬ್ಬ**ಮೆಂದು ಬುಧರ್ ಕೊಂ
ಡಾಡುವರದಱಿಂ ದಲ್ ಮೆ
ಲ್ಪಾಡುಂ ರೂಢಿಯ ಬೆದಂಡೆಗಬ್ಬಮುಮಕ್ಕುಂ ||

—ಕಾವ್ಯಾವಲೋಕನ ೯೫೪

### 7. ಬಾಜನೆಗಬ್ಬ

ಪಲತೆಱದ ಪದ್ಯದಿಂದಂ
ಲಲಿತವಚೋರಚನನಿಚಯಪದ್ಧತಿಕೆಗಳಿಂ |
ಸಲೆ ನಿಲೆ ಸಮೆದುದು ಸರಸಾ
ಖಿಲವರ್ಣನಮಾದೊಡದುವೆ **ಬಾಜನೆಗಬ್ಬಂ** ||

—ಕಾವ್ಯಾವಲೋಕನ ೯೫೫

ಕನ್ನಡದ ವೃತ್ತಗಳಲ್ಲಿಯೇ ಬರೆಯಲ್ಪಟ್ಟಿರುವ ನಾನಾ ವಿಧವಾದ ಹಾಡುಗಳೂ ದೇವರನಾಮಗಳೂ ಕೀರ್ತನೆಗಳೂ (ಸಾಂಗತ್ಯ, ಷಟ್ಪದಿ, ಚೌಪದಿ ಇತ್ಯಾದಿ) ಇಂದಿಗೂ ಜನರ ಬಾಯಲ್ಲಿ ಕೇಳಬರುತ್ತವೆ. ಹನ್ನೆರಡನೆಯ ಶತಮಾನದಿಂದೀಚೆಗೆ ವೀರಶೈವರಲ್ಲಿ 'ವಚನಗಳು' ಎಂಬುದೊಂದು ಸಾಹಿತ್ಯವಿಶೇಷವು ಪ್ರಚಾರಕ್ಕೆ ಬಂತು. ಇದು ಗದ್ಯ ; ಆದರೂ ಅದನ್ನು ಹೇಳುತ್ತಿದ್ದರೆ ಯಾವುದೋ ಒಂದು ಜಾತಿಯ ವೃತ್ತವಲ್ಲಿರುವಂತೆ ತೋರುವುದು. ಪದಗಳ ಜೋಡಣೆಯೂ ಅವುಗಳನ್ನು ಹೇಳುವ ಕ್ರಮವೂ ಒಂದು ವಿಧದಲ್ಲಿ ಶ್ರಾವ್ಯವಾಗಿರುವುವೆಂದೇ ಹೇಳಬೇಕು. ಪ್ರತಿಪಾದ್ಯ ವಿಷಯವು ಸಾಮಾನ್ಯವಾಗಿ ಆಮುಷ್ಮಿಕ ವಿಚಾರ; ಹೇಳಿಸಿಕೊಳ್ಳುವಂಥ ರಸವೇನೂ ಕಂಡುಬರುವುದಿಲ್ಲ. ಇಂಥ ಗ್ರಂಥಗಳಿಗೆ ಮತ್ತೊಂದು ವಿಭಾಗವು ಇಲ್ಲದ್ದರಿಂದ ಇದನ್ನು 'ಗದ್ಯಕಾವ್ಯ'ದಲ್ಲಿಯೇ ಸೇರಿಸಬೇಕೆಂದು ತೋರುತ್ತದೆ.

ಕೆಲವು ಕನ್ನಡ ಕವಿಗಳೂ ಆಲಂಕಾರಿಕರೂ 'ವಸ್ತುಕ' 'ವರ್ಣಕ' ಎಂಬ ಎರಡು ಕಾವ್ಯಭೇದಗಳನ್ನು ಹೇಳಿದ್ದಾರೆ. ಮುಂದೆ ಅನುವಾದ ಮಾಡುವ ಗ್ರಂಥಭಾಗಗಳನ್ನು ನೋಡಿದರೆ, ಸಂಸ್ಕೃತಛಂದೋಲಕ್ಷಣವನ್ನೂ ಸರಣಿಯನ್ನೂ ಅನುಸರಿಸಿ ಬರೆದಿರುವ ಗದ್ಯ ಪದ್ಯಾತ್ಮಕವಾದ ಕಾವ್ಯಕ್ಕೆ 'ವಸ್ತುಕ'ವೆಂದೂ, ಯಾವುದೊಂದು ವಿಶೇಷಕಾವ್ಯಲಕ್ಷಣವನ್ನಾಗಲಿ ಸಂಸ್ಕೃತಕಾವ್ಯದ ಸರಣಿಯನ್ನಾಗಲಿ ಇಟ್ಟುಕೊಳ್ಳದೆ ಬರೆದಿರುವ ಪದ್ಯಕಾವ್ಯಕ್ಕೆ 'ವರ್ಣಕ'ವೆಂದೂ ಹೆಸರು ಸಲುವಂತೆ ಹೇಳಬೇಕಾಗುತ್ತದೆ.

1. . . . . ಕರ್ಣಾಟಕವ್ಯಾಕರಣಛಂದಸ್ಸಲಂಕಾರಶಬ್ದಂಗಳ |
ಅನುಗೊಳಿಸಿ ವರ್ಣಕಕ್ಕಿಲ್ಲ ಲಕ್ಷಣವೆಂಬ
ಜನರ ನಾಣ್ಣುಡಿಯನಲ್ಲೆನಿಸಿ ಪೇಳ್ದಂ ವಿನೂ
ತನಕಾವ್ಯಮಂ ಜಗತ್ಸೇವ್ಯಮಂ ಕಿವಿಗೊಟ್ಟು ಕೇಳ್ವುದೆಲ್ಲಾ ಸುಜನರು ||

—ಚೆನ್ನಬಸವಪುರಾಣ ೧-೧-೨೮

2. ಸರಸಮೃದುಮಧುರೋಪಮೆಗಳಂ
ಕುರಿಸೆ ವಸ್ತುಕವರ್ಣಕಂಗಳ
ನೆರಪಿ ಹರನಂ ಹರಗಣಂಗಳನೈದೆ ಕೀರ್ತಿಸಿದ |
ಧರೆಗುಭಯಕವಿಶರಭಭೇರುಂ
ಡರ ಸುಕವಿಹರಿಬುಧವರನ ತ
ದ್ವರಸುತನ ರಾಘವನ ಕೃಪೆಯಿಂ ರಚಿಸುವೆಂ ಕೃತಿಯ ||

—ಬಸವಪುರಾಣ ೨-೧೧

ಪ್ರಾಸಯುತಿಗಣಗದ್ಯಪದ್ಯಸ
ಮಾಸಯುತವಸ್ತುಕದ ಮುಂದೆ ವಿ
ಳಾಸಮೇ ಸಾಮಾನ್ಯವರ್ಣಕವೀಕವಿತೆಯೆಂದು |
ಓಸರಿಸದಿರಿ ಬರಿಯ ಕನ್ನಡ
ದಾಸೆಯೆಂದೆನಲಾಗದಿಳೆಗಿದು
ಲೇಸೆನಿಪ ವೇದಪ್ರಮಾಣವೆನಿಪ್ಪುದೆಂತೆನಲು ||

—ಬಸವಪುರಾಣ ೨-೨೧

3. ಪದಿನೈದನೆಯದಿದೆನಿಸುವ
ಮದನಾರಿಯ ಶಬರಲೀಲೆಯಂ ವಸ್ತುಕಮಾ |
ರ್ಗದೊಳೊರೆದೆಂ ಕೈಗೊಳ್ವುದು
ಸದಮಲಮೃಡಭಕ್ತರೆನಿಪ ವಿಬುಧರ್ ಧರೆಯೊಳ್ ||

—ಶಬರಶಂಕರವಿಲಾಸ ೫-೫೯

4. ಅದನಾ ಭೀಮಕವೀಶ್ವರಂ ನೆಗಳ್ದನಾದಂ ವರ್ಣಕಪ್ರೌಢಿಯಿಂ ||

—ವೃಷಭೇಂದ್ರವಿಜಯ ೧-೨೮

5. ಆ ಕಥೆಯಂ ಕೃತಾರ್ಥಸುಮನೋಲತೆಯಂ ಪರಮಲ್ಲಣಾರ್ಯರು
ಶ್ರೀಕವಿರಾಜನುತಮಾಗಿರೆ ವರ್ಣಕದಿಂದೆ ಭಾವರ

ತ್ನಾಕರವಾಗಿ ಪೇಳ್ದರದನೊಪ್ಪಿರೆ ವಸ್ತುಕವಾಗಿ ಪೇಳ್ವುದಾ
ಲೋಕಿತಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜದಿಂ ||

—ರಾಜಶೇಖರವಿಲಾಸ ೧–೭೮

6. ಇದರ್ಕೆ ವಸ್ತುಕವೆಂದುಂ ಚಂಪುವೆಂದುಂ ಪೆಸರ್.

—ಅಪ್ರತಿಮವೀರಚರಿತ ಪುಟ ೭

ನಾಗವರ್ಮನು

ನಗರಾರ್ಣವಸರಿದಟವೀ
ನಗಚಂದ್ರಾರ್ಕೋದಯರ್ತುಸಲಿಲಕ್ರೀಡಾ |
ದಿಗಳಾದಿಯಾಗೆ ಸರಸೋ
ಕ್ತಿಗಳಿಂ ವರ್ಣಿಸುಗೆ ವರ್ಣಕಂಗಳನದಱೊಳ್ ||

—ಕಾವ್ಯಾವಲೋಕನ ಸೂತ್ರ ೩೪೫

ಎಂದು ಹೇಳಿದ್ದಾನೆ. ಇದನ್ನು ನೋಡಿದರೆ ಅವನು ಇಲ್ಲಿ 'ವರ್ಣಕ' ಎಂಬ ಶಬ್ದವನ್ನು 'ವರ್ಣನೀಯಾಂಶ' ಎಂಬರ್ಥದಲ್ಲಿ ಉಪಯೋಗಿಸಿದಂತಿದೆ.

ಸಾಳ್ವನು ತನ್ನ ಭಾರತವನ್ನು

ಱಟಿಕುಳ . . . . ಶಿಥಿಲಗಳ |
ಪಟಿಯುನೇನುಂ ಪಾಡುಗವಿತೆಗ
ಳೊಳು ವಿಚಾರಿಸಸಲ್ಲದೆಂಬ
ಗ್ಗಳದ ಪಟಿಗಬ್ಬಿಗರ ಪೇಟ್ಕೆಯ ತೆಱದಿ . . . . ||

ವಿರಚಿಸಿದಂತೆ ಹೇಳಿದ್ದಾನೆ. ಇದನ್ನು ಮೇಲೆ ಉಕ್ತವಾದ ಚೆನ್ನಬಸವಪುರಾಣದ ವಾಕ್ಯದೊಡನೆ ಹೋಲಿಸಿ ನೋಡಿನರೆ ಮಿಕ್ಕವರು ವರ್ಣಕವೆಂದು ಹೇಳಿದುದನ್ನೇ ಇವನು ಪಾಡುಗವಿತೆಯೆಂದು ಹೇಳಿರುವಂತೆ ತೋರುತ್ತದೆ. ಇದರಂತೆ ನೃಪತುಂಗ ನಾಗವರ್ಮರು ಹೇಳಿರುವ ಪಾಡು, ಮೆಲ್ವಾಡು, ಬೆದಂಡೆಗಬ್ಬ ಮುಂತಾದುವುಗಳೂ ವರ್ಣಕಗಳೇ ಆಗಬಹುದು.

'ವಸ್ತುಕ' 'ವರ್ಣಕ' ಎಂಬಿವು ಸಂಸ್ಕೃತಶಬ್ದಗಳು. ಆದರೂ ಸಂಸ್ಕೃತ ಆಲಂಕಾರಿಕರು ಯಾರೂ ಈ ಕಾವ್ಯಭೇದಗಳನ್ನು ಹೇಳಿಲ್ಲ. ಈ ಶಬ್ದಸ್ವರೂಪಗಳನ್ನು ನೋಡಿದರೆ, (ಕಥಾ)ವಸ್ತುಪ್ರಧಾನವಾದದ್ದು ವಸ್ತುಕವೆಂದೂ, ವರ್ಣನಾಪ್ರಧಾನ ವಾದದ್ದು ವರ್ಣಕವೆಂದೂ ಹೇಳಬೇಕೆನಿಸುತ್ತದೆ. ಆದರೆ ಈ ಲಕ್ಷಣಗಳು ಎಲ್ಲಿಯೂ ಉಕ್ತವಾಗಿಲ್ಲ. ಅಲ್ಲದೆ ಷಡಕ್ಷರಿ ಮುಂತಾದವರಿಂದ ವಸ್ತುಕ ವರ್ಣಕಗಳೆಂದು ನಿರ್ದಿಷ್ಟವಾದ ಗ್ರಂಥಗಳಲ್ಲಿ ಈ ಲಕ್ಷಣವು ಸಮನ್ವಯವಾಗುವುದಿಲ್ಲ — ಅದಕ್ಕೆ

ಬದಲಾಗಿ ಕೇವಲ ವಿರುದ್ಧವೇ ಆಗುತ್ತದೆ. ಅಸ್ರುತಿಮವೀರಚರಿತಕಾರನು ವಸ್ತುಕ ವೆಂದರೆ ಚಂಪೂಕಾವ್ಯವೆಂದು ಸ್ಪಷ್ಟವಾಗಿಯೇ ಹೇಳಿಬಿಟ್ಟಿದ್ದಾನೆ.

ಹಾಗಾದರೆ, ಇವು ಚಂಪೂಕಾವ್ಯ ಪದ್ಯಕಾವ್ಯವೆಂದು ಅರ್ಥಕೊಡುವಂತಾದದ್ದು ಹೇಗೆ ? ಇದು ಗೊತ್ತಾಗುವಂತಿಲ್ಲ. ಷಟ್ಪದಿ ಮುಂತಾದ ಕನ್ನಡವೃತ್ತಗಳೆಲ್ಲವೂ ಹಾಡು ವುದಕ್ಕೆ ಅನುಕೂಲವಾದವು. ಇಂದಿಗೂ ಅವನ್ನು ಜನರು ಹಾಡುತ್ತಿರುವುದು ಕಂಡು ಬರುತ್ತಿದೆ. ಈಗಲೂ 'ಪದ'[3] ಎಂಬ ಶಬ್ದವು 'ಹಾಡು' ಎಂಬ ಅರ್ಥದಲ್ಲಿ ಕೆಲವು ಕಡೆ ರೂಢಿಯಾಗಿರುವಂತೆ ('ವರ್ಣ' ಅಥವಾ) 'ವರ್ಣಕ' ಎಂಬ ಶಬ್ದವೂ 'ಹಾಡು' ಎಂಬ ಅರ್ಥದಲ್ಲಿ ಹಿಂದೆ ರೂಢವಾಗಿದ್ದಿರಬಹುದು. ಸಂಗೀತದಲ್ಲಿ 'ವರ್ಣ' ಎಂಬ ಭೇದವಿದೆ. 'ಸೊಬಗಿನ ಸೋನೆಯ ಹಾಡು' ಎಂಬುದಕ್ಕೆ ಬದಲಾಗಿ 'ಸೊಬಗಿನ ಸೋನೆಯ ವರ್ಣ' ಎಂದು ಮುಂತಾಗಿ ಹಿಂದಿನ ಯಕ್ಷಗಾನಗ್ರಂಥಗಳಲ್ಲಿ ಕಂಡುಬರುತ್ತದೆ. ಹೀಗೆ ವರ್ಣ (ಕ)ಕ್ಕೂ ಪದ್ಯ ಹಾಡುಗಳಿಗೂ ಸಂಬಂಧವಿರುವಂತಿದೆ. ಆದರೆ ಇದರಂತೆ 'ವಸ್ತುಕ'ವೆಂಬುದು ಚಂಪೂಕಾವ್ಯವೆಂದು ಹೇಗೆ ಅರ್ಥ ಕೊಡುವಂತಾಯಿತೆಂದು ಊಹಿಸುವುದಕ್ಕೇನೂ ಅವಕಾಶವಿರುವುದಿಲ್ಲ.

ಇಂಗ್ಲಿಷ್ ವಿದ್ಯಾಭ್ಯಾಸವೂ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗವೂ ನಮ್ಮಲ್ಲಿ ಪ್ರಚುರವಾದ ಮೇಲೆ ಆ ಸಾಹಿತ್ಯದ ನಾನಾ ಪದ್ಯಗದ್ಯಭೇದಗಳು ಈಚೀಚೆಗೆ ಕನ್ನಡ ಸಾಹಿತ್ಯದಲ್ಲಿಯೂ ಕಂಡುಬರುತ್ತಿವೆ. ಇವುಗಳ ಲಕ್ಷಣವನ್ನು ಇಲ್ಲಿ ಎತ್ತಿಲ್ಲ.

---

[3] ನಾಗವರ್ಮನ ಅಭಿಪ್ರಾಯಾನುಸಾರವಾಗಿ 'ಪದ' ಎಂಬುದೊಂದು ಪದ್ಯಕಾವ್ಯ ಭೇದವುಂಟು—ಕಾವ್ಯಾವಲೋಕನ ಸೂತ್ರ ೨೪೧.

## ೫. ರಸಪ್ರಕರಣ

ನಮ್ಮ ಸುತ್ತುಮುತ್ತಲೂ ಇರುವ ಬಾಹ್ಯಜಗತ್ತಿನಿಂದ ನಾವು ಇಂದ್ರಿಯಗಳ ಮೂಲಕ ಸುಖದುಃಖರೂಪವಾದ ನಾನಾ ಅನುಭವಗಳನ್ನು ಪಡೆಯುತ್ತೇವೆ. ಆಗ ನಮ್ಮ ಚಿತ್ತವು ಕಲಕಿ ಅಲೆಗಳು ಎದ್ದ ಸಮುದ್ರದಂತಾಗುತ್ತದೆ. ಈ ಚಿತ್ತವಿಕಾರಕ್ಕೆ 'ಚಿತ್ತವೃತ್ತಿ' ಅಥವಾ 'ಭಾವ'ವೆಂದು ಹೆಸರು. ಸಮುದ್ರದಲ್ಲಿ ದೊಡ್ಡ ತರಂಗಗಳೂ ಅವುಗಳ ಜೊತೆಗೆ ಸಣ್ಣ ಅಲೆಗಳೂ ನೊರೆ ಗುಳ್ಳೆ ಇವೂ ಇರುವಂತೆ ನಮ್ಮ ಚಿತ್ತವೃತ್ತಿ ಅಥವಾ ಭಾವಗಳಲ್ಲಿ ಕೆಲವು ಸಣ್ಣವಾಗಿಯೂ, ಕೆಲವು ದೊಡ್ಡವಾಗಿ ಇತರ ಸಣ್ಣ ಭಾವಗಳಿಗೆ ಆಶ್ರಯವಾಗಿಯೂ ಇರುತ್ತವೆ; ಈ ಸಣ್ಣ ಅಲೆಗಳು ದೊಡ್ಡ ತರಂಗಗಳಲ್ಲಿ ಎದ್ದು ಬಿದ್ದು, ಬಂದು ಹೋಗಿ ಮಾಡುತ್ತಿರುವುವು. ಇವು ನಿಯತವಾಗಿ ಒಂದು ಕಡೆ ಇರದೆಯೂ ದೊಡ್ಡ ಭಾವಗಳ ಜೊತೆಯಲ್ಲಿ ಬರುತ್ತ ಹೋಗುತ್ತಲೂ ಇರುವುದರಿಂದ ಇವುಗಳನ್ನು 'ವ್ಯಭಿಚಾರಿ' ಭಾವ ಅಥವಾ 'ಸಂಚಾರಿ' ಭಾವಗಳೆಂದೂ, ಇವುಗಳಿಗೆ ಆಶ್ರಯವಾಗಿ ಸ್ವತಂತ್ರವಾಗಿ ಇವುಗಳಿಗಿಂತ ಹೆಚ್ಚು ಸ್ಥಿರವಾಗಿರುವ ದೊಡ್ಡ ಭಾವಗಳನ್ನು 'ಸ್ಥಾಯಿಭಾವ'ಗಳೆಂದೂ ಕರೆಯುತ್ತಾರೆ. ಕೆಲವು ಆಲಂಕಾರಿಕರು ಈ ಸ್ಥಾಯಿಭಾಗಳನ್ನೇ ಸಮುದ್ರಗಳಿಗೆ ಹೋಲಿಸಿ ಸಂಚಾರಿಭಾವಗಳನ್ನು ಅವುಗಳಲ್ಲಿ ಏಳುವ ತರಂಗಗಳಿಗೆ ಹೋಲಿಸಿದ್ದಾರೆ.[1]

ಇವುಗಳಿಗೆ ಇರುವ ಸಂಬಂಧವು ಭರತನ ನಾಟ್ಯಶಾಸ್ತ್ರದಲ್ಲಿ ಮತ್ತೊಂದು ವಿಧವಾಗಿ ಹೇಳಲ್ಪಟ್ಟಿದೆ :

> ಯಥಾ ನರಾಣಾಂ ನೃಪತಿಃ ಶಿಷ್ಯಾಣಾಂ ಚ ಯಥಾ ಗುರುಃ |
> ಏವಂ ಹಿ ಸರ್ವಭಾವಾನಾಂ ಭಾವಃ ಸ್ಥಾಯೀ ಮಹಾನಿಹ ||

—ನಾಟ್ಯಶಾಸ್ತ್ರ vi, ೮

ತಾತ್ಪರ್ಯ : ಜನರಿಗೆ ದೊರೆ ಹೇಗೋ, ಶಿಷ್ಯರಿಗೆ ಗುರು ಹೇಗೋ, ಹಾಗೆ ಇಲ್ಲಿ ಎಲ್ಲಾ ಭಾವಗಳಿಗೂ ಸ್ಥಾಯಿಭಾವವು ದೊಡ್ಡದು.

ಈ ಸ್ಥಾಯಿಭಾವಗಳು ಎಂಟು (ಅಥವಾ ಒಂಬತ್ತು). ಅವು ಯಾವುವೆಂದರೆ : ರತಿ (ಪ್ರೀತಿ), ಹಾಸ (ವಿನೋದ), ಶೋಕ, ಕ್ರೋಧ, ಉತ್ಸಾಹ, ಭಯ, ಜುಗುಪ್ಸೆ (ಅಸಹ್ಯತೆ), ವಿಸ್ಮಯ (ಆಶ್ಚರ್ಯ), ಶಮ (ಶಾಂತಿ).

---

[1] ವಿಶೇಷಾದಾಭಿಮುಖ್ಯೇನ ಚರಂತೋ ವ್ಯಭಿಚಾರಿಣಃ |
ಸ್ಥಾಯಿನ್ಯುನ್ಮಗ್ನನಿರ್ಮಗ್ನಾಃ ಕಲ್ಲೋಲಾ ಇವ ವಾರಿಧೌ ||

—ದಶರೂಪಕ iv, ೭

ಸಂಚಾರಿಭಾವಗಳು ಮೂವತ್ತಮೂರು :

1. ನಿರ್ವೇದ (ಬೇಸರ)
2. ಗ್ಲಾನಿ (ಬಳಲಿಕೆ)
3. ಶಂಕೆ (ಕಳವಳ)
4. ಅಸೂಯೆ
5. ಮದ (ಮತ್ತು)
6. ಶ್ರಮ
7. ಆಲಸ್ಯ (ಚಟುವಟಿಕೆಯಿಲ್ಲದಿರುವಿಕೆ)
8. ದೈನ್ಯ
9. ಚಿಂತೆ
10. ಮೋಹ (ಮಂಕು)
11. ಸ್ಮೃತಿ (ಧೈರ್ಯ)
12. ಧೃತಿ (ಧೈರ್ಯ)
13. ಲಜ್ಜೆ
14. ಚಪಲತೆ
15. ಹರ್ಷ
16. ಆವೇಗ (ಸಂಭ್ರಮ)
17. ಜಡತ್ವ
18. ಗರ್ವ
19. ವಿಷಾದ
20. ಔತ್ಸುಕ್ಯ (ಆತುರ)
21. ನಿದ್ರೆ (ಜೋಂಪು)
22. ಅಪಸ್ಮಾರ (ಮೂರ್ಛೆ)
23. ಸ್ವಪ್ನ
24. ಪ್ರಬೋಧ (ಎಚ್ಚರಿಕೆ)
25. ಅಮರ್ಷ (ಕೋಪ)
26. ಅವಹಿತ್ಥ (ಭಾವವನ್ನು ಮರೆಮಾಚುವುದು)
27. ಉಗ್ರತೆ (ದುಷ್ಟರ ಅಪರಾಧಾದಿಗಳಿಂದ ರೇಗುವುದು)
28. ಮತಿ (ನಿಶ್ಚಯಮಾಡಿಕೊಳ್ಳುವುದು)
29. ವ್ಯಾಧಿ (ಸಂಕಟ)
30. ಉನ್ಮಾದ (ಚಿತ್ತವಿಭ್ರಮ)
31. ಮರಣ
32. ತ್ರಾಸ (ಭಯ)
33. ವಿತರ್ಕ (ವಿಚಾರ)

ಇವುಗಳಲ್ಲಿ ಕೆಲವಕ್ಕೆ ಪರಸ್ಪರ ಭೇದವಿಲ್ಲವೆಂದು ತೋರಬಹುದು. ಉದಾಹರಣೆ: ಅಮರ್ಷ, ಉಗ್ರತೆ, ಆಲಸ್ಯ, ಜಡತ್ವ ಇತ್ಯಾದಿ ; ಆದರೆ ನಾಟ್ಯಶಾಸ್ತ್ರ ಮುಂತಾದ ಗ್ರಂಥಗಳಲ್ಲಿ ಕೊಟ್ಟಿರುವ ಇವುಗಳ ಲಕ್ಷಣಗಳನ್ನು ನೋಡಿದರೆ ಇವುಗಳಿಗೆ ಇರುವ ಪರಸ್ಪರ ಸೂಕ್ಷ್ಮವ್ಯತ್ಯಾಸಗಳು ತಿಳಿಯಬರುವುವು.

ಇವಲ್ಲದೆ 1. ಸ್ತಂಭ (ಸ್ತಬ್ಧತೆ), 2. ಪ್ರಲಯ (ಮೂರ್ಛೆ), 3. ರೋಮಾಂಚ, 4. ಸ್ವೇದ (ಬೆವರುವಿಕೆ), 5. ವೈವರ್ಣ್ಯ (ಬಣ್ಣ ಬದಲಾಯಿಸುವಿಕೆ), 6. ವೇಪಥು (ನಡುಗುವುದು), 7. ಅಶ್ರು (ಕಣ್ಣೀರು), 8. ವೈಸ್ವರ್ಯ (ಧ್ವನಿ ಬದಲಾಗುವುದು), ಎಂಬ ಎಂಟು 'ಸಾತ್ತ್ವಿಕ' ಭಾವಗಳುಂಟೆಂದು ಕೆಲವರೂ, ಇವು (ಕಾರ್ಯರೂಪವಾದದ್ದರಿಂದ) 'ಅನುಭಾವ'ಗಳಲ್ಲಿ ಅಂತರ್ಗತವೆಂದು ಮತ್ತೆ ಕೆಲವರೂ ಹೇಳುವರು (ಸಾಹಿತ್ಯದರ್ಪಣ ಪುಟ ೭೦). ಆದರೆ ಅನುಭಾವಗಳಿಗೂ ಸಾತ್ತ್ವಿಕಭಾವಗಳಿಗೂ ಒಂದು ಮುಖ್ಯ ವ್ಯತ್ಯಾಸವಿದೆ. ರೋಮಾಂಚಾದಿಗಳು ಸ್ವಲ್ಪ ಹೆಚ್ಚು ಕಡಮೆ ಸುಖ ದುಃಖಾದ್ಯನುಭವಕಾಲದಲ್ಲಿಯೇ ಪ್ರಯತ್ನವಿಲ್ಲದೆಯೇ ತಾವೇ ಉಂಟಾಗತಕ್ಕವು ;

ಹೇಳುವುದು, ಹೋಗುವುದು ಬರುವುದು ಮುಂತಾದ ಕಾರ್ಯಗಳು ಸ್ವಲ್ಪ ಸಾವಕಾಶವಾಗಿ ಪ್ರಯತ್ನಪುರಸ್ಸರವಾಗಿ ಬುದ್ಧಿಪೂರ್ವಕವಾಗಿ ಆಗತಕ್ಕವು.

ಸಾತ್ತ್ವಿಕಗಳೂ ಚಿತ್ತವೃತ್ತಿರೂಪವಾದ ಅನುಭವವಿಶೇಷಗಳೇ; ಆದರೆ, ಇವುಗಳ ಅನುಭವವು ಬಹು ಸೂಕ್ಷ್ಮವಾಗಿರುವುದರಿಂದಲೂ, ಅವುಗಳ ಕಾರ್ಯವೇ ಸ್ಫುಟವಾಗಿರುವುದರಿಂದಲೂ ಇವು ಅನುಭಾವಗಳೆಂದು ಕಾಣುತ್ತವೆ; ಸಂಚಾರಿಗಳೂ ಚಿತ್ತವೃತ್ತಿಗಳೇ ಆದರೂ ಅವೂ ಕೂಡ ಅನುಭಾವಗಳಿಂದಲೇ ವ್ಯಕ್ತವಾಗಬೇಕು, ಅಥವಾ ಅಭಿನಯಿಸಲ್ಪಡಬೇಕು.

ಈ ಭಾವಗಳು ಮನುಷ್ಯನ ಮನಸ್ಸಿನಲ್ಲಿ ಉಂಟಾಗತಕ್ಕವುಗಳು; ಇವು ಅವರವರಿಗೇ ಗೋಚರವಾಗುವುವೇ ಹೊರತು ಇತರರ ಕಣ್ಣು ಮುಂತಾದವುಗಳಿಗೆ ಗೋಚರವಾಗುವ ಸ್ಥೂಲಪದಾರ್ಥಗಳಲ್ಲ; ಆದರೆ ಸಾಮಾನ್ಯವಾಗಿ ಮನಸ್ಸಿನ ಆಯಾ ಭಾವಕ್ಕೆ ತಕ್ಕಂತೆ ದೇಹದಲ್ಲಿ ಕೆಲವು ಬದಲಾವಣೆಗಳಾಗುತ್ತವೆ; ಈ ಚಿಹ್ನೆಗಳಿಂದ ಮನಸ್ಸಿನ ಭಾವಗಳನ್ನು ಇತರರು ಊಹಿಸಬಹುದು. ಉದಾಹರಣೆ: ವಿನೋದವಾದಾಗ ನಗು ಬರುವುದು; ದುಃಖವಾದಾಗ ಕಣ್ಣೀರು ಸುರಿಯುವುದು; ಕೋಪ ಬಂದಾಗ ಮುಖವು ಕೆಂಪೇರುವುದು, ಮಾತು ಬಿರುಸಾಗುವುದು; ಆಶ್ಚರ್ಯವಾದಾಗ ಕಣ್ಣು ಅರಳುವುದು—ಇತ್ಯಾದಿ.

ಹೀಗೆ ಬಾಹ್ಯಜಗತ್ತಿನಲ್ಲಿ ನಡೆಯುವ ಸಂಗತಿ (ವಿಭಾವ)ಗಳನ್ನು ನಾವು ಅನುಭವಮಾಡುವಾಗ ನಮ್ಮ ಮನಸ್ಸಿನಲ್ಲಿ ರತ್ಯಾದಿ ಸ್ಥಾಯಿಭಾವಗಳು ಹುಟ್ಟಿ ಉದ್ರೇಕಗೊಳ್ಳುತ್ತವೆ. ಅವುಗಳೊಡನೆ ನಾನಾ ವಿಧವಾದ ಇತರ ಸಣ್ಣ (ಸಂಚಾರಿ) ಭಾವಗಳೂ ತಲೆದೋರುತ್ತವೆ. ಇವುಗಳಿಂದ ಬಾಹ್ಯಶರೀರದಲ್ಲಿ ನಡೆ ನುಡಿ ಮುಂತಾದ ಅಂಶಗಳಲ್ಲಿ ಬದಲಾವಣೆ (ಅನುಭಾವ) ಗಳು ಆಗುತ್ತವೆ.

ಇದು ನಾವು ನಿತ್ಯವೂ ಸಾಕ್ಷಾತ್ತಾಗಿ ಅನುಭವ ಮಾಡುವುದರ ಮಾತಾಯಿತು. ಲೋಕದಲ್ಲಿ ನಡೆಯುವ ಅಥವಾ ತತ್ಸದೃಶವಾದ ಘಟನೆಗಳನ್ನೇ ಕವಿಗಳು ಕಾವ್ಯ ನಾಟ್ಯಗಳಲ್ಲಿ ಚಿತ್ರಿಸುತ್ತಾರೆ.[2] ಇವುಗಳಲ್ಲಿ ಈ ಸ್ಥಾಯಿಭಾವಗಳ ಕಾರಣ, ಸಹಕಾರಿ, ಕಾರ್ಯ ಇವು ಮೂರೂ ಕ್ರಮವಾಗಿ ವಿಭಾವ, ಸಂಚಾರಿಭಾವ, ಅನುಭಾವಗಳೆಂದು ಕರೆಯಲ್ಪಡುತ್ತವೆ. ಎಂದರೆ ಕಾವ್ಯನಾಟ್ಯಗಳಲ್ಲಿ ಈ ಸ್ಥಾಯಿಭಾವಗಳನ್ನು ಉಂಟು ಮಾಡುವ ವಸ್ತುಗಳಿಗೆ 'ಆಲಂಬನವಿಭಾವ'ಗಳೆಂದೂ, ಆ ಭಾವಗಳು ಹುಟ್ಟಿದ ಮೇಲೆ ಅವುಗಳನ್ನು ಉದ್ರೇಕಗೊಳಿಸುವ ವಸ್ತುಗಳಿಗೆ 'ಉದ್ದೀಪನವಿಭಾವ'ಗಳೆಂದೂ, ಸ್ಥಾಯಿಭಾವಗಳ ಜೊತೆಯಲ್ಲಿ ಬರುವ ಇತರ ಸಣ್ಣ ಭಾವಗಳಿಗೆ ಸಹಚಾರಿ ಅಥವಾ ಸಂಚಾರಿ ಭಾವಗಳೆಂದೂ ಅವುಗಳ ಫಲರೂಪವಾಗಿ ಹೊರಗೆ ತೋರತಕ್ಕ ಚಿಹ್ನೆ, ನಡೆಯತಕ್ಕ ಕಾರ್ಯ ಮುಂತಾದವುಗಳಿಗೆ "ಅನುಭಾವ"ಗಳೆಂದೂ ಹೆಸರು.

---

[2] "ಅವಸ್ಥಾನುಕೃತಿರ್ನಾಟ್ಯಂ"—ದಶರೂಪಕ I, ೭.

ಲೋಕದಲ್ಲಿಯೂ ಕಾವ್ಯಾದಿಗಳಲ್ಲಿಯೂ ವಿಭಾವಾದಿಗಳು ಒಂದೇ ವಿಧವಾಗಿರುತ್ತವೆ. ಆದರೆ ಸತ್ಯವಾದ ಲೌಕಿಕವಸ್ತುಸಂಗತಿಗಳನ್ನು ಅನುಭವಿಸಿ ಉಂಟಾಗತಕ್ಕದ್ದು "ಸ್ಥಾಯಿಭಾವ". ಅಂಥ ವಸ್ತುಸಂಗತಿಗಳನ್ನೇ ಕಾವ್ಯನಾಟ್ಯಗಳಲ್ಲಿ ಅನುಭವಮಾಡಿ ಉಂಟಾಗತಕ್ಕದ್ದು 'ರಸ'.[3]

ಹೀಗೆ ಹಿಂದೆ ಹೇಳಿದ ರತಿ ಮುಂತಾದ ಸ್ಥಾಯಿಭಾವಗಳು 'ವ್ಯಕ್ತ'ವಾಗಿ ಕ್ರಮವಾಗಿ—1. ಶೃಂಗಾರ, 2. ಹಾಸ್ಯ, 3. ಕರುಣ, 4. ರೌದ್ರ, 5. ವೀರ, 6. ಭಯಾನಕ, 7. ಭೀಭತ್ಸ, 8. ಅದ್ಭುತ, 9. ಶಾಂತ—ಎಂಬ ಒಂಬತ್ತು ರಸಗಳಾಗುತ್ತವೆ.[4]

---

[3] ಇದನ್ನೇ ಕಾವ್ಯಪ್ರಕಾಶದ

"ಕಾರಣಾನ್ಯಥ ಕಾರ್ಯಾಣಿ ಸಹಕಾರೀಣಿ ಯಾನಿ ಚ |
ರತ್ಯಾದೇಃ ಸ್ಥಾಯಿನೋ ಲೋಕೇ ತಾನಿ ಚೇನ್ನಾಟ್ಯಕಾವ್ಯಯೋಃ ||
ವಿಭಾವಾ ಅನುಭಾವಾಶ್ಚ ಕಥ್ಯಂತೇ ವ್ಯಭಿಚಾರಿಣಃ |
ವ್ಯಕ್ತಸ್ಸ ತೈಃ ವಿಭಾವಾದ್ಯೈಃ ಸ್ಥಾಯಿಭಾವೋ ರಸಸ್ಸ್ಮೃತಃ ||"

ಎಂಬ ಶ್ಲೋಕಗಳು ಸಂಗ್ರಹವಾಗಿ ತಿಳಿಸುತ್ತವೆ. (IV, ೨೭-೨೮)

[4] ಇವುಗಳ ವಿಭಾವಗಳಲ್ಲಿ ಮುಖ್ಯಮುಖ್ಯವಾದವುಗಳನ್ನು ಈ ಕೆಳಗಣ ಶ್ಲೋಕಗಳು ತಿಳಿಸುತ್ತವೆ.—

1. ಋತುಮಾಲ್ಯಾಲಂಕಾರೈಃ ಪ್ರಿಯಜನಗಾಂಧರ್ವಕಾವ್ಯಸೇವಾಭಿಃ |
   ಉಪವನಗಮನವಿಹಾರೈಃ **ಶೃಂಗಾರ**ರಸಃ ಸಮುದ್ಭವತಿ ||
2. ವಿಪರೀತಾಲಂಕಾರೈಃ ವಿಕೃತಾಚಾರಾಭಿಧಾನವೇಷೈಶ್ಚ |
   ವಿಕೃತೈರರ್ಥವಿಶೇಷೈಃ ಹಸತೀತಿ ರಸಃ ಸ್ಮೃತೋ **ಹಾಸ್ಯಃ** ||
3. ಇಷ್ಟಜನಸ್ಯ ವಿನಾಶಾತ್ ಶಾಪಾಕ್ರೋಶಾಚ್ಚ ಬಂಧನಾದ್ವ್ಯಸನಾತ್ |
   ಏತೈರರ್ಥವಿಶೇಷೈಃ **ಕರುಣಾ**ಖ್ಯರಸಃ ಸಮುದ್ಭವತಿ ||
4. ಆಯುಧಖಡ್ಗಾಭಿಭವಾತ್ ವೈಕೃತಭೇದಾತ್ ವಿದಾರಣಾಚ್ಚೈವ |
   ಸಂಗ್ರಾಮಸಂಭವಾದರ್ಥಾದಿಭ್ಯಃ ಸಂಜಾಯತೇ **ರೌದ್ರಃ** ||
5. ಉತ್ಸಾಹಾಧ್ಯವಸಾಯಾತ್ ಅವಿಷಾದಿತ್ವಾತ್ ಅವಿಸ್ಮಯಾನ್ಮೋಹಾತ್ |
   ವಿವಿಧಾರ್ಥವಿಶೇಷಾತ್ **ವೀರ**ರಸೋನಾಮ ಸಂಭವತಿ ||
6. ವಿಕೃತತರಸತ್ವದರ್ಶನಸಂಗ್ರಾಮಾರಣ್ಯ ಶೂನ್ಯ ಗೃಹಗಮನಾತ್ |
   ಗುರುನೃಪಯೋರಪರಾಧಾತ್ ಕೃತಕಃ ಸ **ಭಯಾನಕೋ** ಜ್ಞೇಯಃ ||
7. ಅನಭಿಮತದರ್ಶನೇನ ಚ ಗಂಧರಸಸ್ಪರ್ಶದೋಷೈಶ್ಚ |
   ಉದ್ವೇಜಕೈಶ್ಚ ಬಹುಭಿ**ರ್ಭೀಭತ್ಸ**ರಸಃ ಸಮುದ್ಭವತಿ ||
8. ಯಸ್ತ್ವತಿಶಯಾರ್ಥಯುಕ್ತಂ ವಾಕ್ಯಂ ಶಿಲ್ಪಂ ಚ ಕರ್ಮ ರೂಪಂ ಚ |
   ತತ್ಸಂಬದ್ಧೈರರ್ಥೈಃ ರಸೋऽ**ದ್ಭುತೋ**ನಾಮ ಸಂಭವತಿ ||

—ಕಾವ್ಯಪ್ರಕಾಶ, ಪುಟ ೮೭ ವ್ಯಾಖ್ಯಾನ

### ಉದಾಹರಣೆಗಳು.[5]

1. ಶೃಂಗಾರಕ್ಕೆ—ಶಾಕುಂತಲ, (ಅಂಕ I-III), ಸ್ವಪ್ನವಾಸವದತ್ತ ಅಂಕ V).

2. ಹಾಸ್ಯಕ್ಕೆ—ಸ್ವಪ್ನವಾಸವದತ್ತ ಶಾಕುಂತಲಾದಿಗಳಲ್ಲಿ ವಿದೂಷಕನು ಬರುವ ಸನ್ನಿವೇಶಗಳು.

3. ಕರುಣ—ಗದಾಯುದ್ಧದಲ್ಲಿ ದುರ್ಯೋಧನ ಧೃತರಾಷ್ಟ್ರಾದಿಗಳ ಗೋಳಾಟ.

4. ರೌದ್ರ—ಗದಾಯುದ್ಧದಲ್ಲಿ ಮತ್ತು ವೇಣೀಸಂಹಾರದಲ್ಲಿ ದುರ್ಯೋಧನ ಭೀಮರ ಆಟೋಪ ಬರುವ ಕಡೆಗಳು.

5. ವೀರ—ಗದಾಯುದ್ಧ, ಪಂಪಭಾರತ, ಕುಮಾರವ್ಯಾಸಭಾರತ ಇವುಗಳಲ್ಲಿ ಕರ್ಣನ ವೃತ್ತಾಂತ ಬರುವ ಕೆಲವು ಸ್ಥಳಗಳು; ನಾಗಾನಂದ, ಧರ್ಮಗಾಯನ ವೃತ್ತಾಂತ.

6. ಭಯಾನಕ—ಶಾಕುಂತಲದಲ್ಲಿ ಜಿಂಕೆಯ ವರ್ಣನೆ, ಕಾಡಾನೆಯ ವರ್ಣನೆ.

7. ಭೀಭತ್ಸ—ಚಿಕದೇವರಾಯವಂಶಾವಳಿಯಲ್ಲಿ ಮಾಂಸಾಶಿಗಳ ವರ್ಣನೆ, ಜೈಮಿನಿಭಾರತ ಮುಂತಾದವುಗಳಲ್ಲಿ ಶ್ಮಶಾನವರ್ಣನೆ, ಯುದ್ಧ ಮುಗಿದ ಮೇಲೆ ಯುದ್ಧರಂಗ ವರ್ಣನೆ.

8. ಅದ್ಭುತ—ರತ್ನಾವಳಿಯ ಕೊನೆಯ ಭಾಗ, ರಾಮ ಅರ್ಜುನ ಇವರ ಧನುರ್ಭಂಗ ಲಕ್ಷ್ಯಭೇದಗಳು.

9. ಶಾಂತ—ಪ್ರಬೋಧಚಂದ್ರೋದಯ, ಜಿನವರ್ಣನೆ, ತಪೋವನ ವರ್ಣನೆಗಳು.

ಭಕ್ಷ್ಯಭೋಜ್ಯಾದಿ ಆಹಾರಪದಾರ್ಥಗಳಲ್ಲಿ ಸಿಹಿ ಖಾರ ಮುಂತಾದ ಷಡ್ರಸಗಳು ಹೇಗೋ ನಾಟ್ಯದಲ್ಲಿ ಶೃಂಗಾರ ಮುಂತಾದವುಗಳೂ ಹಾಗೇ ಇರುವುದರಿಂದ ಇವುಗಳಿಗೂ 'ರಸ'ವೆಂಬ ಹೆಸರು ಬಂದಂತೆಯೂ, ಇವು ಮೊದಲು ನಾಟ್ಯದಲ್ಲಿ ಮಾತ್ರ ಪರಿಗಣಿಸಲ್ಪಟ್ಟದ್ದು ಕ್ರಮೇಣ ಕಾವ್ಯದಲ್ಲಿಯೂ ಪ್ರಾಧಾನ್ಯಕ್ಕೆ ಬಂದಂತೆಯೂ ತೋರುತ್ತದೆ. ಭರತನ ನಾಟ್ಯಶಾಸ್ತ್ರದಲ್ಲಿ ಅನುವಾದಮಾಡಿರುವ ಶ್ಲೋಕಗಳಿಂದ ಇದು ಸ್ಪಷ್ಟವಾಗುತ್ತದೆ—

ಯಥಾ ಬಹುದ್ರವ್ಯಯುತೈಃ ವ್ಯಂಜನೈರ್ಬಹುಭಿರ್ಯುತೈಃ |
ಆಸ್ವಾದಯಂತಿ ಭುಂಜಾನಾಃ ಭಕ್ತವಿದೋ ಜನಾಃ ||

---

[5] ಕಾವ್ಯಾವಲೋಕನದ ರಸಪ್ರಕರಣವನ್ನೂ ನೋಡಿ.

ಭಾವಾಭಿನಯಸಂಬದ್ಧಾನ್ ಸ್ಥಾಯಿಭಾವಾಂಸ್ತಥಾ ಬುಧಾಃ |
ಆಸ್ವಾದಯಂತಿ ಮನಸಾ ತಸ್ಮಾನ್ನಾಟ್ಯರಸಾಃ ಸ್ಮೃತಾಃ

(vi, ೩೩-೩೪)

ತಾತ್ಪರ್ಯ: ನಾನಾಪದಾರ್ಥಗಳನ್ನು ಸೇರಿಸಿ ಮಾಡಿದ ಮೇಲೋಗರ ಮುಂತಾದ ವ್ಯಂಜನಗಳನ್ನು ಅನ್ನಕ್ಕೆ ಹಾಕಿ ಕಲಸಿಕೊಂಡು ಊಟಮಾಡುತ್ತ, ಊಟದ ರುಚಿಯನ್ನು ಬಲ್ಲವರು ಹೇಗೆ ಅದರ ರುಚಿಯ ಸುಖವನ್ನು ಅನುಭವಿಸು ತ್ತಾರೋ ಹಾಗೆ ವಿದ್ವಾಂಸರು 'ಭಾವ' 'ಅಭಿನಯ' ಇವುಗಳಿಂದ ಕೂಡಿದ ಸ್ಥಾಯಿಭಾವಗಳನ್ನು ಮನಸ್ಸಿನಲ್ಲಿ ಅನುಭವಿಸಿ ಸುಖಪಡುವುದರಿಂದ ಅವುಗಳಿಗೆ 'ನಾಟ್ಯರಸ'ಗಳೆಂಬ ಹೆಸರು ಬಂದಿದೆ.

ಇದರಿಂದ ಗೊತ್ತಾಗುವುದೇನೆಂದರೆ:

ರಸವೆಂಬುದು ವಿಭಾವಾನುಭಾವ ಸಂಚಾರಿಭಾವ ಸ್ಥಾಯಿಭಾವಗಳು ಸೇರಿ ಉಂಟಾಗತಕ್ಕದ್ದು (ಆದರೆ ಸ್ಥಾಯಿಗಳಿಗೆ ಪ್ರಾಧಾನ್ಯ—ಭರತ ಪುಟ ೭೦ ನೋಡಿ.) ಮತ್ತು ಇವೆಲ್ಲಕ್ಕಿಂತಲೂ ಬೇರೆಯಾದದ್ದು; ಅದನ್ನು ಅನುಭವಮಾಡುವವರು ರುಚಿಯನ್ನು ಬಲ್ಲವರಾಗಿರಬೇಕು. ಇದನ್ನು 'ಚರ್ವಣ' ಮಾಡುವಾಗ ಅವರಲ್ಲಿ ಸುಖವುಂಟಾಗುತ್ತದೆ. ಸುಖವಾಗಬೇಕಾದರೆ ಚರ್ವಣಕ್ಕೆ ಸಿಕ್ಕುವ ವಸ್ತುವಿನಲ್ಲಿ ರಸವಿರಬೇಕು, ಅದು ಚರ್ವಿತವಾಗಬೇಕು; ಚರ್ವಣಮಾಡುವವರಲ್ಲಿ ಅದರ ರುಚಿಯನ್ನು ಗ್ರಹಿಸುವ ಶಕ್ತಿಯಿರಬೇಕು; ಆಗ ಅವರಲ್ಲಿ ಅದರಿಂದ ಸುಖವುಂಟಾ ಗುತ್ತದೆ.

ಈ ಶ್ಲೋಕಗಳಲ್ಲಿ ಹೇಳಿರುವ ಅಂಶಗಳನ್ನೇ

" ವಿಭಾವಾನುಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ"

—ನಾಟ್ಯಶಾಸ್ತ್ರ, VI, ೬೨

ಎಂಬ ಭರತಸೂತ್ರವು ತಿಳಿಸುತ್ತದೆ. ಈ ಸೂತ್ರಕ್ಕೆ ಆಲಂಕಾರಿಕರು ನಾನಾ ವಿಧವಾಗಿ ವ್ಯಾಖ್ಯಾನಮಾಡಿದ್ದಾರೆ. ಅವುಗಳಲ್ಲಿ ಮುಖ್ಯವಾದ ನಾಲ್ಕು ಮತ ಗಳನ್ನು ಇಲ್ಲಿ ತಿಳಿಸಬಹುದು:

## 1. ಭಟ್ಟಲೊಲ್ಲಟ ಮುಂತಾದವರ ಮತ.

ರತ್ಯಾದಿಸ್ಥಾಯಿಭಾವಗಳು ವಿಭಾವಾನುಭಾವಸಂಚಾರಿಭಾವಸಂಯೋಗ ದಿಂದ ಕ್ರಮವಾಗಿ ಹುಟ್ಟಿ ಬೆಳೆದು ಪುಷ್ಟಿಗೊಂಡು ನಟರ ನೈಪುಣ್ಯದಿಂದ ಅನುಕಾರ್ಯ ರಾದ ದುಷ್ಯಂತಾದಿಗಳಲ್ಲಿಯೇ ಇದ್ದಂತೆ ತೋರಿ, ಇವನ್ನು ನೋಡುವ ಸಹೃದಯರಿಗೆ ಸಂತೋಷವನ್ನು ಉಂಟುಮಾಡುತ್ತವೆ.

## 2. ಶ್ರೀಶಂಕುಕನ ಮತ

ಚಿತ್ರದಲ್ಲಿ ಬರೆದ ದುಷ್ಯಂತ ಶಕುಂತಲಾದಿಗಳನ್ನು ದುಷ್ಯಂತ ಶಕುಂತಲಾದಿಗಳೆಂದೇ ಭಾವಿಸಿಕೊಳ್ಳುವಂತೆ, ವೇಷಹಾಕಿಕೊಂಡು ಬರುವ ನಟನನ್ನೂ ಸಾಮಾಜಿಕರು ದುಷ್ಯಂತನೆಂದು ಭಾವಿಸಿಕೊಂಡು, ಅವನು (ನಟನು) ನೈಪುಣ್ಯದಿಂದ ಪ್ರದರ್ಶಿಸುವ ವಿಭಾವಾನುಭಾವಗಳು ಕೃತ್ರಿಮಗಳಾದರೂ, ಅವು ನಿಜವೆಂದು ಭಾವಿಸಿಕೊಂಡು, ಅವುಗಳಿಂದ (ದುಷ್ಯಂತನ) ಸ್ಥಾಯಿಭಾವಗಳನ್ನು ಊಹಿಸಿಕೊಳ್ಳುತ್ತಾರೆ. ಅವು ವಾಸ್ತವವಾಗಿ (ನಟನಲ್ಲಿ) ಇಲ್ಲದವಾದರೂ, ಸ್ಥಾಯಿಭಾವಗಳು ಸ್ವತಃ ಆನಂದದಾಯಕವಾದವುಗಳಾದ್ದರಿಂದ, ಊಹಿಸಿಕೊಂಡಮಾತ್ರದಿಂದಲೇ ರತ್ಯಾದಿಸಂಸ್ಕಾರವುಳ್ಳ ಸಾಮಾಜಿಕರಿಗೆ ಸುಖವಾಗುತ್ತದೆ.

## 3. ಭಟ್ಟನಾಯಕನ ಮತ.

ಕಾವ್ಯನಾಟಕದಲ್ಲಿ ಮುಖ್ಯವಾದ ಅರ್ಥವನ್ನು ಕೊಡುವ ಅಭಿಧಾವೃತ್ತಿ ಅಥವಾ 'ಶಕ್ತಿ' ಇರುವಂತೆ 'ಭಾವಕತ್ವ' 'ಭೋಜಕತ್ವ' ಎಂಬ ಮತ್ತೆರಡು ಶಕ್ತಿಗಳಿವೆ. ಇವುಗಳಲ್ಲಿ ಮೊದಲನೆಯ ಶಕ್ತಿಯಿಂದ, 'ಈ ಮನೋಭಾವವು ದುಷ್ಯಂತನಲ್ಲಿರುವುದು' 'ಇದು ಶಕುಂತಲೆಯಲ್ಲಿರುವುದು' ಎಂಬ ವ್ಯಕ್ತಿವಿಶೇಷ ಸಂಬಂಧವು ಹೋಗಿಬಿಟ್ಟು ಕೇವಲ 'ರತಿ' (ಪ್ರೀತಿ) ಮುಂತಾದವುಗಳು ಗೋಚರವಾಗುತ್ತವೆ. ಎರಡನೆಯ 'ಭೋಜಕತ್ವ' ಎಂಬ ಶಕ್ತಿಯಿಂದ ಈ 'ಸಾಧಾರಣ'ವಾಗಿ ಮಾಡಲ್ಪಟ್ಟ ರತ್ಯಾದಿಗಳು ಅನುಭವಿಸಲ್ಪಟ್ಟು ಸುಖಗೊಳಿಸುತ್ತವೆ; ಈ ಸುಖವು ಲೌಕಿಕಸುಖಕ್ಕಿಂತ ವಿಲಕ್ಷಣವಾದದ್ದು.

## 4. ಅಭಿನವಗುಪ್ತಪಾದಾಚಾರ್ಯರ ಮತ.

ಲೋಕದಲ್ಲಿ ಸಂಜ್ಞೆ, ಸೂಚನೆ, ಬೆಡಗು, ಮಾತಿನ ಚಮತ್ಕಾರ ಮುಂತಾದವುಗಳಿಂದ ಇತರರ ರತ್ಯಾದಿಸ್ಥಾಯಿಭಾವಗಳನ್ನು ಊಹಿಸಿ ತಿಳಿದುಕೊಳ್ಳುವುದು ಸಾಮಾಜಿಕರಿಗೆ ಅಭ್ಯಾಸವಾಗಿರುತ್ತದೆ; ಮತ್ತು ರತ್ಯಾದಿಗಳು ತಮ್ಮ ಅನುಭವಕ್ಕೂ ಬಂದಿದ್ದು ಆ ಅನುಭವವು ತಮ್ಮಲ್ಲಿ ಸಂಸ್ಕಾರರೂಪವಾಗಿ ಉಳಿತಿರುತ್ತದೆ. ನಾಟ್ಯದಲ್ಲಿಯೂ ಅದೇ ತರದ ಸಂಜ್ಞೆ, ಸೂಚನೆ, ಬೆಡಗು, ಮಾತಿನ ಚಮತ್ಕಾರ ಮುಂತಾದ ವಿಭಾವಾನುಭಾವಾದಿಗಳನ್ನು ಕಂಡ ಕೂಡಲೆ ತಮ್ಮಲ್ಲಿದ್ದ ಸಂಸ್ಕಾರ ರೂಪವಾದ ಸ್ಥಾಯಿಭಾವವು ಉದ್ಬುದ್ಧವಾಗಿ,—ನಾನು ಇಂಥವನು, ಇವು ಇಂಥವರ ಪ್ರೀತಿ ಪ್ರಣಯಗಳು ಎಂಬ ಭೇದಭಾವವಿಲ್ಲದೆ—ಅನುಭವಿಸಲ್ಪಟ್ಟು ಸುಖವನ್ನುಂಟುಮಾಡುತ್ತದೆ. ಈ ಸುಖವು ಬ್ರಹ್ಮಾನಂದಾಸ್ವಾದಕ್ಕೆ ಸದೃಶವಾದದ್ದು. ವಿಭಾವಾನುಭಾವಸಂಚಾರಿಭಾವಗಳು ಗೋಚರವಾಗುತ್ತಿರುವವರೆಗೆ

ಇರತಕ್ಕದ್ದು. ಈ ರಸಾನುಭವಕಾಲದಲ್ಲಿ ಮತ್ತೆ ಯಾವ ಅನುಭವಕ್ಕೂ ಅವಕಾಶ ವಿರದೆ ರಸವು ತಾನೇ ತಾನಾಗಿರುತ್ತದೆ. ಇತ್ಯಾದಿ.

ಈ ವಿವರಣಗಳನ್ನು ನೋಡಿದರೆ, ಈ ಆಲಂಕಾರಿಕರೆಲ್ಲರೂ ಅಭಿನೇಯವಾದ ನಾಟಕಾದಿ ದೃಶ್ಯಕಾವ್ಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಅವುಗಳಲ್ಲಿ ತೋರುವ ರಸಕ್ಕೆ ಲಕ್ಷಣವನ್ನು ಹೇಳುವಂತೆ ಕಾಣುತ್ತದೆ. ವಸ್ತುಸ್ಥಿತಿಯೇನೆಂದರೆ, ರಸಗಳ ಪ್ರಸಕ್ತಿ ಮೊದಲು ಬಂದಿರುವುದು ಭರತನ ನಾಟ್ಯಶಾಸ್ತ್ರದಲ್ಲಿ—ಅಭಿನಯದ ಸಂದರ್ಭ ದಲ್ಲಿ. ಹೀಗೆ ರಸವು ಮೊದಲು ನಾಟ್ಯಲಕ್ಷಣನಿರೂಪಣದಲ್ಲಿ ಮಾತ್ರ ಪ್ರಧಾನ ವಾಗಿದ್ದು, ಶ್ರವ್ಯಕಾವ್ಯ ಲಕ್ಷಣನಿರೂಪಣದಲ್ಲಿಯೂ ಕ್ರಮೇಣ ಮುಖ್ಯವಾಗಿ ಆನಂದವರ್ಧನಾಚಾರ್ಯರಿಂದೀಚೆಗೆ ಪ್ರಾಧಾನ್ಯಕ್ಕೆ ಬಂದಂತೆ ತೋರುತ್ತದೆ. ನಾಟ್ಯ ದಂತೆ (ಶ್ರವ್ಯ) ಕಾವ್ಯವೂ ಒಂದು ವಿಧವಾದ 'ಅವಸ್ಥಾನುಕೃತಿ'ಯೇ ಆಗಿರುವುದ ರಿಂದ ರಸದ ವಿಚಾರವು ಇಲ್ಲಿಯೂ ಬರತಕ್ಕುದಾಗಿದೆ; ಆದರೆ ದೃಶ್ಯ ಕಾವ್ಯಗಳಲ್ಲಿ ಆಹಾರ್ಯಾದಿ ಅಭಿನಯಗಳಿಂದಲೂ ರಂಗವಿನ್ಯಾಸಗಳಿಂದಲೂ ವ್ಯಕ್ತವಾಗುವ ರಸವು ಶ್ರವ್ಯಕಾವ್ಯದಲ್ಲಿ ಶಬ್ದಗಳಿಂದಲೇ ಚಿತ್ರಿಸಲ್ಪಡುತ್ತದೆ. ನಿಪುಣರಾದ ನಟರ ಅಭಿನಯ, ಕೌಶಲ, ರಂಗವಿನ್ಯಾಸ, ಗಾನ ಮುಂತಾದ ಉಪಕರಣಗಳ ಸಹಾಯ ವಿಲ್ಲದಿರುವ ಶ್ರವ್ಯಕಾವ್ಯಕರ್ತನು ರಸವತ್ತಾದ ಕಾವ್ಯವನ್ನು ಬರೆಯಬೇಕಾದರೆ, ಅವನಲ್ಲಿ ಪ್ರತಿಭಾಶಕ್ತಿಯ ಜೊತೆಗೆ ಅಪೂರ್ವ ವಾಕ್ಸಂಪತ್ತೂ ಶಬ್ದಗಳನ್ನು ಜೋಡಿಸು ವುದರಲ್ಲಿ ವಿವೇಕ ಕೌಶಲಗಳೂ ಇರಬೇಕೆಂಬುದು ಸ್ಪಷ್ಟವಾಗಿದೆ.

* * * *

ಇಲ್ಲಿ, ರಸದ ಉತ್ಪತ್ತಿ, ಸ್ವರೂಪ, ಅನುಭವ, ಸಂಖ್ಯೆ ಮುಂತಾದವುಗಳಿಗೆ ಸಂಬಂಧಪಟ್ಟ ಕೆಲವು ಅಂಶಗಳನ್ನು ವಿಚಾರಮಾಡಬಹುದು :

**1.** ನಾಟ್ಯದಲ್ಲಿ, ಅನುಕಾರ್ಯರಾದ ದುಷ್ಯಂತಾದಿ ವ್ಯಕ್ತಿಗಳು, ನಟ, ಕವಿ, ಸಾಮಾಜಿಕರು ಇಷ್ಟು ಜನರಿರುತ್ತಾರೆ; **ರಸವು ಹುಟ್ಟುವುದಕ್ಕೆ "ವ್ಯಕ್ತ" ವಾಗಬೇಕಾದದ್ದು ಯಾರ ಸ್ಥಾಯಿಭಾವ?**—ಅನುಕಾರ್ಯನದೇ, ನಟನದೇ, ಕವಿಯದೇ, ಸಾಮಾಜಿಕನದೇ ?

ಮೊದಲಿನ ಎರಡು ಮತಗಳಲ್ಲಿ ಪಾತ್ರಗಳ ಸ್ಥಾಯಿಭಾವವೇ ವ್ಯಕ್ತ ವಾಗುತ್ತದೆ.[6] ಭರತನ ವಿವರಣವನ್ನು ನೋಡಿದರೂ ಹೀಗೆಯೇ ತೋರುತ್ತದೆ. ಆದರೆ ಮೂರು ನಾಲ್ಕನೆಯ ಮತಗಳಲ್ಲಿ 'ವ್ಯಕ್ತ'ವಾಗುವುದು ಸಾಮಾಜಿಕರ ಸ್ಥಾಯಿಭಾವ. (ಇಲ್ಲಿ 'ವ್ಯಕ್ತ'ವೆಂದರೆ ಸಾಮಾಜಿಕರಲ್ಲಿ ಸಂಸ್ಕಾರರೂಪವಾಗಿರ ತಕ್ಕ ಸ್ಥಾಯಿಭಾವವು ಉದ್ಬುದ್ಧವಾಗಿ ಬ್ರಹ್ಮಾನಂದಕ್ಕೆ ಇರುವ ಆವರಣವನ್ನು ತೆಗೆಯತಕ್ಕದ್ದೆಂದು ತಾತ್ಪರ್ಯ—ಎಂದು ಕೆಲವರು ವ್ಯಾಖ್ಯಾನಮಾಡುವರು.)

---

[6] ಪ್ರತಾಪರುದ್ರೀಯ (ರಸಪ್ರಕರಣದ ಕೊನೆ)—"ಅತ್ರ ರಸೋ ನಾಯಕಾಶ್ರಯ ಏವ...."

ಈ ಎರಡು ಮತಗಳಲ್ಲಿಯೂ ನಟನಿಗೆ ರಸಾನುಭವವಿಲ್ಲ; ಅವನು ಚಿತ್ರಗಳಂತೆಯೋ ಇಲ್ಲವೇ ಬೊಂಬೆಗಳಂತೆಯೋ, ಇಲ್ಲವೆ ಕಾವ್ಯದ ಶಬ್ದಗಳಂತೆಯೋ ರಸವತ್ತಾದ ಅರ್ಥವನ್ನು ಮಾತ್ರ ನಮಗೆ ತಿಳಿಯಪಡಿಸುತ್ತಾನೆ.[7] ನಾಟಕವನ್ನು ಓದಿದರೆ ಮನಸ್ಸಿಗೆ ಬರುವ ಭಾವವೂ ಹೃದಯಪಟದಲ್ಲಿ ಚಿತ್ರಿತವಾಗುವ ಚಿತ್ರವೂ, ರಂಗ, ನಟರು, ಅಭಿನಯ ಮುಂತಾದವು ಇಂದ ಸ್ಪಷ್ಟವೂ ಪುಷ್ಟವೂ ಆಗುವುವು, ಅಷ್ಟೇಯೆ. ಅಭಿನಯಿಸುತ್ತಿರುವಾಗಲಾಗಲಿ ಆಮೇಲಾಗಲಿ ನಟನು ರಸಾನುಭವ ಮಾಡಿದರೆ ಆಗ ಅವನು ಸಾಮಾಜಿಕನಾಗುವನು. ಇನ್ನು ಕವಿಯ ಸ್ಥಾಯಿ ಭಾವವೂ ವ್ಯಕ್ತವಾಗುವುದಿಲ್ಲ; ಆದರೆ ಕಾವ್ಯವೆಲ್ಲವೂ ಅವನ ಭಾವದಿಂದ ಭಾವಿತವಾಗಿರುವುದೆಂಬುದನ್ನೂ, ನಾವು ಅವನ ಕಣ್ಣುಗಳಿಂದ ನೋಡುತ್ತ ಅವನು ತನ್ನ ಪ್ರತಿಭೆಯಿಂದ ಸೃಷ್ಟಿಸಿ ತಂದು ಮುಂದಿಟ್ಟ ಪದಾರ್ಥವನ್ನು ಅನುಭವಿಸುತ್ತೇವೆಂಬುದನ್ನೂ ಮರೆಯಬಾರದು.

ಅನುಕಾರ್ಯನ ಸ್ಥಾಯಿಭಾವವು ವ್ಯಕ್ತವಾಗಿ ರಸವಾಗುತ್ತದೆ ಎಂಬುದಕ್ಕೆ ಕೆಲವು ಆಕ್ಷೇಪಣೆಗಳಿವೆ :—(ದಶರೂಪಕ ೧೨೧-೨ ಮೂಲ ಮತ್ತು ವ್ಯಾಖ್ಯಾನ)

(i) ಲೋಕದಲ್ಲಿ ನಮಗೆ ಸಂಬಂಧಪಡದ ತಟಸ್ಥರಾದ ದುಷ್ಯಂತ ಹರಿಶ್ಚಂದ್ರ ಮುಂತಾದವರ ರತಿಶೋಕಾದಿಗಳನ್ನು ನೋಡಿ ನಮಗೆ ಸುಖದುಃಖಗಳಾಗುವುದು ಅಸಂಭವ.

(ii) ರಾಮಾಯಣ ಭಾರತಾದಿಗಳನ್ನು ಓದಿ ಅಥವಾ ಕೇಳಿ, ಶಾಕುಂತಲ ಹರಿಶ್ಚಂದ್ರಾದಿನಾಟಕಗಳನ್ನು ಓದಿ ಅಥವಾ ನೋಡಿ ಆಗುವ ಸುಖವು, ಪ್ರಪಂಚದಲ್ಲಿ ಅಂಥ ವಿಷಯಗಳು ಸಾಕ್ಷಾತ್ತಾಗಿ ನಡೆಯುತ್ತಿರುವುದನ್ನು ನೋಡಿದರೆ ಆಗುವುದಿಲ್ಲ.

ಇವಕ್ಕೆ ಹೀಗೆ ಉತ್ತರ ಕೊಡಬಹುದು :

(i) ಲೋಕದಲ್ಲಿ (ಅನುರಾಗ ಸದ್ಗುಣಪಕ್ಷಪಾತಗಳಿಂದ) 'ನನ್ನದು' ಎಂಬ ಆತ್ಮೀಯತೆಯುಂಟಾಗುವ ಕಡೆಗಳಲ್ಲಿ ಇತರರ ಸುಖದುಃಖಗಳಲ್ಲಿ ನಾವು ಭಾಗಿಗಳಾಗುವುದು ಸಿದ್ಧವಾಗಿದೆ.

(ii) ರಾಮಾಯಣ ಭಾರತ ಶಾಕುಂತಲಾದಿ ಕಾವ್ಯ ನಾಟಕಗಳಲ್ಲಿ ಪ್ರತಿಪಾದಿತವಾದ ಪ್ರತಿಯೊಂದಂಶವೂ ಪ್ರಪಂಚದಲ್ಲಿ ತದ್ವತ್ತಾಗಿ ನಡೆದು ಅದೆಲ್ಲವನ್ನೂ ರಸಿಕನು ನೋಡಬಲ್ಲವನಾದರೆ ಅವನಿಗೂ ಅದೇ ಅನುಭವವುಂಟಾದೀತು. ಆದರೆ ಸಹೃದಯತೆ, ರಸಿಕತೆ, ಪ್ರತಿಭಾಶಕ್ತಿ ಮುಂತಾದ ಗುಣಗಳ ಸಹಾಯದಿಂದ ಸಾಮಾಜಿಕನ ಮನಸ್ಸು ವಿಶೃಂಖಲವಾಗಿ ಹೊರಟು ದೇಶಕಾಲವರ್ತಮಾನಗಳನ್ನು

---

[7] ಸಂಗೀತರತ್ನಾಕರ VII, ೧೦೭೧ ಮತ್ತು ವ್ಯಾಖ್ಯಾನ—"ಸಾಮಾಜಿಕಾಸ್ತು ಲಿಹತೇ ರಸಾನ್ ಪಾತ್ರಂ ನಟೋ ಮತಃ" ಇತ್ಯಾದಿ.

ಮೀರಿ ಕವಿತಾಪ್ರಪಂಚದಲ್ಲಿ ಮನೋವೇಗದಿಂದ ಸಂಚಾರಮಾಡಿಕೊಂಡು ಬರ ಬಲ್ಲುದು. ಆದರೆ ಇದ್ದಕಡೆಯಲ್ಲಿ ಬಿದ್ದಿರುವ ದೇಹವು ದೇಶವಿಶೇಷಗಳಲ್ಲಿ ಎಷ್ಟೋ ವರ್ಷಗಳ ಕಾಲ ವಿವಿಧವಯಸ್ಸ್ವಭಾವಗಳ ಜನರು ಆಡಿದ ಮಾತು, ಮಾಡಿದ ಕೆಲಸ ಇವುಗಳನ್ನು ಹೇಗೆ ನೋಡಬಹುದು ?

ಮತ್ತೊಂದು ಸಂಗತಿಯೇನೆಂದರೆ, ಅನುಕರಣವನ್ನು ನೋಡಿದರೆ ಸುಖವಾಗು ವುದು ಎಲ್ಲರ ಅನುಭವಕ್ಕೂ ಬಂದದ್ದು; ಆದ್ದರಿಂದ ಹುಲಿ ಕರಡಿಗಳ ಹಾಗೆ ವೇಷ ಹಾಕಿಕೊಳ್ಳುವುದೂ; ಮೃಗಪಕ್ಷಿಗಳ ಹಾಗೆ ಕೂಗುವುದೂ, ಚಿತ್ರಗಳೂ ಜನರಿಗೆ ಸಂತೋಷಜನಕವಾಗುತ್ತವೆ. ಹುಲಿ, ಕರಡಿ, ರಾಜ, ರಾಣಿ, ಬೆಸ್ತ, ಚಂಡಾಲ, ಗೂಬೆ, ಗಿಣಿ, ರೈಲು, ಟಿಕಿಟುಕೊಡುವವನು ಇವರ ಅನುಕರಣವೆಲ್ಲಾ (ಅವು ಸಾಕ್ಷಾತ್ತಾಗಿ ಪ್ರಿಯವಾಗಿರಲಿ ಅಪ್ರಿಯವಾಗಿರಲಿ) ಒಂದೇ ಸಮನಾಗಿ ಚಮತ್ಕಾರ ವಾಗಿ ಸುಖಜನಕವಾಗಿರುತ್ತವೆ. ಇಲ್ಲಿ ಅನುಕರಣವು ಎಷ್ಟೆಷ್ಟು ಸಂಪೂರ್ಣ ವಾಗಿದ್ದರೆ ಅನುಕರ್ತನ ಕೌಶಲವು ಅಷ್ಟಷ್ಟು ಶ್ರೇಷ್ಠವೆಂದು ನಿಶ್ಚಯಿಸಲ್ಪಡು ತ್ತದೆಯೇ ವಿನಾ ಅನುಕಾರ್ಯವಸ್ತುವು ಲೋಕದಲ್ಲಿ ಪ್ರಿಯಾಪ್ರಿಯವಾಗಿರುವಿಕೆಯು ನಿರ್ಣಯಕಾರಿಯಲ್ಲ. ಇಂಥ ಸ್ಥಳಗಳಲ್ಲಿ ಅನುಕರ್ತನ ಪ್ರತಿಭೆ, ಕೌಶಲ, ಬುದ್ಧಿ ಶಕ್ತಿ ಇವುಗಳನ್ನು ಮೆಚ್ಚಿ ವಿಸ್ಮಯವನ್ನು ಪಡೆದು ಆನಂದಹೊಂದುತ್ತೇವೆ.[8]

ಭಾವನಾವ್ಯಾಪಾರದಿಂದ ಸ್ಥಾಯಿಭಾವಗಳು 'ಸಾಧಾರಣ'ವಾಗಿ ಮಾಡ ಲ್ಪಟ್ಟು ಸಾಮಾಜಿಕರಿಂದ ಅನುಭವಿಸಲ್ಪಡುವುವು ಎಂಬ ಅಭಿಪ್ರಾಯದ ಮೇಲೆ ಇಲ್ಲಿಯೇ ಎರಡು ಮಾತುಗಳನ್ನು ಹೇಳಬಹುದು :

ರತಿಸ್ಥಾಯಿಭಾವವು ಸಾಧಾರಣವಾಗುವುದಾದರೆ, ಶೃಂಗಾರರಸವಿರುವ ಕಡೆಗಳಲ್ಲೆಲ್ಲಾ ಒಂದೇ ಅನುಭವವಾಗಬೇಕಲ್ಲವೇ ? ಆಗ ದುಷ್ಯಂತ ಶಕುಂತಲೆಯರ ಪ್ರೇಮ, ಚಾರುದತ್ತ ವಸಂತಸೇನೆಯರ ಪ್ರೇಮ, ವೇಶ್ಯಾ ವಿಟ ಪ್ರೇಮ ಎಲ್ಲಾ ಒಂದೇ ಭಾವವನ್ನು ನಮ್ಮಲ್ಲಿ ಉಂಟುಮಾಡಬೇಕಲ್ಲವೆ ? ಹಾಗೇ ದಿಕ್ಕಿಲ್ಲದ ಒಬ್ಬ ತಿರಿಕ ಹುಡುಗನ ಸಾವೂ ರೋಹಿತಾಶ್ವನ ಸಾವೂ ಒಂದೇ ಭಾವವನ್ನು ಉಂಟು ಮಾಡಬೇಕಾಗುತ್ತದೆಯಲ್ಲವೆ ? ರಸವೆಂಬುದು, ಇಂಥವರಿಂದ ಬಂದದ್ದು, ಇಂಥ ಅಂಗಡಿಯಲ್ಲಿ ಕೊಂಡದ್ದು ಎಂಬ ಭೇದವಿಲ್ಲದೆ ಒಂದೇ ಸಮನಾಗಿ ಸಿಹಿಯಾಗಿರುವ ಕಲ್ಲುಸಕ್ಕರೆಯ ತುಂಡುಗಳಲ್ಲ.

ಸಾಮಾಜಿಕರ ಮತ್ತು ಪಾಠಕರ ವಿದ್ಯಾ ಬುದ್ಧಿ ಸಂಸ್ಕಾರಾದಿಗಳ ಮೇಲೆ ಪ್ರತಿಯೊಬ್ಬರಿಗೂ ರಾಮ, ಕೃಷ್ಣ, ಅರ್ಜುನ, ಸೀತೆ, ಸಾವಿತ್ರಿ ಮುಂತಾದವರ

---

[8] ಸಾಹಿತ್ಯದರ್ಪಣ, ಪುಟ ೭೩.

ರಸೇ ಸಾರಶ್ಚಮತ್ಕಾರಃ ಸರ್ವತ್ರಾಪ್ಯನುಭೂಯತೇ |
ತಚ್ಚಮತ್ಕಾರಸಾರತ್ವೇ ಸರ್ವತ್ರಾಪ್ಯದ್ಭುತೋ ರಸಃ ||
(ಚಮತ್ಕಾರಶ್ಚಿತ್ತವಿಸ್ತಾರರೂಪೋ ವಿಸ್ಮಯಾಪರಪರ್ಯಾಯಃ)

ವಿಚಾರವಾಗಿ ಒಂದೊಂದು ಅಭಿಪ್ರಾಯವುಂಟಾಗಿರುತ್ತದೆ. ನಾಟಕಾಭಿನಯವು ಅವುಗಳಿಗೆ ಸಂವಾದಿಯಾಗಿದೆಯೋ ಇಲ್ಲವೇ ಎಂಬುದರ ಮೇಲೆ ಅವರು ಅದರ ಶ್ಲಾಘ್ಯತೆಯನ್ನೂ ಹೀನತೆಯನ್ನೂ ನಿಶ್ಚಯಿಸುತ್ತಾರೆ. ಇದರಿಂದಲೇ ಕವಿಗಳೂ, ಚಿತ್ರಗಾರರೂ ಸ್ವತಂತ್ರವಾಗಿ ರಾಮಾದಿಗಳನ್ನು ಚಿತ್ರಿಸುವುದಕ್ಕೆ ಹೊರಟರೆ, ಒಬ್ಬೊಬ್ಬರು ಒಂದೊಂದು ವಿಧವಾಗಿ ಚಿತ್ರಿಸುವರು. ಆದ್ದರಿಂದ ಕಾವ್ಯನಾಟಕಗಳಲ್ಲಿ ರತ್ಯಾದಿವಿಶೇಷವು ಗ್ರಾಹ್ಯವಾಗುತ್ತದೆಯೇ ಹೊರತು ಸಾಮಾನ್ಯವು ಗ್ರಾಹ್ಯವಾಗುವದಿಲ್ಲ. ಸಿಹಿಯಾದ ಒಂದೇ ಸಕ್ಕರೆಯು ಇತರ ಪದಾರ್ಥಗಳೊಡನೆ ಸೇರುವುದರಿಂದ ನಾನಾಮಧುರಭಕ್ಷ್ಯಗಳಲ್ಲಿ ನಾನಾವಿಧವಾದ ಸಿಹಿರುಚಿಯನ್ನು ಕೊಡುವಂತೆ, ಶೃಂಗಾರರಸವು ಸ್ವಭಾವವಾಗಿ ಮಧುರವಾದರೂ ಆಯಾ ಪಾತ್ರಸನ್ನಿವೇಶಾದಿಗಳಿಗೆ ಅನುಗುಣವಾಗಿ ಅದರ ರುಚಿಯಲ್ಲಿ ಭೇದಗಳಿರುತ್ತವೆ ಎಂದು ಒಪ್ಪಿಕೊಳ್ಳಬೇಕು.

ಸಾಮಾಜಿಕನ (ಪಾಠಕನ) ಸ್ಥಾಯಿಭಾವವು 'ವ್ಯಕ್ತ'ವಾಗುವುದೆಂಬುದು ನವೀನರ ಮತ. ಇದರಮೇಲೆ, ರತ್ಯಾದಿಸುಖರೂಪವಾದ ಸ್ಥಾಯಿಭಾವಗಳ ವ್ಯಕ್ತಿಯಿಂದ ಸುಖವೂ, ಶೋಕಾದಿದುಃಖರೂಪವಾದ ಸ್ಥಾಯಿಭಾವಗಳ ವ್ಯಕ್ತಿಯಿಂದ ದುಃಖವೂ ಉಂಟಾಗುವುದಿಲ್ಲವೇಕೆ?—ಎಂಬುದು ದೊಡ್ಡ ಆಕ್ಷೇಪಣೆ. ಇದಕ್ಕೆ ಅವರು ಹೀಗೆ ಉತ್ತರವನ್ನು ಹೇಳುವರು :

(1) ರಸಾನುಭವದಿಂದ ಸಾಮಾಜಿಕನಲ್ಲಿ ತಾತ್ಕಾಲಿಕವಾಗಿ ರಜೋಗುಣತಮೋಗುಣಗಳು ಕುಗ್ಗಿ ಸತ್ತ್ವಗುಣವು ಹೆಚ್ಚಿ ಸಚ್ಚಿದಾನಂದಾತ್ಮಕವಾದ ಬ್ರಹ್ಮದ ಆವರಣವು ತೆರೆಯುತ್ತದೆ; ಹೀಗೆ ರಸಾನಂದವು ಬ್ರಹ್ಮಾನಂದವೇ ಆದ್ದರಿಂದ ರತಿಶೋಕಾದಿಗಳ ಭೇದಗಳು ಲೆಕ್ಕಕ್ಕೆ ಬರುವುದಿಲ್ಲ.

(2) ಉದ್ವೇಗಜನಕಗಳಾದ ಶೋಕಾದಿಸ್ಥಾಯಿಭಾವಗಳು ವ್ಯಕ್ತವಾದಾಗ, ಶೋಕಾದ್ಯವಚ್ಛಿನ್ನವಾದ ಚೈತನ್ಯದ ಆನಂದಾಂಶದಲ್ಲಿ ಮಾತ್ರ ಆವರಣಭಂಗವಾಗುವುದರಿಂದ ಆನಂದಮಾತ್ರ ಅನುಭವಕ್ಕೆ ಬರುತ್ತದೆ. (ಕಾವ್ಯಪ್ರಕಾಶ ವ್ಯಾಖ್ಯಾನ ೯೯)

(3) ಶೋಕರಸಾನುಭವದಿಂದ ಬರುವ ಕಣ್ಣೀರು ಮುಂತಾದವುಗಳು ಆನಂದಾಶ್ರುಗಳೇ ಹೊರತು ದುಃಖಾಶ್ರುಗಳಲ್ಲ (ಕಾವ್ಯಪ್ರಕಾಶ ಮತ್ತು ರಸಗಂಗಾಧರ).

ಇವುಗಳಲ್ಲಿ :

(1) ರಿಂದ ಶೋಕರಸದಲ್ಲಿಯೂ ಸುಖವುಂಟಾಗುತ್ತದೆ ಎಂಬ ಅನುಭವವನ್ನು ದಾರ್ಶನಿಕಗಳಾದ ಪಾರಿಭಾಷಿಕಶಬ್ದಗಳಿಂದ ತಿಳಿಸಿದಂತಾಯಿತೇ ಹೊರತು ಮತ್ತೆ ಬೇರೆ ಇಲ್ಲ; ಬ್ರಹ್ಮಾನಂದವು ಯಾವ ವಾಸನವೂ ಚಿತ್ತವೃತ್ತಿಯೂ ಇಲ್ಲದೆ

ಅನುಭವಿಸಲ್ಪಡತಕ್ಕದ್ದು. ಇದು ಹಾಗಲ್ಲ; ರಸಾನುಭವಕಾಲದಲ್ಲಿ ಆಯಾ ಸ್ಥಾಯಿಭಾವಗಳೂ ಅವುಗಳ ವಾಸನಗಳೂ ಹೇಗೆ ಹೋಗಬೇಕು ?

(2) ಹಾಗಾದರೆ, ಲೋಕದಲ್ಲಿಯೂ ಶೋಕಾದಿಸ್ಥಾಯಿಭಾವಗಳಲ್ಲಿ ಆನಂದಾಂಶಕ್ಕೆ ಮಾತ್ರ ಆವರಣಭಂಗವೇಕೆ ಆಗುವುದಿಲ್ಲ ?

(3) ಇದು ಎಲ್ಲರೂ ಒಪ್ಪುವ ಮಾತಲ್ಲ; ಹರಿಶ್ಚಂದ್ರಾದಿ ನಾಟಕಗಳನ್ನು ನೋಡುವಾಗ ಬರುವ ಕಣ್ಣೀರು ಆನಂದಾಶ್ರುವಲ್ಲವೆಂದೂ ತಮ್ಮ ಹೃದಯವು ಹಿಂಡಿ ಬಂದ ಶೋಕಾಶ್ರುವೆಂದೂ ಸಾಮಾಜಿಕರು ಬಲ್ಲರು. ಅಲ್ಲದೇ ಭೀಭತ್ಸರಸದಲ್ಲಿ ಕಣ್ಣೀರೇ ಬರುವುದಿಲ್ಲ; ಅಲ್ಲಿ ಮೂಗು ಮುಚ್ಚಿಕೊಳ್ಳುವುದು, ಸಂಕೋಚಪಟ್ಟು ಕೊಳ್ಳುವುದು ಮುಂತಾದ್ದಕ್ಕೆಲ್ಲಾ ಸಮಾಧಾನವನ್ನು ಹೇಗೆ ಹೇಳುವುದು ?

ಅನುಕಾರ್ಯನ (ಅಥವಾ ಕವಿಯ) ಸ್ಥಾಯಿಭಾವವು ವ್ಯಕ್ತವಾಗುವುದೆಂಬ ಮತದಲ್ಲಿಯೂ ಲೋಕದಲ್ಲಿ ಅಪ್ರಿಯವಾದ ಭಯ, ಶೋಕ, ಕ್ರೋಧ, ಜುಗುಪ್ಸೆ ಈ ಸ್ಥಾಯಿಭಾವಗಳಿಂದ ಹುಟ್ಟುವ ರಸದಲ್ಲಿ ಆನಂದದಾಯಕತ್ವಕ್ಕೆ ಉಪಪತ್ತಿಯನ್ನು ಹೇಳುವುದು ಹೇಗೆ? ಕಾವ್ಯನಾಟಕಗಳ ಪಠನದರ್ಶನಾದಿಗಳಿಂದ, ನಿಜವಾಗಿರುವಂತೆ ತೋರುವ ಲೋಕವೃತ್ತವು ನಮಗೆ ಗೋಚರವಾಗುವುದೆಂದು ಒಪ್ಪಿಕೊಂಡರೆ ಆಗ ಈ ಭಯಶೋಕಾದಿಗಳಿಂದ, ನಿಜತ್ವಬುದ್ಧಿಯಿರುವವರೆಗೆ ಲೋಕದಲ್ಲಿ ಉಂಟಾಗುವ ಅಪ್ರೀತಿ ಉದ್ವೇಗಗಳೇ ಉಂಟಾಗುವುವೆಂದು ಒಪ್ಪಿಕೊಳ್ಳಬೇಕು; ಸ್ವಪ್ನದಲ್ಲಿ ಆಗುವುದು ಹೀಗೆ ತಾನೆ. ಇಲ್ಲದಿದ್ದರೆ ಅವು ಅಪ್ರಿಯವಾದ ಶೋಕಾದಿಗಳಂತೆ ಆರಂಭವಾಗಿ ಪ್ರಿಯವಾದ ಶಾಂತಿ ಅದ್ಭುತಾದಿಗಳಾಗಿ ಪರಿಣಮಿಸಬೇಕು. ಈ ಪಕ್ಷದಲ್ಲಿ ಜುಗುಪ್ಸೆಗೆ ಹೇಗೂ ಪ್ರಿಯತ್ವವಿಲ್ಲ. ದುರ್ವಾಸನೆ, ವಿಕಾರ, ಕೊಳಕು ಮುಂತಾದವುಗಳು ಯಾವಾಗಲೂ ಅಪ್ರಿಯಗಳೇ. ಪ್ರೀತಿಯು ಹೇಗೆ ಯಾವಾಗಲೂ ಸುಖಜನಕವೋ ಜುಗುಪ್ಸೆಯೂ ಹಾಗೆ ಯಾವಾಗಲೂ ಉದ್ವೇಗಜನಕ. ರತಿಯು ಮೃದುಮಧುರವಾಗಿರುವ, ರಸವು ತುಂಬಿತುಳುಕುತ್ತಿರುವ, ಹೊಂಬಣ್ಣದ ಹಣ್ಣಿನಂತಿದ್ದರೆ, ಜುಗುಪ್ಸೆಯು ಕೊನೆಗೆ ಸಿಕ್ಕುವ ಕಹಿಯಾದ ಅದರೊಳಗಿನ ಓಟೆಯಂತೆ ಇರುವುದೆಂದು ಹೇಳಬಹುದು. ಆದ್ದರಿಂದ ಜುಗುಪ್ಸಾವಹವಾದ ವಸ್ತುಗಳ ವರ್ಣನೆಯಲ್ಲಿ ಸಹೃದಯಹೃದಯಾಹ್ಲಾದಕವಾದ ರಸವಿರುವುದಾದರೆ ಅದು ಮೇಲೆ ಹೇಳಿದಂತೆ ಅದ್ಭುತಾದಿಗಳಲ್ಲಿ ಪರಿಣಮಿಸಬೇಕು; ಇಲ್ಲದಿದ್ದರೆ ತದ್ವತ್ತಾಗಿರುವಂತೆ ಅದನ್ನು ಸೃಷ್ಟಿಸಿರುವ ಕವಿಯ ಸಾಮರ್ಥ್ಯವನ್ನು ನಾವು ಮೆಚ್ಚಿ ಆಹ್ಲಾದವನ್ನು ಪಡೆಯಬೇಕು. ಇದನ್ನು ನೋಡಿದರೆ, ಕವಿಯ ಭಾವಾಭಿವ್ಯಕ್ತಿನೈಪುಣ್ಯವೇ ಕುಶಲಕರ್ಮದ ತಿರುಳು ಎಂದು ಹೇಳಬೇಕಾಗುತ್ತದೆ. ಶೃಂಗಾರಾದಿರಸಗಳಲ್ಲಿ, ಲೋಕದಲ್ಲಿ ಪ್ರಿಯವಾದ ರತ್ಯಾದಿಗಳು ಬೆರೆತಿರುವುದರಿಂದ ಕೌಶಲ್ಯದ ಪ್ರಾಶಸ್ತ್ಯವು ಸ್ಫುಟವಾಗಿ ತೋರುವುದಿಲ್ಲ. ಇದು ತಿಂಡಿಯ ಮೇಲೆ ಆಶೆಯುಳ್ಳ ಮಕ್ಕಳು, ಮರದ ಬೊಂಬೆಗಿಂತ ಸಕ್ಕರೆಯ ಬೊಂಬೆ ಚೆನ್ನಾಗಿದೆ

ಎಂದು ಹೇಳುವ ಹಾಗೆ ; ಒಂದಕ್ಕೆರಡು ಸುಖವಾದರೆ ಸಂತೋಷವೇಯೋ ; ಆದರೆ ಬೊಂಬೆಯೆಲ್ಲವೂ ಚೆನ್ನಾಗಿರುವುದಾದರೆ ಅದನ್ನು ಸಕ್ಕರೆಯಿಂದಲೇ ಏಕೆ ಮಾಡ ಬೇಕು ? ಮರದ ಬೊಂಬೆಗಳೂ ಕಲ್ಲಿನ ಬೊಂಬೆಗಳೂ ಸಕ್ಕರೆಯವಲ್ಲವಾಗಿ, ಅವು ಚೆನ್ನಾಗಿಲ್ಲವೆಂದು ಹೇಳುವುದಕ್ಕಾಗುತ್ತ ಯೆ ?

**2. ರಸವು ಇರುವುದು ಎಲ್ಲಿ ?** ಕಾವ್ಯನಾಟಕಗಳಲ್ಲಿಯೋ ? ಅನುಕಾರ ವಸ್ತುಗಳಲ್ಲಿಯೋ ? ನಟನಲ್ಲಿಯೋ ? ಸಾಮಾಜಿಕನಲ್ಲಿಯೋ ?

ಲೋಕದಲ್ಲಿ, 'ಈ ಹಣ್ಣು ರಸವತ್ತಾಗಿದೆ' 'ಈ ಪದಾರ್ಥವು ರುಚಿಯಾಗಿದೆ' ಎಂದು ಹೇಳುವಂತೆ 'ಈ ಕಾವ್ಯವು ರಸವತ್ತಾಗಿದೆ' 'ಇದು ನೀರಸವಾಗಿದೆ' ಎಂದು ಹೇಳುವುದು ರೂಢಿಯಾಗಿದೆ. ಇದನ್ನು ನೋಡಿದರೆ ರುಚಿಸುಖವನ್ನು ಕೊಡತಕ್ಕ ರಸವು ವಸ್ತುನಿಷ್ಠವೆಂಬ ಅಭಿಪ್ರಾಯವು ಬರುತ್ತದೆ. ಆದರೆ ವಸ್ತುವಿನ ರುಚಿಯು ತಿಳಿಯಬೇಕಾದರೆ ಅದು ಕರ್ತೃವಿನಿಂದ ಚರ್ವಿತವಾಗಬೇಕು ; ಸಕ್ಕರೆಯ ಮಾಧುರ್ಯವು ಗೊತ್ತಾಗಬೇಕಾದರೆ ಅದು ನಾಲಗೆಯ ಮೇಲೆ ಬೀಳಬೇಕು ; ಒಂದು ಹೊಸಪದಾರ್ಥದ ಗುಣವು ಹೀಗೆ ಅನುಭವಿಸಲ್ಪಡದೆ ತಿಳಿಯದಿರುವುದ ರಿಂದ ಅದು ಭೋಕ್ತೃಸಾಪೇಕ್ಷವಾಯಿತು ; ಇದರಿಂದ ರುಚಿರಸಾದಿಗಳು ಭೋಕ್ತೃ ವಿನಲ್ಲಿರುವುವೆಂದು ಕೆಲವರು ಹೇಳುವರು ; ಆದರೆ ಮಧುರರಸಾಧಿಗಳು ವಸ್ತುನಿಷ್ಠ ವೆಂದೂ ಅವುಗಳ ಅನುಭವದಿಂದ ಉಂಟಾಗುವ ಆನಂದಾದಿಗಳು ಭೋಕ್ತೃನಿಷ್ಠ ವೆಂದೂ ಹೇಳುವುದು ಯುಕ್ತವಾಗಿದೆ. ಹೀಗೆ, ರಸವು ತಜ್ಜನ್ಯವಾದ ಸುಖಕ್ಕಿಂತ ಬೇರೆಯೆಂದೂ ಆದ್ದರಿಂದ ವಸ್ತುನಿಷ್ಠಗುಣವೆಂದೂ ಒಪ್ಪಿಕೊಳ್ಳುವ ಪಕ್ಷಕ್ಕೆ ರಸವು ಸಂದರ್ಭವಿದ್ದ ಹಾಗೆ ಕಾವ್ಯ ನಾಟಕ ಅನುಕಾರ್ಯ ನಟಾದಿಗಳಲ್ಲಿ ಇರುತ್ತದೆ ಯೆಂದೂ,[9] ಹಾಗಲ್ಲದೆ ಚರ್ವಿತವಾಗಿ ಆನಂದಾವಸ್ಥೆಯಲ್ಲಿರುವಾಗಲೇ ರಸವಾಗು ವುದೆಂದು ಹೇಳುವ ಪಕ್ಷಕ್ಕೆ ಅದು ಸಾಮಾಜಿಕನಲ್ಲಿರುತ್ತದೆಯೆಂದೂ ಹೇಳಬೇಕಾ ಗುತ್ತದೆ.

**3. ರಸಾನುಭವದಿಂದ ಆಗುವ ಸುಖವು ಲೋಕದಲ್ಲಿ ಮತ್ತಾವುದ ರಿಂದಲಾದರೂ ಉಂಟಾಗುತ್ತದೆಯೆ ? ಅಥವಾ ಇದೇ ಬೇರೆಯೆ ?**

ಕಾವ್ಯಗಳನ್ನು ಓದುವಾಗ, ನಾವಾಗಿ ತಂದುಕೊಳ್ಳುವ ನಿಜತ್ವಭ್ರಾಂತಿಯ ಮೂಲಕ, ಲೋಕಾನುಭವಸದೃಶವಾದ ಅನುಭವವೇ ಉಂಟಾಗುವುದಾದರೆ

---

[9] ಸಂಗೀತರತ್ನಾಕರ. VII, ೧೩೭೧ ಮತ್ತು ವ್ಯಾಖ್ಯಾನ ನೋಡಿ—
ಸಾಮಾಜಿಕಾಸ್ತು ಲಿಹತೇ ರಸಂ ನಟೋ ಮತಃ |
ವ್ಯಾಖ್ಯಾನ—....ನಟಸ್ತು....ರಸಾಸ್ವಾದಕೋ ನ ಭವತಿ ‖

ಇವೆರಡರ ಸುಖವೂ ಒಂದೇ ಎಂದು ಹೇಳಬಹುದು. ಆದರೆ ಅಷ್ಟೇ ಅಲ್ಲ; ಕುಶಲ ಕರ್ಮದಲ್ಲಿಯ ನಿಪುಣತೆ ಉಂಟುಮಾಡುವ ಸುಖವೂ ಇರುತ್ತದೆ. ಎಂದರೆ, ಮನೋಬುದ್ಧಿಗಳಿಗೆ ಉಂಟಾಗುವ ಎರಡು ವಿಧವಾದ ಲೌಕಿಕ ಸುಖವು ಕಾವ್ಯಾದಿ ಕುಶಲಕರ್ಮದಿಂದ ಉಂಟಾಗುವುದೆಂದು ಹೇಳಿದಹಾಗಾಯಿತು. ಆದರೆ ಲೌಕಿಕ ಸುಖ ದುಃಖಗಳಲ್ಲಿ 'ನಾನು, ನನ್ನದು' ಎಂಬುದು ಹೆಚ್ಚು ಕಡಮೆ ಸೇರಿಕೊಂಡೇ ಇರುತ್ತದೆ. ಈ ಬುದ್ಧಿಯೂ ಅನುಭವವೂ ಹೆಚ್ಚು ಕಡಮೆಯಾಗಿದ್ದಷ್ಟು ಸುಖ ದುಃಖಗಳ ಆಧಿಕ್ಯವೂ ಗಭೀರತೆಯೂ ಉಂಟಾಗುತ್ತದೆ. ಯಾವುದಾದರೂ ಒಂದು ಸಣ್ಣ ವಿಷಯದಲ್ಲಿಯೂ ತನಗೆ ಸುಖವಾಗಲಿ ದುಃಖವಾಗಲಿ ಇಲ್ಲವೆಂದು ತಿಳಿದ ಕೂಡಲೆ ಆ ಪದಾರ್ಥದಲ್ಲಿ ಪ್ರವೃತ್ತಿ, ಭಾವ, ಅಭಿಪ್ರಾಯಗಳೇ ಬದಲಾಯಿಸುತ್ತವೆ. ಉದಾಹರಣೆ: ಖಜಾನೆಯಲ್ಲಿ ಹಣದ ರಾಶಿಯನ್ನು ನೋಡಿದರೆ ಅದರಿಂದ ಸುಖವಾಗುವುದಿಲ್ಲ; ಹಾವು ಹುಲಿ ಮುಂತಾದುವುಗಳು ಬೋನಿನೊಳಗೆ ನಿರ್ಬಂಧದಲ್ಲಿರುವುದನ್ನು ಕಂಡರೆ ಹೆದರಿಕೆಯಾಗುವುದಿಲ್ಲ. ಕುಶಲಕರ್ಮಗಳಿಂದ ಬರುವ ಆನಂದವು ಈ 'ಅಹಂಕಾರ ಮಮಕಾರ'ಗಳ ತೊಡಕಿಲ್ಲದೆ ಅನುಭವಿಸಬಹುದಾದ್ದರಿಂದ ಇದು ಲೌಕಿಕವಾದ ಆನಂದಕ್ಕಿಂತ ಬೇರೆಯೆಂದು ಏಕೆ ಹೇಳಬಾರದು ?

ಅಲಂಕಾರಿಕರೆಲ್ಲರೂ ಕಾವ್ಯಾನಂದವು ಅಲೌಕಿಕವೆಂದು ಒಪ್ಪಿಕೊಳ್ಳುತ್ತಾರೆ. ಇದಕ್ಕೆ ಎರಡು ಕಾರಣ:—(೧)ಲೌಕಿಕಸುಖದಂತೆ ಇದು ಚಿತ್ತವೃತ್ತಿರೂಪವಲ್ಲ.[10] ಇದು ಒಂದು ವಿಧದಲ್ಲಿ ಯುಕ್ತವೆಂದು ತೋರುತ್ತದೆ; ಏಕೆಂದರೆ ಲೌಕಿಕ ಸುಖವು ಬಾಹ್ಯ ವಸ್ತುಗಳನ್ನು ಅನುಭವಿಸಿ ಮನಸ್ಸಿನಲ್ಲಿ ಉಂಟಾಗತಕ್ಕದ್ದು; ಅದು ಒಂದು ಚಿತ್ತವೃತ್ತಿ; ಆದರೆ ಒಂದು ಕಾವ್ಯವನ್ನು ಓದುತ್ತಿರುವಾಗ ನಮಗೆ ಸುಖವಾಗುವುದು ಬಾಹ್ಯವಸ್ತುವಿನ ಅನುಭವದಿಂದಲ್ಲ; ಇಲ್ಲಿ ಬಾಹ್ಯವಸ್ತುವು ಕಾಗದ ಶಾಯಿ ತ್ಯಾದಿಗಳು ಮಾತ್ರ; ಇವು ಮಾತ್ರ ಸ್ಥೂಲೇಂದ್ರಿಯಗಳಿಗೆ ಗೋಚರವಾಗತಕ್ಕವು; ಆದ್ದರಿಂದ ಕಾವ್ಯವನ್ನು ಓದಿದರೆ ಬರತಕ್ಕ ಆನಂದವು ಸ್ಥೂಲೇಂದ್ರಿಯಗಳ ಮೂಲಕ ಬರತಕ್ಕದ್ದಲ್ಲವೆಂಬುದು ಸ್ಪಷ್ಟವಾಗಿದೆ; ಕಾವ್ಯವನ್ನು ಓದುವಾಗ ನಮ್ಮ ಪ್ರತಿಭಾ ಭಾವನಾದಿ ಶಕ್ತಿಗಳಿಂದ ಕಾವ್ಯದಲ್ಲಿ ಪ್ರತಿಪಾದಿತವಾದ ಅರ್ಥವನ್ನು ನಾವು ನಮ್ಮ ಮುಂದೆ ಚಿತ್ರಿಸಿಕೊಳ್ಳುತ್ತೇವೆ; ಎಂದರೆ ಆ ರೂಪವಾದ ಚಿತ್ತವೃತ್ತಿ ನಮ್ಮಲ್ಲಿ ಉಂಟಾಗುತ್ತದೆ. ಆ ಚಿತ್ತವೃತ್ತಿಯಿಂದ ಬೇರೆ ಸುಖವುಂಟಾಗಬೇಕು. ಇದು ಲೌಕಿಕಸುಖಕ್ಕಿಂತ ಬೇರೆ ತಾನೆ! ಸ್ವಪ್ನವನ್ನು ಇದಕ್ಕೆ ಹೋಲಿಸಬಹುದು;

[10] "ಆನಂದೋಹ್ಯಯಂ ನ ಲೌಕಿಕಸುಖಾಂತರಸಾಧಾರಣಃ, ಅನಂತಃಕರಣವೃತ್ತಿರೂಪತ್ವಾತ್"—ರಸಗಂಗಾಧರ ೨೩

ಆದರೆ ಭರತನ ಅಭಿಪ್ರಾಯ ಮಾತ್ರ ಇದು ಲೌಕಿಕವೆಂದಿರುವಂತೆ ತೋರುತ್ತದೆ; "ಆಸ್ವಾದಯಂತಿ ಮನಸಾ ತಸ್ಮಾನ್ನಾಟ್ಯರಸಾಸ್ಸ್ಮೃತಾಃ" (VI, ೩೪)

ಸ್ವಪ್ನದಲ್ಲಿ ನಾವು ರೂಪರಸಗಂಧಸ್ಪರ್ಶಾದಿಗಳಿಗೆ ಸಂಬಂಧಪಟ್ಟ ನಾನಾಸುಖದುಃಖಗಳನ್ನು ಅನುಭವಿಸುತ್ತೇವೆ. ಆದರೆ ಸ್ಥೂಲೇಂದ್ರಿಯಗಳ ಮೂಲಕವಲ್ಲ; ಏಕೆಂದರೆ ಆಗ ನಿಜವಾಗಿ ಆ ವಸ್ತುಗಳೂ ಇರುವುದಿಲ್ಲ; ಸ್ಥೂಲೇಂದ್ರಿಯಗಳೂ ಕೆಲಸಮಾಡುವುದಿಲ್ಲ; ಮನಸ್ಸು ಮಾತ್ರ ವಿಶೃಂಖಲವಾಗಿ, ಅದೂ ಅದರ ಸಹವಾಸನಲ್ಲಿ ದೇಹವೂ ಸ್ವಾತಂತ್ರ್ಯಸುಖವನ್ನು ಅನುಭವಿಸಿದಂತಾಗುವುದು. (೨) ಎರಡನೆಯ ಕಾರಣವೇನೆಂದರೆ, ಶ್ರುತಿಯು "ರಸೋ ವೈ ಸಃ; ರಸಂ ಹ್ಯೇವಾಯಂ ಲಬ್ಧ್ವಾ ಆನಂದೀಭವತಿ" (ತೈತ್ತಿರೀಯ ಉಪನಿಷತ್) ಎಂದು ಹೇಳುತ್ತದೆ. ಇಲ್ಲಿ 'ರಸ'ವೆಂದರೆ ('ನಾಟ್ಯ'ರಸವೆಂದು ಆಚಾರ್ಯರು ಯಾರೂ ವ್ಯಾಖ್ಯಾನ ಮಾಡಿಲ್ಲವಾದರೂ) ನಾಟ್ಯರಸವೇ ಅರ್ಥವೆಂದು ಇಟ್ಟುಕೊಂಡು, ರಸಾನುಭವವು ಬ್ರಹ್ಮಾನಂದವೇ ಎಂದು ಹೇಳುತ್ತಾರೆ. ಆದರೆ ನಿಜವಾದ ಬ್ರಹ್ಮಾನುಭವವು ಚಿತ್ತವೃತ್ತಿಗಳು ಇರುವಾಗ ಆಗತಕ್ಕದ್ದಲ್ಲ. ಅದೇ ಅನುಭವವಲ್ಲ—ತತ್ಸದೃಶವಾದದ್ದು ಎಂದರೆ, ಇದೂ ಬೇರೆಯೊಂದು ವಿಧವಾದ ಲೌಕಿಕಸುಖವೆಂದೇ ಹೇಳಿದಹಾಗಾಯಿತು.

ಅಂತು ರಸಾನುಭವವು ಬ್ರಹ್ಮಾನುಭವವೇ ಆಗಿರಲಿ ಇಲ್ಲದಿರಲಿ, ಕಾವ್ಯಾದಿ ಕುಶಲ ಕರ್ಮಗಳ ಅನುಭವದಿಂದ ಉಂಟಾಗುವ ಆನಂದವು ಪ್ರಪಂಚದಲ್ಲಿ ಮತ್ತೆ ಯಾವ ವೈಷಯಿಕ ಸುಖದಿಂದಲೂ ಉಂಟಾಗುವುದಿಲ್ಲವೆಂದು ಹೇಳಬಹುದು.

* * * * *

**4. ರಸಗಳು ಎಷ್ಟು?** ಸ್ಥಾಯಿಭಾವಗಳು ಎಂಟು (ಅಥವಾ ಒಂಬತ್ತು) ಎಂದೂ, ಸಂಚಾರಿಭಾವಗಳು ಮೂವತ್ತುಮೂರು ಎಂದೂ, ಇವುಗಳಿಂದ ಹುಟ್ಟುವವು ಎಂಟು (ಅಥವಾ ಒಂಬತ್ತು) ರಸಗಳೆಂದೂ ಹೇಳುವುದು ಸರಿಯೆ? ನಮಗೆ ಪ್ರಪಂಚದಲ್ಲಿ ಆಗುವ ಅಸಂಖ್ಯಾತವಾದ ಅನುಭವಗಳಿಗೆ ತಕ್ಕಂತೆ ಭಾವಗಳೂ ಅಸಂಖ್ಯಾತವಲ್ಲವೇ?

ಭರತನ ನಾಟ್ಯಶಾಸ್ತ್ರದಲ್ಲಿ (VI ೩೯–೪೧) ಶೃಂಗಾರ, ರೌದ್ರ, ವೀರ, ಬೀಭತ್ಸ, ಇವು ನಾಲ್ಕು ಮೂಲರಸಗಳೆಂದೂ ಇವುಗಳಿಂದ ಕ್ರಮವಾಗಿ ಹಾಸ್ಯ, ಕರುಣ, ಅದ್ಭುತ, ಭಯಾನಕ ಈ ರಸಗಳು ಹುಟ್ಟುತ್ತವೆಯೆಂದೂ; ಶೃಂಗಾರದ ಅನುಕರಣವೇ ಹಾಸ್ಯ, ರೌದ್ರವೀರಗಳ ಕಾರ್ಯವು ಕರುಣ, ಬೀಭತ್ಸರೂಪವುಳ್ಳದ್ದು[11] ಭಯಾನಕವೆಂದೂ ಹೇಳಿದೆ. ಆದರೆ ಇಲ್ಲಿ ಈ ಪ್ರಕೃತಿರಸಗಳಿಂದ ವಿಕೃತಿರಸಗಳು ಹುಟ್ಟುವ ಕ್ರಮವು ಸ್ಪಷ್ಟವಾಗಿಲ್ಲ. 'ದಶರೂಪಕ'ವು ಇದನ್ನು ಬೇರೊಂದು ವಿಧದಲ್ಲಿ ಹೇಳಿದೆ. (VI, ೪೩–೪೫)

11 "ಬೀಭತ್ಸದರ್ಶನಂ ಯಚ್ಚ ಜ್ಞೇಯಸ್ಸ ತು ಭಯಾನಕಃ".

"ಕಾವ್ಯಾರ್ಥವನ್ನು ಗ್ರಹಿಸುವುದರಿಂದ ಆಗುವ ಆನಂದವು (ಚಿತ್ತ) ವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪ ಎಂದು ನಾಲ್ಕು ವಿಧ ; ಇವು ಶೃಂಗಾರ, ವೀರ, ಬೀಭತ್ಸ, ರೌದ್ರ ಇವುಗಳಲ್ಲಿ ಮನಸ್ಸಿಗೆ ಕ್ರಮವಾಗಿ ಉಂಟಾಗುತ್ತವೆ. ಹಾಸ್ಯ, ಅದ್ಭುತ, ಭಯ, ಕರುಣ ಇವುಗಳಲ್ಲಿಯೂ ಅವೇ ಉಂಟಾಗುತ್ತವೆ. ಆದ್ದರಿಂದಲೇ ಇವು (ಹಾಸ್ಯಾದಿಗಳು) ಅವುಗಳಿಂದ (ಶೃಂಗಾರಾದಿಗಳಿಂದ) ಹುಟ್ಟಿದವುಗಳು ಎಂದೂ (ಸ್ಥಾಯಿಭಾವಗಳು ಎಂಟೇ ಎಂದೂ) ನಿಶ್ಚಯಿಸಿ ಹೇಳಿರುವುದು."

ಇಲ್ಲಿ ವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪಗಳಿಗೆ ಬೇರೆ ವಿಧವಾದ ಒಂದೊಂದು ಉದಾಹರಣೆಯನ್ನು ಕೊಟ್ಟರೆ, ಅವುಗಳ ಸ್ವರೂಪವೂ ಪರಸ್ಪರ ಭೇದವೂ ಚೆನ್ನಾಗಿ ಗೊತ್ತಾಗಬಹುದು.

ವಿಕಾಸ—ಗುಲಾಬಿಯ ಮೊಗ್ಗು ಸುತ್ತಲೂ ಅರಳಿ ದುಂಡಗೆ ಹೂವಾಗುವಂತೆ.

ವಿಸ್ತಾರ—ಕಾದ ತುಪ್ಪದಲ್ಲಿ ಹಾಕಿದ ಹಪ್ಪಳ ಹಿಗ್ಗುವಂತೆ.

ಕ್ಷೋಭ—(ಸಾರನ್ನು) ತೊಳಸಿದಂತೆ, ಅಥವಾ (ಮಜ್ಜಿಗೆ) ಕಡೆದಂತೆ.

ವಿಕ್ಷೇಪ—ಫಿರಂಗಿಯಿಂದ ಹೊಡೆದ ಗುಂಡು ನುಗ್ಗುವಂತೆ.

ಈಚಿನ ಆಲಂಕಾರಿಕರು ನಾಲ್ಕು ರಸಗಳು ಎಂಟಾಗುವ ವಿಚಾರವನ್ನು ತೆಗೆದುಕೊಂಡಿಲ್ಲ; ಆದರೆ ರಸಗಳು ಎಂಟಕ್ಕೆ ಹೆಚ್ಚಾಗಿಲ್ಲವೇ ಎಂದು ಆಶಂಕಿಸಿ ಶಾಂತ, ವಾತ್ಸಲ್ಯ, ಭಕ್ತಿ ಎಂಬ ರಸಗಳೂ ಇಲ್ಲವೇ ಎಂದು ವಿಚಾರಮಾಡಿದ್ದಾರೆ. ಅವರಲ್ಲಿ ಎಲ್ಲರೂ, ವಾತ್ಸಲ್ಯವು ಚಿಕ್ಕವರಲ್ಲಿ ಉಂಟಾಗುವ ಪ್ರೀತಿಯೆಂದೂ, ಭಕ್ತಿಯು ಗುರುಹಿರಿಯರಲ್ಲಿ ಉಂಟಾಗುವ ಪ್ರೀತಿಯೆಂದೂ, ಆದ್ದರಿಂದ ಇವೆಲ್ಲವೂ 'ರತಿ'ಯಲ್ಲಿಯೇ ಅಂತರ್ಭಾವವನ್ನು ಹೊಂದುವುವೆಂದೂ, ಇವು ಭಾವಗಳೇ ಹೊರತು ರಸವಾಗುವುದಿಲ್ಲವೆಂದೂ ಸಿದ್ಧಾಂತಮಾಡಿದ್ದಾರೆ. ಶಾಂತರಸದ ವಿಚಾರವಾಗಿ ಭಿನ್ನಾಭಿಪ್ರಾಯಗಳಿದ್ದರೂ, ಒಟ್ಟಿನ ಮೇಲೆ ಅದನ್ನು ಆಲಂಕಾರಿಕರು ರಸವೆಂದು ಒಪ್ಪಿಕೊಂಡು ಒಂಬತ್ತನೆಯದಾಗಿ ಪರಿಗಣಿಸುತ್ತಾರೆ.

ಶಾಂತರಸವಿಲ್ಲವೆನ್ನುವವರು ಹೇಳುವುದೇನೆಂದರೆ :

ಭರತನು ಇದನ್ನು ಹೇಳಿಲ್ಲ; ಅಲ್ಲದೆ ರಾಗದ್ವೇಷಗಳು ಅನಾದಿಯಾಗಿ ಬಂದಿರುವುದರಿಂದ ಶಾಂತರಸವೇ ಉಂಟಾಗುವುದಿಲ್ಲ; ವೀರಬೀಭತ್ಸಾದಿಗಳಲ್ಲಿ ಬೇಕಾದರೆ ಇದಕ್ಕೆ ಅಂತರ್ಭಾವವನ್ನು ಹೇಳಬಹುದು; ಅಭಿನಯಾತ್ಮಕವಾದ ನಾಟಕಾದಿಗಳಲ್ಲಿ ಶಮವು ಸ್ಥಾಯಿಯಾಗುವುದಿಲ್ಲ; ಏಕೆಂದರೆ, ಶಮವೆಂದರೆ ಚಿತ್ತ ವಿಕಾರವಿಲ್ಲದಿರುವಿಕೆ; ಇದರಿಂದ ಯಾವ ವ್ಯಾಪಾರವೂ ಇಲ್ಲ; ಆದ್ದರಿಂದ ಇದನ್ನು ಅಭಿನಯಿಸುವುದಕ್ಕಾಗುವುದಿಲ್ಲ (ದಶರೂಪಕ VI, ೩೫). ನಿರ್ವೇದಾದಿಗಳಿಂದ ಶಾಂತರಸವು ಹುಟ್ಟುವುವೆಂದು ಹೇಳಬಹುದು; ಆದರೆ 'ನಿರ್ವೇದ'ವು ಸ್ಥಾಯಿಯಲ್ಲ;

ಆದ್ದರಿಂದ ಇದನ್ನು ಪುಷ್ಟಿಗೊಳಿಸಿದರೆ, ವೈರಸ್ಯವೇ ಉಂಟಾಗುತ್ತದೆ (ದಶರೂಪಕ) VI, ೩೭).

ಭರತ, ದಶರೂಪಕಕಾರನಾದ ಧನಂಜಯ ಇವರು ಹೊರತು ಪ್ರಾಯಶಃ ಮಿಕ್ಕ ಆಲಂಕಾರಿಕರೆಲ್ಲರೂ ಶಾಂತರಸವುಂಟೆಂದು ಅಭಿಪ್ರಾಯಪಡುವರು. ಮೇಲೆ ಹೇಳಿದ ಆಕ್ಷೇಪಗಳಿಗೆ ಅವರ ಸಮಾಧಾನವೇನೆಂದರೆ :

ಭರತನು ನಾಟ್ಯರಸಗಳು ಎಂಟೇ ಎಂದು ಹೇಳಿರುವುದು ನಿಜ; ಆದರೆ ಸ್ಥಾಯಿಭಾವಗಳನ್ನು ಹೇಳಿಯಾದ ಮೇಲೆ ಸಂಚಾರಿಭಾವಗಳನ್ನು ಹೇಳಹೊರಟು, ಅಮಂಗಲಕರವಾಗಿದ್ದರೂ ಇರಲೆಂದು ಮೊದಲು 'ನಿರ್ವೇದ'ವನ್ನು (ನಿರ್ವೇದಗ್ಲಾನಿಶಂಕಾ . . . ಎಂದು) ಹೇಳಿರುವುದರಿಂದ, ಅದು (ನಿರ್ವೇದವು) ಸ್ಥಾಯಿ ಸಂಚಾರಿ ಎರಡೂ ಆಗಬಹುದೆಂಬುದು ಅವನ ಅಭಿಪ್ರಾಯ. ಇದು ಸ್ಥಾಯಿಯಾದಾಗ ಇದರಿಂದ ಶಾಂತರಸವು ಹುಟ್ಟುವುದು. ರಾಗದ್ವೇಷಾದಿಗಳು ಅನಾದಿಯಾಗಿ ಬಂದಿದ್ದರೂ, ಆತ್ಮನ ಪ್ರಕೃತಿಯೇ ಶಾಂತಿ (ಸಂಗೀತ ರತ್ನಾಕರ VII ೧೫೨೫ . . .) ಇದು ವಿಷಯ ವೈಮುಖ್ಯದಿಂದ ಯಾರಲ್ಲಿ ಬೇಕಾದರೂ ಉಂಟಾಗುತ್ತದೆ. ಇದಕ್ಕೆ ಬೇರೇ ಅಭಿನಯವೇನೂ ಇಲ್ಲ. ಸ್ವಭಾವಸ್ಥಿತಿಯನ್ನು ಅಭಿನಯಿಸುವಂತೆಯೇ ಇದನ್ನೂ ಆಂಗಿಕಾಭಿನಯದಿಂದಲೂ ವೇದಾಂತದ ಶ್ರವಣ, ಪಾಠ, ಬೋಧನೆ ಮುಂತಾದವುಗಳಿಂದಲೂ ಪ್ರದರ್ಶಿಸಬಹುದು. (ತತ್ತ್ವಜ್ಞಾನದಿಂದ ಉಂಟಾಗಿ ಸ್ಥಿರವಾಗಿ ನಿಲ್ಲತಕ್ಕ ವಿಷಯವೈಮುಖ್ಯವು ಸ್ಥಾಯಿಯಾಗುತ್ತದೆ. ಅತಿತೃಪ್ತಿ ಆಶಾಭಂಗ ಮುಂತಾದವುಗಳಿಂದ ತಾತ್ಕಾಲಿಕವಾಗಿ ಉಂಟಾಗತಕ್ಕದ್ದು ಸಂಚಾರಿ ಭಾವವಾಗುತ್ತದೆ)—ಇತ್ಯಾದಿ.

ಇದನ್ನು ನೋಡಿದರೆ, ಭರತನು ಹೇಳಿರುವುದು ಎಂಟೇ ರಸಗಳೆಂದೂ, ಶಾಂತ ರಸವನ್ನು ಈಚಿನವರು ಒಪ್ಪಿಕೊಂಡು ಅದಕ್ಕೆ ಆಧಾರವನ್ನು ಬಹುಕ್ಲೇಶದಿಂದ ಭರತನ ವಾಕ್ಯದಲ್ಲಿ ಕಂಡುಹಿಡಿಯುತ್ತಿರುವರೆಂದೂ ತೋರುತ್ತದೆ. ರಾಗದ್ವೇಷಾದಿಗಳಿಂದ ಚಿತ್ತವು ಕ್ಷುಭಿತವಾದರೆ, ಆಗ ಸ್ಪಷ್ಟವಾದ ನಾನಾ ಅನುಭಾವಗಳು ಉಂಟಾಗುತ್ತವೆ. ಹಾಗಲ್ಲದೆ ಚಿತ್ತವು ತನ್ನಲ್ಲಿ ತಾನು ನಿರುದ್ಧವಾಗಿ ಅಥವಾ ಶಾಂತವಾಗಿ ಬಾಹ್ಯ ವಿಷಯಗಳಲ್ಲಿ ಪ್ರವರ್ತಿಸದಿದ್ದರೆ, ಶಾರೀರಕವಾದ ಬಾಹ್ಯವಿಕಾರಗಳೂ, ಕಾರ್ಯಗಳೂ ಉಂಟಾಗುವುದಿಲ್ಲ; ಉಂಟಾದರೂ ಅವು ಸೂಕ್ಷ್ಮವಾಗಿರುವುವು; ನಾಟ್ಯದಲ್ಲಿ ಅಭಿನಯವೇ ಪ್ರಧಾನವಾದ್ದರಿಂದ, ಅನುಭಾವಗಳೇ ಇಲ್ಲದ, ಅಥವಾ ಇದ್ದರೂ ಸೂಕ್ಷ್ಮವಾಗಿಯೂ ಅಲ್ಪವಾಗಿಯೂ ಇರುವ, ಶಾಂತವನ್ನು ಅಭಿನಯಿಸಿ ತೋರಿಸುವುದು ಕಷ್ಟ. ಅಲ್ಲದೆ, ಇದರಿಂದ ಭಾವಾಂತರಗಳು ಹುಟ್ಟುವುದಿಲ್ಲ; ರಸವಾಗ ಬೇಕಾದರೆ ಭಾವಾಂತರಗಳು ಹುಟ್ಟಿ ಅವುಗಳ ಅಭಿನಯದಿಂದ ಸ್ಥಾಯಿ ಪುಷ್ಟಿಗೊಳ್ಳ ಬೇಕು. ಶ್ರವ್ಯಕಾವ್ಯದಲ್ಲಾದರೆ, ಶಾಂತಕ್ಕೆ ವಿಭಾವಾದಿಗಳನ್ನು ಚೆನ್ನಾಗಿ ಪ್ರದರ್ಶಿಸಿ ಅದರಿಂದಾಗುವ ಫಲಗಳನ್ನು ವಿಸ್ತಾರವಾಗಿ ತೋರಿಸಿ ಪುಷ್ಟಿಗೊಳಿಸುವುದು ಸಾಧ್ಯ

ವಾದ್ದರಿಂದ ಆಲಂಕಾರಿಕರು ಕಾವ್ಯದಲ್ಲಿ ಇದನ್ನು ಒಪ್ಪಿಕೊಂಡಿರುವರೆಂದು ತೋರುತ್ತದೆ.

ಆದರೆ, ರಸಗಳು ಒಂಬತ್ತಕ್ಕಿಂತಲೂ ಹೆಚ್ಚೆಂದು ಯಾರೂ ಹೇಳುವುದಿಲ್ಲ; ಅಲಂಕಾರಗಳು ಬೆಳೆದುಹೋಗಿರುವಂತೆ ಇವೂ ಬೆಳೆದುಹೋಗಿ ಹಿಡಿತಕ್ಕೆ ಸಿಕ್ಕದೆ ಅನವಸ್ಥೆಯುಂಟಾಗಬಹುದಾಗಿರುವುದೇ ಇದಕ್ಕೆ ಕಾರಣವೆಂದು ತೋರುತ್ತದೆ. ಈ ವಿಚಾರವಾಗಿ ರಸಗಂಗಾಧರಕಾರರು ಬರೆದಿರುವ ವಾಕ್ಯಗಳನ್ನು ಇಲ್ಲಿ ಕನ್ನಡಿಸಿ ಬರೆಯಬಹುದು:

"ಇವು ಇಷ್ಟೇ ರಸಗಳೆನ್ನುವುದು ಹೇಗೆ? ಭಾಗವತ ಮುಂತಾದ ಪುರಾಣಗಳನ್ನು ಕೇಳುತ್ತಿರುವಾಗ ಭಗವದ್ಭಕ್ತರು, ಭಗವಂತನೇ ಆಲಂಬನ (ವಿಭಾವ) ವಾಗಿಯೂ, ರೋಮಾಂಚ ಕಣ್ಣೀರು ಮುಂತಾದ ಅನುಭಾವಗಳುಳ್ಳದ್ದಾಗಿಯೂ ಹರ್ಷಾದಿಗಳಿಂದ ಪರಿಪೋಷಿತವಾಗಿಯೂ ಇರುವ ಭಕ್ತಿರಸವನ್ನು ಅನುಭವಿಸುತ್ತಾರೆ. ಭಗವಂತನಲ್ಲಿ ಇರುವ ಅನುರಾಗರೂಪವಾದ ಭಕ್ತಿಯೇ ಇಲ್ಲಿ ಸ್ಥಾಯಿಭಾವ. ಇದು ಶಾಂತರಸದಲ್ಲಿ ಅಂತರ್ಭೂತವಾಗುವುಲ್ಲ; ಏಕೆಂದರೆ, ಅನುರಾಗವೂ ವೈರಾಗ್ಯವೂ ಪರಸ್ಪರ ವಿರುದ್ಧವಾದುವುಗಳು—ಎಂದರೆ (ಅದಕ್ಕೆ ಉತ್ತರವಾಗಿ) ಹೇಳುವುದೇನೆಂದರೆ, ಭಕ್ತಿ ದೇವಾದಿಗಳಲ್ಲಿ ಇರತಕ್ಕ 'ರತಿ'ಯಾದ್ದರಿಂದ 'ಭಾವ'ವಾಗುತ್ತದೆಯೇ ಹೊರತು ಅದಕ್ಕೆ ರಸತ್ವವು ಬರುವುದಿಲ್ಲ...ಪ್ರಾಚೀನರೂ ಹೀಗೆಯೇ ಸಿದ್ಧಾಂತ ಮಾಡಿರುತ್ತಾರೆ.

"ಹಾಗಾದರೆ ಸ್ತ್ರೀಯರಲ್ಲಿ ಉಂಟಾಗತಕ್ಕ ರತಿಯೂ 'ಭಾವ'ವೇ ಆಗಲಿ, ರತಿಯೆಲ್ಲಾ ಒಂದೇ ತಾನೇ; ಭಗವದ್ಭಕ್ತಿಯೇ ಸ್ಥಾಯಿಯಾಗಿರಲಿ, ಸ್ತ್ರೀರತಿಯೇ ಭಾವವಾಗಿರಲಿ; 'ಇದು ಹೇಗೆ' ಯೆಂದು ನಿಶ್ಚಯಿಸುವುದಕ್ಕೆ ವಿಶೇಷಕಾರಣವೇನೂ ಇಲ್ಲ—ಎನ್ನಬಾರದು. ಏಕೆಂದರೆ, ಭರತಾದಿಮುನಿಗಳ ವಚನವೇ, ಇದು ರಸ, ಇದು ಭಾವ ಎಂಬ ವಿಷಯವನ್ನು ನಿಶ್ಚಯಿಸುವುದು; ನಮಗೆ ಇದರಲ್ಲಿ ಸ್ವಾತಂತ್ರ್ಯವಿಲ್ಲ; ಹಾಗಿಲ್ಲದಿದ್ದರೆ, ಮಕ್ಕಳಲ್ಲಿರುವ 'ರತಿ'ಗೂ ಸ್ಥಾಯಿತ್ವವೇಕೆ ಬರುವುದಿಲ್ಲ?[12] ಜುಗುಪ್ಸಾ ಶೋಕಾದಿಗಳು ಶುದ್ಧಭಾವಗಳೇ ಏಕಾಗುವುದಿಲ್ಲ? - ಎಂದು ಶಾಸ್ತ್ರವೆಲ್ಲಾ ಅನವಸ್ಥೆಗೆ ಇಟ್ಟುಕೊಂಡೀತು; ರಸಗಳು ಒಂಬತ್ತು ಎಂದು ಹೇಳಿರುವ (?) ಮುನಿವಚನಕ್ಕೆ ಭಂಗ ಬಂದೀತು. ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವುದೇ ಸರಿಯಾಗಿದೆ."

* * * * *

ಈ ರಸಗಳಲ್ಲಿ ಪರಸ್ಪರ ಮಿತ್ರತ್ವ ಶತ್ರುತ್ವಗಳುಂಟು. (ಎಂದರೆ, ಒಂದು ರಸದ ಜೊತೆಯಲ್ಲಿ ಕೆಲವು ರಸಗಳು ಬಂದರೆ ಹೊಂದಿಕೆಯಾಗಿ ಚೆನ್ನಾಗಿರುತ್ತವೆ;

---

[12] ಎಂದರೆ "ಇದರಿಂದ ಶೃಂಗಾರರಸವೇಕೆ ಹುಟ್ಟುವುದಿಲ್ಲ?" ಎಂದು ಪ್ರಶ್ನೆ

ಮತ್ತೆ ಕೆಲವು ರಸಗಳು ಜೊತೆಯಲ್ಲಿ ಬಂದರೆ ಒಪ್ಪುವುದಿಲ್ಲ.) ಹೀಗೆ, ಶೃಂಗಾರ ವೀರಗಳಿಗೂ, ಶೃಂಗಾರ ಹಾಸ್ಯಗಳಿಗೂ, ವೀರಾದ್ಭುತಗಳಿಗೂ, ವೀರರೌದ್ರಗಳಿಗೂ ಶೃಂಗಾರಾದ್ಭುತಗಳಿಗೂ ಮೈತ್ರಿ; ಶೃಂಗಾರಬೀಭತ್ಸಗಳಿಗೂ, ಶೃಂಗಾರಕರುಣ ಗಳಿಗೂ, ವೀರಭಯಾನಕಗಳಿಗೂ, ಶಾಂತರೌದ್ರಗಳಿಗೂ, ಶಾಂತಶೃಂಗಾರಗಳಿಗೂ ವಿರೋಧ.

ರತ್ಯಾದಿಸ್ಥಾಯಿಭಾವಗಳು ಪುಷ್ಟವಾಗಿದ್ದರೂ, ಅಥವಾ ದೇವತಾಗುರು ಜನಗಳಲ್ಲಿರುವಂತೆ ವರ್ಣಿಸಲ್ಪಟ್ಟರೂ (ಉದಾಹರಣೆ: ಜೈಮಿನಿಭಾರತದಲ್ಲಿ ರಾಮ ಸೀತೆಯರ ಶೃಂಗಾರವರ್ಣನೆ) ಅವು ಭಾವಗಳೇ ಹೊಸತು ರಸವಾಗುವುದಿಲ್ಲ. ಇದರಂತೆ, ನಿರ್ವೇದಾದಿ ಭಾವಗಳು ವಿಭಾವಾನುಭಾವಗಳೊಡನೆ ಅಭಿನಯಿಸ ಲ್ಪಟ್ಟರೂ, ಅಥವಾ ವರ್ಣಿಸಲ್ಪಟ್ಟರೂ ಅವೂ 'ಭಾವ'ಗಳಾಗುವುವೇ ಹೊರತು 'ರಸ'ಗಳಾಗುವುದಿಲ್ಲ.

ಸ್ಥಾಯಿಭಾವಗಳು ಭಾವಾಂತರಗಳಿಂದ ಸೇರಿ ಪುಷ್ಟಿಗೊಂಡಾಗ ಮಾತ್ರ ರಸವುಂಟಾಗುವುದು ; [13] ರಸಭಾವಗಳೆರಡರಿಂದಲೂ ಸಾಮಾಜಿಕಪಾಠಕರಿಗೆ ಆನಂದವೇನೋ ಆಗುವುದು ; ಆದರೆ ರಸದಿಂದ ಆನಂದವು ಹೆಚ್ಚಾಗಿಯೂ ಭಾವ ದಿಂದ ಕಡಮೆಯೂ ಆಗುತ್ತದೆಂದೂ, ಆದ್ದರಿಂದ ಭಾವಗಳು ಒಂದು ವಿಧದಲ್ಲಿ ಸಣ್ಣ ರಸಗಳೆಂದೂ ಹೇಳಬಹುದು.

ವಿಭಾವಾನುಭಾವಸಂಚಾರಿಭಾವಗಳೆಲ್ಲಾ ಇದ್ದರೂ, ಆಯಾ ಪಾತ್ರಗಳು ತಮ್ಮ ಗುಣಸ್ವಭಾವಾದಿಗಳಿಗೆ ವಿರುದ್ಧವಾಗಿ ನಡೆದುಕೊಳ್ಳುವುವೇ ಮುಂತಾದ ಕಾರಣಗಳಿಂದ ಸಹೃದಯರಾದ ಸಾಮಾಜಿಕರಿಗೆ 'ಇದು ಅನುಚಿತ'[15] ಎಂಬ ಬುದ್ಧಿಯು ಉಂಟಾದರೆ ಆಗ ನಿಜವಾದ ರಸವು ಹುಟ್ಟದೆ ರಸದಂತೆ ತೋರುವ 'ರಸಾಭಾಸ'ವು ಉಂಟಾಗುವುದು. ಉದಾಹರಣೆ: ಅಹಲ್ಯೆಯಲ್ಲಿ ಇಂದ್ರನು ಮೋಹಪಟ್ಟ ವೃತ್ತಾಂತದ ವರ್ಣನೆ; (ಲೀಲಾವತಿಯಲ್ಲಿ) ಪಕ್ಷಿಗಳ ಪರಸ್ಪರ ಪ್ರೇಮದ ವರ್ಣನೆ, ಇದರಂತೆ ಭಾವವೂ ಅನೌಚಿತ್ಯದಿಂದ 'ಭಾವಾಭಾಸ' ವಾಗಬಹುದು.

---

[13] ಸಂಗೀತರತ್ನಾಕರ VII, ೧೪೧೨ ಮತ್ತು ವ್ಯಾಖ್ಯಾನ – "ನೈಕರೂಪೇ ಚಿರಾಸ್ವಾದ್ಯಃ ಶರ್ಕರಾವದ್ಭವೇದಸೌ" ಇತ್ಯಾದಿ.

[14] ಅನೌಚಿತ್ಯವು ನಾನಾರೂಪವಾಗಿರಬಹುದು : ನಾಯಿಕೆಯು ಉಪನಾಯಕನಲ್ಲಾಗಲಿ ಬಹುನಾಯಕರಲ್ಲಾಗಲಿ ಅನುರಕ್ತಳಾಗಿರುವುದು, ನಾಯಕ ನಾಯಿಕೆಯರಲ್ಲಿ ಅನುರಾಗವೇ ಇಲ್ಲದಿರುವುದು, ಪೂಜ್ಯಳಾದ ಸ್ತ್ರೀಯನ್ನು ಮೋಹಿಸುವುದು, ಪಶು ಪಕ್ಷಿ ಮುಂತಾದ ತಿರ್ಯಗ್ಜಂತುಗಳಲ್ಲಿ ಪರಸ್ಪರ ಪ್ರೇಮ ; ಹೀಗೆ ಗೌರವಾರ್ಹರಾದ ದೊಡ್ಡವರನ್ನು ಹಾಸ್ಯಾಸ್ಪದರನ್ನಾಗಿ ಮಾಡುವುದು ; ಅಧಮರಲ್ಲಿ ಶೌರ್ಯ, ವೀರನಲ್ಲಿ ಹೆದರಿಕೆ, ಮುಂತಾದವುಗಳನ್ನು ವರ್ಣಿಸುವುದು—ಇತ್ಯಾದಿ.

ಒಂದು ಭಾವವು ಶಾಂತ (ಅದೃಶ್ಯ)ವಾಯಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವಶಾಂತಿ'ಯೆಂದೂ, ಒಂದು ಭಾವವು ಹೊಸದಾಗಿ ಹುಟ್ಟಿತು ಎಂದು ವರ್ಣಿಸಿದರೆ ಅದಕ್ಕೆ 'ಭಾವೋದಯ'ವೆಂದೂ ಪರಸ್ಪರ ವಿರುದ್ಧವಾದ(?) ಎರಡು ಭಾವಗಳು ಏಕಕಾಲದಲ್ಲಿ ಇದ್ದುವು ಎಂದು ವರ್ಣಿಸಿದರೆ ಅದಕ್ಕೆ 'ಭಾವಸಂಧಿ' ಯೆಂದೂ, ಹಿಂದೆ ಇದ್ದ ಒಂದೊಂದು ಭಾವವನ್ನು ಹೊಸಹೊಸದಾಗಿ ಹುಟ್ಟಿದ ಮತ್ತೊಂದೊಂದು ಭಾವವು ಮುಚ್ಚುವಂತೆ ನಾನಾಭಾವಗಳನ್ನು ಚಿತ್ರಿಸಿದರೆ ಅದಕ್ಕೆ 'ಭಾವಶಬಲತೆ'ಯೆಂದೂ ಹೆಸರು.

## ೬. ದೃಶ್ಯಕಾವ್ಯಗಳು

ಅಭಿನಯದ[1] ಸಹಾಯದಿಂದ ಪ್ರದರ್ಶಿಸಲ್ಪಡಬಹುದಾದ ಕಾವ್ಯಗಳಿಗೆ ದೃಶ್ಯ (ಎಂದರೆ ನೋಡಬಹುದಾದ) ಕಾವ್ಯಗಳೆಂದೂ ರೂಪಕಗಳೆಂದೂ ಹೆಸರು. ಇವು ೧. ನಾಟಕ, ೨. ಪ್ರಕರಣ, ೩. ಭಾಣ, ೪, ಪ್ರಹಸನ, ೫. ಡಿಮ, ೬. ವ್ಯಾಯೋಗ, ೭. ಸಮವಾಕಾರ, ೮. ವೀಥಿ, ೯. ಅಂಕ, ೧೦. ಈಹಾಮೃಗ—ಎಂದು ಹತ್ತು ವಿಧ. ಇವುಗಳಲ್ಲದೆ, ನಾಟಿಕೆ, ತ್ರೋಟಕ, ಗೋಷ್ಠಿ, ಸಟ್ಟಕ, ನಾಟ್ಯರಾಸಕ, ಪ್ರಸ್ಥಾನಕ, ಉಲ್ಲಾಸ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಿಕ, ವಿಲಾಸಿಕಾ, ದುರ್ಮಲ್ಲಿಕಾ, ಪ್ರಕರಣಿಕಾ, ಹಲ್ಲೀಶ, ಭಾಣಿಕಾ, ಎಂದು ಹದಿನೆಂಟು 'ಉಪರೂಪಕ'ಗಳಿವೆ. ಇವುಗಳಿಗೆಲ್ಲಾ ಕೆಲವು ಸಾಮಾನ್ಯ ಲಕ್ಷಣಗಳೂ ವಸ್ತು-ನಾಯಕ-ರಸ-ಭೇದದಿಂದ ಕೆಲವು ಭೇದಗಳೂ ಇರುತ್ತವೆ.

ವಸ್ತು, ನಾಯಕ, ರಸ ಈ ಮೂರು ಅಂಶಗಳಲ್ಲಿ ರಸವು ಮುಖ್ಯವಾದದ್ದರಿಂದಲೂ ರಸವು ದೃಶ್ಯಶ್ರವ್ಯಕಾವ್ಯಗಳೆರಡಕ್ಕೂ ಸಂಬಂಧಪಟ್ಟಿರುವುದರಿಂದಲೂ ಅದು ಹಿಂದೆ ಪ್ರತಿಪಾದಿಸಲ್ಪಟ್ಟಿತು. ಆದ್ದರಿಂದ ಇಲ್ಲಿ ವಸ್ತು ಮತ್ತು ನಾಯಕ ನಾಯಿಕೆಯರ ಸ್ವರೂಪವನ್ನು ತಿಳಿಸಿದರೆ, ರೂಪಕಾದಿಗಳ ಲಕ್ಷಣವು ಸ್ಪಷ್ಟವಾಗಿ ಗೊತ್ತಾಗುತ್ತದೆ.

### ೧. ವಸ್ತು

'ವಸ್ತು'ವೆಂದರೆ ಕಾವ್ಯದಲ್ಲಿರತಕ್ಕ ಕಥಾಭಾಗ. ಇದಕ್ಕೆ 'ಇತಿವೃತ್ತ'ವೆಂದೂ ಹೆಸರು. ಇದು 'ಆಧಿಕಾರಿಕ' 'ಪ್ರಾಸಂಗಿಕ' ಎಂದು ಎರಡು ವಿಧ. ಆಧಿಕಾರಿಕವೆಂದರೆ ಕಾವ್ಯದ ಉದ್ದಕ್ಕೂ ಬರುವ ಮುಖ್ಯವಾದ ಕಥೆ. ಉದಾಹರಣೆ: ರಾಮಾಯಣ ನಾಟಕದಲ್ಲಿ ರಾಮವೃತ್ತಾಂತ. ಪ್ರಾಸಂಗಿಕವೆಂದರೆ, ಮುಖ್ಯ ಕಥೆಗೆ ಅಂಗವಾಗಿ ಮಧ್ಯೆ ಬರತಕ್ಕ ಕಥೆ. ಉದಾಹರಣೆ: ರಾಮಾಯಣದಲ್ಲಿ ವಾಲಿ ಸುಗ್ರೀವರ ವೃತ್ತಾಂತ. ಪ್ರಾಸಂಗಿಕವು ದೊಡ್ಡದಾಗಿದ್ದರೆ ಅದಕ್ಕೆ 'ಪತಾಕಾ' ಎಂದೂ ಸ್ವಲ್ಪವಾಗಿದ್ದರೆ (ಉದಾಹರಣೆ: ಅಹಲ್ಯಾಶಾಪವಿಮೋಚನ, ಶಬರೀ ವೃತ್ತಾಂತ ಇತ್ಯಾದಿ.) 'ಪ್ರಕರೀ' ಯೆಂದೂ ಹೆಸರು.[2] ಈ

---

[1] ಅಭಿನಯವು 'ಆಂಗಿಕ' (ಅಂಗಚಲನೆಗಳು), 'ವಾಚಿಕ' (ಮಾತಿಗೆ ಸಂಬಂಧಪಟ್ಟವು). ಆಹಾರ್ಯಕ' (ವೇಷಭೂಷಾದಿಗಳ ರಚನೆ). 'ಸಾತ್ವಿಕ' (ರೋಮಾಂಚಾದಿಗಳ ಪ್ರದರ್ಶನ —ಎಂದು ನಾಲ್ಕು ವಿಧ.

[2] ನಡೆಯುತ್ತಿರುವ ಅಥವಾ ಮುಂದೆ ಬರುವ ವಿಷಯವನ್ನು ಅನ್ಯೋಕ್ತಿ ಸಮಾಸೋಕ್ತಿಗಳಿಂದ (ಎಂದರೆ, ಒಂದೇ ವಿಧವಾದ ವೃತ್ತಾಂತಕಥನದಿಂದ ಅಥವಾ ಒಂದೇ ವಿಶೇಷಣ ಪ್ರಯೋಗದಿಂದ) ಸೂಚಿಸುವುದು 'ಪತಾಕಾಸ್ಥಾನ'.

ಮೂರು ವಿಧವಾದ ವಸ್ತುವೂ 'ಪ್ರಖ್ಯಾತ' ಎಂದರೆ—ರಾಮಾಯಣ, ಭಾರತ, ಕಥಾಸರಿತ್ಸಾಗರ ಮುಂತಾದ ಗ್ರಂಥಗಳಲ್ಲಿ ಬಂದು — ಪ್ರಸಿದ್ಧವಾಗಿರಬಹುದು; ಅಥವಾ 'ಉತ್ಪಾದ್ಯ'ವಾಗಿ—ಎಂದರೆ ಕವಿಯಿಂದ ಹೊಸದಾಗಿ ಕಲ್ಪಿತವಾಗಿ ಇರಬಹುದು; ಇಲ್ಲವೇ, 'ಮಿಶ್ರ'—ಎಂದರೆ ಪ್ರಸಿದ್ಧವಾದ ಕಥೆಯಲ್ಲಿ ಬದಲಾವಣೆಗಳನ್ನು ಮಾಡಿದ್ದು—ಆಗಿರಬಹುದು.

—ಅರ್ಥೋಪಕ್ಷೇಪಕಗಳು—

ನೀರಸವಾದ ಅಥವಾ ಅನುಚಿತವಾದ[3] ವಸ್ತುಭಾಗಗಳು ದೃಶ್ಯಕಾವ್ಯದಲ್ಲಿ 'ಅರ್ಥೋಪಕ್ಷೇಪಕ'ಗಳಿಂದ ಸೂಚಿಸಲ್ಪಡಬೇಕು. ಮಧುರವಾಗಿಯೂ, ಉದಾತ್ತವಾಗಿಯೂ, ರಸಭಾವಪರಿಪೂರ್ಣವಾಗಿಯೂ ಇರುವ ಭಾಗಗಳು ಮಾತ್ರ ನೋಟಕ್ಕೆ ಯೋಗ್ಯವಾದವು. ಈ 'ಅರ್ಥೋಪಕ್ಷೇಪಕ'ಗಳು ಯಾವುವೆಂದರೆ:

1. **ವಿಷ್ಕಂಭ**—ನಡೆದುಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮಪಾತ್ರಗಳ ಮೂಲಕ ಸಂಕ್ಷೇಪವಾಗಿ ಸೂಚಿಸುವುದು. ಇದೇ 'ಶುದ್ಧ ವಿಷ್ಕಂಭ'. ಮಧ್ಯಮಪಾತ್ರಗಳೂ, ನೀಚಪಾತ್ರಗಳೂ, ಸೇರಿ ಸೂಚಿಸಿದರೆ ಅದಕ್ಕೆ 'ಸಂಕೀರ್ಣವಿಷ್ಕಂಭ'ವೆಂದು ಹೆಸರು.

2. **ಪ್ರವೇಶಕ**—ಹಿಂದೆ ನಡೆದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಬರಿಯ ನೀಚಪಾತ್ರಗಳಿಂದಲೇ ಸೂಚಿಸುವುದು. ಇದು ಎರಡು ಅಂಕಗಳ ಮಧ್ಯದಲ್ಲಿಯೇ ಬರುತ್ತದೆ. (ಎಂದರೆ, 'ವಿಷ್ಕಂಭ'ವು ನಾಟಕದ ಮೊದಲಲ್ಲಿಯೇ ಬರಬಹುದು; ಪ್ರವೇಶಕವು ಹಾಗೆ ಬರುವುದಿಲ್ಲ—ಒಂದು ಅಂಕವು ಮುಗಿದು ಮತ್ತೊಂದು ಅಂಕವು ಆರಂಭವಾಗುವುದಕ್ಕಿಂತ ಮುಂಚೆ ಬರತಕ್ಕದ್ದು).

3. **ಚೂಲಿಕಾ**—ಪಾತ್ರಗಳು ರಂಗಕ್ಕೆ ಬರದೆ ತೆರೆಯ ಹಿಂದೆಯೇ ಇದ್ದು ಮಾತನಾಡಿ ಯಾವುದಾದರೂ ಒಂದು ಸಂಗತಿಯನ್ನು ಸೂಚಿಸುವುದು.

4. **ಅಂಕಾಸ್ಯ**—(ಅಂಕಮುಖ) ಒಂದು ಅಂಕದ ಕೊನೆಯಲ್ಲಿ ಪಾತ್ರಗಳು ಹೋಗುವಾಗ ಮುಂದಿನ ಅಂಕದ ಆರಂಭದಲ್ಲಿ ಬರುವ ಬೇರೊಂದು ವಿಷಯವನ್ನು ಸೂಚಿಸುವುದು.

---

[3] ದೂರಪ್ರಯಾಣ, ಕೊಲೆ, ಯುದ್ಧ, ರಾಜ್ಯವಿಪ್ಲವ, ಮುತ್ತಿಗೆ, ಊಟ, ಸ್ನಾನ, ಸಂಭೋಗ, ಲೇಪನ, ವಸ್ತ್ರಧಾರಣ ಇತ್ಯಾದಿಗಳನ್ನು ರಂಗದಲ್ಲಿ ಪ್ರತ್ಯಕ್ಷವಾಗಿ ಅಭಿನಯಿಸಕೂಡದು. (ದಶರೂಪಕ III, ೩೪–೩೬). ನಾಯಕನ ವಧೆಯನ್ನು ಎಲ್ಲಿಯೂ ವರ್ಣಿಸಲೂ ಸೂಚಿಸಲೂ ಬಾರದು. ಆದರೆ ಭಾಸನ 'ಬಾಲಚರಿತ'ದಲ್ಲಿ ಕೊಲೆ ಮತ್ತು ಯುದ್ಧಗಳು ಪ್ರದರ್ಶಿಸಲ್ಪಡುವುವು. 'ಊರುಭಂಗ'ದಲ್ಲಿ ದುರ್ಯೋಧನನೂ, 'ಪ್ರತಿಮಾನಾಟಕ'ದಲ್ಲಿ ದಶರಥನೂ, 'ಅಭಿಷೇಕ' ನಾಟಕದಲ್ಲಿ ವಾಲಿಯೂ ರಂಗದಲ್ಲಿಯೇ ಸಾಯುವರು.

5. **ಅಂಕಾವತಾರ**—ಒಂದು ಅಂಕದ ಕೊನೆಯಲ್ಲಿ ಪಾತ್ರಗಳು ಹೋಗುವಾಗ ಸೂಚಿಸುವ ವಿಷಯದಿಂದಲೇ ಮತ್ತು ಅದೇ ಪಾತ್ರಗಳಿಂದಲೇ ಮುಂದಿನ ಅಂಕವು ಆರಂಭವಾಗುವುದು.

—ಶ್ರಾವ್ಯಾಶ್ರಾವ್ಯಗಳು—

(ನಾಟ್ಯಧರ್ಮ[4]ವನ್ನು ಅನುಸರಿಸಿ,) ವಸ್ತುವಿನಲ್ಲಿ ಕೆಲವು ಭಾಗಗಳು 'ಶ್ರಾವ್ಯ'ವಾಗಿಯೂ, ಮತ್ತೆ ಕೆಲವು ಭಾಗಗಳು 'ಅಶ್ರಾವ್ಯ'ವಾಗಿಯೂ ಇರುತ್ತವೆ. ಅವು ಯಾವುವೆಂದರೆ :

1. **ಪ್ರಕಾಶಂ**—ಎಲ್ಲರೂ ಕೇಳಬಹುದಾದದ್ದು (ಶ್ರಾವ್ಯ).

2. **ಸ್ವಗತಂ**—ಮಾತನಾಡುವ ಪಾತ್ರವಲ್ಲದೆ ಮತ್ತಾರೂ ಕೇಳದ್ದು (ಅಶ್ರಾವ್ಯ).

3. **ಜನಾಂತಿಕಂ**—'ತ್ರಿಪತಾಕಾಹಸ್ತ'ದಿಂದ ಒಬ್ಬರನ್ನು ಮರೆಮಾಡಿಕೊಂಡು ಮತ್ತೊಬ್ಬರನ್ನು ಕುರಿತು ಮಾತನಾಡುವುದು.

4. **ಅಪವಾರಿತಂ**—ಹಿಂದಕ್ಕೆ ತಿರುಗಿಕೊಂಡು ಗುಟ್ಟುಮಾತನಾಡುವುದು.

5. **ಆಕಾಶಭಾಷಿತಂ**—ಯಾವ ಪಾತ್ರಗಳೂ ಮಾತನಾಡದೆ ಇದ್ದರೂ, ಮಾತನ್ನು ಕೇಳಿದಂತೆ ನಟಿಸಿ 'ಏನೆಂದೆ?' ಎಂದುಕೊಂಡು ಉತ್ತರ ಕೊಡುವುದು ಇತ್ಯಾದಿ.

—ಅರ್ಥಪ್ರಕೃತಿಗಳು—

ಕಥಾವಿಸ್ತರೀಕರಣದೃಷ್ಟಿಯಿಂದ, ವಸ್ತುವಿನಲ್ಲಿ ಐದು ಅಂಶಗಳು ಕಂಡುಬರುತ್ತವೆ. ಅವುಗಳಿಗೆ 'ಅರ್ಥಪ್ರಕೃತಿ'ಗಳೆಂದು ಹೆಸರು. ಅವು ಯಾವುವೆಂದರೆ :

1. **ಬೀಜ**—ಹಣ್ಣನ್ನು ಪಡೆಯುವುದಕ್ಕಾಗಿ ಮೊದಲು ಆ ಹಣ್ಣಿನ ಬೀಜವನ್ನು ಬಿತ್ತುವಂತೆ ಕಥಾಫಲಕ್ಕೆ ಸಾಧನಭೂತವಾದ ಘಟನೆಯನ್ನು ಸೂಚಿಸಿರುವಿಕೆ.

---

[4] ಲೋಕದ ನಡೆವಳಿಕೆಯನ್ನು ಅನುಸರಿಸಿ, ಗದ್ಯದಲ್ಲಿ ಮಾತನಾಡುವುದು, ಸ್ವಾಭಾವಿಕವಾಗಿ ನಡೆದಾಡುವುದು 'ಇವೆಲ್ಲಾ 'ಲೋಕಧರ್ಮ'. ತನ್ನ ಅಭಿಪ್ರಾಯವನ್ನು ಗಾನಮಾಡಿ ತಿಳಿಸುವುದು, ನರ್ತನಮಾಡಿಕೊಂಡು ತಿರುಗಾಡುವುದು, ಗಟ್ಟಿಯಾಗಿ ಹೇಳಿದ ಮಾತಾದರೂ ಅದನ್ನು ಕೇಳದಿರುವುದು, ಕೃತ್ರಿಮವಾದ ಆಯುಧ ಬೆಟ್ಟ ಗುಡ್ಡ ವಿಮಾನ ಇವುಗಳನ್ನು ಉಪಯೋಗಿಸುವುದು—ಇವೆಲ್ಲಾ 'ನಾಟ್ಯಧರ್ಮ.

2. **ಬಿಂದು**—ಬೇರೆ ಘಟನೆ ಒದಗಿ, ಬೀಜರೂಪವಾದ ಘಟನೆ ಮರೆಯಾಗಿ, ಪುನಃ ಕಾಣಿಸಿಕೊಂಡು ನೀರಿನಲ್ಲಿ ಬಿದ್ದ ಎಣ್ಣೆಯ ತೊಟ್ಟಿನಂತೆ ದೊಡ್ಡದಾಗಿ ಹರಡಿಕೊಳ್ಳುವುದು.

3. **ಪತಾಕಾ**—ಉಪಕಥೆ.

4. **ಪ್ರಕರೀ**—ಪ್ರಾಸಂಗಿಕ ವೃತ್ತಾಂತ.

5. **ಕಾರ್ಯ**—ಕಥಾಪರಿಣಾಮ.

—ಅವಸ್ಥೆಗಳು—

ನಾಯಕಕಾರ್ಯದೃಷ್ಟಿಯಿಂದ ವಸ್ತುವಿನಲ್ಲಿ ಐದು ಸ್ಥಿತಿಗಳಿರುತ್ತವೆ. ಇವುಗಳಿಗೆ ‘ಅವಸ್ಥೆ’ಗಳೆಂದು ಹೆಸರು. ಅವು ಯಾವುವೆಂದರೆ :

1. **ಆರಂಭ**—ಮುಖ್ಯಕಾರ್ಯಸಾಧನೆಯಲ್ಲಿ ನಾಯಕಾದಿಗಳ ಔತ್ಸುಕ್ಯ.

2. **ಯತ್ನ**—ಅಡ್ಡಿ ಬರಲು, ಅದನ್ನು ನಿವಾರಣೆಮಾಡಿಕೊಂಡು ಕಾರ್ಯಸಾಧನೆಗಾಗಿ ಅವರು ಮಾಡುವ ಪ್ರಯತ್ನ.

3. **ಪ್ರಾಪ್ತ್ಯಾಶೆ**—ಸಾಧನೋಪಾಯಗಳೂ ಅವುಗಳಿಗೆ ಅಡಚಣೆಗಳೂ ಇರುವುದರಿಂದ ಫಲಪ್ರಾಪ್ತಿ ಆದರೂ ಆಗಬಹುದೆಂಬ ಸಂಭವ.

4. **ನಿಯತಾಪ್ತಿ**—ಅಡಚಣೆಗಳು ಕಳೆದುಹೋಗಿ ಫಲಪ್ರಾಪ್ತಿ ನಿಶ್ಚಯವಾಗಿ ಆಗುವುದೆಂಬ ಭರವಸೆ.

5. **ಫಲಾಗಮ**—ಕಾರ್ಯ ಕೈಗೂಡುವುದು.

—ಸಂಧಿಗಳು—

ಮೇಲೆ ಹೇಳಿದ ಐದು ‘ಅರ್ಥಪ್ರಕೃತಿ’ಗಳೂ ಐದು ‘ಅವಸ್ಥೆ’ಗಳೂ ಕ್ರಮವಾಗಿ ಸೇರಿದರೆ, ವಸ್ತುವಿನಲ್ಲಿ (೧) ಮುಖ, (೨) ಪ್ರತಿಮುಖ, (೩) ಗರ್ಭ, (೪) ಅವಮರ್ಶ, (೫) ಉಪಸಂಹೃತಿ (ನಿರ್ವಹಣ) ಸಂಧಿಗಳೆಂಬ ಐದು ವಿಭಾಗಗಳಾಗುತ್ತವೆ. ಎಂದರೆ—ಅದರ ‘ಮುಖಸಂಧಿ’ಯೆಂಬ ಮೊದಲನೆಯ ಭಾಗದಲ್ಲಿ ಕಥೆ ಇನ್ನೂ ಬೀಜರೂಪವಾಗಿರುತ್ತದೆ; ನಾಯಕನು ತನ್ನ ಕಾರ್ಯವನ್ನು ಆರಂಭಿಸಿರುತ್ತಾನೆ. ‘ಪ್ರತಿಮುಖ ಸಂಧಿ’ಯೆಂಬ ಎರಡನೆಯ ಭಾಗದಲ್ಲಿ ಕಥೆ ಇನ್ನು ಸ್ವಲ್ಪ ಬೆಳೆಯುತ್ತದೆ; ನಾಯಕನು ಕಾರ್ಯಸಾಧನೆಗಾಗಿ ಯತ್ನಮಾಡುತ್ತಾನೆ. ಮೂರನೆಯ ‘ಗರ್ಭಸಂಧಿ’[5]ಯಲ್ಲಿ ಕಾರ್ಯಫಲವು ಕೈಗೂಡುವ ಸೂಚನೆ ತೋರುತ್ತದೆ. ನಾಲ್ಕನೆಯ ‘ಅವಮರ್ಶಸಂಧಿ’[5]ಯಲ್ಲಿ ಕಥೆ ಗರ್ಭ

[5] ಈ ಸಂಧಿಗಳಲ್ಲಿ ಕ್ರಮವಾಗಿ ‘ಪತಾಕಾ’ ‘ಪ್ರಕರಿ’ಗಳು ಬರಬೇಕೆಂಬ ನಿಯಮವಿಲ್ಲ. ‘ಪತಾಕಾ ಸ್ಯಾನ್ನವಾ’—ದಶರೂಪಕ I, ೩೬.

ಸಂಧಿಗಿಂತ ಮುಂದುವರಿಯುತ್ತದೆ. ನಾಯಕನು ಕೋಪ ವ್ಯಸನ ವಿಲೋಭನಾದಿ ಗಳಿಂದ ಸ್ವಲ್ಪ ತಡೆದು ನಿಲ್ಲುತ್ತಾನೆ (ಆಮೇಲೆ ಫಲಪ್ರಾಪ್ತಿ ನಿಶ್ಚಯವಾಗುತ್ತದೆ). 'ಉಪಸಂಹೃತಿ (ಉಪಸಂಹಾರ, ನಿರ್ವಹಣ) ಸಂಧಿ'ಯಲ್ಲಿ ಹಿಂದೆ ನಾನಾಮುಖ ವಾಗಿದ್ದ ಕಾರ್ಯವೆಲ್ಲವೂ ಏಕಮುಖವಾಗಿ ಮುಗಿಯುತ್ತದೆ. ನಾಯಕನು ಉದ್ದಿಷ್ಟಕಾರ್ಯ ಫಲವನ್ನು ಪಡೆಯುತ್ತಾನೆ.

ಲಕ್ಷಣಗ್ರಂಥಕಾರರು ಈ ಐದು ಸಂಧಿಗಳಿಗೂ ಒಟ್ಟು (೧೨+೧೩+೧೨+೧೩ +೧೪=)೬೪ ಅಂಗಗಳನ್ನು ಹೇಳುತ್ತಾರೆ.[6] ಆದರೆ ಅವೆಲ್ಲವನ್ನೂ ಉಪಯೋಗಿಸ ಬೇಕೆಂಬ ನಿಯಮವಿಲ್ಲ. ಅವುಗಳನ್ನು ಯಥೋಚಿತವಾಗಿ ಉಪಯೋಗಿಸಿ ರೂಪಕವನ್ನು ಗ್ರಥನಮಾಡಿದರೆ, ಬೇಕಾದ ಅರ್ಥವನ್ನು ಹೇಳಬಹುದು, ಬೇಡದ್ದನ್ನು ಮುಚ್ಚಬಹುದು, ವಿಸ್ತಾರಮಾಡಬೇಕಾದ್ದನ್ನು ವಿವರಿಸಬಹುದು, ರಸಾಭಿವ್ಯಕ್ತಿಯಿಂದ ಸಂತೋಷಗೊಳಿಸಬಹುದು, ಅಭಿನಯಕೌಶಲದಿಂದ ಆಶ್ಚರ್ಯ ಗೊಳಿಸಬಹುದು, ಕಥೆಯನ್ನು ದೊಡ್ಡದು ಮಾಡಬಹುದು[7] —ಎಂದರೆ ಹೃದಯಂಗ ಮವಾಗುವಂತೆ ಕಥೆಯನ್ನು ಬೆಳಸಿ ಅಭಿನಯಿಸಿ ಸಂತೋಷಪಡಿಸಬಹುದು.

## 2. ನಾಯಕ

ನಾಯಕನು ಧೈರ್ಯಶೌರ್ಯಸೌಂದರ್ಯಾದಿ ಗುಣಗಳುಳ್ಳವನಾಗಿಯೂ, ಸಮರ್ಥನೂ, ತ್ಯಾಗಿಯೂ, ಧಾರ್ಮಿಕನೂ, ಪ್ರಿಯವಾಗಿಯೂ ಚೆನ್ನಾಗಿಯೂ ಮಾತನಾಡತಕ್ಕವನೂ ವಿದ್ಯಾಬುದ್ಧಿಗಳುಳ್ಳವನೂ ಸದ್ವಂಶಜನೂ ಆಗಿರಬೇಕು— ಇವೆಲ್ಲವೂ ನಾಯಕನ 'ಸಾಮಾನ್ಯಲಕ್ಷಣ'ಗಳು.

ನಾಯಕನಲ್ಲಿ ಧೀರೋದಾತ್ತ, ಧೀರಲಲಿತ, ಧೀರೋದ್ಧತ, ಧೀರ (ಪ್ರ) ಶಾಂತ ಎಂದು ನಾಲ್ಕು ವಿಧ :

1. **ಧೀರೋದಾತ್ತ**ನಲ್ಲಿರುವ ವಿಶೇಷ ಗುಣಗಳೇನೆಂದರೆ : ಸುಖದುಃಖ ಗಳಿಂದ ಚಲಿತವಾಗದಿರುವ 'ಮಹಾಸತ್ತ್ವ', ಗಾಂಭೀರ್ಯ, ಕ್ಷಮೆ, ಆತ್ಮಶ್ಲಾಘನೆ ಮಾಡಿಕೊಳ್ಳದಿರುವುದು, ಸ್ಥೈರ್ಯ, ವಿನಯದಿಂದ ಮುಚ್ಚಿದ ಅಹಂಕಾರ, ಹಿಡಿದ ಕೆಲಸವನ್ನು ಸಾಧಿಸುವ ಸಾಮರ್ಥ್ಯ. ಉದಾಹರಣೆ : ದುಷ್ಯಂತ, ರಾಮ, ಜೀಮೂತ ವಾಹನ, ಹರಿಶ್ಚಂದ್ರ ಇತ್ಯಾದಿ.

2. **ಧೀರಲಲಿತ**ನಲ್ಲಿರುವ ವಿಶೇಷಗುಣಗಳೇನೆಂದರೆ : ಮೃದುತ್ವ, ಸಂಗೀತ

---

6 ಈ ಅಂಗಗಳಿಗೆಲ್ಲಾ ಉದಾಹರಣೆಗಳನ್ನು ಪ್ರತಾಪರುದ್ರೀಯದಲ್ಲಿ ನೋಡಬಹುದು.

7 "ಇಷ್ಟಸ್ಯಾರ್ಥಸ್ಯ ರಚನಾ ಗೋಪ್ಯಗುಪ್ತಿಃ ಪ್ರಕಾಶನಂ ।
ರಾಗಃ ಪ್ರಯೋಗಸ್ಯಾಶ್ಚರ್ಯಂ ವೃತ್ತಾಂತಸ್ಯಾನುಪಕ್ಷಯಃ ॥"
ದಶರೂಪಕ I, ೫೫

ಸಾಹಿತ್ಯ ಮುಂತಾದ ಕಲೆಗಳಲ್ಲಿ ಆಸಕ್ತನಾಗಿ ನಿಶ್ಚಿಂತನಾಗಿ ಸುಖವಾಗಿ ಇರುವಿಕೆ. ಉದಾಹರಣೆ : ವತ್ಸರಾಜ.

3. **ಧೀರೋದ್ಧತನ**ಲ್ಲಿರುವ ವಿಶೇಷಗುಣಗಳೇನೆಂದರೆ : ದರ್ಪಮಾತ್ಸರ್ಯಗಳು ಮಾಯಾಮೋಸಗಳು, ಅಹಂಕಾರ, ರೌದ್ರಚಾಂಚಲ್ಯಗಳು, ಆತ್ಮಶ್ಲಾಘನೆ. (ಪ್ರತಿನಾಯಕನು ಸಾಮಾನ್ಯವಾಗಿ ಧೀರೋದ್ಧತನಾಗಿರುತ್ತಾನೆ). ಉದಾಹರಣೆ: ದುರ್ಯೋಧನ, ರಾವಣ.

4. **ಧೀರ (ಪ್ರ) ಶಾಂತ**ನಲ್ಲಿ ವಿಶೇಷಗುಣಗಳಿಲ್ಲ. ಮೇಲೆ ಹೇಳಿದ ನಾಯಕ ಸಾಮಾನ್ಯಲಕ್ಷಣಗಳು ಮಾತ್ರ ಇರುತ್ತವೆ. (ಇವರು ಪ್ರಾಯಿಕವಾಗಿ ಬ್ರಾಹ್ಮಣರು ಅಥವಾ ವೈಶ್ಯರು.) ಉದಾಹರಣೆ : ಮಾಧವ, ಚಾರುದತ್ತ.

ಶೃಂಗಾರನಾಯಕರಲ್ಲಿ ದಕ್ಷಿಣ, ಧೃಷ್ಟ, ಅನುಕೂಲ, ಶಠ ಎಂದು ನಾಲ್ಕು ವಿಧ :

1. **ದಕ್ಷಿಣ**ನೆಂದರೆ, ಅನೇಕ ನಾಯಿಕೆಯರಿದ್ದು ಅವರೆಲ್ಲರಲ್ಲಿಯೂ ಒಂದೇ ರೀತಿಯಾದ ಪ್ರೇಮವನ್ನು ತೋರಿಸತಕ್ಕವನು.

2. **ಧೃಷ್ಟ**ನೆಂದರೆ, ತನ್ನ ಪತ್ನಿಯಲ್ಲಿ ಅಪರಾಧಮಾಡಿ ದೋಷಗಳು ಸ್ಪಷ್ಟವಾಗಿದ್ದು ತಾನು ಆಕ್ಷೇಪಣೆಗೆ ಗುರಿಯಾದರೂ ನಾಚಿಕೆಪಟ್ಟುಕೊಳ್ಳದವನು.

3. **ಅನುಕೂಲ**ನೆಂದರೆ, ಒಬ್ಬಳೇ ನಾಯಿಕೆಯಲ್ಲಿ ಅನುರಕ್ತನಾಗಿ ಇರುವವನು.

4. **ಶಠ**ನೆಂದರೆ, ಅನೇಕ ನಾಯಿಕೆಯರಲ್ಲಿ ಹೊರಗೆ ಸಮಾನವಾದ ಅನುರಾಗವನ್ನು ತೋರಿಸುತ್ತ ಒಳಗೆ ಒಬ್ಬಳನ್ನು ಹೆಚ್ಚಾಗಿ ಪ್ರೀತಿಸುತ್ತ ಮತ್ತೊಬ್ಬಳಿಗೆ ತೊಂದರೆ ಮಾಡುವವನು.

ಇವರೆಲ್ಲರಲ್ಲಿಯೂ ಉತ್ತಮ, ಮಧ್ಯಮ, ಅಧಮ ಎಂಬ ಭೇದಗಳುಂಟು. (ಆದ್ದರಿಂದ ನಾಯಕರಲ್ಲಿ ೪೮ ಭೇದಗಳು ಎಂದು ಹೇಳುತ್ತಾರೆ. ಸಾಹಿತ್ಯದರ್ಪಣ III, ೩೮.)

—ನಾಯಕನ ಸಹಾಯಕರು—

1. **ಪ್ರಾಸಂಗಿಕ ವಸ್ತು**ವಿನಲ್ಲಿ—ಪೀಠಮರ್ದ. ಪ್ರಾಸಂಗಿಕವಸ್ತುವಿನಲ್ಲಿ ಬರುವವನು ; ಮತ್ತು ನಾಯಕನಿಗಿಂತ ಗುಣದಲ್ಲಿ ಸ್ವಲ್ಪ ಕಡಮೆಯಾದವನು. ಉದಾಹರಣೆ : ಸುಗ್ರೀವ, ಮಕರಂದ.

2. **ಶೃಂಗಾರದಲ್ಲಿ**—ವಿಟ, ಚೇಟ (ಸೇವಕ), ವಿದೂಷಕಾದಿಗಳು.

3. **ರಾಜತಂತ್ರ ವಿಚಾರದಲ್ಲಿ**—ಮಂತ್ರಿ.

4. **ಅಂತಃಪುರದಲ್ಲಿ**—ಕುಬ್ಜ, ಷಂಡ, ಕಿರಾತ, ಮ್ಲೇಚ್ಛ.

5. **ಧರ್ಮದಲ್ಲಿ**—ಋತ್ವಿಕ್ಕುಗಳು, ತಪಸ್ವಿಗಳು, ಬ್ರಹ್ಮವಾದಿಗಳು.

6. **ದುಷ್ಟದಮನದಲ್ಲಿ**—ಸ್ನೇಹಿತ, ಸಾಮಂತ, ಸೈನಿಕ ಮೊದಲಾದವರು

ಇವರಲ್ಲಿ ಉತ್ತಮ ಮಧ್ಯಮಾಧಮ ಭೇದಗಳುಂಟು—ಪೀಠಮರ್ದನು ಉತ್ತಮ ವಿಟವಿದೂಷಕರು ಮಧ್ಯಮ, ಶಕಾರ ಚೇಟಾದಿಗಳು ಅಧಮ, ಇತ್ಯಾದಿ.

## ನಾಯಿಕೆ

ನಾಯಿಕೆಯರಲ್ಲಿ 'ಸ್ವೀಯೆ' (ತನ್ನವಳು) 'ಅನ್ಯೆ' (ಇತರಳು), 'ಸಾಧಾರಣೆ' (ವೇಶ್ಯೆ) ಎಂದು ಮೂರು ವಿಧ. ಸ್ವೀಯಳಲ್ಲಿ ಯೌವನ ಮತ್ತು ಸಂಸಾರಾನುಭವದ ಮೇಲೆ 'ಮುಗ್ಧೆ', 'ಮಧ್ಯೆ', 'ಪ್ರಗಲ್ಭೆ' ಎಂದು ಮೂರು ವಿಧ.

—ನಾಯಿಕೆಯರ ಸಹಾಯೆ (ದೂತಿ)ಯರು—

ದಾಸಿ, ಸಖಿ, ಕೆಲಸಗಾತಿ, ಸಾಕುತ್ತಿರುವ ಹುಡುಗಿ, ನೆರೆಯವಳು, ಸಂನ್ಯಾಸಿನೀ ಶಿಲ್ಪಿನೀ ಮುಂತಾದವರು.

* * * * * *

## ವೃತ್ತಿಗಳು

ನಾಯಕಕಾರ್ಯಾದಿಘಟನೆಗಳ ಸ್ವಭಾವಕ್ಕೆ 'ವೃತ್ತಿ'[8] (ವ್ಯಾಪಾರ-ಕೆಲಸ) ಎಂದು ಹೆಸರು. ಇದು ಕೈಶಿಕೀ, ಸಾತ್ವತೀ, ಆರಭಟೀ, ಭಾರತೀ ಎಂದು ನಾಲ್ಕು ವಿಧ. ಕೈಶಿಕಿಯು ಗೀತ ನೃತ್ಯ ವಿಲಾಸಾದಿ ಶೃಂಗಾರಚೇಷ್ಟೆಗಳಿಂದ ಕೂಡಿ ಮೃದುವಾಗಿ ಇರುವುದು (ಉದಾಹರಣೆ: ರತ್ನಾವಳಿಯಲ್ಲಿ), ಸಾತ್ವತಿಯು ಸತ್ತ್ವ, ಶೌರ್ಯ, ತ್ಯಾಗ, ದಯೆ, ಹರ್ಷ ಮುಂತಾದವುಗಳಿಂದ ಕೂಡಿ ಗೆಲುವಾಗಿರುವುದು (ಉದಾಹರಣೆ; ಗದಾಯುದ್ಧ ನಾಗಾನಂದ), ಆರಭಟಿಯು ಮಾಯೆ, ಇಂದ್ರ ಜಾಲ, ಜಗಳ, ಕೋಪ, ಆಳವಳ ಇವುಗಳಿಂದ ಕೂಡಿ ಉದ್ಧತವಾಗಿರುವುದು (ಉದಾಹರಣೆ: ಮುದ್ರಾರಾಕ್ಷಸ, ಜಾನಕೀಪರಿಣಯ, ವೇಣೀಸಂಹಾರ). ನ್ಯಾಯವಾಗಿ ಇರತಕ್ಕ ವೃತ್ತಿಗಳು ಈ ಮೂರೇ. ಏಕೆಂದರೆ ನಾಲ್ಕನೆಯದೆಂದು ಹೇಳುವ 'ಭಾರತೀ' ವೃತ್ತಿ 'ಘಟನಗಳ ಸ್ವಭಾವದ ಮೇಲೆ ಸಿದ್ಧವಾದದ್ದಲ್ಲ.'[9]

---

8 "ವಿಲಾಸವಿನ್ಯಾಸಕ್ರಮೋ ವೃತ್ತಿಃ."—ಕಾವ್ಯಮೀಮಾಂಸಾ, ಪುಟ ೯.

"ಪ್ರವೃತ್ತಿರೂಪೋ ನೇತೃವ್ಯಾಪಾರಸ್ವಭಾವೋ ವೃತ್ತಿಃ."—ದಶರೂಪಕ II, ೪೭ ವ್ಯಾಖ್ಯಾನ.

9 "ನಾರ್ಥವೃತ್ತಿರತಃ ಪರಾ। ಚತುರ್ಥೀ ಭಾರತೀ ಸಾಪಿ ವಾಚ್ಯಾ ನಾಟಕಲಕ್ಷಣೇ." (ದಶರೂಪಕ II, ೬೦)

"ಭಾರತೀ ಸಂಸ್ಕೃತಪ್ರಾಯೋ ವಾಗ್ವ್ಯಾಪಾರೋ ನಟಾಶ್ರಯಃ"—(ದಶರೂಪಕ III ೫).

"ಭಾರತೀ ತು ಶಬ್ದವೃತ್ತಿಃ."—(ದಶರೂಪಕ II, ೬೦, ವ್ಯಾಖ್ಯಾನ).

ಅದು ನಟರು ಆಡುವ ಮಾತಿನ ವೈಚಿತ್ರ್ಯವಿಶೇಷವನ್ನು ಸೂಚಿಸುತ್ತದೆ. ಉದಾಹರಣೆ: ಪ್ರಸ್ತಾವನೆಯಲ್ಲಿ ನಟರು ಪ್ರೇಕ್ಷಕರನ್ನು ಹೊಗಳಿ ಒಲಿಸಿಕೊಳ್ಳುವುದು, ಯಾವುದೋ ಮಾತನ್ನು ಆಡುತ್ತ ಕೌಶಲದಿಂದ ಪ್ರಸ್ತುತ ವೃತ್ತಾಂತಕ್ಕೆ ಬರುವುದು, ಸೂತ್ರಧಾರನು ಆಡುತ್ತಿದ್ದ ಮಾತನ್ನಾಗಲಿ ವಿಷಯವನ್ನಾಗಲಿ ತೆಗೆದುಕೊಂಡು ಬೇರೆ ಪಾತ್ರವು ಪ್ರವೇಶಿಸುವುದು (ಶಾಕುಂತಲ, ರತ್ನಾವಳಿ, ಮುದ್ರಾರಾಕ್ಷಸ ಇತ್ಯಾದಿಗಳಲ್ಲಿ), ಗೂಢಾರ್ಥವುಳ್ಳ ಅಥವಾ ಚಿತ್ರವಾದ ಉಕ್ತಿ ಪ್ರತ್ಯುಕ್ತಿಗಳು ಇತ್ಯಾದಿ (ದಶರೂಪಕ III, ೫-೨೦). ಕೆಲವರು ಸ್ವಲ್ಪ ಮೃದುವಾದ ವಿಷಯಗಳುಳ್ಳದ್ದು ಭಾರತೀ ವೃತ್ತಿಯೆಂದು ಹೇಳುವರು.[10]

ಇವುಗಳಲ್ಲಿ ಕೈಶಿಕಿ ಶೃಂಗಾರರಸದಲ್ಲಿಯೂ, ಸಾತ್ವತಿ ವೀರದಲ್ಲಿಯೂ, ಆರಭಟಿಯು ರೌದ್ರಬೀಭತ್ಸಗಳಲ್ಲಿಯೂ ಬರುತ್ತದೆ. ಭಾರತಿಯು ಎಲ್ಲಾ ರಸಗಳಲ್ಲಿಯೂ ಬರಬಹುದು.

## ಪ್ರವೃತ್ತಿಗಳು

ಪಾತ್ರ ಮತ್ತು ದೇಶಭೇದಗಳನ್ನು ಅನುಸರಿಸಿ ನಟರು ಉಪಯೋಗಿಸುವ ಭಾಷಾ ವೇಷ ಭೂಷಣ ಭೇದಗಳಿಗೆ ಪ್ರವೃತ್ತಿ[11]ಯೆಂದು ಹೆಸರು.

ಸಾಮಾನ್ಯವಾಗಿ ಎಲ್ಲಾ ರೂಪಕಗಳೂ ಒಂದೇ ವಿಧವಾಗಿ ಆರಂಭವಾಗುತ್ತವೆ. ಪ್ರತಿಯೊಂದಕ್ಕೂ 'ಪೂರ್ವರಂಗ'ವುಂಟು. ಪೂರ್ವರಂಗವೆಂದರೆ ನಾಟಕದ ಕಥೆ ಕ್ರಮವಾಗಿ ಆರಂಭವಾಗುವುದಕ್ಕೆ ಮುಂಚೆ ರಂಗಸ್ಥಾನದಲ್ಲಿ ನಟರು ನಡಸತಕ್ಕ ಕಾರ್ಯಗಳು.[12] ಇದರಲ್ಲಿ, 'ಪ್ರತ್ಯಾಹಾರ' (ವಾದ್ಯಗಳನ್ನು ತಂದು ಇಟ್ಟುಕೊಳ್ಳುವುದು), 'ಅವತರಣ' (ಗಾಯಕಾದಿಗಳು ಸಿದ್ಧರಾಗಿ ಬರುವುದು), ಶ್ರುತಿಮಾಡಿಕೊಳ್ಳುವುದು, ರಂಗದೇವತಾ ಪೂಜೆ ಮುಂತಾದ ನಾನಾ ಅಂಗಗಳಿವೆ. ಇವುಗಳಲ್ಲಿ 'ನಾಂದಿ'ಯೂ ಒಂದು. ನಾಂದಿ ದೇವತಾಸ್ತೋತ್ರರೂಪವಾಗಿಯೂ ರಾಜ ಪ್ರಜೆ ಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ.[13]

---

10 "ಈಷನ್ಮೃದ್ವರ್ಥಸಂದರ್ಭಾ ಭಾರತೀ ವೃತ್ತಿರಿಷ್ಯತೇ." —ಪ್ರತಾಪರುದ್ರೀಯ.

11 "ತತ್ರ ವೇಷವಿನ್ಯಾಸಕ್ರಮಃ ಪ್ರವೃತ್ತಿಃ. —ಕಾವ್ಯಮೀಮಾಂಸಾ.

12 "ಯಸ್ಮಾದ್ರಂಗಪ್ರಯೋಗೋಽಯಂ ಪೂರ್ವಮೇವ ಪ್ರಯುಜ್ಯತೇ |
ತಸ್ಮಾದಯಂ ಪೂರ್ವರಂಗೋ ವಿಜ್ಞೇಯೋ ದ್ವಿಜಸತ್ತಮಾಃ ||"=ಭರತ V, ೭

13 ನಾಂದಿಶ್ಲೋಕದಲ್ಲಿ ಶಂಖ, ಚಂದ್ರ, ಕಮಲ ಮುಂತಾದ ಮಂಗಳಶಬ್ದಗಳಲ್ಲಿ ಯಾವುದಾದರೂ ಇರಬೇಕೆಂದೂ, ಒಟ್ಟು ಎಂಟು ಅಥವಾ ಹನ್ನೆರಡು 'ಪದ'ಗಳಿರಬೇಕೆಂದೂ, ವಸ್ತುಸೂಚನೆಯಿರಬೇಕೆಂದೂ ಕೆಲವರು ಹೇಳುತ್ತಾರೆ. ಆದರೆ ಈ ಲಕ್ಷಣವು ಎಲ್ಲಾಕಡೆಯಲ್ಲಿಯೂ ಕಂಡುಬರುವುದಿಲ್ಲ; ಇಲ್ಲಿ 'ಪದ'ವೆಂದರೇನು ಎಂಬ ವಿಷಯದಲ್ಲಿಯೂ ಭಿನ್ನಾಭಿಪ್ರಾಯಗಳಿವೆ (ಸಾಹಿತ್ಯದರ್ಪಣವನ್ನು ನೋಡಿ).

ನಾಟಕದ ಮೊದಲಲ್ಲಿ ಬರುವ 'ಆವುದು ಧಾತೃಸೃಷ್ಟಿಗೆ ಮೊದಲ್ .....' ಮುಂತಾದ ಪದ್ಯಗಳನ್ನು 'ನಾಂದೀಪದ್ಯ'ವೆಂದು ಕರೆಯುವುದು ರೂಢಿಯಾಗಿದೆ. ಆದರೆ, ಕೆಲವು ನಾಟಕಗಳಲ್ಲಿ (ಉದಾಹರಣೆ : ಭಾಸನವುಗಳಲ್ಲಿ) ಸೂತ್ರಧಾರನು "ನಾಂದಿಯ ಅನಂತರದಲ್ಲಿ ಪ್ರವೇಶಿಸಿ" ನಾಟಕದ ಇಂಥ ಮಂಗಳಶ್ಲೋಕವನ್ನು ಹೇಳುವುದರಿಂದ, ನಾಟಕಾದಿಯಲ್ಲಿ ಕವಿನಿಬದ್ಧವಾದ ಮಂಗಳಶ್ಲೋಕವು ನಾಂದೀಶ್ಲೋಕವಲ್ಲವೆಂದೂ ಪೂರ್ವರಂಗದ ಅಂಗವಾದ 'ರಂಗದ್ವಾರ'ವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ (ಸಾಹಿತ್ಯದರ್ಪಣ VI, ೨೫ ವೃತ್ತಿ), ಭರತನ ನಾಟ್ಯಶಾಸ್ತ್ರವನ್ನು ನೋಡಿದರೆ ನಾಂದೀರಂಗದ್ವಾರಗಳು ಬೇರೆಬೇರೆಯೆಂದೂ, ನಾಂದಿ ಮೊದಲು ನಟರು ಹೇಳುವ ಸಾಂಪ್ರದಾಯಕವಾದ ಸಾಮಾನ್ಯಮಂಗಳವೆಂದೂ, 'ರಂಗದ್ವಾರ'ವೆಂಬುದು ಆಮೇಲೆ ಸೂತ್ರಧಾರನು ಹೇಳುವ (ಕವಿಕೃತವಾದ) ಶ್ಲೋಕವೆಂದೂ ತೋರುತ್ತದೆ (ಭರತ V, ೯೮-೧೦೨; ೧೦೬-೧೦೭). ಈ ಪಕ್ಷವನ್ನು ಇಟ್ಟುಕೊಂಡರೆ, 'ರಂಗದ್ವಾರಮಾರಭ್ಯ ಕವಿಃ ಕುರ್ಯಾತ್' (ಸಾಹಿತ್ಯದರ್ಪಣ VI, ೨೫ ವೃತ್ತಿ) ಎಂಬ ಪ್ರಾಚೀನ ವಾಕ್ಯಕ್ಕೂ ಉಪಪತ್ತಿ ಬರುತ್ತದೆ.

ಅಂತು, ಸೂತ್ರಧಾರನು ಈ ಮಂಗಳಶ್ಲೋಕವನ್ನು ಹೇಳಿ ನಟಿ, ವಿದೂಷಕ, ಪಾರಿಪಾರ್ಶ್ವಕ ಮುಂತಾದವರಲ್ಲಿ ಒಬ್ಬರು ಅಥವಾ ಅನೇಕರೊಡನೆ ಮಾತನ್ನು ಆಡುತ್ತ 'ಭಾರತೀವೃತ್ತಿ'ಯಿಂದ ಪ್ರಸಕ್ತವಾದ ವಿಷಯಕ್ಕೆ ಬಂದು, ಋತುವರ್ಣನೆ ಕವಿಕಾವ್ಯ ವಿಚಾರ, ವಸ್ತುವಿನ ಅಥವಾ ಪಾತ್ರಗಳ ಸೂಚನೆ ಮುಂತಾದವುಗಳನ್ನು ಮಾಡಿ ಹೊರಟು ಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗೆ 'ಆಮುಖ' ಅಥವಾ 'ಪ್ರಸ್ತಾವನೆ' ಎಂದು ಹೆಸರು.

ಸೂತ್ರಧಾರನು 'ಪೂರ್ವರಂಗ'ವನ್ನು ಮುಗಿಸಿ ಹೊರಟುಹೋದ ಮೇಲೆ ಅವನಂತೆಯೇ ವೇಷಭಾಷಾಚಾರಗಳುಳ್ಳ, 'ಸ್ಥಾಪಕ'ನೆಂಬ ಮತ್ತೊಬ್ಬ ವ್ಯಕ್ತಿಯು ಬಂದು ಕವಿಚರಿತ್ರಾದಿಗಳನ್ನು ಹೇಳಿ ನಾಟಕವನ್ನು 'ಸ್ಥಾಪಿಸ'ಬೇಕೆಂದು ಕೆಲವು ಲಕ್ಷಣಗ್ರಂಥಕಾರರು ಹೇಳುತ್ತಾರೆ.[14] ಆದರೆ 'ಸ್ಥಾಪಕ'ನು ಇರುವುದು ಬಹು ಅಪರೂಪ. ಇದನ್ನೇ, "ಈಗ (೧೪ನೆಯ ಶತಮಾನದಲ್ಲಿ) ಪೂರ್ವರಂಗವು ಸರಿಯಾಗಿ ನಡೆಸಲ್ಪಡುತ್ತಿಲ್ಲ; ಸೂತ್ರಧಾರನೇ ಎಲ್ಲವನ್ನೂ ನಡೆಸಿಬಿಡುತ್ತಾನೆ" ಎಂದು ವಿಶ್ವನಾಥನು ಹೇಳಿರುತ್ತಾನೆ (ಸಾಹಿತ್ಯದರ್ಪಣ vi, ೨೭ ವೃತ್ತಿ). ವಸ್ತುತಃ, ಹಿಂದೆ ಎರಡು ಪದ್ಧತಿಗಳೂ ಇದ್ದುವೆಂದೂ, ಇವುಗಳಿಗೆ ಕ್ರಮವಾಗಿ 'ಶುದ್ಧಪೂರ್ವರಂಗ' 'ಚಿತ್ರಪೂರ್ವರಂಗ' ಎಂಬ ಹೆಸರುಗಳಿದ್ದಂತೆಯೂ ತೋರುತ್ತದೆ. (ನಾಟ್ಯಶಾಸ್ತ್ರ, ಅಧ್ಯಾಯ ೫).

---

[14] ಭಾಸನ ನಾಟಕದಲ್ಲಿ 'ಪ್ರಸ್ತಾವನೆ'ಗಳಿಗೆ 'ಸ್ಥಾಪನೆ'ಗಳೆಂದು ಹೆಸರು.

ವಸ್ತು ನಾಯಕ ರಸ ಇವುಗಳ ಭೇದಗಳಿಂದ ರೂಪಕಗಳಲ್ಲಿ ನಾಟಕಾದಿ ಭೇದಗಳಾಗುತ್ತವೆಯೆಂದು ಹಿಂದೆ ತಿಳಿಸಿದೆಯಷ್ಟೆ ; ಆ ಭೇದಗಳು ದಶರೂಪಕವನ್ನನುಸರಿಸಿ ಮುಂದೆ ಸೂಚಿಸಲ್ಪಟ್ಟಿವೆ.

| ರೂಪಕದ ಹೆಸರು | ವಸ್ತು | ನಾಯಕ |
|---|---|---|
| **1. ನಾಟಕ** ಉದಾ : ಶಾಕುಂತಲ, ಉತ್ತರರಾಮಚರಿತ, ನಾಗಾನಂದ. | ಪ್ರಖ್ಯಾತ | ಧೀರೋದಾತ್ತ. |
| **2. ಪ್ರಕರಣ** ಉದಾ : ಮೃಚ್ಛಕಟಿಕಾ, ಮಾಲತೀ ಮಾಧವ. | ಉತ್ಪಾದ್ಯ ಮತ್ತು ಲೌಕಿಕ | ಧೀರಶಾಂತ — ಮಂತ್ರಿ ಬ್ರಾಹ್ಮಣ ಅಥವಾ ವರ್ತಕ ; ಇವನು ಧರ್ಮ ಕಾರ್ಯತತ್ಪರ ಮತ್ತು ಕಷ್ಟಕ್ಕೆ ಸಿಕ್ಕುವವನು. ನಾಯಿಕೆ ಕುಲಸ್ತ್ರೀ ಅಥವಾ ವೇಶ್ಯೆ (ಒಬ್ಬಳಾಗಲಿ ಇಬ್ಬರೂ ಆಗಲಿ ಇರಬಹುದು.) |
| **3. ಭಾಣ** | ಕಲ್ಪಿತ ; ಕಳ್ಳಕಾಕರ ಧೂರ್ತ ಚರಿತ್ರೆ | ವಿಟ— ಆಕಾಶಭಾಷಿತಗಳಿಂದ ಒಬ್ಬನೇ ತಾನು ಅಥವಾ ಇತರರೂ ಅನುಭವಿಸಿದ ವೃತ್ತಾಂತಗಳನ್ನು ತಿಳಿಸುವುದು. |
| **4. ಪ್ರಹಸನ** | ಕಲ್ಪಿತ ; ಕೀಳುಜನರ ಚರಿತ್ರೆ | ಪಾಷಂಡ, ಬ್ರಾಹ್ಮಣ, ಚೇಟಿ ಇತ್ಯಾದಿ. |

| ರಸ | ಇತರ ಸಂಗತಿಗಳು |
| --- | --- |
| ವೀರ, ಶೃಂಗಾರ, (ಕರುಣ ?) ಇವುಗಳಲ್ಲಿ ಯಾವುದಾದರೂ ಒಂದು ಮುಖ್ಯ; ಮಿಕ್ಕವು ಅದಕ್ಕೆ ಪೋಷಕ (ಕೊನೆಯಲ್ಲಿ ಅದ್ಭುತರಸ). | ಮುಖಾದಿಸಂಧಿಗಳು ಸಾಂಗವಾಗಿಯೂ ಸ್ಪಷ್ಟವಾಗಿಯೂ ಇರುತ್ತವೆ. ಐದರಿಂದ ಹತ್ತು ಅಂಕಗಳಿರುತ್ತವೆ. |
| ,, | ,, |
| ವೀರ, ಶೃಂಗಾರ (ಸೂಚನೆ ಮಾತ್ರ). | ಒಂದೇ ಅಂಕ; ಭಾರತೀವೃತ್ತಿ ಪ್ರಧಾನ; ಮುಖ ನಿರ್ವಹಣ ಎರಡೇ ಸಂಧಿಗಳು. |
| ಹಾಸ್ಯ. | ಅಂಕಸಂಧಿಗಳು ಭಾಣದಂತೆಯೇ. |

| ರೂಪಕದ ಹೆಸರು | ವಸ್ತು | ನಾಯಕ |
| --- | --- | --- |
| **5. ಡಿಮ.** ಉದಾ : ತ್ರಿಪುರ ಸಂಹಾರ. | ಪ್ರಖ್ಯಾತ; ಮಾಯೆ, ಇಂದ್ರ ಜಾಲ, ಕೋಪ, ಜಗಳ ಮುಂತಾದವುಗಳ ಕೋಲಾ ಹಲದಿಂದ ಕೂಡಿದ್ದು. | ದೇವ ಗಂಧರ್ವ ಯಕ್ಷ ರಾಕ್ಷಸ ಭೂತಪ್ರೇತಾದಿ ಉದ್ಧತರಾದ ಹದಿನಾರು ವ್ಯಕ್ತಿಗಳು. |
| **6. ವ್ಯಾಯೋಗ** ಉದಾ : ನರಕಾಸುರ ವ್ಯಾಯೋಗ. | ಪ್ರಖ್ಯಾತ; ಒಂದೇ ದಿನದಲ್ಲಿ ನಡೆದ ಯುದ್ಧದ ವಿಚಾರ ಈ ಯುದ್ಧವು ಸ್ತ್ರೀ ನಿಮಿತ್ತಕವಾಗಿರಬಾರದು) | ಪ್ರಸಿದ್ಧ ಮತ್ತು ಉದ್ಧತ (ಉದಾ : ಪರಶುರಾಮ). |
| **7. ಸಮವಾಕಾರ** | ಪ್ರಖ್ಯಾತವಾದ ದೇವಾಸುರ ವಿಚಾರ. | ಪ್ರಖ್ಯಾತರೂ, ಉದಾತ್ತರೂ ಆದ ೧೨ ದೇವದಾನವರು. ಪ್ರತಿಯೊಬ್ಬರೂ ಬೇರೆ ಬೇರೆ ಫಲವನ್ನು ಅಪೇಕ್ಷಿಸತಕ್ಕವರು. |

| ರಸ | ಇತರ ಸಂಗತಿಗಳು |
| --- | --- |
| ರೌದ್ರವು ಪ್ರಧಾನ-ವೀರ ಕರುಣ ಅದ್ಭುತ ಭಯಾನಕ ಬೀಭತ್ಸ ಗಳು ಪೋಷಕ. | ರಸಗಳು ಉಜ್ವಲವಾಗಿರುತ್ತವೆ. ನಾಲ್ಕು ಅಂಕ ಗಳು; ವಿಷ್ಕಂಭಕ ಪ್ರವೇಶಕಗಳಿಲ್ಲ; ಕೈಶಿಕೀ ವೃತ್ತಿಯನ್ನು ಬಿಟ್ಟು ಮಿಕ್ಕ ವೃತ್ತಿಗಳೆಲ್ಲಾ ಇರಬಹುದು; ವಿಮರ್ಶಸಂಧಿಯನ್ನು ಬಿಟ್ಟು ಮಿಕ್ಕ ಸಂಧಿಗಳು ಇರುತ್ತವೆ. |
| ,, | ಗರ್ಭವಿಮರ್ಶಸಂಧಿಗಳಿಲ್ಲ; ಒಂದೇ ಅಂಕ; ಅನೇಕ ಪುರುಷಪಾತ್ರಗಳು ಇರುತ್ತವೆ. |
| ವೀರವು ಪ್ರಧಾನ; ಮಿಕ್ಕ ರಸ ಗಳು ಪೋಷಕ. | ವಿಮರ್ಶಸಂಧಿಯಿಲ್ಲ; ನಾಟಕದಲ್ಲಿರುವಂತೆಯೇ ಪ್ರಸ್ತಾವನೆಯುಂಟು. ಎಲ್ಲಾ ವೃತ್ತಿಗಳೂ ಉಂಟು; ಕೈಶಿಕಿಯು ಮಾತ್ರ ಸೂಕ್ಷ್ಮವಾಗಿರ ಬೇಕು. ಬಿಂದು ಪ್ರವೇಶಕಗಳಿಲ್ಲ; ಮೂರು ಅಂಕಗಳು; ಮೊದಲನೆಯದು ಎರಡು ಸಂಧಿಗ ಳುಳ್ಳದ್ದಾಗಿಯೂ, ೨೪ ಘಳಿಗೆಗಳಲ್ಲಿ ನಡೆದ ಸಂಗತಿಯನ್ನುಳ್ಳದ್ದಾಗಿಯೂ, ಎರಡನೆಯದು ೮ ಘಳಿಗೆಯಲ್ಲಿ ನಡೆದ ಸಂಗತಿಯನ್ನು ಒಳ ಕೊಂಡದ್ದಾಗಿಯೂ, ಮೂರನೆಯದು ೪ ಘಳಿಗೆ ಯಲ್ಲಿ ನಡೆದ ಸಂಗತಿಯನ್ನು ಒಳಕೊಂಡ ದ್ದಾಗಿಯೂ ಇರಬೇಕು. ಇದರಲ್ಲಿ ಮೂರು ಕಪಟಗಳು, ಮೂರು ವಿದ್ರವಗಳು, ಮೂರು ಶೃಂಗಾರಗಳು ಬರಬೇಕು.[15] |

[15] ಮೂರು ಕಪಟಗಳು—ವಸ್ತುಸ್ವಭಾವ ದೈವ ಶತ್ರುಗಳಿಂದ ನಡೆಯತಕ್ಕವು. ಮೂರು ಶೃಂಗಾರಗಳು—ಧರ್ಮ, ಅರ್ಥ, ಕಾಮಗಳಿಂದ ಪ್ರೇರಿತವಾದವು. ಮೂರು ವಿದ್ರವಗಳು—ಪಟ್ಟಣದ ಮುತ್ತಿಗೆ, ಗಾಳಿ, ಬೆಂಕಿ ಇವುಗಳಿಂದ ಬರತಕ್ಕವು.

| ರೂಪಕದ ಹೆಸರು | ವಸ್ತು | ನಾಯಕ |
|---|---|---|
| 8. ವೀಥಿ. | | ಒಂದೆರಡು ಪಾತ್ರಗಳು ಮಾತ್ರ. |
| 9. ಅಂಕ. (ಉತ್ಸೃಷ್ಟಿಕಾಂಕ).) | ಕಲ್ಪಿತ; ಹೆಂಗಸರ ಗೋಳಾಟದಿಂದ ಕೂಡಿದ್ದು | ಸಾಮಾನ್ಯ ಜನರು. |
| 10. ಈಹಾಮೃಗ. | ಮಿಶ್ರ; ದಿವ್ಯಸ್ತ್ರೀಯನ್ನು ಅವಳ ಇಷ್ಟಕ್ಕೆ ವಿರುದ್ಧವಾಗಿ ಹೊತ್ತುಕೊಂಡು ಹೋಗುವುದು–ಇತ್ಯಾದಿ. | ಧೀರೋದ್ಧತರಾದ ನಾಯಕ ಪ್ರತಿನಾಯಕರು. ಇವರು ದಿವ್ಯಮರ್ತ್ಯರಾಗಲೀ, ಬೇರೆಯಾಗಲಿ ಆಗಿರಬಹುದು. |

| ರಸ | ಇತರ ಸಂಗತಿಗಳು |
| --- | --- |
| ಶೃಂಗಾರ—ಇತರ ರಸಗಳೂ ಸ್ವಲ್ಪಸ್ವಲ್ಪ. | ಕೈಶಿಕೀವೃತ್ತಿ ; ಸಂಧ್ಯಂಗ ಅಂಕಗಳಲ್ಲಿ ಭಾಣದಂತೆಯೇ; ಪ್ರಸ್ತಾವನೆ ಮುಂತಾದ ಭಾಗಗಳೂ ಉದ್ಘಾತ್ಯಕ ಮುಂತಾದ ಅಂಗಗಳೂ ಇರಬೇಕು. |
| ಕರುಣರಸ ಪ್ರಧಾನ. | ಸಂಧಿ ವೃತ್ತಿ ಅಂಗಗಳು ಭಾಣದಲ್ಲಿರುವಂತೆಯೇ ; ಯುದ್ಧಜಯಾಪಜಯಾದಿಗಳು ಬರಿಯ ಮಾತಿನಿಂದ ವರ್ಣಿಸಲ್ಪಡಬೇಕು. |
| ನಾಯಕನಲ್ಲಿ ಶೃಂಗಾರಾಭಾಸ. | ನಾಲ್ಕು ಅಂಕಗಳು ಮತ್ತು ಮೂರು (ಮುಖ ಪ್ರತಿಮುಖ ಮತ್ತು ನಿರ್ವಹಣ) ಸಂಧಿಗಳುಳ್ಳದ್ದು. ಪ್ರತಿನಾಯಕನು ಅಯುಕ್ತವಾಗಿ ಆಚರಿಸುವನು. ಬೇಕಾದಷ್ಟು ಕೋಪವನ್ನು ಎಬ್ಬಿಸಬೇಕು, ಆದರೆ ಯುದ್ಧವನ್ನು ತರದೆ ಅದನ್ನು ಉಪಾಯವಾಗಿ ನಿವಾರಣೆ ಮಾಡಬೇಕು.—ಮಹಾತ್ಮನಿಗೆ ವಧೆ ಪ್ರಾಪ್ತವಾದರೂ ಅದನ್ನು ಪ್ರದರ್ಶಿಸಬಾರದು. |

## ಉಪರೂಪಕಗಳು

ಉಪರೂಪಕಗಳಲ್ಲಿ 'ನಾಟಿಕೆ' 'ತ್ರೋಟಕ' ಇವೆರಡೇ ಪ್ರಸಿದ್ಧವಾದವು ; ಆದ್ದರಿಂದ ಇವೆರಡರ ಲಕ್ಷಣವನ್ನು ಮಾತ್ರ ಇಲ್ಲಿ ಕೊಟ್ಟಿದೆ.[16]

**ನಾಟಿಕೆ**ಯಲ್ಲಿ ವಸ್ತುವು ಕಲ್ಪಿ . ನಾಯಕನು ಪ್ರಖ್ಯಾತನಾದ ಧೀರಲಲಿತ ; ಅವನ ಹೆಂಡತಿ ಜ್ಯೇಷ್ಠೆಯಾಗಿಯೂ, ಪ್ರಗಲ್ಭೆಯಾಗಿಯೂ, ಮಾನವತಿ[17] ಯಾಗಿಯೂ ಇರುವಳು ; ನಾಯಿಕೆ ರಾಜವಂಶೀಯಳಾಗಿಯೂ, ಮುಗ್ಧೆಯಾಗಿಯೂ ಅಂತಃಪುರದಲ್ಲಿರತಕ್ಕವಳು ಅಥವಾ ಸಂಗೀತವನ್ನು ಅಭ್ಯಾಸ ಮಾಡುತ್ತಿರುವವಳಾಗಿಯೂ, ನಾಯಕನಲ್ಲಿ ಹೊಸದಾಗಿ ಅನುರಕ್ತಳಾಗಿಯೂ ಇರುವಳು. ನಾಯಕನು ತನ್ನ ಹೆಂಡತಿಗೆ ಹೆದರುತ್ತ ನಡೆದುಕೊಳ್ಳುವನು. ನಾಯಕನಾಯಿಕೆಯರು ಸೇರುವುದು ಆಕೆಯ ಅಧೀನವಾಗಿರುವುದು. ಶೃಂಗಾರರಸ ; ಕೈಶಿಕೀವೃತ್ತಿ ; ಸಾಧಾರಣವಾಗಿ ನಾಲ್ಕು ಅಂಕಗಳು. ವಿಮರ್ಶಸಂಧಿ ಮಾತ್ರ ಇಲ್ಲ. ರತ್ನಾವಳೀ ನಾಟಿಕೆ ಈ ಜಾತಿಗೆ ಉತ್ತಮವಾದ ಉದಾಹರಣೆ.

**ತ್ರೋಟಕ**ದಲ್ಲಿ ದಿವ್ಯಮಾನುಷನಾಯಕ (?). ಶೃಂಗಾರರಸ ; ಪ್ರತಿಯೊಂದು ಅಂಕದಲ್ಲಿಯೂ ವಿದೂಷಕನು ಬರುತ್ತಾನೆ. ಏಳರಿಂದ ಒಂಬತ್ತರವರೆಗೂ ಅಂಕಗಳಿರುತ್ತವೆ (ಸಾಹಿತ್ಯದರ್ಪಣ VI, ೨೭೩).

ಉದಾಹರಣೆ—ವಿಕ್ರಮೋರ್ವಶೀಯ.

---

16 ಸಾಹಿತ್ಯದರ್ಪಣದ ೬ನೆಯ ಅಧ್ಯಾಯದಲ್ಲಿ ಎಲ್ಲಾ ಉಪರೂಪಕಗಳ ಲಕ್ಷಣವೂ ಗಳಿಸಲ್ಪಟ್ಟಿದೆ.

17 'ಮಾನಿನೀ' (ದಶರೂಪಕ,III, ೪೯)

## ೭. ರೀತಿ (ಮಾರ್ಗ)-ಶಯ್ಯೆ-ಪಾಕ

**ರೀತಿ** ಅಥವಾ 'ಮಾರ್ಗ' ವೆಂದರೆ 'ವಚನವಿನ್ಯಾಸಕ್ರಮ. '[1] ಇದು ಮೊದಲು ಆಯಾ ದೇಶಗಳ ಕವಿಕಾವ್ಯಗಳಲ್ಲಿ ಕಂಡುಬಂದ ವಿಶೇಷಲಕ್ಷಣಗಳಮೇಲೆ, ವಿದರ್ಭ ದೇಶದ್ದು 'ವೈದರ್ಭಿ' ಈ ರೀತಿಯಾಗಿ ಬೇರೆಬೇರೆಯಾಗಿ ವಿಭಾಗಿಸಲ್ಪಟ್ಟಂತೆ ಕಂಡು ಬರುತ್ತದೆ. ಇವುಗಳಲ್ಲಿ 'ವೈದರ್ಭಿ' 'ಗೌಡಿ' ಇವು ಸ್ಪಷ್ಟವಾದ ವ್ಯತ್ಯಾಸವುಳ್ಳವುಗಳು; ಪ್ರಾಯಶಃ ಪರಸ್ಪರ ವಿರುದ್ಧವಾದವುಗಳು; ಆದ್ದರಿಂದಲೂ, ಕಾವ್ಯಮಾರ್ಗಗಳು ಬಹಳ ವಾಗಿರುವುದರಿಂದಲೂ, ದಂಡಿಯು ಇವೆರಡನ್ನೇ ಹೇಳಿದ್ದಾನೆ. ವಾಮನನು ಇವುಗಳ ಜೊತೆಗೆ 'ಪಾಂಚಾಲಿ' ರೀತಿಯೊಂದನ್ನು ಸೇರಿಸಿದ್ದಾನೆ. ಇತರರು ಇವುಗಳ ಜೊತೆಗೆ 'ಲಾಟಿ'ಯನ್ನು ಸೇರಿಸಿ ರೀತಿಗಳು ನಾಲ್ಕೆಂದೂ, ಮತ್ತೆ ಕೆಲವರು 'ಲಾಟಿ' 'ಆವಂತಿ' 'ಮಾಗಧಿ' ಈ ಮೂರನ್ನೂ ಸೇರಿಸಿ ರೀತಿಗಳು ಆರೆಂದೂ ಹೇಳುತ್ತಾರೆ. ಭಾಮಹನು ಇವುಗಳಲ್ಲಿ ಯಾವುದನ್ನೂ ಒಪ್ಪದೆ ಇವೆಲ್ಲಾ ಮಂದಮತಿಗಳು ಗತಾನುಗತಿಕವಾಗಿ ಒಪ್ಪಿಕೊಂಡಿರುವವೆನ್ನುತ್ತಾನೆ. ಆದರೆ ಆಲಂಕಾರಿಕರು ರೂಢಿಯಾಗಿ ಹೇಳುವುದು ವೈದರ್ಭಿ, ಗೌಡಿ, ಪಾಂಚಾಲಿ ಇವು ಮೂರು.

ಶ್ಲೇಷ ಪ್ರಸಾದಾದಿ ಗುಣಭೇದಗಳ ಮೇಲೆ 'ರೀತಿ' ಭೇದಗಳಾಗುತ್ತವೆಂದು ದಂಡಿ ವಾಮನರು ಹೇಳುತ್ತಾರೆ—ಎಂದರೆ ಶ್ಲೇಷ ಪ್ರಸಾದಾದಿ ಹತ್ತು ಗುಣಗಳೂ ಇರುವುದು ವೈದರ್ಭೀರೀತಿಯೆಂದೂ, ಗೌಡೀ ರೀತಿ ಪ್ರಾಯಃ[2] ಇದಕ್ಕೆ ವಿರುದ್ಧವಾಗಿರು ವುದೆಂದೂ ದಂಡಿಯು ಹೇಳಿದ್ದಾನೆ. ವಾಮನನು ಸಮಗ್ರ (ಎಂದರೆ ಮೇಲೆ ಹೇಳಿದ ಎಲ್ಲಾ ಹತ್ತು) ಗುಣಗಳುಳ್ಳದ್ದು ವೈದರ್ಭೀರೀತಿಯೆಂದೂ, ಓಜಸ್ಸು ಮತ್ತು ಕಾಂತಿ ಗಳುಳ್ಳದ್ದು ಗೌಡಿಯೆಂದೂ, ಮಾಧುರ್ಯ ಸೌಕುಮಾರ್ಯಗಳುಳ್ಳದ್ದು ಪಾಂಚಾಲಿಯೆಂದೂ

---

[1] 'ವಚನವಿನ್ಯಾಸಕ್ರಮೋ ರೀತಿಃ ' –ಕಾವ್ಯಮೀಮಾಂಸಾ, ಪುಟ ೯.

'ವೈದರ್ಭಾದಿಕೃತಃ ಪಂಥಾಃ ಕಾವ್ಯೇ ಮಾರ್ಗಃ '—ಸರಸ್ವತೀಕಂಠಾಭರಣ II ೨೭. ೩೪.

'ಪದಸಂಘಟನಾ ರೀತಿಃ ' –ಸಾಹಿತ್ಯದರ್ಪಣ, ಪ್ರತಾಪರುದ್ರೀಯ.

ವಾಮನನು ರೀತಿಗೆ ಹೇಳಿರುವ ಲಕ್ಷಣವನ್ನು ನೋಡಿದರೆ, ಪದರಚನಾವಿಶೇಷ ಅರ್ಥ ಸ್ವರೂಪ ಇವೆರಡರ ಮೇಲೂ ರೀತಿಭೇದವನ್ನು ನಿಶ್ಚಯಿಸಬೇಕಾಗುತ್ತದೆ:

ತಸ್ಯಾಮರ್ಥಗುಣಸಂಪದಾಸ್ವಾದ್ಯಾ. . . .ಸಾಪಿ ವೈದರ್ಭೀ, ತಾತ್ಸ್ಥಿತ್
(ಸಾಪೀಯಮರ್ಥಗುಣಸಂಪದ್ವೈದರ್ಭೀತ್ಯುಕ್ತಾ)

ಏಕೆಂದರೆ ವಾಮನನು ಗುಣಗಳನ್ನು ಅರ್ಥಗುಣ ಶಬ್ದಗುಣಗಳನ್ನಾಗಿ ವಿಭಾಗಿಸಿದ್ದಾನೆ, ಆದರೆ ಮಿಕ್ಕವರು ಕೇವಲ ಪದರಚನಾವಿಶೇಷವೇ ರೀತಿನಿಶ್ಚಾಯಕವೆಂದು ಅಭಿಪ್ರಾಯ ಪಡು ತ್ತಾರೆ. ಇವರೂ ರೀತಿಯು ' ಉಪಕರ್ತ್ರೀ ರಸಾದೀನಾಂ ' ಎಂದು ಒಪ್ಪುತ್ತಾರೆ.

[2] ಏಕೆಂದರೆ ಅರ್ಥವ್ಯಕ್ತಿ, ಉದಾರತಾ, ಸಮಾಧಿ ಈ ಮೂರು ಗುಣಗಳು ಎರಡು ರೀತಿ ಗಳಲ್ಲಿಯೂ ಬರಬಹುದು.

ಹೇಳುತ್ತಾನೆ. ಈ ಗುಣಗಳಿಗೆ ಲಕ್ಷಣಗಳನ್ನು ಹೇಳುವುದರಲ್ಲಿ ಭಿನ್ನಾಭಿಪ್ರಾಯಗಳಿರುವುದರಿಂದಲೂ ಗುಣವಿಚಾರವು ಒಂಬತ್ತನೆಯ ಅಧ್ಯಾಯದಲ್ಲಿ ವಿಸ್ತಾರವಾಗಿ ಬರುವುದರಿಂದಲೂ ಈ ರೀತಿಗಳ ಲಕ್ಷಣವನ್ನು ಸಾಮಾನ್ಯವಾಗಿ ಹೀಗೆ ಹೇಳಬಹುದು: (ಸಾಹಿತ್ಯದರ್ಪಣ IX, ೧-೫)

1. ಮಾಧುರ್ಯವ್ಯಂಜಕವಾದ ವರ್ಣಗಳಿಂದಲೂ ಸಮಾಸವಿಲ್ಲದ—ಅಥವಾ ಸಣ್ಣ ಸಣ್ಣ ಸಮಾಸಗಳುಳ್ಳ—ಪದಗಳಿಂದಲೂ ಕೂಡಿರುವ ಲಲಿತವಾದ ಪದರಚನೆಯು 'ವೈದರ್ಭಿ'

ಉದಾಹರಣೆ

ಕುಣಿವುದನುಳಿದುವು ಶಿಖಿಗಳ್
ತೃಣಕಬಳಂ ಜಗುಳೆ ಬಾಯಿನರಿಯದು ಹರಿಣೀ ।
ಗಣಮುದಿರ್ಪೆಲೆಯಿಂ ರಮಣೀ
ಮಣಿ ಕಣ್ಣೀರ್ವಿಡುವ ತೆರದೆ ತೋರ್ಪುವು ಲತೆಗಳ್ ॥

ಶಾಕುಂತಲ, IV. ೯೧

2. ಓಜೋವ್ಯಂಜಕವಾದ ವರ್ಣಗಳಿಂದಲೂ ದೊಡ್ಡ ದೊಡ್ಡ ಸಮಾಸಗಳಿಂದಲೂ ಕೂಡಿರುವ, ಆಡಂಬರವುಳ್ಳ ಮತ್ತು ಬಿಗಿಯಾದ ಪದರಚನೆ 'ಗೌಡಿ'.

ಉದಾಹರಣೆ

ಉರುಚಾಪೋರ್ಬಲಚಕ್ರದಿಂ ವಿವಿಧಶಸ್ತ್ರಾಸ್ತ್ರಪ್ರಭಾಚಕ್ರದಿಂ
ದ್ವಿರದಸ್ಯಂದನಕೇತುಚಕ್ರದಿನಿಳಾಚಕ್ರಂ ದಿಶಾಚಕ್ರಮಂ
ಬರಚಕ್ರಂ ನೆಱೆ ತೀವೆ ಮೀರುವ ಗುಹಾಚಕ್ರಕ್ಕೆ ವಾದಿತ್ರಜ
ಕ್ರರವಂ ಮಾರ್ದನಿವೀರೆ ಚಕ್ರಧರನೆಟ್ಟಿಂದಂ ಮಹೋತ್ಸಾಹದಿಂ ॥

ಜಗನ್ನಾಥವಿಜಯ IX, ೧೩೩

3. ಮಿಕ್ಕ ವರ್ಣಗಳಿಂದ ಕೂಡಿಯೂ ಸಣ್ಣ ಸಮಾಸಗಳುಳ್ಳದ್ದಾಗಿಯೂ ಇರುವ ಪದರಚನೆ 'ಪಾಂಚಾಲಿ'.

ಉದಾಹರಣೆ

ಮೊಳೆವಲ್ ಶೋಭಿಸೆ ನಿರ್ನಿಮಿತ್ತಹಸಿತಂ ಚೆಲ್ವಾಗೆ ಲಾಲಾಜಲಂ
ತುಳುಕಲ್ ಬರ್ಪ ತೊದಳ್ ಮನಂಗೊಳಿಸಲಂಕಾರೋಹಕ್ಕಿಚ್ಛೈಪ ಮ
ಕ್ಕಳನಿಕ್ಕೈಗಳನೆತ್ತಿಕೊಂಡು ನಲಪಿಂ ತದ್ದೇಹಚಂಚದ್ರಜೋ
ಮಳಿನಾಂಗರ್ಕಳೆನಿಪ್ಪ ಮಾನವರೆ ತಾಂ ಧನ್ಯರ್ ವಲಂ ಧಾತ್ರಿಯೊಳ್ ॥

—ಶಾಕುಂತಲ VII ೧೮೦

(ಹೀಗೆ ವೈದರ್ಭೀ ಪಾಂಚಾಲೀ ರೀತಿಗಳಿಗೆ ಮಧ್ಯೆ ಇರುವುದು 'ಲಾಟಿ' ಎಂದು ಹೇಳಿದೆ.)[3]

ಈ ವೈದರ್ಭೀ ಗೌಡೀರೀತಿಗಳನ್ನೇ ನೃಪತುಂಗನೂ (ಕವಿರಾಜಮಾರ್ಗ II, ೪೭-೯೫) ನಾಗವರ್ಮನೂ (ಕಾವ್ಯಾವಲೋಕನ III, ೧೨೪) ದಕ್ಷಿಣೋತ್ತರ ಮಾರ್ಗಗಳೆಂದು ಹೇಳಿದ್ದಾರೆ. ನೃಪತುಂಗನು ಮಾತ್ರ ಸ್ವಭಾವೋಕ್ತಿ ದಕ್ಷಿಣ ಮಾರ್ಗಕ್ಕೂ ವಕ್ರೋಕ್ತಿ ಉತ್ತರಮಾರ್ಗಕ್ಕೂ ಭೇದಕಗುಣವೆಂದು ಒಂದು ಅಂಶವನ್ನು ಹೆಚ್ಚಾಗಿ ಹೇಳಿದ್ದಾನೆ. (II,೫೧). ನಾಗವರ್ಮನು ಭಾಮಹನನ್ನು ಅನುಸರಿಸಿ "ವೈದರ್ಭಗೌಡ ಮಾರ್ಗವಿಭೇದಂ ಬಗೆವೊಡೆ ಗತಾನುಗತಿಕಂ" ಎಂದು (III, ೧೨೫) ಹೇಳಿದ್ದಾನೆ.

ಇದಲ್ಲದೆ "ಸಮಾನಾರ್ಥಕವಾದ ದ್ವಿರೂಪ ಕ್ರಿಯೆಗಳಲ್ಲಿಯೂ ಉತ್ತಮ ಪುರುಷ ದ್ವಿರೂಪ ಸರ್ವನಾಮಗಳಲ್ಲಿಯೂ ಅನ್ಯತರವನ್ನು ಪ್ರಯೋಗಿಸು "ವುದರಿಂದ ದಕ್ಷಿಣೋತ್ತರ ಮಾರ್ಗಭೇದಗಳಾಗುತ್ತವೆಯೆಂದು ನೃಪತುಂಗನೂ ಭಟ್ಟಾಕಳಂಕನೂ ಸೂಚಿಸುತ್ತಾರೆ. ಈ ಭೇದವು "ಅತ್ಯಲ್ಪವಾಗಿಯೂ ಅಮುಖ್ಯವಾಗಿಯೂ" ಇರುವುದರಿಂದಲೂ, ಭಾಷಾ ವಿಚಾರಕ್ಕೆ ಸಂಬಂಧಪಟ್ಟಿರುವುದರಿಂದಲೂ ಅದನ್ನು ಇಲ್ಲಿ ವಿಸ್ತರಿಸುವುದು ಅನಾವಶ್ಯಕ.

ಇದಲ್ಲದೆ ಭಾವಾಶ್ರಯವಾದ 'ನೃತ್ಯ' ಕ್ಕೆ **ಮಾರ್ಗ**ವೆಂದೂ ತಾಲಲಯಾಶ್ರಯವಾದ 'ನೃತ್ತ' ಕ್ಕೆ **ದೇಶಿ**(ದೇಸಿ)ಯೆಂದೂ ಹೆಸರಿರುವಂತೆ ದಶರೂಪಕದಿಂದ ತಿಳಿಯಬರುತ್ತದೆ (I, ೯). ಆದರೆ ಇದಕ್ಕೂ ದಕ್ಷಿಣೋತ್ತರಮಾರ್ಗಕ್ಕೂ ಸಂಬಂಧವಿಲ್ಲ.

'ರೀತಿ' ಅಥವಾ 'ಮಾರ್ಗ' ದ ಸಂದರ್ಭದಲ್ಲಿ ಸಂಸ್ಕೃತಾಲಂಕಾರಿಕರು ಯಾರೂ 'ದೇಸಿ'ಯ ಪ್ರಸ್ತಾಪವನ್ನೆತ್ತುವುದಿಲ್ಲ. ನೃಪತುಂಗನು ಮಾತ್ರ ಮಾರ್ಗಗಳ ವಿಚಾರವನ್ನು ವಿಸ್ತಾರವಾಗಿ ಹೇಳಿರುವುದಲ್ಲದೆ (II, ೪೫ . . . .) 'ದೇಸಿ' 'ಮಾರ್ಗ' ಗಳಿಗೆ ಭೇದವನ್ನು ಹೇಳಿದಂತಿದೆ (ಪುಟ ೮, ೧೨, ೨೫ ಇತ್ಯಾದಿ.)ಆದರೆ ಇದು ಸ್ಪಷ್ಟವಾಗಿಲ್ಲ.

ಮಾಧುರ್ಯ ಓಜಸ್ಸು ಕೋಮಲತೆಗಳನ್ನು ವ್ಯಕ್ತಗೊಳಿಸುವ ವರ್ಣಗಳಿಂದ ಕೂಡಿದ ಪದರಚನೆಗಳನ್ನು ಕಾವ್ಯಪ್ರಕಾಶಕಾರನು ಕ್ರಮವಾಗಿ 'ಉಪನಾಗರಿಕ ವೃತ್ತಿ,' 'ಪರುಷವೃತ್ತಿ', 'ಕೋಮಲವೃತ್ತಿ' ಗಳೆಂದು ಕರೆದು, ಇವುಗಳನ್ನೇ ವಾಮನಾದಿಗಳು

---

[3] "ಲಾಟೀ ಅಲ್ಪಾಂತರತ್ವಾತ್ ಪಾಂಚಾಲ್ಯಂತರ್ಗತೈವ"-ಉದ್ಯೋತ.

"ಅಂತರಾಳೇ ತು ಪಾಂಚಾಲೀವೈದರ್ಭ್ಯೋರ್ಯಾವತಿಷ್ಠತೇ |
**ಸಾವಂತಿಕಾ** ಸಮಸ್ತೈಃ ಸ್ಯಾತ್ ದ್ವಿತ್ರೈಸ್ತ್ರಿಚತುರೈಃ ಪದೈಃ ||
ಪೂರ್ವರೀತೇರನಿರ್ವಾಹೇ ಖಂಡರೀತಿಸ್ತು **ಮಾಗಧೀ** | "

—ಸರಸ್ವತೀಕಂಠಾಭರಣ III ೨೩.

ವೈದರ್ಭೀ, ಗೌಡೀ, ಪಾಂಚಾಲೀ 'ರೀತಿ' ಗಳೆಂದು ಕರೆಯುತ್ತಾರೆಂದು ಹೇಳುತ್ತಾನೆ (IX, ೮೦). ಆದರೆ 'ವೃತ್ತಿ'ಯೆಂಬ ಹೆಸರನ್ನು ಅರ್ಥ ವಿಶೇಷಕ್ಕೂ (ಎಂದರೆ ಚಿತ್ತ ವಿಕಾಸ ಸಂಕೋಚಾದಿಗಳನ್ನು ಉಂಟುಮಾಡುವ ರಸವಿಶೇಷಗಳನ್ನು ಒಳಕೊಂಡ ವಿಷಯಗಳಿಗೂ) 'ರೀತಿ' ಎಂಬ ಹೆಸರನ್ನು ಪದರಚನಾವಿಶೇಷಕ್ಕೂ ಕೊಡುವುದು ರೂಢಿಯಾಗಿದೆ.

ಪದಗಳಿಗೆ ಇರತಕ್ಕ ಅನ್ಯೋನ್ಯವಾದ ಮೈತ್ರಿಗೆ **ಶಯ್ಯೆ** ಎಂದು ಹೆಸರು.[4] ಪದಗಳನ್ನು ಹೊಂದಿಕೆಯಾಗಿರುವಂತೆ ಜೋಡಿಸಿದರೆ ಆ ರಚನೆ, ಸುಕ್ಕಿಲ್ಲದೆ ಉಬ್ಬು ತಗ್ಗುಗಳಿಲ್ಲದೆ ಒಂದೇ ಸಮನಾಗಿದ್ದು ನೋಡುವುದಕ್ಕೂ ಮಲಗುವುದಕ್ಕೂ ಹಿತಕರವಾದ ಹಾಸಿಗೆಯಂತೆ ಮನೋಹರವಾಗಿರುತ್ತದೆ. ಅದೇ ಪದಗಳನ್ನೇ ಇಟ್ಟುಕೊಂಡು ಅವುಗಳ ಕ್ರಮವನ್ನು ವ್ಯತ್ಯಾಸಪಡಿಸಿದರೇ ಆಗಲಿ, ಅದೇ ಅರ್ಥವಿರುವಂತೆ ಬೇರೆ ಪದಗಳನ್ನು ಉಪಯೋಗಿಸಿದರೇ ಆಗಲಿ, ಆ ರಚನೆ ಗಂಟು ಗಂಟಾದ ಹಾಸಿಗೆಯಂತೆಯೂ ಕಲ್ಲುಗಳು ಎದ್ದಿರುವ ಬೀದಿಯಂತೆಯೂ ಮನಸ್ಸಿಗೆ ತೋರುತ್ತದೆ. ಶಯ್ಯೆಗೇ 'ಪದಾನುಗುಣ್ಯ'ವೆಂದೂ, 'ಪದಮೈತ್ರಿ' ಯೆಂದೂ ಹೆಸರು.

ಉದಾಹರಣೆ

ಪದಮೈತ್ರಿ ಇಲ್ಲದ್ದಕ್ಕೆ—

ಅರಸುಕುಮಾರನನಾಯತ
ತರಕಡೆಗಣ್ಣಿಂದೆ ನೋಡಿ ಕೆಳದಿಸಮೇತಂ ।
ಪರಿಗತನಗೆಯಿಂದಿರ್ದೆಂ
ಗುರುನಾಣ್ಬರದಿಂದಮೆಱಗಿ ಮುಖತಾವರೆಯಂ ॥

ಇದನ್ನೇ ಹೀಗೆ ಬದಲಾಯಿಸಿದರೆ ಶಯ್ಯೆ ಉತ್ತಮವಾಗುತ್ತದೆ :

ನರಪತಿತನಯನನಾಯತ
ತರಳಾಪಾಂಗದೊಳೆ ನೋಡಿ ಕೆಳದಿಯರೊಡನಾಂ ।
ಪರಿಗತಹಾಸ್ಯದೊಳಿರ್ದೆಂ
ಗುರುಲಜ್ಜಾಭರದಿನೆಱಗಿ ಮುಖಸರಸಿಜಮಂ ॥

ಕವಿರಾಜಮಾರ್ಗ I, ೫೮-೫೯

---

[4] ಪದಾನುಗುಣ್ಯವಿಶ್ರಾಂತಿಃ ಶಯ್ಯಾ ಶಯ್ಯೇವ ಸಂಮತಾ ।
ಯಾ ಪದಾನಾಂ ಪರಾನ್ಯೋನ್ಯ ಮೈತ್ರೀ ಶಯ್ಯೇತಿ ಕಥ್ಯತೇ ॥

ಪ್ರತಾಪರುದ್ರೀಯ ಪುಟ ೪೨, ೬೭

ಶಯ್ಯೆ ಚೆನ್ನಾಗಿಲ್ಲದ್ದಕ್ಕೆ :

ಶಶಿವಿಶದಯಶಂ ನಿಜಕುಲ
ವಿಶೇಷಕಂ ಕರುಣಿ ಪಂಚವರ್ಗಾಧಿಕಪಂ |
ಚಶತಶರಾಸನತನು ಬುಧ
ಕುಶೇಶಯೋದ್ಬೋಧಕರಲಸತ್ತ್ರಿಗ್ಮಕರಂ ||

—ಆದಿಪುರಾಣ VI, ೬೬

**ಚೆನ್ನಾಗಿರುವುದಕ್ಕೆ :**

ಕುರುಕುಲನಂದನಂ ಪವನನಂದನನೆಂಬ ಮದಾಂಧಗಂಧಸಿಂ
ಧುರಮೆ ಕೞುತ್ತು ಪಾಯೆ ಪಡಲಿಟ್ಟವೊಲಾದುದು ಪುಣ್ಯದೊಂದು ಪೆ
ರ್ಮರಸುೞಿವಂತೆ ನೀನುೞಿದೆಯಿನ್ನಿೞಿವನ್ನರುಮಿಲ್ಲ ಮುತ್ತರುಂ
ಕುರುಡರುಮೆನ್ನದೆಮ್ಮ ನುಡಿಗೇಳ್ ಮಗನೇ ಬಗೆದಂದೆನಿಂಬುಕೆಯ್ ||

— ಪಂಪಭಾರತ XIII, ೧೨

ಅರ್ಥಗಭೀರತೆಗೆ **ಪಾಕ**ವೆಂದು ಹೆಸರು.[೬] ಕೆಲವು ಕಾವ್ಯಗಳಲ್ಲಿ ಅರ್ಥವೂ ಅದರ ಸ್ವಾರಸ್ಯವೂ ಸುಲಭವಾಗಿದ್ದು ಕ್ಲೇಶವಿಲ್ಲದೆ ತಿಳಿಯುವುದು ; ಮತ್ತೆ ಕೆಲವುಗಳಲ್ಲಿ ಅರ್ಥವು ಗೂಢವಾಗಿದ್ದು ಅದು ತಿಳಿಯಬೇಕಾದರೆ ಬುದ್ಧಿಕ್ಲೇಶವಾಗುವುದು ; ಈ ಗಭೀರತೆಯ ತಾರತಮ್ಯವನ್ನು ಇಟ್ಟುಕೊಂಡು ಪಾಕವನ್ನು 'ದ್ರಾಕ್ಷಾಪಾಕ', 'ನಾರಿಕೇಳಪಾಕ' ಎಂದು ಎರಡು ಭಾಗ ಮಾಡಿದ್ದಾರೆ. ದ್ರಾಕ್ಷಿಯ ಹಣ್ಣನ್ನು ಹಾಗೇ ಬಾಯಿಗೆ ಹಾಕಿಕೊಂಡು ಸುಲಭವಾಗಿ ಅದರ ರಸವನ್ನು ಗ್ರಹಿಸಬಹುದು ; ತೆಂಗಿನಕಾಯಿ ಹಾಗಲ್ಲ. ಅದರ ಚಿಪ್ಪನ್ನು ಒಡೆದಲ್ಲದೆ ಅದರ ತಿರುಳು ಸಿಕ್ಕುವುದಿಲ್ಲ. ಸರಳವಾದ ಮತ್ತು ಗೂಢವಾದ ಅರ್ಥಗಳುಳ್ಳ ಕಾವ್ಯಗಳೂ ಹೀಗೆಯೇ.

ಇವೆರಡಕ್ಕೂ ಮಧ್ಯೆ ಬರುವಂತೆ 'ಕದಲೀಪಾಕ', 'ರಸಾಲಪಾಕ' ಮುಂತಾದವುಗಳನ್ನು ಕೇಳಬಹುದು. ಒಳಗೆ ರಸವಿಲ್ಲದೆ ಬರಿಯ ಶಾಸ್ತ್ರವ್ಯುತ್ಪತ್ತಿ ಬರೆದ ಕಾವ್ಯದಲ್ಲಿ 'ವೃಂತಾಕಪಾಕ'ವೆಂದು ಕೆಲವರು ಹೇಳಿದ್ದಾರೆ !

ಉದಾಹರಣೆ

ದ್ರಾಕ್ಷಾಪಾಕಕ್ಕೆ :

ಎಣಿಸೆ ನಖಂಗಳಿಂದುಡಿಯದಿರ್ದ ಚಿಗುರ್ ಕಡೆದೆಜ್ಜವಿಕ್ಕದೊ
ಳ್ಮಣಿ ಸವಿನೋಡದಿರ್ದಭಿನವಂ ಮಧು ವಾಸಿಸದಿರ್ದ ಪೂವು ಧಾ
ರಿಣಿಯೊಳಖಂಡಪುಣ್ಯಫಲಮಾಕೆಯ ರೂಪನಘಂ ಗಡಾ ಅದ
ಕ್ಕೆಣೆಯೆನೆ ಭೋಕ್ತೃವಂ ವಿಧಿಯದಾವನನೊಂದಿಪನಾಹ ಕಾಣೆನಾಂ ||

—ಶಾಕುಂತಲ II, ೪೫

---

೬ " ಅರ್ಥಗಂಭೀರಿಮಾ ಪಾಕಃ "–ಪ್ರತಾಪರುದ್ರೀಯ.

ನಾರಿಕೇಳಪಾಕಕ್ಕೆ :

ಚಂದ್ರಕಾಂತಶಿಲೆಯಲ್ಲಿ ನವಶ್ರೀಖಂಡಮನಿಟ್ಟು ಕರಾಬ್ಜದಿಂ
ಚಂದ್ರಿಕಾಲಸದಪಾಂಗೆಯರುದ್ಯತ್ಸೌರಭನಿಶ್ಶ್ವಸಿತಾಂಗಿಯರ್
ಸಾಂದ್ರಚಂದನದ ಘಟ್ಟಿಗೆ ನೀರ ಪಾರದೆ ಮಾಳ್ಪುದನೀಕ್ಷಿಸು
ತ್ತಿಂದ್ರನಂದನನ ಪೋಲ್ದ ಭುಜಂಗರ್ ಕೌತುಕದಿಂ ತಲೆದೂಗುವರ್ ||

—ರಾಜಶೇಖರವಿಲಾಸ II, ೧೨೧

# ೮. ದೋಷಗಳು

ಕಾವ್ಯರಮಣೀಯತೆಗೆ ಕುಂದನ್ನು ಅಥವಾ ಹಾನಿಯನ್ನು ತರಕ್ಕದ್ದೇ 'ದೋಷ'. ರಸಾನುಭವದಿಂದ ಉಂಟಾಗುವ ಆನಂದವೇ ಕಾವ್ಯದ ಮುಖ್ಯೋದ್ದೇಶವಾದ್ದರಿಂದ, ರಸಕ್ಕೆ (ಸಾಕ್ಷಾತ್ತಾಗಿಯಾಗಲಿ, ಪರಂಪರೆಯಿಂದಾಗಲಿ) ಅಡ್ಡಿಯಾಗುವುದೇ ದೋಷವೆಂದು ಕೆಲವರು ಹೇಳುವರು (ಕಾವ್ಯಪ್ರಕಾಶ, VII). ಕಾವ್ಯವು ಶಬ್ದಮಯವಾದ್ದರಿಂದಲೂ, ಈ ಶಬ್ದಗಳು ಅರ್ಥವುಳ್ಳವಾದ್ದರಿಂದಲೂ, ಅರ್ಥಾನುಸಂಧಾನದಿಂದ ರಸಾನುಭವವು ಬರುವುದರಿಂದಲೂ, ಶಬ್ದಾರ್ಥದೋಷಗಳೂ ಕೊನೆಗೆ ರಸಾಸ್ವಾದದಿಂದ ಉಂಟಾಗುವ ಆನಂದಕ್ಕೆ ಅಡ್ಡಿಯಾಗಿ ಪರಿಣಮಿಸುವುದರಿಂದಲೂ, ಮೇಲೆ ಹೇಳಿದಂತೆ ರಸಕ್ಕೆ ಅಡ್ಡಿಯಾಗುವುದೇ ' ದೋಷ 'ವೆಂದು ಹೇಳಿದರೂ ಹೇಳಬಹುದು.

ಕಾವ್ಯದಲ್ಲಿ ಪದ, ಅರ್ಥ, ರಸ ಎಂದು (ಮುಖ್ಯವಾಗಿ) ಮೂರು ಅಂಶಗಳಿರುತ್ತವೆಯಷ್ಟೆ ; ಆದ್ದರಿಂದ 'ದೋಷ'ಗಳನ್ನು (೧) ಪದದೋಷ, (೨) ಅರ್ಥದೋಷ, (೩) ರಸದೋಷ ಎಂದು ಮೂರುಭಾಗ ಮಾಡಬಹುದು.[1] ಇವುಗಳಲ್ಲಿ ಪದದೋಷವು ಪದದ ಒಂದು ಭಾಗದಲ್ಲಿ ಮಾತ್ರ ಇರಬಹುದು, ಅಥವಾ (ಅನೇಕ ಪದಗಳು ಸೇರಿ ಆಗುವ) ಒಂದು ವಾಕ್ಯದಲ್ಲಿ ಅಥವಾ ಅವುಗಳ ರಚನೆಯಲ್ಲಿ ಇರಬಹುದು.

ಪ್ರಾಚೀನಾಲಂಕಾರಿಕರಾದ ಭರತಭಾಮಹದಂಡಿಗಳು ಹತ್ತು ಅಥವಾ ಹನ್ನೊಂದು ದೋಷಗಳನ್ನು ಹೇಳುತ್ತಾರೆ.[2] ಆದರೆ ಇವುಗಳನ್ನು ಪದದೋಷ, ಪದಾರ್ಥದೋಷ, ಎಂದು ಮುಂತಾಗಿ ವಿಭಾಗ ಮಾಡಿಲ್ಲ. ವಾಮನನು ಪದ-ವಾಕ್ಯ-ಅರ್ಥದೋಷಗಳೆಂದು ವಿಭಾಗ ಮಾಡಿದ್ದಾನೆ. ಈ ವಿಭಾಗಗಳನ್ನು ನವೀನರಾದ ಮಮ್ಮಟನೇ ಮುಂತಾದವರು ಅನುಸರಿಸುವುದಲ್ಲದೆ ಅವುಗಳ ಜೊತೆಗೆ 'ರಸದೋಷ'ವನ್ನೂ ಸೇರಿಸುವರು. ಕನ್ನಡ ಆಲಂಕಾರಿಕರಾದ ನೃಪತುಂಗ ನಾಗವರ್ಮರು ಸಾಮಾನ್ಯರಾಗಿ ದಂಡಿಯನ್ನೇ (ಮಿಕ್ಕಕಡೆಗಳಲ್ಲಿಯೂ ಇರುವಂತೆ) ಅನುಸರಿಸಿರುವರು.

---

[1] ಮಮ್ಮಟನು ಕೆಲವು ಅಲಂಕಾರದೋಷಗಳನ್ನೂ ಹೇಳಿದ್ದಾನೆ, ಆದರೆ ಅವು ಇತರ ದೋಷಗಳಲ್ಲಿಯೇ ಅಂತರ್ಗತವೆಂದು ಆತನ ಅಭಿಪ್ರಾಯ. (ಉಲ್ಲಾಸ ೧೦, ಸಾಹಿತ್ಯದರ್ಪಣ VII, ೧೫)

[2] ಅಪಾರ್ಥಂ ವ್ಯರ್ಥಮೇಕಾರ್ಥಂ ಸಸಂಶಯಮಪಕ್ರಮಂ
ಶಬ್ದಹೀನಂ ಯತಿಭ್ರಷ್ಟಂ ಭಿನ್ನವೃತ್ತಂ ವಿಸಂಧಿಕಂ ॥
ದೇಶಕಾಲಕಲಾಲೋಕನ್ಯಾಯಾಗಮವಿರೋಧಿ ಚ ।
ಇತಿ ದೋಷಾ ದಶೈವೇತೇ ವರ್ಜ್ಯಾಃ ಕಾವ್ಯೇಷು ಸೂರಿಭಿಃ ॥ —ಕಾವ್ಯಾದರ್ಶ

ದೋಷಗಳನ್ನು ಕಾವ್ಯಪ್ರಕಾಶಕಾರನು ವಿಸ್ತಾರವಾಗಿ ಹೇಳಿರುವುದರಿಂದ ಅವನ ಮತವನ್ನು ಅನುಸರಿಸಿ ಕನ್ನಡದಲ್ಲಿ ಬರಬಹುದಾದ ಕೆಲವು ದೋಷಗಳನ್ನು ಇಲ್ಲಿ ಪ್ರತಿಪಾದಿಸಿದೆ.[3]

## 1. ಪದ ದೋಷಗಳು

ದೋಷವುಳ್ಳ ಪದಗಳನ್ನು—1. ಶ್ರುತಿಕಟು, 2. ಚ್ಯುತಸಂಸ್ಕಾರ, 3. ಅಪ್ರಯುಕ್ತ, 4. ನಿಹತಾರ್ಥ, 5. ಅನುಚಿತಾರ್ಥ, 6. ನಿರರ್ಥಕ, 7. (ಮೂರು ವಿಧವಾದ) ಅಶ್ಲೀಲ, 8. ಸಂದಿಗ್ಧ, 9. ಅಪ್ರತೀತ, 10. ಗ್ರಾಮ್ಯ, 11. ಕ್ಲಿಷ್ಟ 12. ಅವಿಮೃಷ್ಟವಿಧೇಯಾಂಶ, 13. ವಿರುದ್ಧಮತಿಕೃತ್ ಎಂದು ವಿಭಾಗಿಸಬಹುದು. ಇವುಗಳಲ್ಲಿರುವ ಮೊದಲಿನ ಹತ್ತು ದೋಷಗಳು ಒಂದೊಂದೇ ಪದದಲ್ಲಾಗಲಿ ಅನೇಕ ಪದಗಳು ಸೇರಿ ಆಗಿರುವ ಸಮಾಸದಲ್ಲಾಗಲಿ ಇರಬಹುದು.[4] ಕೊನೆಯ ಮೂರು, ಸಮಾಸದಲ್ಲಿ ಮಾತ್ರ ಬರಬಹುದಾದವುಗಳು. ಚ್ಯುತಸಂಸ್ಕಾರ ನಿರರ್ಥಕತ್ವ ಇವುಗಳನ್ನು ಬಿಟ್ಟು ಮಿಕ್ಕ ಹನ್ನೊಂದು, ವಾಕ್ಯಗಳಲ್ಲಿಯೂ, ಬರಬಹುದು. ಶ್ರುತಿಕಟುತ್ವ, ಅಶ್ಲೀಲತೆ, (ನಿಹತಾರ್ಥತ್ವ' ನಿರರ್ಥಕತ್ವ,) ಮುಂತಾದ ಕೆಲವು ದೋಷಗಳು ಪದದ ಒಂದು ಭಾಗದಲ್ಲಿಯೂ ಬರಬಹುದು.

1. **ಶ್ರುತಿಕಟು**—ಪರುಷಾಕ್ಷರಗಳಿಂದ ಕೂಡಿ ಕಿವಿಗೆ ಅಶ್ರಾವ್ಯವಾಗಿ ಇರುವುದು.

2. **ಚ್ಯುತಸಂಸ್ಕಾರ**—ವ್ಯಾಕರಣಕ್ಕೆ ವಿರುದ್ಧವಾಗಿರುವುದು.

3. **ಅಪ್ರಯುಕ್ತ** — ಕೋಶವ್ಯಾಕರಣಗಳಿಗೆ ಒಪ್ಪಿಗೆಯಾಗಿದ್ದರೂ, ಪ್ರಯೋಗದಲ್ಲಿ ಇಲ್ಲವೇ ಇರುವುದು.

4. **ನಿಹತಾರ್ಥ**—ಪ್ರಸಿದ್ಧವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು.

5. **ಅನುಚಿತಾರ್ಥ**—ಹೇಳಬೇಕೆಂದಿರುವ ಅರ್ಥದ ಸ್ವಾರಸ್ಯವನ್ನು ಕೆಡಿಸುವುದು.

6. **ನಿರರ್ಥಕ**—ಪಾದಪೂರಣಕ್ಕೆ ಮಾತ್ರ ಹಾಕಿರುವುದು.

---

[3] ಇವುಗಳಲ್ಲದೆ ನೃಪತುಂಗನು ಇನ್ನೂ ಕೆಲವು ದೋಷಗಳನ್ನು ಹೇಳಿದ್ದಾನೆ. ಅವುಗಳನ್ನು ಆ ಗ್ರಂಥದ ಎರಡನೆಯ ಪರಿಚ್ಛೇದದಲ್ಲಿ ನೋಡಬಹುದು.

[4] 3, 4, 9, ಇವುಗಳಿಗೆ ಪರಸ್ಪರ ಅಷ್ಟೇನೂ ವ್ಯತ್ಯಾಸವಿಲ್ಲ. (ಕಾವ್ಯಪ್ರಕಾಶ, ಪುಟ ೩೨೭)—ಯದ್ಯಪ್ಯಸಮರ್ಥಸ್ಯೈವಾಪ್ರಯುಕ್ತಾದಯಃ ಕೇಚನಭೇದಾಃ; ತಥಾಪ್ಯನ್ಯೈರಾಲಂಕಾರಿಕೈರ್ವಿಭಾಗೇನ ಪ್ರದರ್ಶಿತಾ ಇತಿ ಭೇದಪ್ರದರ್ಶನೇನೋದಾಹರ್ತವ್ಯಾ ಇತಿ ಚ ವಿಭಜ್ಯೋಕ್ತಾಃ.

7. **ಅಶ್ಲೀಲ**—ಮನಸ್ಸು ಹಿಂಪೆಗೆಯುವಂತೆ ಮಾಡುವುದು. ಇದು ಮೂರು ವಿಧ :

(i) ನಾಚಿಕೆಗೊಳಿಸುವುದರಿಂದ,
(ii) ಜುಗುಪ್ಸೆ ಅಥವಾ ಅಸಹ್ಯವನ್ನುಂಟುಮಾಡುವುದರಿಂದ,
(iii) ಅಮಂಗಲ ಅಥವಾ ಕೆಟ್ಟದನ್ನು ಸೂಚಿಸುವುದರಿಂದ.

8. **ಸಂದಿಗ್ಧ**—ಗೊತ್ತಾದ ಒಂದು ಅರ್ಥವಿಲ್ಲದೆ ಹೀಗೋ ಹಾಗೋ ಎಂದು ಸಂದೇಹ ಹುಟ್ಟುವಂತೆ ಇರುವುದು.

9. **ಅಪ್ರತೀತ**—ಕೇವಲ ಶಾಸ್ತ್ರಗಳಲ್ಲಿ ಮಾತ್ರನೇ ಬರುವುದು.

10. **ಗ್ರಾಮ್ಯ**—ಗಂಭೀರವಲ್ಲದ್ದು.

11. **ಕ್ಲಿಷ್ಟ**—ಪಾಠಕರಿಗೆ ಸುಲಭವಾಗಿ ಅರ್ಥವಾಗದಿರುವುದು.

12. **ಅವಿಮೃಷ್ಟವಿಧೇಯಾಂಶ**—ಹೇಳಬೇಕೆಂದಿರುವ ವಿಷಯದಲ್ಲಿ ಮುಖ್ಯ ಭಾಗಕ್ಕೆ ತಕ್ಕ ಪ್ರಾಶಸ್ತ್ಯಕೊಡವಂತಿರುವುದು.

13. **ವಿರುದ್ಧಮತಿಕೃತ್**—ಹೇಳಬೇಕೆಂದಿದ್ದ ಅರ್ಥಕ್ಕೆ ಕೇವಲ ವಿರುದ್ಧ ವಾದ ಅರ್ಥವೂ ಆಗುವಂತಿರುವುದು.

ವಾಕ್ಯದಲ್ಲಿ ಮಾತ್ರ ಬರತಕ್ಕ ದೋಷಗಳು

1. **ಪ್ರತಿಕೂಲವರ್ಣ**—ಪ್ರಸಕ್ತವಾದ ರಸಕ್ಕೆ ಅನುಗುಣವಲ್ಲದ ಅಕ್ಷರ ಗಳಿರುವುದು.

2. **ವಿಸಂಧಿ**—ಎಂದರೆ (i) ಅಶ್ಲೀಲವು ತೋರುವ ಹಾಗೆ ಸಂಧಿಮಾಡಿರು ವುದು. (ii) ಕಿವಿಗೆ ಬಿರುಸಾಗಿರುವಂತೆ ಸಂಧಿಮಾಡಿರುವುದು.

3. **ಅನುಚಿತವೃತ್ತ**—(i) ಛಂದಸ್ಸಿಗೆ ಅನುಸಾರಿಯಾಗಿದ್ದರೂ ಕಿವಿಗೆ ಶ್ರಾವ್ಯವಲ್ಲದೆ ಇರುವುದು. (ii) ರಸಕ್ಕೆ ಅನುಗುಣವಲ್ಲದ ವೃತ್ತವನ್ನು ಉಪಯೋಗಿ ಸಿರುವುದು.

4. **ನ್ಯೂನಪದ**—ಪ್ರಕೃತಾರ್ಥವನ್ನು ತಿಳಿಸುವುದಕ್ಕೆ ಸಾಕಾಗುವಷ್ಟು ಪದಗಳನ್ನು ಉಪಯೋಗಿಸಿಲ್ಲದಿರುವುದು.

5. **ಅಧಿಕಪದ**—ಪ್ರಕೃತಕ್ಕೆ ಬೇಡದ ಇರುವ ಹೆಚ್ಚುಪದಗಳನ್ನು ಉಪ ಯೋಗಿಸಿರುವುದು.

6. **ಪುನರುಕ್ತಿ**—ವಿಶೇಷಪ್ರಯೋಜನವೇನೂ ಇಲ್ಲದೆ ಒಂದೇ ಅರ್ಥವುಳ್ಳ ಒಂದೇ ಪದವನ್ನು ಅನೇಕ ಸಾರಿ ಉಪಯೋಗಿಸಿರುವುದು.

7. **ಪತತ್ಪ್ರಕರ್ಷ**—(ಅಲಂಕಾರವಾಗಲಿ ಬಂಧವಾಗಲಿ) ಮೊದಲು ಉತ್ಕೃಷ್ಟವಾಗಿದ್ದು, ಅನಂತರ ಬರಬರುತ್ತ ಕೀಳಾಗುವುದು.

8. **ಅಸ್ಥಾನಪದ**—ಪದಗಳನ್ನು ಸರಿಯಾದ ಸ್ಥಾನಗಳಲ್ಲಿ ಉಪಯೋಗಿಸದೆ ಇರುವುದು.

9. **ಸಂಕೀರ್ಣ**—ಎರಡು ಮೂರು ವಾಕ್ಯಗಳಿರುವ ಕಡೆಯಲ್ಲಿ ಒಂದರ ಪದಗಳು ಮತ್ತೊಂದರೊಡನೆ ಬೆರೆದುಹೋಗಿ (ಅರ್ಥಮಾಡುವುದಕ್ಕೆ ಕಷ್ಟವಾಗಿ) ಇರುವುದು.

10. **ಪ್ರಸಿದ್ಧಿವಿರೋಧ**—ಲೋಕಪ್ರಸಿದ್ಧಿಗೆ ವಿರುದ್ಧವಾದದ್ದು.

11. **ಅಕ್ರಮ**—ಕ್ರಮ ತಪ್ಪಿರುವುದು.

## 2. ಅರ್ಥದೋಷಗಳು

1. **ಅಪುಷ್ಟಿ**—ಮುಖ್ಯವಾಗಿ ಹೇಳಬೇಕೆಂದಿರುವ ವಿಷಯಕ್ಕೆ ಯಾವ ಅಂಶದಲ್ಲಿಯೂ ಪುಷ್ಟಿ ಅಥವಾ ಅತಿಶಯವನ್ನು ತರದೇ ಇರುವ ಸಂಗತಿಯನ್ನು ಹೇಳಿರುವುದು

2. **ಕಷ್ಟತೆ**—ಸುಲಭವಾಗಿ ಮನಸ್ಸಿಗೆ ಹಿಡಿಯದೆ ತಿಳಿದುಕೊಳ್ಳುವುದಕ್ಕೆ ಕ್ಲೇಶವನ್ನುಂಟುಮಾಡುವುದು.

3. **ವ್ಯಾಹತಿ**—(ಯಾವುದಾದರೂ ಒಂದು ವಸ್ತುವನ್ನು ಹೊಗಳಿ ಅಥವಾ ನಿಂದಿಸಿ, ಆಮೇಲೆ ಅದಕ್ಕೆ) ವಿರುದ್ಧವಾಗಿ ಮತ್ತೇನನ್ನಾದರೂ ಹೇಳುವುದು.

4. **ಪುನರುಕ್ತಿ**—ಹೇಳಿದ್ದನ್ನೇ ಹೇಳುವುದು.

5. **ದುಷ್ಕ್ರಮ**—ಲೋಕಶಾಸ್ತ್ರಾದಿಗಳಿಗೆ ವಿರುದ್ಧವಾದ ಕ್ರಮದಲ್ಲಿ ಹೇಳಿರುವುದು.

6. **ಗ್ರಾಮ್ಯತೆ**—ಸಭ್ಯರ ಮನಸ್ಸಿಗೆ ಸಂಕೋಚವನ್ನುಂಟುಮಾಡುವುದು.

7. **ಸಂಧಿಗ್ಧತೆ**—ಕವಿಯ ಭಾವವು ಹೀಗೋ ಹಾಗೋ ಎಂದು ಸಂದೇಹವಾಗುವಂತೆ ಇರುವುದು.

8. (i) **(ಲೋಕ) ಪ್ರಸಿದ್ಧಿವಿರೋಧ**—ಜನಗಳಲ್ಲಿ ಪ್ರಸಿದ್ಧವಲ್ಲದೆ ಇರುವುದು. (ii) **(ಕವಿ) ಪ್ರಸಿದ್ಧಿವಿರೋಧ**—ಕವಿಗಳು ಹಿಂದಿನಿಂದಲೂ ಅನುಸರಿಸಿರುವ ಸಂಪ್ರದಾಯ ಅಥವಾ 'ಸಮಯ'ಕ್ಕೆ ವಿರುದ್ಧವಾಗಿರುವುದು.

9. **ವಿದ್ಯಾವಿರೋಧ**-ಶಾಸ್ತ್ರ ಮುಂತಾದವುಗಳಿಗೆ (ದೇಶಕಾಲಾದಿಗಳಿಗೂ) ವಿರುದ್ಧವಾಗಿರುವುದು.

ಉಪ ನಗರ,



10. **ಅನವೀಕೃತತ್ವ**—ಅನೇಕ ಸಂಗತಿಗಳಿದ್ದರೂ ಅವುಗಳನ್ನು ಹೊಸ ಹೊಸ ಬಗೆಯಲ್ಲಿ ಹೇಳದೆ, ಒಂದೇ ಬಗೆಯಲ್ಲಿ ಹೇಳಿರುವುದು.

ಮತ್ತೊಬ್ಬರ ಮಾತನ್ನು ಕಾವ್ಯದಲ್ಲಿ ಅನುಕರಣಮಾಡಿ ತೋರಿಸಿದಾಗ, ಅನುಕೃತವಾದ ಪದ, ವಾಕ್ಯ, ಅರ್ಥಗಳಲ್ಲಿ ಯಾವ ವಿಧವಾದ ತಪ್ಪು ಇದ್ದರೂ ಅದು ಕಾವ್ಯದೋಷವಾಗುವುದಿಲ್ಲ. ಅಲ್ಲದೆ, ಕಾವ್ಯದಲ್ಲಿ ಯಾವುದಾದರೊಂದು ವಿಷಯವನ್ನು ಹೇಳುವ ಅಥವಾ ಕೇಳುವ ವ್ಯಕ್ತಿಗಳು, ಪ್ರತಿಪಾದ್ಯವಸ್ತು, ಧ್ವನಿ, ಸಂದರ್ಭ ಇವುಗಳಿಗೆ ಅನುಸಾರವಾಗಿ ಈ ದೋಷಗಳು ಗುಣಗಳಾಗಬಹುದು, ಅಥವಾ ದೋಷವೂ ಅಲ್ಲದೆ ಗುಣವೂ ಅಲ್ಲದೆ ಇರಬಹುದು. ಉದಾಹರಣೆ: ಪಂಡಿತನು ಪಂಡಿತನೊಡನೆ ಮಾತನಾಡುವಾಗಲೂ, ರೌದ್ರಾದಿರಸವನ್ನು ಪ್ರತಿಪಾದಿಸುವಾಗಲೂ ಅಪ್ರತೀತಿಕಷ್ಟತೆಗಳು ಗುಣ; ಯುದ್ಧಾದಿಗಳನ್ನು ವರ್ಣಿಸುವಾಗ ಅಥವಾ ಕೋಪಿಷ್ಠನ ಮಾತನ್ನು ಹೇಳುತ್ತಿರುವಾಗ ಕಠಿನವಾದ ಶಬ್ದಗಳ ಪ್ರಯೋಗವು ಗುಣ ; (ನೀರಸವಾದ ವಾಕ್ಯದಲ್ಲಿ ಈ ದೋಷಗಳಿಂದ ಯಾವ ಉತ್ಕರ್ಷಾಪಕರ್ಷಗಳೂ ಉಂಟಾಗದೆ ಇರುವುದರಿಂದ ಅಲ್ಲಿ ಇವು ದೋಷವೂ ಅಲ್ಲ, ಗುಣವೂ ಅಲ್ಲ. ) ಇದರಂತೆ ಅಧಮ ಪಾತ್ರವು ಮಾತನಾಡುವಾಗ ಗ್ರಾಮ್ಯತೆಯು ಗುಣ. ಅಧಿಕಪದತ್ವವು, ಭಯದಿಂದ ಮಾತನಾಡುವವರ ಮಾತಿನಲ್ಲಿ ಗುಣ ; ಕಥಿತಪದತ್ವವು ಲಾಟಾನುಪ್ರಾಸ ಮುಂತಾದ ಶಬ್ದಾಲಂಕಾರಗಳಲ್ಲಿ ಗುಣ—ಇತ್ಯಾದಿ.

### 3. ರಸದೋಷಗಳು

1-3. ರಸಗಳು, ಸ್ಥಾಯಿಭಾವ, ಸಂಚಾರಿಭಾವ ಇವುಗಳ ಹೆಸರನ್ನು ಹೇಳುವುದು (ಇವು ಯಾವಾಗಲೂ ಸನ್ನಿವೇಶವಿಶೇಷದಿಂದಲೂ ಅನುಭಾವಾದಿಗಳಿಂದಲೂ ವ್ಯಕ್ತವಾಗಬೇಕು).

4-5. ವಿಭಾವಾನುಭಾವಗಳು ಸುಲಭವಾಗಿ ತಿಳಿಯದೆ ಇರುವುದು.

6. ಪ್ರಕೃತರಸಕ್ಕೆ ವಿರುದ್ಧವಾದ ವಿಭಾವಾನುಭಾವಸಂಚಾರಿಭಾವಗಳನ್ನು ಹೇಳುವುದು.

ಪ್ರಕೃತರಸಕ್ಕೆ ಅನುಕೂಲವಾದ ವಿಭಾವಾದಿಗಳನ್ನೂ ಪ್ರತಿಕೂಲವಾದ ವಿಭಾವಾದಿಗಳನ್ನೂ ಹೇಳಿ, ಪ್ರತಿಕೂಲವಾದವುಗಳೂ ಅನುಕೂಲವಾದವುಗಳಿಗೇ ಪರಿಪೋಷಕವಾಗಿದ್ದರೆ, ಅದು ದೋಷವಾಗುವುದಿಲ್ಲ.

7. ಒಂದೇ ರಸವನ್ನು ಬಿಟ್ಟು ಬಿಟ್ಟು ಪುನಃಪುನಃ ಪ್ರತಿಪಾದಿಸುವುದು.

8. ಅನುಚಿತಸ್ಥಾನದಲ್ಲಿ ವಿಸ್ತರಿಸುವುದು.

9. ಯಾವುದಾದರೂ ಒಂದು ರಸವು ಧಾರಾಕಾರವಾಗಿ ಹೋಗುತ್ತಿರುವಾಗ ತಟ್ಟನೆ ಅದನ್ನು ನಿಲ್ಲಿಸಿಬಿಡುವುದು.

10. ಅಂಗವಾದ ರಸವನ್ನು ವಿಸ್ತಾರಮಾಡುವುದು.

11. ನಾಯಕ ನಾಯಿಕೆ ಮುಂತಾದ ಪ್ರಧಾನಾಂಶಗಳಿಗೆ ತಕ್ಕಷ್ಟು ಗಮನ ಕೊಡದೆ ಹೋಗಿರುವುದು (ಇದರಿಂದ ಮುಖ್ಯರಸಕ್ಕೆ ಅಡ್ಡಿಯಾಗುವುದು.)

12. ಪ್ರಕೃತಿವಿಪರ್ಯಯ—ಪಾತ್ರಗಳ 'ಪ್ರಕೃತಿ' ಅಥವಾ ಸ್ವಭಾವಕ್ಕೆ (ದಿವ್ಯ, ಅದಿವ್ಯ, ದಿವ್ಯಾದಿವ್ಯ, ಧೀರೋದಾತ್ತ ಇತ್ಯಾದಿ) ಅನುಚಿತವಾಗಿರಬಹುದಾದ ನಡತೆಯನ್ನು ವರ್ಣಿಸಿರುವುದು. ಹೀಗೆಯೇ ದೇಶ, ಕಾಲ, ಪಾತ್ರಗಳ ವಯಸ್ಸು, ಜಾತಿ, ವೇಷ, ಮಾತು, ಕಥೆ, ಇವುಗಳ 'ವಿಪರ್ಯಯ' ವನ್ನೂ ತಿಳಿದುಕೊಳ್ಳಬೇಕು.

13. ರಸೋತ್ಪತ್ತಿಗೆ ಅಂಗವಾಗದಿರುವ, ಎಂದರೆ ಪ್ರಯೋಜಕವಲ್ಲದಿರುವ, ಸಂಗತಿಯನ್ನು ಹೇಳುವುದು.

14. ಒಂದೇ ಕಡೆಯಲ್ಲಿ ಪರಸ್ಪರವಿರುದ್ಧವಾದ ಎರಡು ರಸಗಳನ್ನು ಪ್ರತಿಪಾದಿಸುವುದು. ಆದರೆ (೧) ಇವುಗಳ ಸ್ಥಾಯಿಭಾವಗಳು ಪಕ್ಷ ಪ್ರತಿಪಕ್ಷಗಳಲ್ಲಿ (ನಾಯಕ ಪ್ರತಿನಾಯಕರಲ್ಲಿ) ಕಂಡುಬಂದರಾಗಲಿ, (೨) ಅಥವಾ ಇವೆರಡು ರಸಗಳಿಗೂ ಮಧ್ಯಸ್ಥವಾಗಿ ಅವಿರುದ್ಧವಾದ ಮತ್ತೊಂದು ರಸವು ಬಂದರಾಗಲಿ ದೋಷವಾಗುವುದಿಲ್ಲ. ಹೇಗೆಂದರೆ, ವೀರಭಯಾನಕರಸಗಳು ಪರಸ್ಪರ ವಿರುದ್ಧವಾದವುಗಳು; ಆದರೆ (ವೀರರಸಕ್ಕೆ ಸ್ಥಾಯಿಭಾವವಾದ ಉತ್ಸಾಹವು ನಾಯಕನಲ್ಲಿಯೂ, (ಭಯಾನಕಕ್ಕೆ ಸ್ಥಾಯಿಭಾವವಾದ) ಭಯವು ಪ್ರತಿನಾಯಕನಲ್ಲಿಯೂ ಕಂಡುಬರುವಂತೆ ಪ್ರತಿಪಾದಿಸಲ್ಪಟ್ಟರೆ ದೋಷವಾಗುವುದಿಲ್ಲ. ಹಾಗೆಯೇ ಶೃಂಗಾರ ಶಾಂತರಸಗಳು ಪರಸ್ಪರ ವಿರುದ್ಧವಾದವುಗಳು; ಆದರೆ ಶೃಂಗಾರಕ್ಕೂ ಶಾಂತಕ್ಕೂ ಮಧ್ಯಸ್ಥವಾಗಿ ಅದ್ಭುತರಸವು ಬಂದರೆ ದೋಷವಾಗುವುದಿಲ್ಲ. ಹೀಗೆಯೇ ಎರಡು ವಿರುದ್ಧವಾದ ರಸಗಳಿರುವ ಕಡೆ, (೩) ಒಂದು ಮತ್ತೊಂದು ಸಂದರ್ಭದಲ್ಲಿ ಜ್ಞಾಪಕಕ್ಕೆ ಬರುವುದಾದರೂ, (೪) ಎರಡಕ್ಕೂ ಸಮಾನವಾದ ಪ್ರಾಧಾನ್ಯವನ್ನು ಕೊಡಬೇಕೆಂದು ಇಷ್ಟಪಟ್ಟು ಕವಿ ಪ್ರತಿಪಾದಿಸಿದ್ದರೂ, (೫) ಇವೆರಡೂ ಪ್ರಧಾನರಸಕ್ಕೆ ಅಂಗಗಳಾದರೂ, ದೋಷವಾಗುವುದಿಲ್ಲ.

# ೯. ಗುಣಗಳು

ಶ್ಲೇಷ, ಪ್ರಸಾದ, ಸಮತೆ, ಮಾಧುರ್ಯ, ಸೌಕುಮಾರ್ಯ, ಅರ್ಥವ್ಯಕ್ತಿ, ಉದಾರತ್ವ, ಓಜಸ್ಸು, ಕಾಂತಿ, ಸಮಾಧಿ—ಈ ಹತ್ತೂ ಕಾವ್ಯಗುಣಗಳೆಂದು ಪ್ರಾಯಃ ಭರತಾದಿ ಪ್ರಾಚೀನಾಲಂಕಾರಿಕರೆಲ್ಲರೂ ಹೇಳುವರು.[1] ದಂಡಿಯೂ ದಂಡಿಯನ್ನು ಅನುಸರಿಸಿ ನೃಪತುಂಗ ನಾಗವರ್ಮರೂ ಈ ಹತ್ತು ಗುಣಗಳನ್ನೇ ಹೇಳಿದ್ದಾರೆ.[2] ಆದರೆ ಇವರು ಯಾರೂ ಗುಣಗಳನ್ನು ಶಬ್ದಗುಣ ಅರ್ಥಗುಣಗಳೆಂದು ವಿಭಾಗಿಸಿಲ್ಲ. ಅವುಗಳಿಗೆ ಹೇಳಿರುವ ಲಕ್ಷಣವನ್ನು ನೋಡಿದರೆ, ಶ್ಲೇಷ, ಸಮತೆ, ಸೌಕುಮಾರ್ಯ ಮತ್ತು ಓಜಸ್ಸು ಇವು ಮುಖ್ಯವಾಗಿ ಶಬ್ದಗುಣಗಳೆಂದೂ, ಪ್ರಸಾದ, ಅರ್ಥವ್ಯಕ್ತಿ, ಉದಾರತ್ವ ಕಾಂತಿ ಮತ್ತು ಸಮಾಧಿ ಇವು ಅರ್ಥಗುಣಗಳೆಂದೂ, ಮಾಧುರ್ಯವು ಉಭಯಗುಣವೆಂದೂ ಹೇಳಬಹುದು. ಶಬ್ದಾರ್ಥನಿಷ್ಠ ಗುಣವಿಭಾಗವು ಸ್ಪಷ್ಟವಾಗಿ ಕಂಡುಬರುವುದು ವಾಮನನ ಕಾವ್ಯಾಲಂಕಾರ ಸೂತ್ರಗಳಲ್ಲಿ; ಶ್ಲೇಷ ಪ್ರಸಾದಾದಿ ಶಬ್ದಗುಣಗಳು ಹತ್ತೆಂದೂ ಅದೇ ಹೆಸರುಳ್ಳ ಅರ್ಥಗುಣಗಳು ಹತ್ತೆಂದೂ ಹೀಗೆ ಗುಣಗಳು ಒಟ್ಟು ಇಪ್ಪತ್ತೆಂದೂ ವಾಮನನ ಅಭಿಪ್ರಾಯ. ಈ 'ಪಕ್ಷಮೇ ಲೇಸು' ಎಂದು ಅಪ್ರತಿಮವೀರಚರಿತ' ದಲ್ಲಿ ಅಂಗೀಕರಿಸಲ್ಪಟ್ಟಿದೆ (ಪುಟ ೭). ಇವು ಮಾಧುರ್ಯೌಜಃಪ್ರಸಾದಗಳೆಂಬ ಮೂರೇ ಎಂಬುದು ಕಾವ್ಯಪ್ರಕಾಶಕಾರನೇ ಮೊದಲಾದ ಕೆಲವು ನವೀನರ ಮತ. ಇಲ್ಲಿ ವಾಮನನು ಹೇಳಿರುವಂತೆ ಶಬ್ದಾರ್ಥಗುಣಗಳಿಗೆ ಮೊದಲು ಲಕ್ಷಣೋದಾಹರಣೆಗಳನ್ನು ಕೊಟ್ಟು, ಅನಂತರ ಈ ಇಪ್ಪತ್ತಕ್ಕೂ ನವೀನರು ಮಾಧುರ್ಯ ಓಜಸ್ಸು ಪ್ರಸಾದ ಈ ಮೂರೇ ಗುಣಗಳಲ್ಲಿ ಹೇಗೆ ಅಂತರ್ಭಾವವನ್ನು ಹೇಳುತ್ತಾರೆ ಎಂಬ ವಿಷಯವನ್ನು ವಿಚಾರಮಾಡಬಹುದು.

---

[1] ಅಗ್ನಿಪುರಾಣದಲ್ಲಿ (ಅಧ್ಯಾಯ ೩೪೬) ಶ್ಲೇಷ, ಲಾಲಿತ್ಯ, ಗಾಂಭೀರ್ಯ, ಸೌಕುಮಾರ್ಯ, ಉದಾರತಾ, ರೂಢಿ, ಯೌಗಿಕೀ—ಇವು ಏಳೂ 'ಶಬ್ದಗುಣ' ಗಳೆಂದೂ; ಮಾಧುರ್ಯ, ಸಂವಿಧಾನ, ಕೋಮಲತ್ವ, ಉದಾರತಾ, ಪ್ರೌಢಿ, ಸಾಮಾಯಿಕತಾ ಇವು ಆರೂ 'ಅರ್ಥಗುಣ' ಗಳೆಂದೂ; ಪ್ರಸಾದ, ಸೌಭಾಗ್ಯ, ಯಥಾಸಂಖ್ಯ, ಪ್ರಶಸ್ಯತಾ, ಪಾಕ, ರಾಗ, ಇವು ಆರೂ 'ಉಭಯಗುಣ' ಗಳೆಂದೂ ಹೇಳಿದೆ.

ಸರಸ್ವತೀಕಂಠಾಭರಣದಲ್ಲಿ I, ೬೩) ೨೪ ಶಬ್ದಗುಣಗಳೂ, ಅದೇ ಹೆಸರುಳ್ಳ ೨೪ ಅರ್ಥ ಗುಣಗಳೂ ಹೇಳಲ್ಪಟ್ಟಿವೆ (I, ೭೮ . . . .).

[2] ನೃಪತುಂಗನು ದಂಡಿಯ 'ಅರ್ಥವ್ಯಕ್ತಿ'ಗೆ ಬದಲಾಗಿ 'ಅಗ್ರಾಮ್ಯತೆ'ಯನ್ನು ಸೇರಿಸಿದ್ದಾನೆ. ದಂಡಿಯು ಅಗ್ರಾಮ್ಯತೆಗೆ ಕೊಟ್ಟಿರುವ ಪ್ರಾಶಸ್ತ್ಯವೇ (I–೬೨) ಇದಕ್ಕೆ ಕಾರಣವಿರಬಹುದು; ಮತ್ತು ಪ್ರಸಾದದಲ್ಲಿಯೇ ಅರ್ಥವ್ಯಕ್ತಿಗೆ ಅಂತರ್ಭಾವವನ್ನು ಹೇಳಬಹುದೆಂದೂ ನೃಪತುಂಗನ ಅಭಿಪ್ರಾಯವಿರಬಹುದು (ಸಾಹಿತ್ಯದರ್ಪಣ VIII, ೧೧.೧೨.).

## ಶಬ್ದಗುಣಗಳು

1. **ಶ್ಲೇಷ**—ಪದಗಳು ಅನೇಕವಿದ್ದರೂ ಅವೆಲ್ಲವೂ ಹೊಂದಿಕೊಂಡು ಒಂದೇ ಪದದಂತೆ ತೋರುತ್ತಿರುವುದು.

ಉದಾಹರಣೆ

ಪೊಣರ್ದೊಡವನುವರಪಿವನೊಳ್
ತೊಣೆವೆತ್ತಪುದೆನಗೆ ನರನೊಳೆಂದಱಿಕೆಯ ಕೂ |
ರ್ಗಣೆಗಳೊಳೆ ಪೊಬ್ಬಿ ತನ್ನಳ
ವಣಿಯರಮೆನೆ ನಾಲ್ಕು ಶರದೆ ಪಾರ್ಥನನೆಚ್ಚಂ ||

—ಪಂಪಭಾರತ XII, ೧೬೪

2. **ಪ್ರಸಾದ**–ಓಜಸ್ಸು (ಬಿಗಿಯಾದ ರಚನೆ) ಮತ್ತು ಶೈಥಿಲ್ಯ (ಬಿಗಿಯಿಲ್ಲದ ರಚನೆ) ಇವುಗಳ ಬೆರಕೆ.

ಉದಾಹರಣೆ

ಅಕಲಂಕಾಗಮವೇದಿ ನೀತಿನಿಪುಣಂ ಕಾಲಕ್ರಿಯಾಲೋಕಲಾ
ಕಿಕವಿಜ್ಞಾನವಿಚಕ್ಷಣಂ ಸಕಲಶಾಸ್ತ್ರಾರ್ಥಪ್ರವೀಣಂ ಗುಣಾ
ಧಿಕನಾರಾಜತನೂಭವಂಗೆ ಗುಣಗಂಧಾಖ್ಯಪ್ರಧಾನಾತ್ಮಜಂ
ಮಕರಂದಂ ಪ್ರಿಯಮಿತ್ರನಾದನುಪಧಾಶುದ್ಧಂ ವಿಶುದ್ಧಾತ್ಮಕಂ ||

—ಲೀಲಾವತಿ I,೧೦೯

3. **ಸಮತೆ**—ಮೊದಲಿನಿಂದ ಕೊನೆಯವರೆಗೆ ಒಂದೇ 'ರೀತಿ' ಯನ್ನು ಅನುಸರಿಸುವುದು.

ಉದಾಹರಣೆ

ಒಡಲೆರಡೊಂದೆ ಜೀವಮಿವರ್ಗೆಂಬುದನೆಂಬುದು ಲೋಕಮಾಗಳಾ
ನುಡಿ ಪುಸಿಯಾಯ್ತು ನಿನ್ನಸು ಕಿರೀಟಿಯ ಶಾತಶರಂಗಳಿಂದೆ ಪೋ
ಪೊಡಮೆನಗಿನ್ನು ಮಾಯೊಡಲೊಳಿರ್ದುದು ನಾಣಿಲಿಜೀವಮೆಂದೊಡಾ
ವೆಡೆಯೊಳೆ ನಿನ್ನೊಳೆನ್ನ ಕಡುಗೂರ್ಮೆಯುಮಟ್ಟುಜುಮಂಗವಲ್ಲಭಾ ||

—ಪಂಪಭಾರತ XIII, ೪

4. **ಮಾಧುರ್ಯ**—ಪದಗಳು ಬಿಡಿಬಿಡಿಯಾಗಿರುವುದು.

ಉದಾಹರಣೆ

ಮಿಱುಗುವ ಮಿಂಚಿನ ಗೊಂಚಲ
ಮಱಗಳಿವೆನಿಪವಳ ಧವಳದಶನಾವಳಿಯೆ |

ಚ್ಚಿಱಿಸಿದುದು ವದನಸದನದೊ
ಳುಱುವ ಸರಸ್ವತಿಯ ಕೊರಲ ಹೀರಾವಳಿಯಂ ||

—ಧರ್ಮನಾಥಪುರಾಣ

5. **ಸೌಕುಮಾರ್ಯ**—ಮೃದುವಾದ ವರ್ಣಗಳಿಂದ ಕೂಡಿರುವಿಕೆ.

ಉದಾಹರಣೆ

ಜಗಮಂ ಮಾಡಿದ ಪದ್ಮಜಂ ಪಡೆದನಿಲ್ಲೀಕನ್ನೆಯಂ ಮಾಡುವ
ಲ್ಲಿಗೆ ಚಂದ್ರಂ ಮಲಯಾನಿಳಂ ಮಳಯಜಂ ನೀರೇಜವಿಮ್ಮಾವು ಮ
ಲ್ಲಿಗೆಯೆಂದಿಂತಿವನಱ್ಕಱಿಂದಮರ್ದಿನೊಳ್ ತಾನಟ್ಟಿಯಿಂ ತೊಯ್ದು ಮೆ
ಲ್ಲಗೆ ಸಂದಂಗಜನೆಂಬಜಂ ಪಡೆದನಂತಾಕಾಂತಿಯಿಂ ಕಾಂತೆಯಂ ||

—ಪಂಪಭಾರತ iv, ೭೫

6. **ಅರ್ಥವ್ಯಕ್ತಿ**—ಸುಲಭವಾದ, ಎಂದರೆ ಕೇಳುತ್ತಿದ್ದಹಾಗೆಯೇ ಅರ್ಥವಾಗುವಂಥ ಪದಗಳಿರುವುದು.

ಉದಾಹರಣೆ

ಎನಿತುಂ ಕಾಯ್ದುಂ ಬೆನ್ನೀರ್
ಮನೆ ಸುಡದೆಂಬಂತೆ ನಿನಗವರ್ ಸಲೆ ಕಾಯ್ದುಂ |
ಮನದೊಳ್ ಪೊಲ್ಲಮನೆಂದುಂ
ನೆನೆಯರದಂ ನಂಬು ಕುರುಕುಲಾನ್ವಯ ಭಾನೂ ||

7. **ಉದಾರತ್ವ**—ಪದಗಳು ನರ್ತನಮಾಡುತ್ತಿರುವಂತೆ ತೋರುತ್ತಿರುವುದು.

ಉದಾಹರಣೆ

ಬೆಳಗುವ ಸೊಡರ್ಗಳ ಬೆಳಗ
ಗ್ಗಳಿಸುವವೊಲ್ ಪೋಪ ಪೊಟ್ಟುಱೊಳ್ ತೇಜಂ ಪ |
ಜ್ಜಳಿಸೆ ತಟತಟಿಸಿ ತೊಳತೊಳ
ತೊಳಗಿದನಸ್ತಮಯಸಮಯದೊಳ್ ದಿನಪಸುತಂ ||

—ಪಂಪಭಾರತ xii, ೨೧೦

8. **ಓಜಸ್ಸು**—(ಹ್ರಸ್ವಾಕ್ಷರಗಳೂ ಅವುಗಳ ಮುಂದೆ ಸಂಯುಕ್ತಾಕ್ಷರಗಳೂ ವಿಶೇಷವಾಗಿ ಬರುವುದರಿಂದ ಪದಗಳ ಜೋಡಣೆಯಲ್ಲಿ ಕಂಡುಬರುವ ಬಿಗಿಕಟ್ಟು.

ಉದಾಹರಣೆ

ಎನಿತಾಬ್ರಹ್ಮಾಂಡದಿಂದಿತ್ತುದಧಿಕುಲನಗದ್ವೀಪಸಂಘಾತಮಂತಂ
ತನಿತುಂ ಬತ್ತಿತ್ತು ತೂಳ್ದತ್ತುಡುಗಿದುದೆನೆ ದಿಕ್ಪಾಲರಾಪೇವದತ್ತ
ಧ್ವನಿಸಿಸಂಮಿಶ್ರಂ ಸಮುದ್ಯದ್ರುಟಪಟನಿತಟಸ್ಸ್ಪಷ್ಟಸಂಶ್ಲಿಷ್ಟಮೌರ್ವೀ
ನಿನದಂ ಪರ್ವಿತ್ತುಕಾಂಡಪ್ರಳಯಘ ಘಟಾಟೋಪಗಂಭೀರನಾದಂ ||

—ಪಂಪಭಾರತ xii, ೧೨೭

9. **ಕಾಂತಿ**—ಎಲ್ಲರೂ ಮಾತನಾಡುವಾಗಲೂ ಮತ್ತು ಪುರಾಣಶೈಲಿಯಲ್ಲಿಯೂ ಉಪಯೋಗಿಸುವ ಸಪ್ಪೆಯಾದ ಮಾತುಗಳನ್ನು ಉಪಯೋಗಿಸದೆ ಮನೋಹರವಾದ ಶಬ್ದಗಳನ್ನು ಉಪಯೋಗಿಸಿರುವುದು.

ಉದಾಹರಣೆ

ಇದಱೊಳ್ ಶ್ವೇತಾತಪತ್ರಸ್ಥಗಿತದಶದಿಶಾಮಂಡಲಂ ರಾಜಚಕ್ರಂ
ಪುದಿದಱ್ಯಾಡಿತ್ತಡಂಗಿತ್ತಿದಱೊಳೆ ಕುರುರಾಜಾನ್ವಯಂ ಮತ್ತಮಾಪ
ಕ್ಕಿದಱಿಂದಂ ನೋಡಗುರ್ವುರ್ವಿದುದಿದುವೆ ಮಹಾಭಾರತಕ್ಕಾದಿಯಾಯ್ತು
ಬ್ಬದಳಾಕ್ಷೀ ಪೇೞ ಸಾಮಾನ್ಯಮೆ ಬಗೆಯೆ ಭವತ್ಕೇಶಪಾಶಪ್ರಪಂಚಂ ||

—ಪಂಪಭಾರತ xii, ೧೫೬

10. **ಸಮಾಧಿ**—ಓಜಸ್ಸು ಮತ್ತು ಶೈಥಿಲ್ಯ ಇವು ಒಂದಾದ ಮೇಲೆ ಒಂದು ಬರುವುದರಿಂದ ಶೈಲಿ ಹತ್ತುವಂತೆಯೂ, ಇಳಿಯುವಂತೆಯೂ ತೋರುವುದು.

ಉದಾಹರಣೆ

ಘನಬಾಹಾವಿಕ್ರಮಂ ಮುನ್ನವೆ ತನಗೆ ನಿಜಂ ಮತ್ತೆ ಚೇದೀಶದುರ್ಯೋ
ಧನಮಾದ್ರಾಂಗಾಧಿರಾಜಪ್ರಭೃತಿನೃಪವರರ್ ಕೂಡಿದರ್ ತನ್ನೊಳೀವೀ
ರನೊಳಿನ್ನಾರಾಂಪರಿನ್ನಾರ್ ಚಲದ ಮಲೆವರಿನ್ನಾರ್ ಭರಂಗೆಯ್ವರಿನ್ನಾರ್
ಮೊನೆಯೊಳ್ ಮಾರ್ಕೊಳ್ವರೆಂಬೊಂದೆಸಕಮೆಸೆಯೆ ಬಂದಂ
ಜರಾಸಂಧಭೂಪಂ ||

**ಅರ್ಥಗುಣಗಳು**

1. **ಶ್ಲೇಷ**—(ಚತುರನಾದವನ) ಕಾರ್ಯ ಕೌಟಿಲ್ಯಾದಿ ಚಮತ್ಕಾರವಾದ ಘಟನೆಗಳು.

ಉದಾಹರಣೆ

ಶಾಕುಂತಲದಲ್ಲಿ ದುಷ್ಯಂತನು ಶಕುಂತಲಾದಿಗಳಿಗೆ ತೊಂದರೆಯನ್ನು ತಪ್ಪಿಸು

ಕರ್ನಾಟಕ ಯುವ ನಗರ,

ವಂತೆ ಅವರಿದ್ದ ಕಡೆಗೆ ಪ್ರವೇಶಿಸುವುದು; ಮಾತಲಿ ವಿದೂಷಕನ ಕತ್ತನ್ನು ತಿರಿಚಿ ದುಷ್ಯಂತನನ್ನು ರೇಗಿಸುವುದು.

**1. ಪ್ರಸಾದ**—ಪ್ರಕೃತಕ್ಕೆ ಆವಶ್ಯಕವಾದಷ್ಟನ್ನೇ ಹೇಳುವುದು.

ಉದಾಹರಣೆ

ಆಜಿದೆಂ ಸೋದರರೆಂದು ಪಾಂಡವರನಿನ್ನೆಂತೆನ್ನರಂ ಕೊಲ್ವೆನ
ಟ್ಕಜಿಯೊಳೆನ್ನಂ ಪೊರೆದೆಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ|

—ಪಂಪಭಾರತ ix, ೭೧

**3. ಸಮತೆ**(i)—ಆಯಾ ವಿಷಯಗಳನ್ನು ಅದರದರ ಕ್ರಮದಲ್ಲಿ ವರ್ಣಿಸುವುದು.

ಉದಾಹರಣೆ

ನೆಲೆಸಿರ್ದಪ್ಪುದಧಸ್ಥಳಂಬಿಡಿದಧೋಲೋಕಂ ಸಮಂತೆಯ್ದೆ ಸು
ತ್ತಲುವಿರ್ದಪ್ಪುದು ಮಧ್ಯಲೋಕಮೆಸೆದಿರ್ದಾಚೂಲಿಕಾಭಾಗದಾ
ದಲೆಯೊಳ್ ನಿಂದಪುದೂರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಗುಂ
ದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ||

(ii) ಸುಖವಾಗಿ ಅರ್ಥವಾಗುವುದೂ ಒಂದು ವಿಧವಾದ 'ಸಮತೆ'ಯೇ.

**4. ಮಾಧುರ್ಯ**—ಚಮತ್ಕಾರವಾಗಿ ಹೇಳುವುದು (ಉಕ್ತಿವೈಚಿತ್ರ್ಯ).

ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕಿನಂ
ತುಹಿನಾದ್ರೀಂದ್ರಮನೊತ್ತುಗೊಂಡು ನಡೆವಂ ದೇವರ್ಕಳಾಗ್ನೇಯಮಂ
ದೆ ಹವಿರ್ಭಾಗಮನೊಲ್ಲದಿಂದುಕಳೆಯಂ ಕೊಳ್ವರ್ ಮೃಡಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನೊಲ್ದಾಲಿಂಗನಂಮಾಡುವಂ||

**5. ಸೌಕುಮಾರ್ಯ**—ಅಹಿತವಾದ ವಿಷಯವನ್ನು ನಯವಾಗಿ ತಿಳಿಸುವುದು

ಉದಾಹರಣೆ

1. ಬರ್ದಿಲ ನಾಡೊಳ್ ಬಾಟ್ಟಿಂ.
2. ಪರವಾಸುದೇವನಡಿಯಂ
   ಪರಿಚರಿಸಲ್ಕೆಂದು ಪರಮಪದಮಂ ಸಾರ್ದಂ||

—ಚಿಕ್ಕದೇವರಾಯವಂಶಾವಳಿ

6. **ಅರ್ಥವ್ಯಕ್ತಿ**—ಆಯಾವಸ್ತುವನ್ನು ಅತಿಶಯೋಕ್ತ್ಯಾದಿಗಳಿಲ್ಲದಂತೆ ಸ್ವಭಾವಸಿದ್ಧವಾಗಿ ಹಾಗೆಯೇ ವರ್ಣಿಸುವುದು.

ಉದಾಹರಣೆ

ಪರಪುತ್ತ್ರಂ ಪುಲ್ಲೆಗುಂಪಂ ಪದಕೆ ತೊಡರ್ದ ಪೆರ್ಬುಳ್ಳಿಗಳ್ ಪಾಶದಂತೊ
ಪ್ಪಿರೆ ನೋಡಲ್ ಪೊಯ್ಲುಬಲ್ಪಿಂಮುರಿದ ಮರದ ಪೆರ್ಗೊಂಬಿನೊಳ್
ಕೊಂಬದೊಂದಂ
ಟಿರೆ ಧರ್ಮಾರಣ್ಯಮಾರ್ಗಂಬಿಡಿದುರದೆ ತಪೋವಿಘ್ನವೇ ಮೂರ್ತಿವೆತ್ತಂ
ತಿರೆ ಸೊರ್ಕಾಂತಾನೆಯೈತಂದಪುದು ನೃಪರಥಾಲೋಕದಿಂದಂಜುತೀಗಳ್ ||
—ಶಾಕುಂತಲ, I, ೩೩

7. **ಉದಾರತ್ವ** — ಅಶ್ಲೀಲ ಅಥವಾ ಗ್ರಾಮ್ಯವಾದ ವಿಷಯಗಳನ್ನು ಗಂಭೀರವಾಗಿ ಹೇಳುವುದು.

ಉದಾಹರಣೆ

ಬೆಳಗುವ ಸಾಂದ್ರಚಂದ್ರಕಿರಣಾಳಿಗಳೋಳಿಗಳಿಂದಮೆತ್ತಮು
ಜ್ಜ್ವಳಿಸುವಿರುಳ್ಗಳಂ ಕಳಿದುಮೆಯ್ದೆ ತಳರ್ತಳಮಾವುಮಂ ಮನಂ
ಗೊಳೆ ನಡೆ ನೋಡಿಯುಂ ಕಿವಿಯನಿಂದೊಳದಿಂಚರಕಾಂತುಮಿಂತು ಕೋ
ಮಳೆಯುಸು ಮತ್ತಮೀಯೊಡಲೊಳಿರ್ದುದಿದೆಮ್ಮಯ ಸೈಪು ಭೂಪತೀ ||
ಪಂಪಭಾರತ V, ೧೯

8. **ಓಜಸ್ಸು** (ಪ್ರೌಢಿ)—ಇದು ಐದು ವಿಧ.

(i) ಒಂದೆರಡು ಪದಗಳಲ್ಲಿ ಹೇಳಬಹುದಾದ್ದನ್ನು ಅನೇಕಪದಗಳಲ್ಲಿ ಹೇಳುವುದು.

ಉದಾಹರಣೆ

"ಕೃಷ್ಣನಿಂತೆಂದಂ" ಎಂಬುದಕ್ಕೆ ಬದಲಾಗಿ "ಮಧುವನಿತಾವದನಕಮಳ ಹಿಮಕರನಿಂತೆಂದಂ" ಅಥವಾ "ಭೀಮನಿಂತೆಂದಂ" ಎಂಬುದಕ್ಕೆ ಬದಲಾಗಿ "ಜರಾಸಂಧ ಸಂಧಿ ಬಂಧನವಿಘಟನನಿಂತೆಂದಂ" ಎಂದು ಹೇಳುವುದು.
ಪಂಪಭಾರತ XIII ೭೪ ಗದ್ಯ

"ಆರ್ಯನಾದ ನಿನ್ನಿಂದ ಯಾವ ರಾಜವಂಶವು ಅಲಂಕೃತವಾಗಿರುವುದು ?"
—ಶಾಕುಂತಲ

(ii) ಅನೇಕ ಪದಗಳಲ್ಲಿ ಹೇಳಬಹುದಾದ್ದನ್ನು ಒಂದೆರಡು ಮಾತಿನಲ್ಲಿ ಹೇಳುವುದು.

ಉದಾಹರಣೆ

ದುಷ್ಯಂತ: "ಇದೇನು! ಇವರು ಉಪನ್ಯಾಸಿಸಿದ್ದು ?"

—ಶಾಕುಂತಲ

(= ಇದೇನು ಇವರು ಇಷ್ಟು ವಿಸ್ತಾರವಾಗಿಯೂ, ಸಾಲಂಕಾರವಾಗಿಯೂ ಹೇಳಿದ್ದು ? ನನಗೂ ಇದಕ್ಕೂ ಏನು ಸಂಬಂಧ ? ಇದು ನನಗೆ ಅರ್ಥವಾಗುತ್ತಿಲ್ಲ.)

(iii) ಒಂದು ವಾಕ್ಯದಲ್ಲಿ ಹೇಳಬಹುದಾದ್ದನ್ನು ಅನೇಕ ವಾಕ್ಯಗಳಲ್ಲಿ ಹೇಳುವುದು.

ಉದಾಹರಣೆ

ನೆನೆಯದಿರಣ್ಣ ಭಾರತದೊಳಂ ಪೆಱರಾರುಮನೊಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳಾರ್ ದೊರೆ ಕರ್ಣನೇಱು ಕ
ರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗವೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ ||

—ಪಂಪಭಾರತ xii, ೨೧೭

(iv) ಅನೇಕವಾಕ್ಯಗಳಲ್ಲಿ ಹೇಳಬಹುದಾದ್ದನ್ನು ಒಂದೇ ವಾಕ್ಯದಲ್ಲಿ ಹೇಳುವುದು.

ಉದಾಹರಣೆ

ಶರಶಯ್ಯಾಗ್ರದೊಳಿಂತು ನೀಮಿರೆ ಘಟಪ್ರೋದ್ಭೂತನಂತಾಗೆ ವಾ
ಸರನಾಥಾತ್ಮಜನಂತು ಸಾಯೆ ರಣದೊಳ್ ದುಶ್ಶಾಸನಂ ತದ್ವೃಕೋ
ದರನಿಂದಂತಟಿದಟ್ಟೆ ಸೈರಿಸಿಯುಮಾಂ ಸಂಧಾನಮಂ ವೈರಿಭೂ
ಪರೊಳಿಂ ಸಂಧಿಸಿ ಪೇಱಿಮಾರ್ಗೆ ಮೆಱೆವೆಂ ಸಂಪತ್ತುಮಂ ಶ್ರೀಯುಮಂ ||

—ಪಂಪಭಾರತ xiii, ೬೮

(v) ಒಂದು ಗೂಢವಾದ ಅಭಿಪ್ರಾಯವನ್ನು ಇಟ್ಟು ಹೇಳುವುದು.

ಉದಾಹರಣೆ

ಪೊಸತಪ್ಪ ಮಧುವ ಬಯಸುತೆ
ರಸಾಲಮಂಜರಿಯನಂತು ಚುಂಬಿಸಿ ನೀಂ ಸಾ |
ರಸವಾಸಮಾತ್ರದಿಂ ಸಂ
ತಸವಾಂತದನೆಂತು ಮರೆದೆಯೆಲೆ ಮಧುಕರನೇ ||

—ಶಾಕುಂತಲ v, ೧೦೨

**9. ಕಾಂತಿ**—ಸ್ಫುಟವಾದ ರಸದಿಂದ ಕೂಡಿರುವುದು.

ಉದಾಹರಣೆ

ನೆಱೆದು ಚತುರ್ಬಲಂಬೆರಸು ಬಂದುಱಿದೊಡ್ಡಿದ ಗಂಡರಾರುಮೆ
ನ್ನಱಿಯದ ಗಂಡರೇ ನೆಗೆದ ಚಿತ್ತ್ರರ ಸುಟ್ಟುರೆ ಕಂಡದಿಂಡೆಗಳ್
ಪಱಿದು ನಭಂಬರಂ ಪರೆದು ಪರ್ವಿ ಲಯಾಗ್ನಿ ಶಿಖಾಕಳಾಪಮುಂ
ಮಱೆಯಿಸೆ ತಾಗಿ ತಳ್ತಿಱಿಯದನ್ನೆಗಮೆಂತು ನರಂಗೆ ಪುಟ್ಟಿದೆಂ ||

—ಪಂಪಭಾರತ xi, ೮೯

**10. ಸಮಾಧಿ**—ಯಾವುದಾದರೂ ಒಂದು ವಿಷಯವು ತಾನೇ ಹೊಸದಾಗಿ ಹೇಳಿದ್ದೇ ಅಥವಾ ಹಿಂದೆ ಯಾರಾದರೂ ಹೇಳಿದ್ದೇ, ಅದು ವ್ಯಕ್ತವಾಗಿ(ಸ್ಫುಟವಾಗಿ)ರಬೇಕೇ, ಗೂಢವಾಗಿರಬೇಕೇ ಎಂದು ವಿಚಾರಮಾಡಿ ನವೀನವಾಗಿ ಪ್ರತಿಪಾದಿಸುವುದು.

ಉದಾಹರಣೆ

ವಾರುಣಿ ಕಳ್ಳನೀಂಟಿ ಮಱೆದಿಕ್ಕಿದ ಬಟ್ಟಲೋ ಭೀತಿಯಿಂ ನಿಶಾ
ಸ್ವೈರಿಣಿ ಪೋಗೆ ಬಿರ್ದ ಕಿವಿಯೋಲೆಯ ಮೌಕ್ತಿಕಪತ್ರವೋ ನಭೋ
ವಾರಣವೊಲ್ಲದೊಕ್ಕ ದಧಿಪಾಂಡುರಪಿಂಡಮೊ ಪೇೞೆನಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ "

—ಲೀಲಾವತಿ iii, ೨

ಇಲ್ಲಿ ಉತ್ಪ್ರೇಕ್ಷಿಸಿರುವ ಬಗೆ ಹೊಸದು.

ಗುಣಗಳು ಮಾಧುರ್ಯ, ಓಜಸ್ಸು, ಪ್ರಸಾದ ಎಂದು ಮೂರು ಮಾತ್ರ; ಮಿಕ್ಕವುಗಳಲ್ಲಿ, ಕೆಲವು ಈ ಮೂರರಲ್ಲೇ ಅಂತರ್ಭಾವವನ್ನು ಹೊಂದುತ್ತವೆ, ಕೆಲವು ದೋಷಾಭಾವರೂಪವಾಗುತ್ತವೆ; ಮತ್ತೆ ಕೆಲವು ಗುಣಗಳೇ ಅಲ್ಲ, ಎಂದರೆ ದೋಷಗಳು, ವೈಚಿತ್ರ್ಯಗಳು ಅಥವಾ ಅಲಂಕಾರಾದಿಗಳು—ಎಂಬುದು ಮಮ್ಮಟ ಭಟ್ಟ ಮುಂತಾದ ನವೀನರ ಮತ. ಅದನ್ನು ಅವರು ಹೀಗೆ ಪ್ರತಿಪಾದಿಸಿದ್ದಾರೆ: ಶಬ್ದಗುಣಗಳಲ್ಲಿ, ಶ್ಲೇಷ, ಸಮಾಧಿ, ಉದಾರತ್ವ, (ಓಜಸ್ಸು ಶೈಥಿಲ್ಯಗಳ ಬೆರಕೆಯಾದ) ಪ್ರಸಾದ ಇವೆಲ್ಲವೂ ಓಜಸ್ಸಿನಲ್ಲಿಯೇ ಸೇರಿಹೋಗುತ್ತವೆ. ಮಾಧುರ್ಯವನ್ನು ಬೇರೆ ಹೇಳಿಯೇ ಇದೆ. ಅರ್ಥವ್ಯಕ್ತಿ ಪ್ರಸಾದದಲ್ಲಿ ಸೇರಿಹೋಗುತ್ತದೆ; ಮಾರ್ಗಾಭೇದರೂಪವಾದ ಸಮತೆ ಕೆಲವೆಡೆಗಳಲ್ಲಿ ದೋಷವೇಯೆ; ಸೌಕುಮಾರ್ಯ ಕಾಂತಿಗಳು 'ಶ್ರುತಿಕಷ್ಟತ್ವ' ಮತ್ತು 'ಗ್ರಾಮ್ಯತೆ'ಯೆಂಬ ದೋಷಗಳನ್ನು ಬಿಡುವುದರಿಂದ ಉಂಟಾಗುತ್ತವೆ—ಅವೇ ಬೇರೆ ಇರುವುದಿಲ್ಲ.

ಅರ್ಥಗುಣಗಳಲ್ಲಿ, ಓಜಸ್ಸು (ಅಥವಾ ಪ್ರೌಢಿಯು) ಮೊದಲು ನಾಲ್ಕು ಭೇದಗಳು ಕೇವಲ ವೈಚಿತ್ರ್ಯ ಮಾತ್ರ ; (ಗುಣವಲ್ಲ ; ಇವು ಇಲ್ಲದಿದ್ದರೂ ಕಾವ್ಯವಾಗಬಹುದು) ; ಅಪುಷ್ಟಾರ್ಥತ್ವ, ಅಧಿಕಪದತ್ವ, ಅನವೀಕೃತತ್ವ, ಅಶ್ಲೀಲತೆ, ಗ್ರಾಮ್ಯತೆ ಈ ದೋಷಗಳನ್ನು ಬಿಟ್ಟರೆ ಸಾಭಿಪ್ರಾಯರೂಪವಾದ ಐದನೆಯ ತರದ ಓಜಸ್ಸು, ಪ್ರಸಾದ, ಮಾಧುರ್ಯ, ಸೌಕುಮಾರ್ಯ, ಉದಾರತೆ ಇವು ಬರುತ್ತವೆ. ಸ್ವಭಾವೋಕ್ತ್ಯಲಂಕಾರ, ರಸಧ್ವನಿ, ಗುಣೀಭೂತವ್ಯಂಗ್ಯ ಇವುಗಳಿಂದ ಅರ್ಥವ್ಯಕ್ತಿ ಮತ್ತು ಕಾಂತಿಗಳನ್ನು ಹೇಳಿದಂತಾಯಿತು ; ಶ್ಲೇಷವು ವೈಚಿತ್ರ್ಯ ಮಾತ್ರ ; (ಅವೈಷಮ್ಯರೂಪವಾದ) ಸಮತೆಯು ದೋಷಾಭಾವರೂಪ ; ಅರ್ಥದರ್ಶನವು ಕವಿಯಲ್ಲಿರತಕ್ಕದ್ದು ; ಮತ್ತು ಅದಿಲ್ಲದೆ ಕಾವ್ಯವೇ ಹುಟ್ಟುವುದಿಲ್ಲವಾದ್ದರಿಂದ 'ಅರ್ಥದರ್ಶನ'ರೂಪವಾದ ಸಮಾಧಿಯೂ ಗುಣವಲ್ಲ.

ಗುಣಗಳು ಶಬ್ದಾರ್ಥನಿಷ್ಠವೆಂದೂ ಇವುಗಳಿಂದಲೇ ಕಾವ್ಯಸೌಂದರ್ಯ ವುಂಟಾಗುವುದೆಂದೂ ವಾಮನಾದಿಗಳ ಮತ.[3] ಶೌರ್ಯಾದಿ 'ಗುಣ'ಗಳು ಮನುಷ್ಯನಲ್ಲಿ ಹೇಗೆ ಆತ್ಮನಿಷ್ಠವೋ ಹಾಗೆ ಮಾಧುರ್ಯಾದಿ 'ಗುಣ'ಗಳೂ ಕಾವ್ಯದಲ್ಲಿ ರಸನಿಷ್ಠ ; (ರಸಧರ್ಮ=ರಸಗಳಲ್ಲಿ ಇರತಕ್ಕವು). ಈ ಶೌರ್ಯಾದಿಗಳು ಒಳಗೆ ಇದ್ದರೂ ಶೂರನಾದವನ ನಡೆ ನುಡಿ ಆಕಾರ ಶರೀರಾದಿಗಳಲ್ಲಿ ಆ ಗುಣಗಳನ್ನು ನಾವು ಹೇಗೆ ಆರೋಪಮಾಡುತ್ತೇವೆಯೋ ಹಾಗೆ, ಮಾಧುರ್ಯಾದಿಗಳು ರಸದಲ್ಲಿದ್ದರೂ ಅವಕ್ಕೆ ವ್ಯಂಜಕವಾದ ಸುಕುಮಾರ ಪರುಷಾಕ್ಷರಾದಿ ವರ್ಣವಿನ್ಯಾಸ ಮತ್ತು ಅಲ್ಪ ದೀರ್ಘ ಸಮಾಸಗಳು ಇವುಗಳಲ್ಲಿ ನಾವು ಮಾಧುರ್ಯಾದಿಗುಣಗಳನ್ನು ಆರೋಪಿಸುತ್ತೇವೆ. ಆದ್ದರಿಂದ ಶೃಂಗಾರರಸವಿಲ್ಲದಿದ್ದರೂ ಒಂದು ಪದ್ಯದಲ್ಲಿ ಇಂಪಾದ ವರ್ಣಗಳು ಇದ್ದ ಮಾತ್ರಕ್ಕೇ ಅದನ್ನು ಮಧುರವೆಂದು ಕರೆಯುವುದು ರೂಢಿಯಾಗಿದೆ. ಹೀಗೆಯೇ ವೀರರಸವಿಲ್ಲದಿದ್ದರೂ ಅದಕ್ಕೆ ಅನುಗುಣವಾದ ಪರುಷವರ್ಣಗಳಿರುವ ಪದ್ಯವನ್ನು ಓಜೋಗುಣಪೂರ್ಣವಾದದ್ದೆಂದು ಹೇಳುವುದು ರೂಢಿಯಾಗಿದೆ. ವಸ್ತುತಃ ಹೀಗೆ ಹೇಳುವುದು ತಪ್ಪು ; ಮಾಧುರ್ಯಾದಿ ಗುಣಗಳು ಇರುವುದು ರಸದಲ್ಲಿ ಮಾತ್ರ—ಎಂಬುದು ಮಮ್ಮಟಭಟ್ಟಾದಿ ನವೀನರ ಮತ. ಇವರು, 'ಗುಣ', ಮಾಧುರ್ಯ, ಓಜಸ್ಸು, ಪ್ರಸಾದ ಎಂಬ ಹೆಸರುಗಳನ್ನೇ ಇಟ್ಟುಕೊಂಡಿದ್ದರೂ ಇವರು ಹೇಳುವ ಈ ಗುಣಗಳ ಸ್ವರೂಪವೇ ಬೇರೆಯಾಗುತ್ತದೆ—ಮಾಧುರ್ಯವೆಂದರೆ ಶೃಂಗಾರಾದಿ ರಸಾನುಭವ ಮಾಡಿದಾಗ ಮನಸ್ಸನ್ನು ಕರಗಿಸಿ ದ್ರವೀಭೂತವಾಗಿ ಮಾಡತಕ್ಕದ್ದು ; ಓಜಸ್ಸೆಂದರೆ ವೀರಾದಿ ರಸಾನುಭವ ಮಾಡಿದಾಗ ಮನಸ್ಸನ್ನು ಉಜ್ವಲಗೊಳಿಸಿ

---

[3] "ಕಾವ್ಯಶೋಭಾಯಾಃ ಕರ್ತಾರೋ ಧರ್ಮಾ ಗುಣಾಃ" ; "ಪ್ರಾಣಾ ದಶಗುಣಾಃ ಸ್ಮೃತಾಃ."

ಉಬ್ಬಿಸತಕ್ಕದ್ದು ; ಪ್ರಸಾದವೆಂದರೆ, ರಸಾನುಭವಮಾಡಿದಾಗ ರಸವು ತಟ್ಟನೆ ಮನಸ್ಸೆಲ್ಲವನ್ನೂ ವ್ಯಾಪಿಸುವಂತೆ ಮಾಡತಕ್ಕದ್ದು—ಎಂದು ಅರ್ಥ.

ಈ ಮಾಧುರ್ಯವು ಸಂಭೋಗಶೃಂಗಾರ, ಕರುಣ, ವಿಪ್ರಲಂಭ, ಶಾಂತ ಇವುಗಳಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದರಲ್ಲಿ ಹೆಚ್ಚಾಗಿರುತ್ತದೆ. ಓಜಸ್ಸು ವೀರ ಭೀಭತ್ಸ ರೌದ್ರ ಇವುಗಳಲ್ಲಿ ಕ್ರಮವಾಗಿ ಒಂದಕ್ಕಿಂತ ಒಂದರಲ್ಲಿ ಹೆಚ್ಚಾಗಿರುತ್ತದೆ. ಪ್ರಸಾದವು ಎಲ್ಲಾ ರಸಗಳಲ್ಲಿಯೂ ಇರಬಹುದು (ಹಾಸ್ಯಾದ್ಭುತ ಭಯಾನಕಗಳಲ್ಲಿ ಕೆಲವು ವೇಳೆ ಚಿತ್ತದ್ರುತಿಯೂ ಮತ್ತೆ ಕೆಲವು ವೇಳೆ ಚಿತ್ತವಿಸ್ತಾರವೂ ಆಗುವುದು—ಉದ್ದ್ಯೋತ, ಕಾವ್ಯಪ್ರಕಾಶ viii, ೬೮).

ಈ ಮತವು ಧ್ವನಿಕಾರರಿಂದ ಆರಂಭವಾಗಿ (ಧ್ವನ್ಯಾಲೋಕ ii, ೮-೧೧) ಪ್ರಾಯಿಕವಾಗಿ ಎಲ್ಲಾ ನವೀನಾಲಂಕಾರಿಕರಿಂದಲೂ ಅಂಗೀಕರಿಸಲ್ಪಟ್ಟಿದೆ. ಆದರೆ ರಸಗಂಗಾಧರಕಾರನು ಮಾತ್ರ ಇದನ್ನು ಒಪ್ಪುವುದಿಲ್ಲ. ಈ ವಿಚಾರಕ್ಕೆ ಸಂಬಂಧಪಟ್ಟ ಕೆಲವು ವಾಕ್ಯಗಳನ್ನು ಇಲ್ಲಿ ಅನುವಾದಮಾಡಬಹುದು :

"ಈ ಮಾಧುರ್ಯೌಜಃಪ್ರಸಾದಗಳು ರಸಧರ್ಮಗಳು ಮಾತ್ರ ಎಂದು ಹೇಳಲ್ಪಟ್ಟಿತಷ್ಟೆ ; ಇದರಲ್ಲಿ ಪ್ರಮಾಣವೇನು ? ಪ್ರತ್ಯಕ್ಷವಂತೂ ಅಲ್ಲ ; ಏಕೆಂದರೆ, ಬೆಂಕಿಯಲ್ಲಿ ಆದರ ಕಾರ್ಯವಾದ ಸುಡುವಿಕೆಯೂ ಗುಣವಾದ ಉಷ್ಣಸ್ಪರ್ಶವೂ ಹೇಗೆ ಬೇರೆಬೇರೆಯಾಗಿ ಅನುಭವಕ್ಕೆ ಬರುತ್ತವೆಯೋ ಹಾಗೆ, ರಸದಲ್ಲಿ ಚಿತ್ತದ್ರವೀಕರಣಕ್ಕಿಂತ ಬೇರೆಯಾದ ಮತ್ತಾವ ಗುಣವೂ ಅನುಭವಕ್ಕೆ ಬರುವುದಿಲ್ಲ . . . . ಅಂತೂ ಶಬ್ದಾರ್ಥಗಳಲ್ಲಿಯೂ ಇಂಥ ಮಾಧುರ್ಯವಿರುವುದರಿಂದ, (ಶಬ್ದಾರ್ಥಗಳು ಮಧುರವಾಗಿವೆ, ಇತ್ಯಾದಿ ವ್ಯವಹಾರಗಳಲ್ಲಿ) ಔಪಚಾರಿಕಪ್ರಯೋಗವನ್ನೇನೂ ಕಲ್ಪಿಸಬೇಕಾಗಿಲ್ಲ—ಎಂದು ನಮ್ಮಂಥವರು ಹೇಳುತ್ತೇವೆ."

# ೧೧. ಕವಿಸಮಯ

ಆವುದಶೇಷಲೋಕವಿಷಯಸ್ಥಿತಿಯಲ್ತಖಿಳಾಗಮಾರ್ಥಮುಂ
ಭಾವಿಪೊಡಲ್ತು ಸತ್ಕವಿಪರಂಪರೆಯಿಂ ಪರಿಗೀತಮಾಗಿ ನಿ
ಷ್ಕೇವಳಮಾದ ರೂಢಿವಶದಿಂ ಸಲೆ ಸಲ್ವುದಿದಲ್ತೆ ಶಿಷ್ಟಸಂ
ಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ ||[1]

— ಕಾವ್ಯಾವಲೋಕನ V, ೨೧೪

ಲೋಕದಲ್ಲಿ ವಸ್ತುತಃ ಇಲ್ಲದೆಯೂ ಶಾಸ್ತ್ರದಲ್ಲಿ ಪ್ರಸಿದ್ಧವಲ್ಲದೆಯೂ ಇರುವ ಅನೇಕ ಸಂಗತಿಗಳನ್ನು ಕವಿಗಳು ಒಬ್ಬರಾದ ಮೇಲೆ ಮತ್ತೊಬ್ಬರು ಒಂದೇ ರೀತಿಯಲ್ಲಿ ಹೇಳುತ್ತ ಬಂದು ರೂಢಿಗೆ ತಂದಿರುತ್ತಾರೆ. ಈ ರೂಢಿಗೆ 'ಕವಿಸಮಯ' ವೆಂದು ಹೆಸರು. ಯಾವನೋ ಒಬ್ಬ ಕವಿಯು ಹೇಳಿರುವ ಉಕ್ತಿವೈಚಿತ್ರ್ಯಗಳೂ, ನೀರಸವಾದ ವಿಷಯವನ್ನು ಕಾವ್ಯವಾಗಿ ಮಾಡಬಲ್ಲ ರೀತಿರಚನಾವಿಶೇಷಗಳೂ ಕವಿಸಮಯವೆನ್ನಿಸಿಕೊಳ್ಳುವುದಿಲ್ಲ. ಹೇಗೆಂದರೆ, 'ಮಕ್ಕಳಾದ ಮೇಲೆ ಗಂಡ ಹೆಂಡಿರಿಗೆ ಪ್ರೀತಿ ಹೆಚ್ಚಾಗುತ್ತದೆ' ಎಂಬ ಸಂಗತಿಯನ್ನು ಭವಭೂತಿಯು "ಸಂತಾನವು ಪತಿಪತ್ನಿಯರನ್ನು ಬಂಧಿಸುವ ಒಂದು ಆನಂದದ ಗಂಟು" ಎಂದು ಹೇಳಿದ್ದಾನೆ. ಆನಂದದ ಗಂಟನ್ನು ಲೋಕದಲ್ಲಿ ಯಾರೂ ನೋಡಿಲ್ಲ, ಇದರ ವಿಚಾರವು ಶಾಸ್ತ್ರದಲ್ಲಿಯೂ ಪ್ರಸಿದ್ಧವಾಗಿಲ್ಲ; ಅಲ್ಲದೆ 'ಮಕ್ಕಳಾದ ಮೇಲೆ ಗಂಡ ಹೆಂಡಿರಿಗೆ ಪ್ರೀತಿಯು ಹೆಚ್ಚಾಗುತ್ತದೆ' ಎಂಬ ವಾಕ್ಯಕ್ಕೂ 'ಸಂತಾನವು ಪತಿಪತ್ನಿಯರನ್ನು ಬಂಧಿಸುವ ಆನಂದದ ಗಂಟು' ಎಂಬ ವಾಕ್ಯಕ್ಕೂ ರೀತಿರಚನೆಗಳಲ್ಲಿ ಎಷ್ಟೋ ವ್ಯತ್ಯಾಸವಿದೆ. ಇಷ್ಟು ಮಾತ್ರಕ್ಕೆ 'ಆನಂದದ ಗಂಟು' ಕವಿಸಮಯವಾಗುವುದಿಲ್ಲ. ಏಕೆಂದರೆ ಭವಭೂತಿಯಂತೆಯೇ ಮಿಕ್ಕ ಕವಿಗಳೂ, ಸಂತಾನದ ಪ್ರಸ್ತಾಪ ಬಂದಾಗಲೆಲ್ಲ ಅದನ್ನು ರೂಢಿಯಾಗಿ ಆನಂದದ ಗಂಟಿಗೆ ಹೋಲಿಸಿರುವುದಿಲ್ಲ. ಆದರೆ ಕೀರ್ತಿಯನ್ನು ಬೆಳ್ಳಗಿರುವಂತೆ ವರ್ಣಿಸುವುದು ಕವಿಗಳಲ್ಲಿ ರೂಢಿಗೆ ಬಂದಿದೆ. ಕವಿಗಳೆಲ್ಲಾ ಕೀರ್ತಿಯನ್ನು ಬೆಳ್ಳಗಿರುವಂತೆ ವರ್ಣಿಸುತ್ತಾರೆ; ಆದ್ದರಿಂದ ಕೀರ್ತಿಯನ್ನು ಬೆಳ್ಳಗಿರುವಂತೆ ವರ್ಣಿಸುವುದು ಒಂದು ಕವಿಸಮಯವೆಂದು ಹೇಳಬಹುದು.

ಕವಿಸಮಯವನ್ನು ವಿಸ್ತಾರವಾಗಿ ಪ್ರತಿಪಾದಿಸುವ ಸಂಸ್ಕೃತಗ್ರಂಥಗಳು ತೀರ ಕಡಮೆ; ಅನೇಕ ಲಾಕ್ಷಣಿಕರು '(ಕವಿ) ಪ್ರಸಿದ್ಧಿವಿರೋಧ' ವೆಂಬ ಕಾವ್ಯದೋಷ

---

[1] "ಅಶಾಸ್ತ್ರೀಯಮಲೌಕಿಕಂ ಚ ಪರಂಪರಾಯಾತಂ ಯಮರ್ಥಮುಪನಿಬಧ್ನಂತಿ ಕವಯಃ ಸ ಕವಿಸಮಯಃ .... ಸ ಚ ತ್ರಿಧಾ; ಸ್ವರ್ಗ್ಯೋ ಭೌಮಃ ಪಾತಾಲೀಯಶ್ಚ."

— ಕಾವ್ಯಮೀಮಾಂಸಾ ಪುಟ ೭೮

ವನ್ನು ವಿವರಿಸುವಾಗ 'ಕವಿಪ್ರಸಿದ್ಧಿ' ಅಥವಾ ಕವಿಸಮಯದ ವಿಚಾರವನ್ನು ಸ್ವಲ್ಪ ಪ್ರಸ್ತಾಪಿಸುವರು.[2] ಹೇಮಚಂದ್ರ ಮತ್ತು (ಕಾವ್ಯಾನುಶಾಸನಕಾರನಾದ) ವಾಗ್ಭಟ ಇವರು 'ಕಾವ್ಯಹೇತು'ಗಳನ್ನು ಹೇಳುವಾಗ ಕವಿಸಮಯವನ್ನು ಸ್ವಲ್ಪ ವಿಸ್ತಾರವಾಗಿಯೂ, ಅಮರಚಂದ್ರನು ತನ್ನ 'ಕಾವ್ಯಕಲ್ಪಲತೆ' (ಕವಿಶಿಕ್ಷೆ)ಯಲ್ಲಿ 'ವರ್ಣ್ಯಸ್ಥಿತಿ'ಯನ್ನು ಹೇಳುವಾಗ ಮತ್ತಷ್ಟು ವಿಸ್ತಾರವಾಗಿಯೂ, ರಾಜಶೇಖರನು ತನ್ನ 'ಕಾವ್ಯಮೀಮಾಂಸೆ'ಯಲ್ಲಿ (ಅಧ್ಯಾಯ ೧೪-೧೬) ಇನ್ನೂ ಅಷ್ಟು ವಿಸ್ತಾರ ವಾಗಿಯೂ ಪ್ರತಿಪಾದಿಸಿದ್ದಾರೆ.

ಕನ್ನಡದಲ್ಲಿ ನಾಗವರ್ಮನು ಮಾತ್ರ ಇದನ್ನು ತನ್ನ ಕಾವ್ಯಾವಲೋಕನದ ಐದನೆಯ ಅಧಿಕರಣದ ತುಂಬ ಹೇಳಿದ್ದಾನೆ; ಇವನು ಹೇಳಿರುವುದೂ ಅಮರ ಚಂದ್ರ ರಾಜಶೇಖರರು ಹೇಳಿರುವುದೂ ಒಂದೇ; ಆದರೆ ನಾಗವರ್ಮನು ಇದನ್ನು ಅಮರಚಂದ್ರನಿಂದ (೧೩ನೆಯ ಶತಮಾನ) ತೆಗೆದುಕೊಂಡನೆಂದು ಹೇಳುವುದ ಕ್ಕಾಗುವುದಿಲ್ಲ; ಪ್ರಾಯಶಃ ರಾಜಶೇಖರನಿಂದ (೧೦ನೆಯ ಶತಮಾನ) ತೆಗೆದು ಕೊಂಡಿರಬಹುದು.

ಕವಿಸಮಯವು ತಿಳಿಯದಿದ್ದರೆ ಅದನ್ನು ಅನುಸರಿಸಿ ರಚಿತವಾದ ಕಾವ್ಯಗಳು ಮನಸ್ಸಿಗೆ ಹಿಡಿಯುವುದಿಲ್ಲ, ಅರ್ಥವೇ ಆಗುವುದಿಲ್ಲ. ಇದು ಕಾವ್ಯಕ್ಕೆ ಎಷ್ಟರ ಮಟ್ಟಿಗೆ ಆವಶ್ಯಕವೆಂಬ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಇದು ಚಮತ್ಕಾರ ಜನಕವೆಂದೂ, ಇದು ಇದ್ದರೆ ಕವಿಗಳ ಸ್ಪರ್ಧೆಯಿಂದ ಒಂದೇ ಸಂಗತಿಯನ್ನು ಹೆಚ್ಚು ಹೆಚ್ಚು ಚಮತ್ಕಾರವಾಗುವಂತೆ ಹೇಳುವುದು ಸಾಧ್ಯವಾಗುವುದೆಂದೂ ಒಂದು ಪಕ್ಷದವರು ಹೇಳುವರು. ಮತ್ತೊಂದು ಪಕ್ಷದವರು—"ಈ ಕವಿ ಸಮಯಾನುಸಾರಿಗಳಾದ ಅಂಶಗಳನ್ನು ಮೊದಲು ಸಾರಿ ಹೇಳಿದವನು ಪ್ರತಿಭಾ ಬಲದಿಂದ ತನ್ನ ಹೃದಯದಲ್ಲಿ ಅದರ ಆನಂದವನ್ನು ಅನುಭವಮಾಡಿ ಹೇಳಿದ್ದ ರಿಂದಲೂ, ನಿರೂಪಣಕ್ರಮವು ಆಗ್ಗೆ ನವೀನವಾಗಿದ್ದರಿಂದಲೂ ಅದರಲ್ಲಿ ಒಂದು ರಮಣೀಯತೆ ಇತ್ತು. ಆದರೆ ಈಚಿನವರು ಪ್ರತಿಭೆ ಇರಲಿ ಇಲ್ಲದಿರಲಿ, ಅನುಭವಕ್ಕೆ ಬರಲಿ ಬರದೆ ಇರಲಿ, ಔಚಿತ್ಯವಿರಲಿ ಇಲ್ಲದೆ ಇರಲಿ, ಹಿಂದೆ ಹೇಳಿದವುಗಳನ್ನೇ ಚರ್ವಿತಚರ್ವಣವಾಗಿ, ಗತಾನುಗತಿಕವಾಗಿ ಉಪಯೋಗಿಸುತ್ತ ಬಂದಿರುವುದರಿಂದ ಅದು ನಿರ್ಜೀವವಾಗಿಬಿಟ್ಟಿದೆ. ಕಾವ್ಯದಲ್ಲಿ ಬರಿಯ ಚಮತ್ಕಾರವೈಚಿತ್ರ್ಯಗಳಿಗಿಂತ ರಸವೇ ಮುಖ್ಯ; ರಸೋತ್ಪಾದನೆಯು ಕವಿಸಮಯವಿಲ್ಲದೆಯೇ (ಮಿಕ್ಕ ಭಾಷೆ ಗಳಲ್ಲಿರುವಂತೆ) ಆಗಬಹುದು, ಅನೇಕ ಸಂದರ್ಭಗಳಲ್ಲಿ ರಸಚರ್ವಣಕ್ಕೆ ಕವಿಸಮಯ

[2] ಅಗ್ನಿಪುರಾಣವು ಅಸಾಮಯಿಕತೆಯೆಂಬ ಕಾವ್ಯದೋಷವನ್ನು ಹೇಳುವಾಗ (ಅಧ್ಯಾಯ ೩೪೬, ೧೦, ೨೦-೨೨), ಕವಿಸಮಯದ ಪ್ರಸ್ತಾಪವನ್ನು ಎತ್ತಿದೆ:

"ಕವೀನಾಂ ಸಮುದಾಚಾರಃ ಸಮಯೋ ನಾಮ ಗೀಯತೇ"—ಇತ್ಯಾದಿ. ಆದರೆ ಅಲ್ಲಿ 'ಅಸದಾಖ್ಯಾತಿ' ಮುಂತಾದ ವಿಭಾಗಗಳಿಲ್ಲ.

ಜ್ಞಾನವು ಪ್ರತಿಬಂಧಕವೇ ಆಗುತ್ತದೆ. ಮತ್ತು ದೇಶಕಾಲಾಪೇಕ್ಷೆಯಿಲ್ಲದೆ ಒಂದೇ ಸಮನಾಗಿ ಸಹೃದಯ ಸಾಮಾನ್ಯರಲ್ಲಿಯೂ ರಸೋದ್ಬೋಧವನ್ನುಂಟುಮಾಡಿ ಆನಂದಗೊಳಿಸುವ ಸರ್ವಸಾಮಾನ್ಯತೆಯು (Universality) ಉತ್ತಮಸಾಹಿತ್ಯದ ಹೆಗ್ಗುರುತು. ಕವಿಸಮಯವು ಇದಕ್ಕೆ ಒಂದು ದೊಡ್ಡ ಅಡಚಣೆ"—ಎಂದು ಮುಂತಾಗಿ ಹೇಳುವರು.

ನಾಗವರ್ಮನ ಕಾವ್ಯಾವಲೋಕನವನ್ನು ಅನುಸರಿಸಿ ಮುಂದೆ ಕವಿಸಮಯವನ್ನು ನಿರೂಪಿಸಿದೆ :

ಕವಿಸಮಯವನ್ನು—1. 'ಅಸದಾಖ್ಯಾತಿ', 2. 'ಸದಕೀರ್ತನ' 3. 'ನಿಯಮ' 4. 'ಐಕ್ಯ' ಎಂದು ನಾಲ್ಕು ಭಾಗಮಾಡಬಹುದು. ಇವು ಒಂದೊಂದೂ ಜಾತಿ, ದ್ರವ್ಯ, ಕ್ರಿಯೆ, ಗುಣ— ಇವುಗಳಲ್ಲಿ ಸಂಭವಿಸಬಹುದು.

## 1. ಅಸದಾಖ್ಯಾತಿ

'ಅಸದಾಖ್ಯಾತಿ' ಎಂದರೆ ಇಲ್ಲದೆ ಇರುವುದನ್ನು ಇರುವಂತೆ ವರ್ಣಿಸುವುದು :

(i) ಜಾತಿ—ಕೆರೆ, ಕಟ್ಟೆ, ಕೊಳ ಎಲ್ಲೆಂದರೆ ಅಲ್ಲಿ ಹಂಸಗಳಿವೆ ಎಂದು ಹೇಳುವುದು; ಹೊಳೆಗಳಲ್ಲಿ ಕಮಲ ಕನ್ನೈದಿಲೆಗಳಿವೆ ಎಂದು ಹೇಳುವುದು; ಗಂಗಾ ನದಿಯಲ್ಲಿ ನೀರಾನೆಗಳಿವೆಯೆಂದು ಹೇಳುವುದು; ಬೆಟ್ಟಗುಡ್ಡಗಳಲ್ಲಿ ರತ್ನಗಳು ಸಿಕ್ಕುತ್ತವೆಯೆಂದು ಹೇಳುವುದು.

ಉದಾಹರಣೆ

ಸರಯೂನದ್ಯರವಿಂದಮಂದಮಕರಂದಸ್ಯಂದಿ ಗಂಗಾಂಬುಶೀ
ಕರಸಂಸಂಗಿ ಲತಾಭಿರಾಮಲಲನಾಲಾಸ್ಯೈಕಶೈಲೂಷನ
ದ್ರಿರುಹಕ್ರೋಡನಿಪಾತಿ ಮಾಲ್ಯವದನುಪ್ರಸ್ಥೋತ್ಥಿತಂ ಯಾಮುನೋ
ದರಕುಂಜಸ್ಥಿತಿ ಮೆಲ್ಲನಲ್ಲಿ ಸುಟಿಗುಂ ಬಂದೊಂದು ಮಂದಾನಿಳಂ ||

(ii) ದ್ರವ್ಯ—ಕತ್ತಲೆಯನ್ನು ಹಿಡಿಯಲ್ಲಿ ಹಿಡಿದುಕೊಳ್ಳಬಹುದು, ಸೂಜಿಯಿಂದ ಚುಚ್ಚುವುದಕ್ಕೂ ಆಗದಷ್ಟು ದಟ್ಟವಾಗಿದೆ ಎಂದೂ, ಬೆಳುದಿಂಗಳನ್ನು ಬೊಗಸೆಯಲ್ಲಿ ಅಥವಾ ಪಾತ್ರೆಯಲ್ಲಿ ತುಂಬಿಕೊಳ್ಳಬಹುದು ಎಂದೂ, ಹೊಳೆಯಲ್ಲಿ ಹೇಗೋ ಹಾಗೆ ಅದರಲ್ಲಿ ದೋಣಿಯನ್ನು ಬಿಟ್ಟುಕೊಂಡು ಹೋಗಬಹುದೆಂದೂ ಹೇಳುವುದು.

ಉದಾಹರಣೆ

ಬೆಲಗಸೆದೀವಿಕೊಂಡು ಕುಡಿಯಲ್ ಮೊಗೆಯಲ್ ಕೊಡಗೊಂಡು ತಿರ್ದಿ ಬ
ಚ್ಚಲನೆಳದೋಂಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್

ನೆಲೆಯಿನಿಸೆಂದು ನೋಡಲೊಳಪೊಕ್ಕು ದುಡುವ್ಮಿಱಿದಾಡಲೀಸಲ
ಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ ||

(iii) ಕ್ರಿಯೆ—ಚಕ್ರವಾಕದಂಪತಿಗಳು ರಾತ್ರಿಯಲ್ಲಿ ಅಗಲಿ ವಿರಹವನ್ನು ತಾಳುತ್ತವೆಯೆಂದೂ, ಚಕೋರಗಳು ಬೆಳದಿಂಗಳನ್ನು ಕುಡಿಯುತ್ತವೆಯೆಂದೂ ಹೇಳುವುದು.

ಉದಾಹರಣೆ

ನೆರೆವನ್ನಂ ರವಿ ನಿಲ್ಲದಸ್ತಗಿರಿಯಂ ಸಾರ್ದಂ ಪ್ರಿಯಂ ಪೋಗಲಾ
ತುರನಾಗಿರ್ದನೆನುತ್ತುಮತ್ತಿನನನಿತ್ತಾತ್ಮೇಶನಂ ನೋಡಿ ಕೋ
ಪರಸಾವೇಶಮನೊಂದು ಶೋಕರಸಮಂ ಮತ್ತೊಂದುಕಣ್ ಕಯ್ಕೊಳು
ತ್ತಿರೆ ಕೈಕೊಂಡುದು ಚಕ್ರವಾಕವಧು ಕಣ್ಗೆತ್ತಂ ನದೀಲೀಲೆಯಂ ||

(iv) ಗುಣ—ಕೀರ್ತಿ ನಗು ಇವುಗಳಲ್ಲಿ ಬಿಳಿಯ ಬಣ್ಣವನ್ನೂ, ಅಪಯಶಸ್ಸಿನಲ್ಲಿ ಕಪ್ಪುಬಣ್ಣವನ್ನೂ, ಕೋಪ ಅನುರಾಗ ಇವುಗಳಲ್ಲಿ ಕೆಂಪುಬಣ್ಣವನ್ನೂ ಆರೋಪಿಸುವುದು.

ಉದಾಹರಣೆ

ಹರಹಾಸದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀ
ಕರಮಂ ನಿಂದಿಸಿ ಸಿಂಧುವಾರಕುಸುಮಶ್ರೀಯಂ ಪಳಂಚಾಡಿ ಭಾ
ಸುರಚಂದ್ರಾಂಶುವಿಕಾಸಮಂ ತೆಗಳ್ದು ಮುಕ್ತಾಹಾರವಿಸ್ತಾರಡಂ
ಬರಮಂ ಮಿಕ್ಕು ಬೆಳಪ್ಪುದುಜ್ಜ್ವಳಯಶಂ ಶ್ರೀಗಂಡಮಾರ್ತಂಡನಾ ||

## 2. ಸದಕೀರ್ತನ

'ಸದಕೀರ್ತನ'ವೆಂದರೆ, ಇರುವುದನ್ನು ಇಲ್ಲದಂತೆ ಹೇಳುವುದು.

(i) ಜಾತಿ—ಅಶೋಕೆಯ ಮ ನಲ್ಲಿ ಹಣ್ಣು, ವಸಂತಕಾಲದಲ್ಲಿ ಜಾಜಿಯ ಹೂವು, ಶ್ರೀಗಂಧದ ಮರದಲ್ಲಿ ಹೂವು ಹಣ್ಣು ಇವುಗಳು ಇದ್ದರೂ ಇಲ್ಲದಂತೆ ಭಾವಿಸಿ ಅವುಗಳನ್ನು ವರ್ಣಿಸದಿರುವುದು.

ಉದಾಹರಣೆ

ಬಿದಿವಸದೆ ಕುಸುಮಫಲಮಿ
ಲ್ಲದಿರ್ದೊಡಂ ತನ್ನದೊಂದು ಮೆಯ್ಯಿಂದಂ ಲೋ |
ಕದ ಸೇದೆಯೆಲ್ಲಮಂ ಕಿಡಿ
ಸಿದಪುದು ಚಂದನಮೆ ವಂದ್ಯಜನ್ಮಂ ಕುಜದೊಳ್ ||

(ii) ದ್ರವ್ಯ—ಶುಕ್ಲಪಕ್ಷದ ರಾತ್ರಿಯಲ್ಲಿ ಕತ್ತಲೆಯಿದ್ದರೂ, ಕೃಷ್ಣಪಕ್ಷದ ರಾತ್ರಿಯಲ್ಲಿ ಬೆಳದಿಂಗಳಿದ್ದರೂ, ಶುಕ್ಲಪಕ್ಷದಲ್ಲಿ ಬರಿಯ ಬೆಳದಿಂಗಳನ್ನೂ, ಕೃಷ್ಣ ಪಕ್ಷದಲ್ಲಿ ಬರಿಯ ಕತ್ತಲೆಯನ್ನೂ ವರ್ಣಿಸುವುದು.

ಉದಾಹರಣೆ

ಇಡಿದಿರೆ ಗುಹಾಂಧಕಾರಂ
ಪೊಡರ್ದೆಸೆದಿರೆ ಚಂದ್ರಕಾಂತರುಚಿ ನಗದೋರೋಂ ।
ದೆಡೆಗಳ್ ಪೋಲ್ತಪ್ಪುವದೊಂ
ದೆಡೆಯೊಳ್ ನೆಲಸಿರ್ದ ಕಾಳವುಂ ಜೊನ್ನಮುಮಂ ॥

(iii) ಕ್ರಿಯೆ—ಕನ್ನೈದಿಲೆಗಳು ಹಗಲುಹೊತ್ತು ಅರಳಿದರೂ ಆಗ ಅವು ಅರಳುವುದನ್ನು ಹೇಳದೆ ಅವು ರಾತ್ರಿಯಲ್ಲಿಯೇ ಅರಳುತ್ತವೆಯೆಂದು ಹೇಳುವುದು.

ಉದಾಹರಣೆ

ಪಗಲ್ ರತಾರಂಭದೊಳಿರ್ದಿರುಳ್ ಕನ
ಲ್ವಗಲ್ವ ಚಕ್ರಾಹ್ವಯುಗಂಗಳಚ್ಚಿಱಿಂ ।
ಮೊಗಕ್ಕೆ ತರ್ಪಂತಲರಲ್ ತಗುಳ್ದುವೆ
ಲ್ಲಿಗಂ ರಜಂ ಪೊಣ್ಮೆ ಮಹೋತ್ಪಳಾದಿಗಳ್ ॥

(iv) ಗುಣ—ಹಲ್ಲುಗಳು ಯಾವ ಬಣ್ಣಕ್ಕೇ ಇರಲಿ ಅದನ್ನು ಹೇಳದೆ ಬಿಳುಪನ್ನು ಮಾತ್ರ ಹೇಳುವುದು; ಮೊಗ್ಗು ಹಳದಿಯಾಗಿದ್ದರೂ ಹಸುರಾಗಿದ್ದರೂ ಅದನ್ನು ಹೇಳದೆ ಬಿಳಿಯ ಬಣ್ಣವನ್ನು ಮಾತ್ರ ಹೇಳುವುದು.

ಉದಾಹರಣೆ

ತೆರೆಯ ಪೊಯ್ಲೊಳೆ ತೆರಳ್ದು ಬರ್ಪ ವಿ
ಸ್ಫುರಿತಶಂಖನಿವಹಂ ಪಯೋಧಿಯೊಳ್ ।
ಕರಮೆ ಚೆಲ್ವೆಸೆದು ಕಣ್ಗೆ ತೋರ್ಕುಮಂ
ಬುರುಹಕುಟ್ಮಳಕುಳಂಗಳಂತೆವೋಲ್ ॥

## 3. ನಿಯಮ

'ನಿಯಮ'ವೆಂದರೆ, ಅನೇಕ ಕಡೆಗಳಲ್ಲಿ ದೊರಕಬಹುದಾದ್ದನ್ನು ಒಂದೇ ಕಡೆ ದೊರಕುವಂತೆ ಹೇಳುವುದು, ಅಥವಾ ಅನೇಕ ಗುಣಗಳು ಇರುವ ಕಡೆ ಒಂದೇ ಗುಣ ವಿರುವಂತೆ ಹೇಳುವುದು.

(i) ಜಾತಿ—ತಿಮಿ, ತಿಮಿಂಗಿಲ, ಶಂಖ ಇವು ಸಮುದ್ರದಲ್ಲಿ ಮಾತ್ರ ಹುಟ್ಟುತ್ತವೆಯೆಂದೂ, ಮುತ್ತುಗಳು ತಾಮ್ರಪರ್ಣೀನದಿಯಲ್ಲಿ ಮಾತ್ರ ಸಿಕ್ಕುತ್ತವೆಯೆಂದೂ ಹೇಳುವುದು.

ಉದಾಹರಣೆ

ಜಿನರಾಜಶಿಶುಗೆ ಧರೆಯೆ ೞ್
ಜನಿಯಿಸಲಂತಾನರೇಂದ್ರಪತ್ನಿಯೆ ದೊರೆ ನೂ |
ತನಶುಕ್ತಿಜಕ್ಕೆ ತಾಯ್ವನೆ
ಯೆನಿಸಲ್ ದೊರೆ ತಾಮ್ರಪರ್ಣಿ ತಾನೊಂದೆ ವಲಂ ||

(ii) ದ್ರವ್ಯ—ಶ್ರೀಗಂಧದ ಮರವು ಮಲಯಪರ್ವತದಲ್ಲಿಯೇ ಬೆಳೆಯುತ್ತದೆಯೆಂದೂ, ಭೂರ್ಜವೃಕ್ಷವು ಹಿಮಾಲಯಪರ್ವತದಲ್ಲಿ ಮಾತ್ರ ಬೆಳೆಯುತ್ತದೆಯೆಂದೂ ಹೇಳುವುದು.

ಉದಾಹರಣೆ

ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆ
ತ್ತುದು ಸಿರಿಕಂಡಮುಂ ಪಡೆದು ತೀಡುವ ಗಾಳಿಯುಮಿಲ್ಲಿ ಪುಟ್ಟಿ ಪೋ
ಗದು ಪೊಸಸುಗ್ಗಿ ಮೂಗುವಡದಿಲ್ಲಿಯ ಕೋಗಿಲೆ ಬಂದ ಮಾವು ಬೀ
ಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್ ||

(iii) ಕ್ರಿಯೆ—ಕೋಗಿಲೆ ವಸಂತಕಾಲದಲ್ಲಿ ಮಾತ್ರ ಕೂಗುವಂತೆಯೂ ನವಿಲು ವರ್ಷಾಕಾಲದಲ್ಲಿ ಮಾತ್ರ ಕೂಗುವಂತೆಯೂ ವರ್ಣಿಸುವುದು.

ಉದಾಹರಣೆ

ಘನಸಮಯದೊಳಿರ್ದು ಶಿಖಾ
ಸನದೊಳ್ ಶೈಳೇಯಸುರಭಿತಳದೊಳ್ ಗೋವ |
ರ್ಧನಕಂದರದೊಳ್ ಶಿಖಿಃ
ರ್ತನಮುಂ ನೀಂ ನೋಡ ಲಲಿತಕೇಕಾನ್ವಿತಮುಂ ||

(iv) ಗುಣ—ಇತರ ಬಣ್ಣಗಳಿದ್ದರೂ ಹೂವಿನಲ್ಲಿ ಯಾವಾಗಲೂ ಬಿಳಿಯ ಬಣ್ಣವನ್ನೂ ರತ್ನಗಳಲ್ಲಿ ಕೆಂಪು ಬಣ್ಣವನ್ನೂ ಮೇಘಸಾಮಾನ್ಯದಲ್ಲಿಯೂ ಕಪ್ಪುಬಣ್ಣವನ್ನೂ ಮಾತ್ರ ವರ್ಣಿಸುವುದು.

ಉದಾಹರಣೆ

ತುಂಗವಿಚಿತ್ರಕೂಟನಿವಹಂಗಳೊಳೊಪ್ಪುವ ರತ್ನದಂಶುಜಾ
ಳಂಗಳ ಕೆಂಪು ತಳ್ತು ನಿಲೆ ಚೆಚ್ಚರದಿಂ ಗಿರಿಗಳ್ಗಧೀಶ್ವರಂ

ತಾಂ ಗಡಮೆಂದು ಮೇರುನಗದೊಳ್ ಪೊಣರ್ದೆಕ್ಕತುಳಕ್ಕೆವಂದು ಸಾ
ರಂಗದ ತೊಂಗಲೇಱಿಸಿದ ಮಾೞ್ಕೆಯೊಳಿರ್ದುದು ವಿಂಧ್ಯಪರ್ವತಂ ||

## 4. ಐಕ್ಯ

'ಐಕ್ಯ'ವೆಂದರೆ ವಸ್ತುತಃ ಭೇದವಿರತಕ್ಕ ಕಡೆಗಳಲ್ಲಿಯೂ ಭೇದವನ್ನು ಹೇಳದೆ ಎಲ್ಲಾ ಒಂದನ್ನಾಗಿಯೇ ಗಣಿಸುವುದು.

(i) ಜಾತಿ—ದಾನವರು ದೈತ್ಯರು ಅಸುರರು ಇವರೆಲ್ಲರನ್ನೂ ಒಂದೇ ಎಂಬಂತೆ ಭೇದವಿಲ್ಲದೆ ವರ್ಣಿಸುವುದು; ಅದರಂತೆ ನಾಗಗಳಿಗೂ ಸರ್ಪಗಳಿಗೂ ವ್ಯತ್ಯಾಸವನ್ನು ಇಟ್ಟುಕೊಳ್ಳದೆ ವರ್ಣಿಸುವುದು.[3] ಚಂದ್ರನಲ್ಲಿರುವ ಒಂದೇ ಕಳಂಕವನ್ನು ಮೊಲವೆಂದೂ ಜಿಂಕೆಯೆಂದೂ ವರ್ಣಿಸುವುದು; ಮನ್ಮಥನ ಧ್ವಜದಲ್ಲಿ ಮೀನು ಮಕರ ಇವುಗಳನ್ನು ಅಭೇದದಿಂದ ವರ್ಣಿಸುವುದು.

ಉದಾಹರಣೆ

ದನುಜರನಾಮುರಾರಿ ಗೆಲೆ ಕಾದುವ ಕಾಲದೊಳಾನದೇಕೆ ಪು
ಟ್ಟೆನೊ ಗಡಮೆಂದು ಪುಟ್ಟಿದೊಡೆ ದೈತ್ಯಕುಳಕ್ಕೆ ಕಳಂಕಮಾಗಲೀ
ವೆನೆ ದನುಜಾರಿಯೆಂಬ ಬಿರುದಂ ಸಲಲೀವೆನೆ ಕಾದಿ ಪೋಗಲೀ
ವೆನೆ ತಲೆದೋಱಲೀವೆನೆ ಮುಕುಂದನನೆಂದೊಲೆವಂ ಖಳಾಸುರಂ ||

(ii) ದ್ರವ್ಯ—ಲವಣಸಮುದ್ರಕ್ಕೂ ಕ್ಷೀರಸಮುದ್ರಕ್ಕೂ, ಕ್ಷೀರಸಾಗರದಲ್ಲಿ ಹುಟ್ಟಿದ ಚಂದ್ರನಿಗೂ ಅತ್ರಿಯ ಮಗನಾದ ಚಂದ್ರನಿಗೂ, ಮುರಾಂತಕ ನಾರಾಯಣರಿಗೂ ಸಂಪತ್ತುಲಕ್ಷ್ಮಿಯರಿಗೂ ಭೇದವನ್ನು ಹೇಳದೆ ಇರುವುದು.

ಉದಾಹರಣೆ

ಇದಱೊಳ್ ಗರ್ಭಂಗಳಂ ಕಟ್ಟುವುವಿನಕಿರಣಶ್ರೇಣಿಗಳ್ ಪಂಚರತ್ನ
ಕ್ಕಿದು ದಲ್ ತಾನಾಕರಂ ನೀರ್ ತನಗೆ ಸವಿದೆಯಾದಗ್ನಿಯುಂ ತಾಳ್ದಿ ಪೆರ್ಚಿ
ರ್ದುದು ಚಂದ್ರಂ ಪುಟ್ಟಿದಂ ಮತ್ತಿದಱೊಳೆ ಸುರರುತ್ಪತ್ತಿ ಕೇಳಿಲ್ಲಿ ಶಕ್ರಂ
ಗದಿರ್ದೆಯ್ತುಂದದ್ರಿಗಳ್ಗಾಶ್ರಯಮಿದಱೊಳದಭ್ರಾಭ್ರವೃಂದಂಗಳಿರ್ಕುಂ ||

(iii) ಕ್ರಿಯೆ—ಮೊಗ್ಗಾಗುವುದು, ಮುಚ್ಚಿಕೊಳ್ಳುವುದು; ಅರಳುವುದು, ನಗುವುದು; ಎಚ್ಚರವಾಗುವುದು, ಕಣ್ಣುತೆರೆಯುವುದು; ಆಶೆ, ಬಾಯಾರಿಕೆ—ಇವು ಒಂದೇ ಎಂಬಂತೆ ಪ್ರಯೋಗಿಸುವುದು.

---

3 ಇವುಗಳಿಗೆ ವ್ಯತ್ಯಾಸವನ್ನು ಅಮರಚಂದ್ರನ 'ಕಾವ್ಯಕಲ್ಪಲತೆ' ಯಲ್ಲಿ (ಪುಟ ೩೧) ನೋಡಬಹುದು.

ಉದಾಹರಣೆ

ವಿನಿಮೀಳನ್ನೀಳಾಂಬುಜ
ವನವಿಾಷದ್ವಿಕಸದರುಣಸರಸಿರುಹವನಂ |
ದಿನಮುಖಮುಳಿಸಂತತಿಗೆ೦
ಜನಿಯಿಸಿದುದೊ ಭಿನ್ನರುಚಿಗಳಂ ಪರಿಮಳದೊಳ್ ||

(iv) ಗುಣ—ಹಸುರು ಮತ್ತು ಕಪ್ಪು; ಕಪ್ಪು ಮತ್ತು ಬೂದು ; ಹಳದಿ ಮತ್ತು ಕೆಂಪು–ಇವುಗಳಿಗೆ ಭೇದವನ್ನು ಹೇಳದೆ ವರ್ಣಿಸುವುದು; ಕಣ್ಣಿನ ಕಾಂತಿಯನ್ನು ಕಪ್ಪೆಂದೂ ಬಿಳುಪೆಂದೂ ವರ್ಣಿಸುವುದು.

ಉದಾಹರಣೆ

ಎವೆಯಿಕ್ಕದೆ ಪದಪಿಂ ನೋ
ಡುವ ಪುರಲಲನೆಯರ ಬಿಳಿಯ ಕಣ್ಗಳ ಬೆಳಗಿಂ |
ಧವಳಿಸಿದಂತೆವೊಲಾದುವು
ಗವಾಕ್ಷಜಾಳಂಗಳಮರತನಯಂಗಾಗಳ್ ||

## ೧೧. ಅಲಂಕಾರಗಳು—ಪೀಠಿಕೆ

ಕಾವ್ಯಸೌಂದರ್ಯವನ್ನುಂಟುಮಾಡುವ ಶಬ್ದಾರ್ಥವೈಚಿತ್ರ್ಯಗಳಿಗೆ ಅಲಂಕಾರಗಳೆಂದು ಹೆಸರು. ಧ್ವನಿ, ರಸ, ವಕ್ರೋಕ್ತಿ, ರೀತಿ, ಗುಣ ಇವುಗಳೂ ಸಂದರ್ಭವಿದ್ದ ಹಾಗೆ ಶಬ್ದವೈಚಿತ್ರ್ಯವನ್ನೋ ಅರ್ಥವೈಚಿತ್ರ್ಯವನ್ನೋ ಉಂಟುಮಾಡಿ ಕಾವ್ಯ ಸೌಂದರ್ಯವನ್ನು ತರುವುವು. ಆದರೆ ಧ್ವನಿರಸಗಳು ಕಾವ್ಯಶರೀರದಲ್ಲಿ ಜೀವ ಅಥವಾ ಆತ್ಮದಂತೆಯೂ, ರೀತಿ ಮಾರ್ಗಾದಿಗಳು ಅಂಗಾಂಗ ಸನ್ನಿವೇಶ ವಿಶೇಷಗಳಂತೆಯೂ, ಗುಣಗಳು ಶೌರ್ಯಧೈರ್ಯಾದಿಗಳಂತೆಯೂ, ಅಲಂಕಾರಗಳು ಮೇಲೆ ಹಾಕಿಕೊಳ್ಳುವ ಒಡವೆಗಳಂತೆಯೂ ಇರುತ್ತವೆ. ಹೀಗೆ ಅಲಂಕಾರಗಳು ಕಾವ್ಯದ ಅಸ್ತಿತ್ವಕ್ಕೆ ಅನಿವಾರ್ಯವಾದವಲ್ಲ; ಕಾವ್ಯದ ಜೊತೆಯಲ್ಲಿಯೇ ಹುಟ್ಟಿ ಬರಬೇಕೆಂಬ ನಿಯಮವಿಲ್ಲ; ಅವು ಬಹು ಮಟ್ಟಿಗೆ ಬಾಹ್ಯವಾಗಿ ಬಂದವು; ಹೆಚ್ಚು ಕಡಮೆ ಮಾಡಿಕೊಳ್ಳಬಹುದಾದವು. ಆದ್ದರಿಂದ ಇವುಗಳಿಗೂ ರಸಾದಿಗಳಿಗೂ, ಸ್ವಾಭಾವಿಕವಾಗಿ ಪ್ರಾಧಾನ್ಯ ಸ್ವರೂಪ ಸೌಂದರ್ಯಗಳಲ್ಲಿ ಅಂತರವಿದ್ದೇ ಇರುತ್ತದೆ. ಅಲಂಕಾರಗಳಲ್ಲಿಯೂ ಅರ್ಥಾಲಂಕಾರಗಳು ನೈಸರ್ಗಿಕವಾಗಿರುವ ಸೌಂದರ್ಯವನ್ನು ಹೆಚ್ಚಿಸುವ ರತ್ನಖಚಿತವಾದ ಕುಂದಣದ ಒಡವೆಗಳಂತಿದ್ದರೆ, ಶಬ್ದಾಲಂಕಾರಗಳು ಸದ್ದಿಗೋಸ್ಕರ ಕಟ್ಟಿಕೊಂಡಿರುವ ಗೆಜ್ಜೆಪಾಡಗಗಳಂತಿರುವುವೆಂದು ಹೇಳಬಹುದು.

ಪ್ರಾಚೀನಾಲಂಕಾರಿಕರಲ್ಲಿ ಭಾಮಹ ಮುಂತಾದ ಕೆಲವರ ಹೊರತು ಎಲ್ಲರೂ ಅಲಂಕಾರಗಳಿಗೆ ವಿಶೇಷ ಪ್ರಾಧಾನ್ಯವನ್ನು ಹೇಳುವುದಿಲ್ಲ. ಭರತನು ಅವುಗಳನ್ನು ಒಂದು ಸಂಧಿಯಲ್ಲಿ ಸೇರಿಸಿಬಿಟ್ಟಿದ್ದಾನೆ. ಅವನು ನಾಟ್ಯಲಕ್ಷಣವನ್ನು ಹೇಳುತ್ತಿರುವುದರಿಂದ ಇವುಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಿಲ್ಲವೆಂದು ತೋರಬಹುದು. ಆದರೆ ಅವನು ಕಾವ್ಯದಲ್ಲಿ ನಾಲ್ಕೇ[1] ಅಲಂಕಾರಗಳೆಂದು ಹೇಳಿರುವುದನ್ನು ನೋಡಿದರೆ ಅವನ ಕಾಲಕ್ಕೆ ಅಲಂಕಾರಗಳೇ ಹೆಚ್ಚಾಗಿರಲಿಲ್ಲವೆಂದು ಊಹಿಸಬೇಕಾಗುತ್ತದೆ. ದಂಡಿವಾಮನರು ಕಾವ್ಯಸೌಂದರ್ಯಕ್ಕೆ ಗುಣಗಳು ಮೂಲಕಾರಣಗಳೆಂದೂ[2] ಅಲಂಕಾರಗಳು ಅದರ ಅತಿಶಯಕ್ಕೆ ಕಾರಣಗಳೆಂದೂ ಹೇಳುತ್ತಾರೆ. ಶರೀರದಲ್ಲಿ ಜೀವವಿದ್ದು ಸೌಂದರ್ಯವೂ ಇದ್ದರೆ, ಆಮೇಲೆ ಅದನ್ನು ಹೆಚ್ಚಿಸುವ ಮಾತು. ಇಲ್ಲದೆ ಇದ್ದರೆ ಬರಿಯ ಅಲಂಕಾರದಿಂದ ಏನು ಪ್ರಯೋಜನ? ಒಂದು ವಿಧ

---

1. ಉಪಮಾ ದೀಪಕಂ ಚೈವ ರೂಪಕಂ ಯಮಕಂ ತಥಾ ।
ಕಾವ್ಯಸ್ಯೈತೇಹ್ಯಲಂಕಾರಾಃ ಚತ್ವಾರಃ ಪರಿಕೀರ್ತಿತಾಃ ॥

—ನಾಟ್ಯಶಾಸ್ತ್ರ XVI, ೬೧

2. ವಾಮನನು 'ರೀತಿರಾತ್ಮಾ ಕಾವ್ಯಸ್ಯ' ಎಂದು ಹೇಳಿದರೂ, ಪದರಚನಾ 'ವಿಶೇಷ'ವೇ ರೀತಿಯೆಂದೂ ಈ ವಿಶೇಷವು 'ಗುಣಾತ್ಮ'ವೆಂದೂ ವಿವರಿಸಿದ್ದಾನೆ.

ವಾದ ವೈಚಿತ್ರ್ಯ,[3] ಅಷ್ಟೆ. ನೈಸರ್ಗಿಕವಾದ ಸೌಂದರ್ಯವೇ ಅನುಪಮವಾದ ಅಲಂಕಾರ. ಅದಿದ್ದರೆ ಇತರ ಅಲಂಕಾರವೇ ಅನಾವಶ್ಯಕ. ಅಲಂಕಾರವು ಆ ಸೌಂದರ್ಯವನ್ನು ಅತಿಶಯಗೊಳಿಸುವಂತಿದ್ದರೆ, ಅದು ಗ್ರಾಹ್ಯವೇ. ನೈಸರ್ಗಿಕ ಸೌಂದರ್ಯವಿಲ್ಲದಿದ್ದರೆ ಅದು ಅನಾವಶ್ಯಕವಷ್ಟೇ ಅಲ್ಲ, ಕೇವಲ ಭಾರಜನಕವೂ ವಿಕಾರಜನಕವೂ ಆಗುತ್ತದೆ.[4] ಎಷ್ಟಾದರೂ ಅಲಂಕಾರಗಳು ಅನಿತ್ಯ, ಬಾಹ್ಯ. ಅದ್ದರಿಂದಲೇ ನವೀನರು ಸ್ಫುಟವಾದ ಅಲಂಕಾರವಿಲ್ಲದಿದ್ದರೂ ಉತ್ತಮಕಾವ್ಯವಾಗಬಹುದೆಂದೂ ಬರಿಯ ಶಬ್ದಾಲಂಕಾರದಿಂದ ಆಗುವುದಾದರೆ ಅಧಮಕಾವ್ಯವಾಗುವುದೆಂದೂ ಅಭಿಪ್ರಾಯಪಡುತ್ತಾರೆ.[5] ಆದರೆ ನವೀನರು ಪ್ರಾಧಾನ್ಯವನ್ನು ಹೇಳುವ ಧ್ವನ್ಯಾದಿಗಳನ್ನು ಪ್ರಾಚೀನರು ಅಲಂಕಾರಗಳಲ್ಲಿ ಸೇರಿಸಿಬಿಡುತ್ತಿದ್ದರು. ಆದ್ದರಿಂದ ನವೀನರು ಅಲಂಕಾರಲಕ್ಷಣವನ್ನು ಹೇಳುವಾಗ ಅಲಂಕಾರವೂ (ವಸ್ತ್ವಲಂಕಾರ) ಧ್ವನಿಯಾಗಿರಕೂಡದೆಂದೂ ಪ್ರತಿಪಾದಿಸುವರು.

ಕಾವ್ಯಲಕ್ಷಣವನ್ನು ಹೇಳುವಾಗ ಅಲಂಕಾರಕ್ಕೆ ಸರ್ವಾತ್ಮನಾ ಪ್ರಾಶಸ್ತ್ಯಕೊಡದಿದ್ದರೂ ನವೀನರು ತಮ್ಮ ಗ್ರಂಥಗಳಲ್ಲಿ ಅದರ ಪ್ರತಿಪಾದನಕ್ಕೆ ಯಥೇಚ್ಛವಾದ ಅವಕಾಶವನ್ನು ಕೊಡುತ್ತಾರೆ. ಕೆಲವರು ಕಾವ್ಯದ ಇತರಾಂಶಗಳನ್ನು ಬಿಟ್ಟು ಬರಿಯ ಅಲಂಕಾರದ ಮೇಲೆ ವಿಸ್ತಾರವಾದ ಗ್ರಂಥಗಳನ್ನು ಬರೆದಿದ್ದಾರೆ. ಅಲ್ಲದೆ ಅರ್ವಾಚೀನರಾದ ಹಾಗೆಲ್ಲಾ ಅವರು ಹೇಳುವ ಅರ್ಥಾಲಂಕಾರಗಳ ಸಂಖ್ಯೆಯೂ ಅವುಗಳ ಸೂಕ್ಷ್ಮ ವಿಭೇದಗಳೂ ವಿಚಾರಗಳೂ ಹೆಚ್ಚಾಗುತ್ತ ಹೋಗುತ್ತವೆ.

ಹೀಗೆ—

ಸಂಸ್ಕೃತದಲ್ಲಿ:

| | |
|---|---|
| ಭರತನು ಹೇಳಿರುವವು | ೪ |
| ದಂಡಿ, ಭಾಮಹ, ಉದ್ಭಟ, ವಾಮನ | ೩೫ |
| ರುದ್ರಟ, ಮಮ್ಮಟ | ೬೦ |
| ಚಂದ್ರಾಲೋಕ | ೧೦೦ |
| ಕುವಲಯಾನಂದ | ೧೨೦ |

---

3. ಉಪಕುರ್ವಂತಿ ತಂ ಸಂತಂ ಯೇಽಂಗದ್ವಾರೇಣ ಜಾತುಚಿತ್ ।
ಹಾರಾದಿವದಲಂಕಾರಾಃ ತೇಽನುಪ್ರಾಸಾದಯೋ ಮತಾಃ ॥
ಯತ್ರ ರಸಸ್ಯ ಸಂಭವಃ ತತ್ರ ತಮುಪಕುರ್ವಂತಿ ; ಯತ್ರ ತಸ್ಯಾಸಂಭವಃ ತತ್ರೋಕ್ತಿವೈಚಿತ್ರ್ಯಮಾತ್ರಪರ್ಯವಸಿತಾಃ ॥ —ಕಾವ್ಯಪ್ರಕಾಶ

4. ಅಲಂಕಾರಸಹಸ್ರೈಃ ಕಿಂ ಗುಣೋ ಯದಿ ನ ವಿದ್ಯತೇ ।
ವಿಕ್ರೀಯಂತೇ ನ ಘಂಟಾಭಿಃ ಗಾವಃ ಕ್ಷೀರವಿವರ್ಜಿತಾಃ ॥
—ಅಲಂಕಾರಶೇಖರ, ಪುಟ ೨೦
ವಪುಷ್ಯಲಲಿತೇ ಸ್ತ್ರೀಣಾಂ ಹಾರೋ ಭಾರಾಯತೇ ಪರಂ॥—ಅಗ್ನಿಪುರಾಣ, I,೮೪೬

5. ಇದಱೊಳೆತ್ತಾನುಮೊಂದುಬಱಿಯೊಳಲಂಕಾರಮಲ್ಲದೊಡಂ ಕೊಱತೆಯಿಲ್ಲ.
—ಅಪ್ರತಿಮವೀರಚರಿತ. ಪುಟ ೪

ಕನ್ನಡದಲ್ಲಿ :

| | |
|---|---|
| ನೃಪತುಂಗ, ಉದಯಾದಿತ್ಯ, ಮಾಧವ | ೩೫ |
| ನಾಗವರ್ಮ | ೬೦ |
| ತಿರುಮಲಾರ್ಯ | ೧೨೦ |

ಸಂಸ್ಕೃತದಲ್ಲಿ ಕುವಲಯಾನಂದ, ಸಾಹಿತ್ಯದರ್ಪಣ, ಅಲಂಕಾರ ಸರ್ವಸ್ವಗಳನ್ನೂ, ಕನ್ನಡದಲ್ಲಿ ಕವಿರಾಜಮಾರ್ಗ, ಕಾವ್ಯಾವಲೋಕನ, ಅಪ್ರತಿಮವೀರ ಚರಿತಗಳನ್ನೂ ತೆಗೆದುಕೊಂಡು ನೋಡಿದರೆ ಇವುಗಳಲ್ಲಿ ಎಲ್ಲವೂ ಅಥವಾ ಬಹುಗ್ರಂಥಗಳು ಹೇಳತಕ್ಕ ಅಲಂಕಾರಗಳು ಸುಮಾರು ಮೂವತ್ತೈದು ಮಾತ್ರವಾಗುತ್ತವೆ. ಮಿಕ್ಕವುಗಳಲ್ಲಿ ಸುಮಾರು ಇಪ್ಪತ್ತೈದನ್ನು ನವೀನಾಲಂಕಾರಿಕರಲ್ಲಿ ಯಾರೋ ಒಬ್ಬಿಬ್ಬರು ಮಾತ್ರ ಹೇಳುತ್ತಾರೆ; ರಸವದಾದಿ ಏಳು ಅಲಂಕಾರಗಳೂ ಪ್ರತ್ಯಕ್ಷಾದಿ ಎಂಟು 'ಪ್ರಮಾಣಾಲಂಕಾರ'ಗಳೂ ವಸ್ತುತಃ ಅಲಂಕಾರಗಳೇ ಅಲ್ಲ; ಪ್ರಾಚೀನರು ರಸಭಾವಗಳಿಗೆ ಕಾವ್ಯದಲ್ಲಿ ಪ್ರಧಾನಸ್ಥಾನವನ್ನು ಕೊಡದಿದ್ದದ್ದರಿಂದ ಅವರು ಅವನ್ನೂ, ಅವುಗಳ ವಿಶೇಷಗಳನ್ನೂ ವೈಚಿತ್ರ್ಯಗಳನ್ನೂ ಅಲಂಕಾರದಲ್ಲಿ ಸೇರಿಸುವುದು ನ್ಯಾಯವಾಗಿತ್ತು; ಆದರೆ ನವೀನರ ಮತದಲ್ಲಿ ರಸಕ್ಕೆ ಪ್ರಧಾನಸ್ಥಾನವೇ ಬಂದಿರುವುದರಿಂದ 'ರಸಾಲಂಕಾರಗಳು' ಉಪಮಾದಿ ಉಕ್ತಿವೈಚಿತ್ರ್ಯಗಳ ಜೊತೆಗೆ ಸೇರತಕ್ಕವುಗಳಲ್ಲ; ಪ್ರಮಾಣಾಲಂಕಾರ' ಗಳಲ್ಲಿ ಮೊದಲು ಕಾರಣಾಲಂಕಾರ ಮಾತ್ರವಿದ್ದು ಆಮೇಲೆ ನಾನಾ ದರ್ಶನಗಳಲ್ಲಿ ಕಂಡುಬರುವ ಅನುಮಾನ ಪ್ರತ್ಯಕ್ಷ ಮುಂತಾದ ಪ್ರಮಾಣಗಳೆಲ್ಲವೂ ಅಲಂಕಾರಕೋಟಿಗೆ ಸೇರಿದ ಹಾಗೆ ತೋರುತ್ತದೆ; ಇವುಗಳ ವೈಚಿತ್ರ್ಯವು, ನ್ಯಾಯವಾಗಿ ನೋಡಿದರೆ, ಕಾವ್ಯಸೌಂದರ್ಯ ಜನಕವಲ್ಲ; ಆದರೆ ಒಳ್ಳೆಯ ಕವಿಯ ಕೈಗೆ ಸಿಕ್ಕಿದರೆ ಅವನು ನೀರಸವಾದದ್ದನ್ನು ಸರಸಮಾಡಬಲ್ಲನು, ವಿಕಾರವಸ್ತುವನ್ನು ಸುಂದರಮಾಡಬಲ್ಲನು ಎಂಬುದನ್ನು ನಾವು ಜ್ಞಾಪಕದಲ್ಲಿಡಬೇಕು. ಅಂಥವನು ಹೊಸದಾಗಿ ಅಲಂಕಾರಗಳನ್ನು ಕಲ್ಪಿಸಲೂ ಬಲ್ಲನು; ಅಲಂಕಾರಗಳು ಬೆಳೆಯುವುದಕ್ಕೆ ಇದು ಒಂದು ಬಲವಾದ ಕಾರಣ. ಆದರೆ ಸಾಹಿತ್ಯವು ಪ್ರೌಢವಾಗಿ ಸ್ವಲ್ಪ ದೂರ ಬೆಳೆದ ಮೇಲೆ ಇಂಥವೂ ಹೆಚ್ಚಾಗಿರುವುದಿಲ್ಲ. ಶಾಸ್ತ್ರವನ್ನು ಪರಿಷ್ಕಾರಮಾಡಬೇಕೆಂಬ ಭಾವದಿಂದಲೂ ತಮ್ಮ ಪ್ರಜ್ಞೆ ವಿದ್ವತ್ತುಗಳನ್ನು ತೋರುವ ಸಲುವಾಗಿಯೂ ಶಾಸ್ತ್ರಕಾರರು ವೈಲಕ್ಷಣ್ಯ ವ್ಯತ್ಯಾಸಗಳನ್ನು ಹಿಡಿಯುತ್ತ, ಚರ್ಚಿಸುತ್ತ, ಹೊಸ ಹೊಸ ಅಲಂಕಾರಗಳನ್ನು ಹೆಸರಿಸುತ್ತ ಹೋಗುತ್ತಾರೆ. ಆದರೆ ಪರಸ್ಪರ ಸೂಕ್ಷ್ಮ ವ್ಯತ್ಯಾಸವಿದ್ದ ಮಾತ್ರಕ್ಕೇ ಒಂದೊಂದು ಹೊಸ ಹೊಸ ಅಲಂಕಾರವನ್ನು ಕಲ್ಪಿಸುತ್ತಾ ಹೋದರೆ ಅವಕ್ಕೆ ಕೊನೆಯೆಲ್ಲಿ ? ಆದ್ದರಿಂದ ತಕ್ಕಮಟ್ಟಿಗಾದರೂ ಪ್ರಸಿದ್ಧವಾಗಿದ್ದು ಎಲ್ಲಾ ಅಲಂಕಾರಿಕರೂ ಹೇಳಿರುವ ಮತ್ತು ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಕಾಣಬಹುದಾದ ಅಲಂಕಾರಗಳನ್ನು

ಮಾತ್ರ ಮುಂದೆ ವಿವರಿಸಿದೆ. ಹೆಚ್ಚಿನ ವಿವರ ವಿಚಾರಗಳನ್ನು ಅಪ್ರತಿಮವೀರಚರಿತ, ಕುವಲಯಾನಂದ, ರಸಗಂಗಾಧರ ಮುಂತಾದ ಗ್ರಂಥಗಳಿಂದ ತಿಳಿಯಬಹುದಾಗಿದೆ.

ಅಲಂಕಾರಗಳು ಹೆಚ್ಚಿದಮೇಲೆ ಅವುಗಳನ್ನು ಯಾವುದಾದರೂ ಒಂದು ಕ್ರಮ ವರಿತು ವಿಭಾಗಮಾಡುವುದು ಆವಶ್ಯಕವಾಯಿತು. ಆದ್ದರಿಂದ ದಂಡಿ ಭಾಮಹ ಉದ್ಭಟರು ಶಬ್ದಾಲಂಕಾರ ಅರ್ಥಾಲಂಕಾರ ಎಂಬ ಭೇದವನ್ನು ಮನಸ್ಸಿನಲ್ಲಿಟ್ಟು ಕೊಂಡು ಅಲಂಕಾರಗಳನ್ನು ಪ್ರತಿಪಾದಿಸಿದ್ದಾರೆ. ಈ ಭೇದವನ್ನು ಸ್ಪಷ್ಟವಾಗಿ ಹೇಳಿ ರುವವನು ವಾಮನ. ಅವನಿಂದ ಮುಂದೆ ರುದ್ರಟ ಮಮ್ಮಟಾದಿಗಳೆಲ್ಲಾ ಇದನ್ನು ಅನುಸರಿಸುತ್ತಾರೆ. ಅಗ್ನಿಪುರಾಣ ಸರಸ್ವತೀಕಂಠಾಭರಣಗಳಲ್ಲಿ ಶಬ್ದಾರ್ಥಾಲಂಕಾರ (ಅಥವಾ ಉಭಯಾಲಂಕಾರಗಳೂ) ಉಂಟೆಂದು ಉಕ್ತವಾಗಿದೆ. ಇಂಥವುಗಳಲ್ಲಿ ಶಬ್ದ ಪ್ರಾಶಸ್ತ್ಯವಿರುವ ಕಡೆ ಶಬ್ದಾಲಂಕಾರವೆಂದೂ ಅರ್ಥಪ್ರಾಶಸ್ತ್ಯವಿರುವ ಕಡೆ ಅರ್ಥಾ ಲಂಕಾರವೆಂದೂ ಹೇಳುವುದು ರೂಢಿಯಾಗಿದೆ. ಈ ತರ್ಕವನ್ನೇ ಅವಲಂಬಿಸಿ ಉಭಯ ಪ್ರಾಶಸ್ತ್ಯವಿರುವ ಕಡೆ ಉಭಯಾಲಂಕಾರವನ್ನೂ ಒಪ್ಪಬಹುದು. ಮಮ್ಮಟನ ಮತ ದಲ್ಲಿ "ಪರಿವೃತ್ತಿಸಹತ್ವ" ವೇ ನಿರ್ಣಾಯಕ; ಎಂದರೆ, ಯಾವುದಾದರೂ ಒಂದು ಕಡೆ; ಇರುವ ಪದಗಳನ್ನು ಬದಲಾಯಿಸಿ ಅದೇ ಅರ್ಥ ಕೊಡುವ ಬೇರೆ ಪದಗಳನ್ನು ಹಾಕಿ ದಾಗ ಅಲ್ಲಿದ್ದ ಅಲಂಕಾರವು ಹೋಗಿಬಿಟ್ಟರೆ ಅದು ಶಬ್ದಾಲಂಕಾರಕ್ಕೆ ಗುರುತು, ಆಗಲೂ ಹಾಗೇ ಉಳಿದರೆ ಅದು ಅರ್ಥಾಲಂಕಾರಕ್ಕೆ ಗುರುತು.

ಶಬ್ದಾಲಂಕಾರಗಳ ಸಂಖ್ಯೆ ಅರ್ಥಾಲಂಕಾರಗಳ ಸಂಖ್ಯೆಗಿಂತ ಯಾವಾಗಲೂ ಕಡಮೆ. ಅದರಲ್ಲಿಯೂ ಪ್ರಾಚೀನರಿಗಿಂತ ರಸಪ್ರಾಧಾನ್ಯವಾದಿಗಳಾದ ನವೀನರು ಅವು ಗಳನ್ನು ಪ್ರತಿಪಾದಿಸುವುದು ಕಡಮೆ.[6] ಏಕೆಂದರೆ ಅವುಗಳಿಂದ ಒಂದು ವಿಧವಾದ ವೈಚಿತ್ರ್ಯಸಂಪಾದನೆಯಾಗುವುದಾದರೂ ಅದರ ಮೇಲೆಯೇ ಗಮನವು ನಿಂತು ರಸಾ ಸ್ವಾದನಕ್ಕೆ ಅಡ್ಡಿಯಾಗಿ ಕಾವ್ಯೋದ್ದೇಶಕ್ಕೆ ಭಂಗ ಬರಬಹುದು.

ವಾಮನನು ಅರ್ಥಾಲಂಕಾರಗಳೆಲ್ಲವೂ ಉಪಮಾಮೂಲಕವೆಂದು ಹೇಳಿ ಅವುಗಳನ್ನು 'ಉಪಮೆ' 'ಉಪಮಾಪ್ರಪಂಚ' ಎಂದು ಎರಡು ಭಾಗಮಾಡಿದ್ದಾನೆ. ಮಿಕ್ಕ ಅಲಂಕಾರಗಳಲ್ಲಿ ಪೂರ್ಣಾಲಂಕಾರಗಳಾಗುವಷ್ಟು ಸೌಂದರ್ಯಸಂಪತ್ತು ಇಲ್ಲವೆಂಬುದು ಅವನ ಅಭಿಪ್ರಾಯವಾಗಿರುವಂತೆ ತೋರುತ್ತದೆ.[7] ಇದರಿಂದ

---

6 ಸರಸ್ವತೀಕಂಠಾಭರಣದಲ್ಲಿ ೨೪ ಶಬ್ದಾಲಂಕಾರಗಳು ಉಕ್ತವಾಗಿವೆ. ಶಬ್ದಾಲಂಕಾರ ಗಳನ್ನು ಇದಕ್ಕಿಂತ ಹೆಚ್ಚಾಗಿ ಇನ್ನೆಲ್ಲಿಯೂ ಹೇಳಿದಹಾಗಿಲ್ಲ.

7 ಸಂಪ್ರತ್ಯರ್ಥಾಲಂಕಾರಾಣಾಂ ಪ್ರಸ್ತಾವಃ। ತನ್ಮೂಲಂ ಚೋಪಮೇತಿ ಸೈವ
ಅಲಂಕಾರೈಕದೇಶಾ ಯೇ ಮತಾಃ ಸೌಭಾಗ್ಯದಾಯಿನಃ। [ವಿಚಾರ್ಯತೇ....
ತೇಽಪ್ಯಲಂಕಾರದೇಶೀಯಾಃ ಯೋಜನೀಯಾಃ ಕವೀಶ್ವರೈಃ॥

—ಕಾವ್ಯಾಲಂಕಾರಸೂತ್ರವೃತ್ತಿ

ಇತರರು ಹೇಳಿರುವ 'ಪರ್ಯಾಯೋಕ್ತಿ' 'ಸೂಕ್ಷ್ಮ' ಮುಂತಾದ ಕೆಲವು ಅಲಂಕಾರಗಳು ವಾಮನನಲ್ಲಿ ಗಣನೆಗೆ ಬರುವುದಿಲ್ಲ. 'ವಕ್ರೋಕ್ತಿ' 'ವಿಶೇಷೋಕ್ತಿ' ಮುಂತಾದ ಕೆಲವು ಅಲಂಕಾರಗಳಿಗೆ ಅವನು ಹೇಳುವ ಲಕ್ಷಣಗಳೂ ಇತರರು ಹೇಳುವ ಲಕ್ಷಣಗಳೂ ಬೇರೆ ಬೇರೆಯಾಗುತ್ತವೆ. ಹೀಗೆಯೇ ಇತರ ಆಲಂಕಾರಿಕರಿಗೂ ಅಲಂಕಾರಗಳಿಗೆ ಹೆಸರು ಕೊಡುವುದರಲ್ಲಿಯೂ ಲಕ್ಷಣ ಹೇಳುವುದರಲ್ಲಿಯೂ ಅಲ್ಲಲ್ಲಿ ವ್ಯತ್ಯಾಸ[1] ಬರುವುದುಂಟು.

ಸಾದೃಶ್ಯಮೂಲಕವಲ್ಲದೆ ಇರುವ ಅರ್ಥಾಲಂಕಾರಗಳೂ ಎಷ್ಟೋ ಇರುವುದ ರಿಂದ ವಾಮನಮತವನ್ನು ಒಪ್ಪದೆ ರುದ್ರಟನು ೧. ವಾಸ್ತವ, ೨. ಔಪಮ್ಯ, ೩. ಅತಿಶಯ, ೪. ಶ್ಲೇಷ—ಇವುಗಳನ್ನು ಅನುಸರಿಸಿ ವಿಭಾಗಮಾಡುತ್ತಾನೆ. ನಾಗವರ್ಮನೂ ಈ ಕ್ರಮವನ್ನೇ ಹಿಡಿದಿದ್ದಾನೆ. ಆದರೆ ಕಾವ್ಯಪ್ರಕಾಶದಲ್ಲಿ ಯಾಗಲಿ, ಕುವಲಯಾನಂದದಲ್ಲಿಯಾಗಲಿ, ಅದನ್ನು ಅನುಸರಿಸಿರುವ ಅಪ್ರತಿಮ ವೀರಚರಿತದಲ್ಲಾಗಲಿ ಯಾವ ವಿಭಾಗ ಕ್ರಮವೂ ಕಂಡುಬರುವುದಿಲ್ಲ. ಅಲಂಕಾರ ಸರ್ವಸ್ವಕಾರನಾದ ರುಯ್ಯಕನು ಮೇಲೆ ಹೇಳಿದ ವಿಭಾಗಗಳಿಂದಲೂ ತೃಪ್ತನಾಗದೆ ೧. ಔಪಮ್ಯ, ೨. ವಿರೋಧ, ೩. ಶೃಂಖಲಾ, ೪. ನ್ಯಾಯ, ೫. ಗೂಢಾರ್ಥ ಪ್ರತೀತಿ—ಇವುಗಳ ಮೇಲೆ ಅರ್ಥಾಲಂಕಾರಗಳನ್ನು ವಿಂಗಡಿಸುತ್ತಾನೆ. ಸಾಹಿತ್ಯ ದರ್ಪಣಕಾರನು ಈ ವಿಭಾಗಕ್ರಮವನ್ನೇ ಇಟ್ಟುಕೊಂಡು ನ್ಯಾಯದಲ್ಲಿ ವಾಕ್ಯ ನ್ಯಾಯ, ತರ್ಕನ್ಯಾಯ, ಲೋಕನ್ಯಾಯ, ಎಂದು ಮೂರು ಒಳಭೇದಗಳನ್ನು ಕಲ್ಪಿಸುತ್ತಾನೆ. ಪ್ರತಾಪರುದ್ರೀಯದಲ್ಲಿ ಇವುಗಳೂ ಸಾಲದೆ ೬. ಅಧ್ಯವಸಾಯ ಮೂಲಕ, ೭. ವಿಶೇಷ ವೈಚಿತ್ರ್ಯಮೂಲಕ—ಎಂದು ಮತ್ತೆರಡು ಪಂಗಡಗಳು ಉಕ್ತವಾಗಿವೆ. ಇಷ್ಟಾದರೂ ಎಲ್ಲಾ ಅಲಂಕಾರಗಳೂ ಒಂದಲ್ಲದಿದ್ದರೆ ಮತ್ತೊಂದು ಪಂಗಡದ ಕೆಳಗೆ ಬರಲಾರದೆ 'ಸಂಕೀರ್ಣ' 'ಅನಿರ್ದಿಷ್ಟ'ವೆಂಬ ಮತ್ತೊಂದು ಗುಂಪು ಇದ್ದೇ ಇರಬೇಕಾಗುತ್ತದೆ; ಒಂದೇ ಅಲಂಕಾರವು ಎರಡು ಮೂರು ಕಡೆ ಬರಬೇಕಾಗುತ್ತದೆ; ವಿಭಾಗ ಕ್ರಮದಲ್ಲಿ ಭಿನ್ನಾಭಿಪ್ರಾಯವೂ ಸಂದೇಹವೂ ಚರ್ಚೆಯೂ ಉಂಟಾಗುತ್ತದೆ; ಹೀಗೆ ಒಂದು ವಿಭಾಗದ ಪ್ರಕಾರ 'ಸ್ವಭಾವೋಕ್ತಿ' ಗೂಢಾರ್ಥಪ್ರತೀತಿಯ ಕೆಳಗೆ ಬರುತ್ತದೆ. 'ಸ್ವಭಾವೋಕ್ತಿ'ಯಲ್ಲಿ ಗೂಢಾರ್ಥವೇನು ಬಂತು ?

ವಿಷಯವು ಸುಲಭವಾಗಿ ಗ್ರಹಿಕೆಯಾಗಬೇಕೆಂಬುದು ವಿಭಾಗಮಾಡುವುದರ ಉದ್ದೇಶ; ಆ ವಿಭಾಗಕ್ರಮವು ವಿಸ್ತಾರವೂ ಗಹನವೂ ಆಗಿಬಿಟ್ಟರೆ ಉದ್ದೇಶ ಭಂಗವಾಗುತ್ತದೆ; ಆದ್ದರಿಂದ ಮುಂದೆ ಕೇವಲ ಸೂಕ್ಷ್ಮವಾದ ಪ್ರಾಚೀನ

---

1. ಉದಾ.—ವಾಮನನು ಹೇಳುವ 'ಆಕ್ಷೇಪ'ವು ನವೀನರ 'ಪ್ರತೀಪ'ಕ್ಕೆ ಸರಿಹೋಗು ತ್ತದೆ.

ಮಾರ್ಗವನ್ನು ಹಿಡಿಯದೆ, ಅತಿ ವಿಸ್ತರವಾದ ನವೀನಮಾರ್ಗವನ್ನು ಹಿಡಿಯದೆ, ಹೊಸದೊಂದನ್ನು ಕಲ್ಪಿಸದೆ, ರುಯ್ಯಕನೂ ವಿಶ್ವನಾಥನೂ ಅನುಸರಿಸಿರುವ ವಿಭಾಗಕ್ರಮವನ್ನು ಹಿಡಿದು, ಸಾಧಾರಣವಾಗಿ ಕುವಲಯಾನಂದಕಾರನ ಮತಾನುಸಾರವಾಗಿ, ಅಲಂಕಾರಗಳನ್ನು ನಿರೂಪಿಸಿದೆ.

## ೧೨. ಶಬ್ದಾಲಂಕಾರಗಳು

ಶಬ್ದಾಲಂಕಾರಗಳಲ್ಲಿ ೧. 'ಅನುಪ್ರಾಸ', ೨. 'ಯಮಕ', ೩. '**ಚಿತ್ರ ಕವಿತ್ವ**' ಎಂದು ಮುಖ್ಯವಾಗಿ ಮೂರು ವಿಧ; ಅಕ್ಷರಗಳ 'ಆವೃತ್ತಿ'ಯೇ ಅನುಪ್ರಾಸ; 'ಅನುಪ್ರಾಸ'ದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದಕ್ಕೆ 'ವೃತ್ತ್ಯನುಪ್ರಾಸ'ವೆಂದೂ, ಎರಡು ಅಕ್ಷರಗಳು ಜತೆಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದೂ ಹೆಸರು.

### 1. ಅನುಪ್ರಾಸ.

1. **ವೃತ್ತ್ಯನುಪ್ರಾಸಕ್ಕೆ**[1] :

ಲಕ್ಷ್ಯ

ಕರವೆಸೆದ**ತ್ತು** ಕೌಮುದಿಯ ಬಿ**ತ್ತು** ಚಕೋರಿಯ ತು**ತ್ತು** ನೀರಜೋ
ತ್ಕರದ ವಿಪ**ತ್ತು** ತಾರೆಗಳ ತು**ತ್ತು** ಸುಧಾಂಬುಧಿಯೊ**ತ್ತು** ಮತ್ತಮಂ।
ಬರದ ಪುಳಿಂದಿ ತಾಳ್ದೆಸೆವ ಮೂಗಿನ ಮು**ತ್ತು** ಮಗುಟ್ದು ನೋಡಲ
ಚ್ಚರಿಯೆನೆಸಿ**ತ್ತು** ಮೂಡವೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ।

**ಎಳಗಿಳಿಗಳ ಬಳಗಂ ಗಳ**
**ಗಳ**ನಿಳಿತಂದೆಳಸಿ ಬಳಸಿ ಸುಳಿದೊಳವು**ಗು**ತುಂ।
ನಳನಳಿಸಿ ಬೆಳೆದು **ಕಳಿ**ಯದ
**ಕಳವೆ**ಯ **ಕಣಿ**ಶಂಗ**ಳಂ ಕರಂ** ಖಂಡಿಸು**ಗುಂ**॥

2. **ಛೇಕಾನುಪ್ರಾಸಕ್ಕೆ**[2] :

ಲಕ್ಷ್ಯ

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡಮಂಜನಕ್ಕ**ನೋಡಂ ನೋಡಂ**।
ಚಲದಿಂ **ಕಾಡಂ ಕಾಡಂ**
ಸಲೆ ಪಸಿವಂ ಮಱೆದು ತಣಿದು **ಬೇಡಂ ಬೇಡಂ**॥

1 ಏಕ ದ್ವಿ ಪ್ರಭೃತೀನಾಂ ತು ವ್ಯಂಜನಾನಾಂ ಯದಾ ಭವೇತ್ ।
ಪುನರುಕ್ತಿರಸೌ ನಾಮ ವೃತ್ತ್ಯನುಪ್ರಾಸ ಇಷ್ಯತೇ ॥

2 ಭವೇದವ್ಯವಧಾನೇನ ದ್ವಯೋರ್ವ್ಯಂಜನಯುಗ್ಮಯೋಃ ।
ಆವೃತ್ತಿರ್ಯತ್ರ ಸ ಬುಧೈಃ ಛೇಕಾನುಪ್ರಾಸ ಇಷ್ಯತೇ ॥

## 2. ಯಮಕ.[3]

ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ ಪದಭಾಗವೋ ಒಂದು ಪದ್ಯದ ಆದಿ ಮಧ್ಯ ಅಂತ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು.

ಲಕ್ಷ್ಯ

**ಅಮಳ್ಗಳ್** ನಯವಿಕ್ರಮಗುಣ
**ದಮಳ್ಗಳ್** ನೃಪಶಾಸ್ತ್ರಶಸ್ತ್ರಪರಿಣತರವರಂ |
**ಸಮರ**ದೊಳುದಗ್ರಶೌರ್ಯಂ
**ಸಮರ**ಸಸಂಪನ್ನ ನಾವನುಜದಾಂಪನ್ನಂ ||

ತಱಿ **ಸಂದಿಸೆ** ಕರಿಘಟೆಯಂ
ತುಱುಗಿರೆ ಪಾಯ್ವುದು **ಶಿಲೀಮುಖಂ ಪುಷ್ಕರದೊಳ್** |
ಗಱಿ **ಸಂದಿಸೆ** ಮೊರೆದೊರ್ಗೊದ
ಲೆಱಗುವ ತೆಱದಿಂ **ಶಿಲೀಮುಖಂ ಪುಷ್ಕರದೊಳ್** ||

**ಎಳೆವಾಸೆ** ತೊಡರ್ದುದೆನೆ ಮಿಸು
**ಪೆಳೆವಾಸೆ**ಯದೆಸೆಯೆ ನಿಂದಳಂ ಕೈವಿಡಿದೊ |
**ಲ್ದೆಳೆವಾಸೆ**ಯಾಂತನಂಬುಜ
**ದೆಳೆವಾಸೆ**ಡೆಗೊಂಡ ಪುಳಿನದೆಡೆಗವನೀಶಂ ||

**ಕುವಲಯಕಧಿಪತಿಯಪ್ಪನೆ**
**ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ |**
**ಕುವಲಯಕಧಿಪತಿಯಪ್ಪನೆ**
**ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ||**

## 3. ಚಿತ್ರಕವಿತ್ವ.

ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ'ವೆಂದೂ ಹೆಸರು. ಇದನ್ನು ಶಬ್ದವೈಖರಿ, ಅಭ್ಯಾಸಬಲ, ಬುದ್ಧಿಸಾಮರ್ಥ್ಯ ಇವು ಇದ್ದಹಾಗೆಲ್ಲಾ ಕಲ್ಪಿಸಿ ರಚಿಸಬಹುದು ; ಆದ್ದರಿಂದ ಇವುಗಳಲ್ಲಿ ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ಹಾರಬಂಧ, ಮುರಜಬಂಧ ಮುಂತಾದ ನಾನಾವಿಧಗಳುಂಟು ; ಇವುಗಳಲ್ಲಿ ಎರಡಕ್ಕೆ ಮಾತ್ರ ಇಲ್ಲಿ ಉದಾಹರಣೆಗಳನ್ನು ಕೊಟ್ಟದೆ :

---

3. ಯಮಕಂ ಪೌನರುಕ್ತ್ಯೇ ತು ಸ್ವರವ್ಯಂಜನಯುಗ್ಮಯೋಃ |

(i) ತ್ರ್ಯಕ್ಷರಪದ್ಯ :

ನನ್ದನ ನನ್ದನ ನಿನ್ನೊ
ನ್ದನ್ದದ ಮೈ ಮುನ್ದೆ ನಿನ್ದುದೆನ್ದೆನೆ ಮುದದಿ ।
ನ್ದನ್ದಿನ್ದನ್ದೆನ್ನದೆ ನೀ
ನೆನ್ದಂ ಮನ್ಮನದೆ ನೆಮ್ಮಿನಿನ್ದೀಮುದಮಂ

(ii) ನಿರೋಷ್ಠ್ಯ :

ಧರಣೀನಾಯಕ ಕೇಳ್ ನಿಜಾಂಘ್ರಿಸರಸೀಜಾತಂಗಳಂ ಕಾಣಲಾ
ದರದಿಂ ಸಾಗರಚೇಲಧಾರಿಣಿಯನೆಲ್ಲಾ ಚೆಂದದಿಂ ಸಂತತಂ ।
ತಿರುಗಿ ಶ್ರೀಗೆ ನಿರಂತರಂ ನೆಲೆಯೆನಲ್ ಸಾರ್ದಿರ್ದ ಸಲ್ಲಕ್ಷಣಂ
ಸ್ಥಿರದಿಂದಿರ್ದ ಕಳಿಂಗದೇಶದೆಡೆಯಂ ಸಾರ್ದಂ ಸದಾನಂದದಿಂ ॥

ಮಿಕ್ಕವುಗಳಿಗೆ ಉದಾಹರಣೆಗಳನ್ನು ನೃಪತುಂಗನ 'ಕವಿರಾಜಮಾರ್ಗ' ಮುಂತಾದ ಗ್ರಂಥಗಳಲ್ಲಿ ನೋಡಬಹುದು.

# ೧೩. ಅರ್ಥಾಲಂಕಾರಗಳು

## 1. ಔಪಮ್ಯ ಮೂಲಕವಾದ ಅರ್ಥಾಲಂಕಾರಗಳು

### 1. ಉಪಮೆ.

ಎರಡು ವಸ್ತುಗಳಿಗೆ ಪರಸ್ಪರವಾಗಿ ಇರುವ ಸಾದೃಶ್ಯಸಂಪತ್ತನ್ನು ಹೇಳುವುದು ಉಪಮಾಲಂಕಾರ.[1] 'ಸಾದೃಶ್ಯಸಂಪತ್ತು' ಎಂದರೆ ಸುಂದರವಾದ ಸಾದೃಶ್ಯ. ಸುಂದರವಲ್ಲದ ಬರಿಯ ಸಾದೃಶ್ಯವಿದ್ದು ಅದನ್ನು ಹೇಳಿದ ಮಾತ್ರಕ್ಕೆ ಉಪಮಾಲಂಕಾರವಾಗುವುದಿಲ್ಲ. ಹೀಗೆ 'ನರಿ ನಾಯಿಯಹಾಗಿದೆ' ಎಂಬ ವಾಕ್ಯವು ಸಾದೃಶ್ಯವನ್ನು ಹೇಳುತ್ತಿದ್ದರೂ ಅದರಲ್ಲಿ ಸೌಂದರ್ಯವಿಲ್ಲದ್ದರಿಂದ ಉಪಮಾಲಂಕಾರವಾಗುವುದಿಲ್ಲ.

ಇದು ಪೂರ್ಣೋಪಮೆ, ಲುಪ್ತೋಪಮೆ ಎಂದು ಎರಡು ವಿಧ.

(1) **ಪೂರ್ಣೋಪಮೆ :**

ಲಕ್ಷ್ಯ

ಬಳಸಿ ಸುಳಿದಾಡಿ ಕಾಲ್ವಿಡಿ
ದೆಳಸಿ ಕಲಾಲಾಪಮೊದವೆ ಜನನಿಯ ಮೊಲೆವಾ ।
ಲ್ಗಳನುಣ್ಬ ಶಿಶುಗಳಂತಿರೆ
ಕಳವೆಯ ಪಾಲ್ದೆನೆಯ ಪಾಲನುಂಡವು ಗಿಳಿಗಳ್ ||

ಈ ಪದ್ಯದಲ್ಲಿ ಗಿಳಿಗಳೆಂಬ ಉಪಮೇಯವೂ ಶಿಶುಗಳೆಂಬ ಉಪಮಾನವೂ 'ಅಂತಿರೆ'[2] ಯೆಂಬ ಉಪಮಾವಾಚಕವೂ ಸಹ ಸ್ಪಷ್ಟವಾಗಿ ಉಕ್ತವಾಗಿರುವುದಲ್ಲದೆ ಶಿಶುಗಳಲ್ಲಿರುವ ಹಾಗೆಯೇ ಗಿಳಿಗಳಲ್ಲಿಯೂ ಕಂಡುಬರುವ ಬಳಸುವುದು ಸುಳಿದಾಡುವುದು ಹಾಲುಕುಡಿಯುವುದೇ ಮೊದಲಾದ ಸಾಧಾರಣ ಧರ್ಮಗಳೂ[3] ಸ್ಪಷ್ಟವಾಗಿ ಉಕ್ತವಾಗಿರುವುದರಿಂದ ಈ ಹೋಲಿಕೆ ಪೂರ್ಣೋಪಮೆ.

---

1. ಉಪಮಾ ಯತ್ರ ಸಾದೃಶ್ಯಲಕ್ಷ್ಮೀರುಲ್ಲಸತಿ ದ್ವಯೋಃ ||

2. ಇದರಂತೆಯೇ ಅಂತೆ, ಅಂತೆವೊಲ್, ಅಂತಿರೆವೊಲ್ ಮೊದಲಾದ ಅವ್ಯಯಗಳೂ ಪೋಲ್ ಮೊದಲಾದ ಧಾತುಗಳೂ, ವೊಲ್ ಮೊದಲಾದ ಪ್ರತ್ಯಯಗಳೂ, ಮಾಚ್ಕೆ, ತೆಱಂ ಮೊದಲಾದ ಪ್ರಕಾರವಾಚಕಗಳೂ ಸಾದೃಶ್ಯವನ್ನು ಸೂಚಿಸುತ್ತವೆ.

3. ಧರ್ಮವು ಒಂದು ಪದಾರ್ಥದ ಜಾತಿ ಗುಣ ಕ್ರಿಯಾದಿ ಸ್ವರೂಪವಾಗಿರುವುದು. ಈ ಧರ್ಮವು ಏಕಪದಾರ್ಥದಲ್ಲಿ ಮಾತ್ರವೇ ಇದ್ದಲ್ಲಿ ಆಗ್ಗೆ ಅದು ಆ ಪದಾರ್ಥದ ಅಸಾಧಾರಣ ಧರ್ಮವೆಂಬುದಾಗಿಯೂ ಒಂದಕ್ಕಿಂತ ಹೆಚ್ಚಾದ ಪದಾರ್ಥಗಳಲ್ಲಿ ಇದ್ದಲ್ಲಿ ಆಗ್ಗೆ ಆ ಎಲ್ಲಾ ಪದಾರ್ಥಗಳಿಗೂ ಅದು ಸಾಧಾರಣವಾದ ಧರ್ಮವೆಂಬುದಾಗಿಯೂ ಹೇಳಿಸಿಕೊಳ್ಳುವುದು. ಈ ಸಾಧಾರಣ ಧರ್ಮವಿದ್ದ ಹೊರತು ಒಂದನ್ನೊಂದಕ್ಕೆ ಹೋಲಿಸಲಾಗುವುದಿಲ್ಲ.

ಈ ಸಾಧಾರಣಧರ್ಮವು ಕೆಲವೆಡೆಯಲ್ಲಿ ಉಪಮಾನೋಪಮೇಯಗಳೆರಡಕ್ಕೂ ಒಂದೇ

## (2) ಲುಪ್ತೋಪಮೆ :

ಉಪಮಾನ ಉಪಮೇಯ ಸಾಧಾರಣಧರ್ಮ ವಾಚಕಶಬ್ದ ಇವುಗಳಲ್ಲಿ ಒಂದಾದರೂ ಕೆಲವಾದರೂ ಸ್ಪಷ್ಟವಾಗಿ ಉಕ್ತವಾಗದಿರುವ ಸಾದೃಶ್ಯಕ್ಕೆ ಲುಪ್ತೋಪಮೆಯೆಂದು ಹೆಸರು. ಇದು ಎಂಟು ವಿಧ ;[4] ಅವುಗಳಲ್ಲಿ ಕೆಲವಕ್ಕೆ ಮಾತ್ರ ಇಲ್ಲಿ ಲಕ್ಷ್ಯಗಳನ್ನು ತೋರಿಸಿದೆ :

(i) ಧರ್ಮಲುಪ್ತೋಪಮೆ :

ಅನಿಮಿಷಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌ
ವನದೆಸಕಂ ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀ |
ವನಮುದಬಿಂಬ ಭವಪ್ರಭವಜೀವಿಗೆ ನಿರ್ಮಲಧರ್ಮಮಾರ್ಗದೊಳ್
ಮನಮೊಸೆದಾಗಳುಂ ನಡೆಯವೇಟ್ಪುದು ವಿಶ್ವಮೃಗೇಂದ್ರವಲ್ಲಭಾ ||

ಇಲ್ಲಿ 'ಅಸ್ಥಿರತೆ' ಎಂಬ ಸಾಧಾರಣ ಧರ್ಮವು ಲುಪ್ತವಾಗಿದೆ.

(ii) ವಾಚಕಲುಪ್ತೋಪಮೆ :

"ಬಟುಕವಂ ಕಂಡನುತ್ಪಲದಳಶ್ಯಾಮಕೋಮಲತರಶರೀರನಂ . . . . . . . . . ಲಕ್ಷ್ಮೀಮನೋಹಾರನಂ."

ಇಲ್ಲಿ "ಉತ್ಪಲದಳದಂತೆ ಶ್ಯಾಮಕೋಮಲತಶರೀರ" ಎಂದು ಹೇಳದೆ 'ಅಂತೆ' ಎಂಬ ವಾಚಕವನ್ನು ಬಿಟ್ಟಿದೆ.

(iii) ಧರ್ಮೋಪಮೇಯ ಲುಪ್ತೋಪಮೆ :

ಎಳ್ಳನಿತು ನಿನ್ನ ಮಾತಂ ಕೇಳ್ವೆನೆಂದೆಣಕೆ
ಗೊಳ್ಳದಿರು ಪರಿಚರ್ಯೆ ಮನೆವಾಳ್ತೆಯೆಂದೆಂಬ
ತಳ್ಳಿಯವಳಲ್ಲ ನೀನೆಂದುದಂ ಮಾಡೆನೆಂದಾ ಚಂಡಿ ಚಂಡಿಗೊಳಲು |
ಮುಳ್ಳಿಡಿದ ಮರನೇಱಿದಂತಾದುದಿಹಪರಕೆ
ದೊಳ್ಳಿತಾದಪುದೆ ಬಂದುದು ತಪೋಹಾನಿಯೆಂ
ದಳ್ಳಿಯೊಳ್ ಕೋಲ್ಗೊಂಡ ತೆಱದೊಳುದ್ದಾಲಕಂ ಚಿಂತಿಪಂ
ಪ್ರತಿದಿನದೊಳು ||

---

ಆಗಿರುವುದು ; ಮತ್ತೆ ಕೆಲವೆಡೆ ಒಂದೇ ಆಗಿರದೆ 'ಬಿಂಬ ಪ್ರತಿಬಿಂಬ ಭಾವ'ದಿಂದ ಕಾಣುತ್ತಿರುವುದು. ಪರಸ್ಪರಸಾದೃಶ್ಯದಿಂದ ಅಭಿನ್ನವೆಂದು ಹೇಳಬಹುದಾದ ಭಿನ್ನ ಭಿನ್ನ ಧರ್ಮಗಳನ್ನು ಉಪಮಾನೋಪಮೇಯಗಳಲ್ಲಿ ಬೇರೆ ಬೇರೆಯಾಗಿ ಗ್ರಹಿಸಿರುವುದಕ್ಕೆ 'ಬಿಂಬ ಪ್ರತಿಬಿಂಬ ಭಾವ'ವೆಂದು ಪ್ರತೀತಿ.

[4] ವರ್ಣೋಪಮಾನಧರ್ಮಾಣಾಂ ಉಪಮಾವಾಚಕಸ್ಯ ಚ |
ಏಕ ದ್ವಿ ತ್ರ್ಯನುಪಾದಾನಾತ್ ಭಿನ್ನಾ ಲುಪ್ತೋಪಮಾಷ್ಟಧಾ ||

ಈ 'ಮುಳ್ಳಿಡಿದ ಮರನೇಱಿದಂತಾದುದು' ಎಂಬಲ್ಲಿ 'ಚಂಡಿಯನ್ನು ಮದುವೆ ಮಾಡಿಕೊಂಡದ್ದು' ಎಂಬ ಉಪಮೇಯವಾಗಲಿ 'ಹಿಂಸೆ ಕೊಡುವುದು' ಎಂಬ ಧರ್ಮವಾಗಲಿ ಉಕ್ತವಾಗಿಲ್ಲ.

(iv) ವಾಚಕಧರ್ಮಲುಪ್ತೋಪಮೆ :

'ಅಲರ್ಗಣ್' ಎಂಬಲ್ಲಿ 'ಅಲರಂತಿರ್ಪ ಕಣ್'='ಅಲರ್ಗಣ್' ಎಂಬುದಾಗಿ ವಿಗ್ರಹ. 'ಅಂತೆ' ಎಂಬ ಸಾದೃಶ್ಯವಾಚಕವು ಈ ವಿಗ್ರಹದಲ್ಲಿರುವುದೇ ಹೊರತು 'ಅಲರ್ಗಣ್' ಎಂಬ ಸಮಾಸಪದದಲ್ಲಿ ಕಾಣುವುದಿಲ್ಲ. ಆದ್ದರಿಂದ ಇಲ್ಲಿ ವಾಚಕ ಧರ್ಮಲುಪ್ತೋಪಮೆ.

(v) ವಾಚಕಧರ್ಮೋಪಮಾನಲುಪ್ತೋಪಮೆ :

'ಮರಾಳಗಮನೆ' ಎಂದರೆ ಮರಾಳದ ಗಮನದಂತೆ ಗಮನವುಳ್ಳವಳು ಎಂದರ್ಥ. ಈ ಅರ್ಥವನ್ನು ಕೊಡುವ ಮರಾಳಗಮನೆಯೆಂಬಲ್ಲಿ ಸಾದೃಶ್ಯ ವಾಚಕವೂ ಕಾಣುವುದಿಲ್ಲ. ಉಭಯಸಾಧಾರಣಧರ್ಮವೂ ಕಾಣುವುದಿಲ್ಲ. ಮತ್ತು ಹಂಸಪದವಿದ್ದರೂ ಹಂಸಗಮನವೆಂಬದಾಗಿರುವುದಿಲ್ಲವಾದಕಾರಣ ಉಪಮಾನವೂ ಕಾಣುವುದಿಲ್ಲವೆಂಬುದಾಗಿ ಹೇಳಬೇಕು. ಆದ್ದರಿಂದ ಇಲ್ಲಿ ವಾಚಕಧರ್ಮೋಪಮಾನ ಲುಪ್ತೋಪಮೆ.

## 2. ಅನನ್ವಯ.[5]

ಉಪಮಾನೋಪಮೇಯಭಾವಗಳೆರಡೂ ಒಂದರಲ್ಲಿಯೇ ಇದ್ದಲ್ಲಿ ಅನನ್ವಯಾ ಲಂಕಾರವೆನಿಸಿಕೊಳ್ಳುವುದು. ಹೋಲಿಕೆಗೆ ಎರಡು ಪದಾರ್ಥಗಳಿರಬೇಕು. ಆದ್ದರಿಂದ ತನ್ನೊಡನೆ ತನಗೆ ಹೋಲಿಕೆ ಘಟಿಸುವುದಿಲ್ಲ. ಹೀಗಿರುವುದರಿಂದಲೇ 'ಅನನ್ವಯ' ವೆಂಬ ಹೆಸರು ಅನ್ವರ್ಥವಾಗಿದೆ.

ಲಕ್ಷ್ಯ

ದೊರೆಗಾಣೆಂ ನಿನಗೆ ೩ನೇ
ಶ್ವರ ಪೆಱರಂ ನಿನಗೆ ನೀನೆ ದೊರೆಯೆನಿಪೈ ಮಂ ।
ದರಗಿರಿಗೆ ಮಂದರಾದ್ರಿಯೆ
ದೊರೆ ಜಲಧಿಗಗಾಧಜಲಧಿ ದೊರೆ ಪೆಱವೊಳವೇ ॥

## 3. ಉಪಮೇಯೋಪಮೆ.[6]

ಪರಸ್ಪರವಾಗಿ ಉಪಮಾನೋಪಮೇಯಭಾವವಿದ್ದಲ್ಲಿ ಉಪಮೇಯೋಪಮಾ

[5] ಏಕಸ್ಯೈವೋಪಮಾನೋಪಮೇಯತ್ವೇಽನನ್ವಯೋ ಮತಃ ॥
[6] ಪರ್ಯಾಯೇಣ ದ್ವಯೋಸ್ತಚ್ಚೇದುಪಮೇಯೋಪಮಾ ಮತಾ ॥

ಲಂಕಾರವೆನಿಸಿಕೊಳ್ಳುವುದು. ಇದು ಸದೃಶವಾದ ಮೂರನೆಯ ಪದಾರ್ಥವಿಲ್ಲವೆಂಬಂಶವನ್ನು ಪ್ರಕಾಶಪಡಿಸುವುದು. ಇದೇ ಅಲಂಕಾರವು ಅನ್ಯೋನ್ಯೋಪಮಾಲಂಕಾರವೆಂಬುದಾಗಿ ಕಾವ್ಯಾವಲೋಕನದಲ್ಲಿ ಉಕ್ತವಾಗಿರುವುದು.

ಲಕ್ಷ್ಯ

ಈ ಕಣ್ಗಾ ಕಣ್ ಆ ಕ
ಣ್ಗೀಕಣ್ ಎರಡರ್ಕಮೆರಡೆ ಪಡಿ ಮತ್ತಿಲ್ಲೀ ।
ಲೋಕವ್ಯವಹಾರದ ನುಡಿ
ಯೀಕಣ್ಗುಪಮಾನಮಿಲ್ಲಮಿನ್ನುಂ ಮುನ್ನುಂ ॥

## 4. ಪ್ರತೀಪ (ವಿಪರ್ಯಾಸೋಪಮೆ).[7]

ಉಪಮಾನವೆಂದು ಸುಪ್ರಸಿದ್ಧವಾಗಿರುವ ವಸ್ತುವನ್ನು ಉಪಮೇಯವಾಗಿ ಉಪಯೋಗಿಸುವುದು 'ಪ್ರತೀಪಾಲಂಕಾರ'. ಪ್ರತೀಪವೆಂದರೆ ಪ್ರತಿಕೂಲವಾಗಿರುವುದೆಂದು ಅರ್ಥ. ಉಪಮಾನವು ಉಪಮೇಯಕ್ಕಿಂತಲೂ ಅಧಿಕ ಗುಣಶಾಲಿಯಾಗಿರುವುದು. ಹೀಗೆ ಅಧಿಕಗುಣಶಾಲಿಯಾದ ಉಪಮಾನವು ಉಪಮೇಯವಾಗಿಯೂ ನ್ಯೂನಗುಣಶಾಲಿಯಾದ ಉಪಮೇಯವು ಉಪಮಾನವಾಗಿಯೂ ವರ್ಣಿತವಾದಲ್ಲಿ ಈ ವರ್ಣನೆ ಉಪಮಾನಕ್ಕೆ ಪ್ರತಿಕೂಲವಾದಂತಾಗುವುದು. ಇದನ್ನು 'ವಿಪರ್ಯಾಸೋಪಮೆ'ಯೆಂಬುದಾಗಿ ಕಾವ್ಯಾವಲೋಕನಕಾರನು ಹೇಳಿರುವನು.

ಲಕ್ಷ್ಯ

ಮೊಗಮುಂ ತಾವರೆ ಕಣ್ಣನುತ್ಪಲದಳಂ ಧಮ್ಮಿಲ್ಲಮುಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ವನಂಗಜನ ಬಿಲ್ ದಂತಾಳಿಯುಂ ಮುತ್ತು ಕೈ ।
ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿನಿಸ್ಸಾರ ವ
ಸ್ತುಗಳೊಳ್ ಪೋಲಿಸುವಂತುಟಾಂ ಮರುಳನೇ ರೂಪಂ ವಿಚಿತ್ರಾಂಗಿಯಾ ॥

ಕಣ್ಣು ಮೊದಲಾದವುಗಳು ಉತ್ಪಲದಳಾದಿಗಳನ್ನು ಹೋಲುವುದೆಂಬುದಾಗಿ ಹೇಳುವುದು ಲೋಕದಲ್ಲಿ ಪ್ರಸಿದ್ಧಿ. ಆದ್ದರಿಂದ ತಾವರೆ ಉತ್ಪಲ ಮೊದಲಾದವು 'ಪ್ರಸಿದ್ಧ ಉಪಮಾನ ವಸ್ತುಗಳು.' ಪ್ರಕೃತಪದ್ಯದಲ್ಲಿ ತಾವರೆ ಮೊದಲಾದವುಗಳೇ ಮುಖಾದಿಗಳನ್ನು ಹೋಲುವುವೆಂಬುದಾಗಿ ವರ್ಣಿತವಾಗಿವೆ.

---

[7] ಪ್ರತೀಪಮುಪಮಾನಸ್ಯೋಪಮೇಯತ್ವಪ್ರಕಲ್ಪನಂ ।
ವರ್ಣ್ಯೋಪಮೇಯಲಾಭೇನ ತಥಾನ್ಯಸ್ಯಾಪ್ಯನಾದರಃ ॥

ಉಪಮೇಯಕ್ಕೆ ಉಪಮಾನದ ಸಾದೃಶ್ಯವು ಬರುವುದಿಲ್ಲವೆನ್ನುವುದು ಮತ್ತೊಂದು ವಿಧವಾದ ಪ್ರತೀಪಾಲಂಕಾರ.

ಅರವಿಂದದ ಸಿರಿ ಮೇಣಿರು
ಳಿರುಳೆಱೆಯನ ಸಿರಿ ಸಿ ಪಗಲೊಳಿಱುಗುಮಿವೆರಡಂ |
ಸರಿಮಾಲ್ಪುದೆಂತೊ ಸಿರಿ ಬಂ
ದೆರವಿಲ್ಲದೆ ನೆಲಸಿ ನಿಂದ ತರಳೆಯ ಮೊಗದೊಳ್ ||

ಇಲ್ಲಿ ಅರವಿಂದಕ್ಕೆ ರಾತ್ರಿಯಲ್ಲಿಯೂ ಚಂದ್ರನಿಗೆ ಹಗಲಲ್ಲಿಯೂ ಕಾಂತಿಯಿಲ್ಲದಿರುವಾಗ ಯಾವಾಗಲೂ ಕಾಂತಿ ನೆಲಸಿ ನಿಂದ ತರಳೆಯ ಮುಖಕ್ಕೆ ಮೇಲೆ ಹೇಳಿದ ಅರವಿಂದವನ್ನೂ ಚಂದ್ರನನ್ನೂ "ಸರಿಮಾಲ್ಪುದೆಂತೊ" ಎಂಬುದಾಗಿ ಆಕ್ಷೇಪಿಸಿರುವುದರಿಂದ ಅರವಿಂದ ಚಂದ್ರಸಾದೃಶ್ಯವು ಬರುವುದಿಲ್ಲವೆಂದು ಹೇಳಿದಂತಾಗಿ ಬೇರೊಂದು ವಿಧವಾದ 'ಪ್ರತೀಪ'ವಾಗಿದೆ.

ಹಿಂದೆ ಹೇಳಿದ 'ಮೊಗಮಂ ತಾವರೆ ಕಣ್ಣಂ' ಎಂಬ ಪದ್ಯದಲ್ಲಿ 'ಸರೋಜಾತಾದಿ ನಿಸಾರವಸ್ತುಗಳಂ ಪೋಲಿಸುವಂತುಟಾಂ ಮರುಳನೇ' ಎಂಬಲ್ಲಿಯೂ ಇದೇ ಭೇದವನ್ನೇ ಹೇಳಬೇಕು.

## 5. ಪ್ರತಿವಸ್ತೂಪಮೆ.

ವರ್ಣ್ಯಾವರ್ಣ್ಯಪರವಾದ ವಾಕ್ಯಗಳು ಪ್ರತ್ಯೇಕ ಪ್ರತ್ಯೇಕನಾಗಿದ್ದು ಅವುಗಳಲ್ಲಿ ಸಮಾನಧರ್ಮವೂ ಪ್ರತ್ಯೇಕ ಪ್ರತ್ಯೇಕವಾಗಿ ಉಕ್ತವಾಗಿದ್ದರೆ ಪ್ರತಿವಸ್ತೂಪಮಾಲಂಕಾರವಾಗುವುದು. (ಪ್ರತಿವಾಕ್ಯದಲ್ಲಿಯೂ ಸಮಾನಧರ್ಮವಿರುವುದರಿಂದ ಪ್ರತಿವಸ್ತೂಪಮೆ ಎಂದು ಹೆಸರು.)

ಲಕ್ಷ್ಯ

ಕಡಲೊಳಗೊಂದೆರಡ್ ಜಲಕಣ ಪವನಾಹತಿಯಿಂ ವಿನಾಶಮಾ
ದೊಡೆ ಜಲರಾಶಿ ಕುಂದುಗುಮೆ ಮೇರೆಗೆ ದೂರಮೆನಿಪ್ಪ ನಮ್ಮ ಪೆ !
ರ್ಪಡೆ ಖರದೂಷಣರ್ ಕಟಿಯೆ ಕುಂದುಗುಮೇ ಕಪಿಚಿಹ್ನರಿಲ್ಲದೇಂ
ಕಿಡುವುದೊ ಭೂಚರರ್ ಧುರದೊಳಾಂಪರೆ ಖೇಚರಚಕ್ರವರ್ತಿಯಂ ||

ಇಲ್ಲಿ ಜಲರಾಶಿ ಅವರ್ಣ್ಯವಾಗಿಯೂ ರಾವಣನ ಸೈನ್ಯವು ವರ್ಣ್ಯವಾಗಿಯೂ ಇರುವುದು. ಈ ಅವರ್ಣ್ಯಪರವಾದ ವಾಕ್ಯದಲ್ಲಿಯೂ ವರ್ಣ್ಯಪರವಾದ ವಾಕ್ಯ

---

[8] ವಾಕ್ಯಯೋರೇಕಸಾಮಾನ್ಯೇ ಪ್ರತಿವಸ್ತೂಪಮಾ ಮತಾ ||

ದಲ್ಲಿಯೂ ಕೂಡ 'ಕುಂದುಗುವೆ' ಎಂಬುದು ಪ್ರತ್ಯೇಕವಾಗಿ ಬಂದು ಸಮಾನ ಧರ್ಮವು ಉಕ್ತವಾಗಿದೆ.

### 6. ವ್ಯತಿರೇಕ.[9]

ಉಪಮಾನೋಪಮೇಯಗಳ ವೈಲಕ್ಷಣ್ಯವರ್ಣನೆ ವ್ಯತಿರೇಕಾಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಮಂಜುಮುಹಿಮಾಸ್ಪದಂ ಚಾರುವೃತ್ತಂ ಕಲಾ
ಪುಂಜಂ ಸದಾನಭೋಗಂ ಕುವಲಯಪ್ರಿಯಂ
ರಂಜಿಸುವ ರಾಜನೆನ್ನವೊಲಾದೊಡಂ ಮಿತ್ರತೇಜಕಳವಱಿದು ಪಗೆಯ |
ಭಂಜನೆಗೆ ಸಿಲ್ಕಿ ಬಡತನವಟ್ಟು ಕಂದಿ ಪೞಿ
ವಂ ಜಗಮಱಿಯೆ ಪೊತ್ತನೆಂದು ಬಿಡದವ್ಯತಾರ್ಕಿ
ಯಂ ಜರೆದು ನಗುವನದಱಿಂ ಚಂದ್ರಹಾಸನಿವನಹನೆನೆ ಪೆಸರ್
ಮೆಱೆದುದು ||

ಇಲ್ಲಿ ಚಂದ್ರನು ಚಂದ್ರಹಾಸನಂತೆ ಇರುವನೆಂಬಂಶವು ಶ್ಲೇಷನಿರ್ದಿಷ್ಟವಾಗಿದೆ. ಹೀಗೆ ಸದೃಶನಾಗಿದ್ದರೂ ಚಂದ್ರನು ನಿಕೃಷ್ಟನೆನ್ನಿಸುವ ಕೆಲವು ಬೇರೆ ಧರ್ಮಗಳೂ ಕಾಣುತ್ತಿರುವುವು. ಅವೇನೆಂದರೆ ಚಂದ್ರನು ಮಿತ್ರನ ಪ್ರಾಬಲ್ಯದಿಂದ (ಸೂರ್ಯನ ತೇಜಸ್ಸಿನಿಂದ) ಪ್ರಾಬಲ್ಯಹೀನನಾದನು ; ಶತ್ರುವಿನ (ಶತ್ರುವಾದ ರಾಹುವಿನ) ಭಂಜನೆಗೆ ಸಿಕ್ಕಿದನು ; ಬಡತನವನ್ನು (ಕ್ಷೀಣತೆಯನ್ನು) ಹೊಂದಿದನು. ಕಾಂತಿಹೀನನಾದನು ; ಮತ್ತು ಶಾಪಗ್ರಸ್ತನೆಂಬ ನಿಂದೆಗೆ ಗುರಿಯಾದನು. ಹೀಗೆ ದೋಷವೆಂಬುದಾಗಿ ಹೇಳಬಹುದಾದ ಗುಣಗಳು ಚಂದ್ರಹಾಸನಲ್ಲಿ ಇಲ್ಲವಾದ ಕಾರಣದಿಂದ ಚಂದ್ರನಿಗೂ ಚಂದ್ರಹಾಸನಿಗೂ ಇರುವ ವೈಲಕ್ಷಣ್ಯವು ಸ್ಪಷ್ಟವಾಗಿರುವುದು. ಆದ್ದರಿಂದ ಇಲ್ಲಿ ವ್ಯತಿರೇಕಾಲಂಕಾರ.

### 7. ಸಮಯೋಗ.[10]

ಅನೇಕ ವರ್ಣ್ಯಗಳಿಗೆ (ಅಥವಾ ಅವರ್ಣ್ಯಗಳಿಗೆ) ಹೇಳಿರುವ ಧರ್ಮೈಕ್ಯವು ಸಮಯೋಗಾಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಅಂಬುಜಮುಂ ವಿಯೋಗಿವದನಾಂಬುಜಮುಂ ಕಳೆಗುಂದೆ ಕೂಡೆ ದು
ಗ್ಧಾಂಬುಧಿಯುಂ ಜನೋತ್ಸವಸುಧಾಂಬುಧಿಯುಂ ನೆಲೆವೆರ್ಚೆ ಕಾನ್ತಕಾ |

---

[9] ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯಯೋಃ |

[10] ವರ್ಣ್ಯಾನಾಮಿತರೇಷಾಂ ವಾ ಧರ್ಮೈಕ್ಯಂ ಸಮಯೋಗಿತಾ ||

ನ್ನಾಂಬಕಕ್ಕೈರವಂ ಧವಳಕ್ಕೈರವವುಂ ನಗೆಯೊಂದೆ ಬಂದುದಾ
ಲಂಬಿತರಾತ್ರಿರಮ್ಯರಮಣೀಮಣಿಕುಂಡಲವಿಂದುಮಂಡಲಂ ||

ಇಲ್ಲಿ ಚಂದ್ರೋದಯಕಾಲದಲ್ಲಿರುವ ಅಂಬುಜಾದಿಗಳು ವರ್ಣನೀಯವಾಗಿರುವುವು. ಹಾಗೆ ವರ್ಣನೀಯಗಳಾದ ಎರಡೆರಡು ಪದಾರ್ಥಗಳಿಗೆ ಕಳೆಗುಂದುವುದೇ ಮೊದಲಾದ ಏಕೈಕಧರ್ಮದಲ್ಲಿ ಸಂಬಂಧವಿರುವುದರಿಂದ ಇಲ್ಲಿ 'ಸಮುಯೋಗಾ'ಲಂಕಾರ.

## 8. ದೀಪಕ.[11]

ಪ್ರಸ್ತುತ ಮತ್ತು ಅಪ್ರಸ್ತುತ ವಸ್ತುಗಳಲ್ಲಿ ಒಂದೇ ಧರ್ಮವಿದೆ ಎಂದು ವರ್ಣಿಸಿದರೆ ಅದು ದೀಪಕಾಲಂಕಾರವಾಗುತ್ತದೆ.

ಲಕ್ಷ್ಯ

ಗಿಳಿವಱ್ ಮೆಱೆಯದ ನಂದನ
ಮಳಿಶಿಶು ವಿಹರಿಸದ ಪೂಗಳಂ ಕಳರವದಿಂ |
ದೆಳೆಯಂಚೆಯಡಿಯಿಡದ ತ
ಣ್ಬುೞಲರ್ಭಕನಾಡದಂಗಳಂ ಮಂಜುಳಮೇ ||

ಇಲ್ಲಿ ಅರ್ಭಕನು ಆಡದ ಅಂಗಳವು ಪ್ರಸ್ತುತ. ಅದು ಮಂಜಳವಲ್ಲ. ಗಿಳಿಯುಮರಿ ಮೆರೆಯುದ ನಂದನವೇ ಮೊದಲಾದವುಗಳು ಅಪ್ರಸ್ತುತ. ಇವೂ ಅದರಂತೆಯೇ, ಮಂಜುಳವಲ್ಲ ಎಂದು ವರ್ಣಿತವಾಗಿದೆ. ಮನೆಗಾಗಿ ಹೊತ್ತಿಸಿದ ದೀಪವು ಬೀದಿಗೂ ಬೆಳಕು ಕೊಡುವಂತೆ ಪ್ರಸ್ತುತ ವಸ್ತುವನ್ನು ಉದ್ದೇಶಿಸಿ ಹೇಳಿದ ಅಂಶವು ಅಪ್ರಸ್ತುತಕ್ಕೂ ಅನ್ವಯಿಸುತ್ತದೆ. ಆದ್ದರಿಂದಲೇ ಈ ಅಲಂಕಾರಕ್ಕೆ 'ದೀಪ(ಕ)' ಎಂದು ಹೆಸರು.

ವಿಚಾರ—ಮೇಲೆ ಹೇಳಿದ 'ಸಮುಯೋಗಾಲಂಕಾರ'ದಲ್ಲಿಯೂ ಒಂದೇ ಅಂಶವು ಎರಡು ವಸ್ತುಗಳಿಗೆ ಸಾಧಾರಣವಾ ರುವಂತೆ ವರ್ಣಿಸಲ್ಪಟ್ಟಿರುತ್ತದೆ; ಆದರೆ ಇಲ್ಲಿ ಒಂದು 'ಪ್ರಸ್ತುತ', ಇನ್ನೊಂದು 'ಅಪ್ರಸ್ತುತ'ವಾಗಿರುವುದಿಲ್ಲ; ಪ್ರಸ್ತುತವನ್ನು ಉದ್ದೇಶಿಸಿಯೇ ವರ್ಣನೆ ಹೊರಟಿರುವುದಿಲ್ಲ. ದೀಪಕದಲ್ಲಿ 'ಪ್ರಸ್ತುತವನ್ನು ಉದ್ದೇಶಿಸಿಯೇ ವರ್ಣನೆ ಹೊರಟಿರುತ್ತದೆ.

ಹಲವು ವರ್ಣ್ಯಗಳ ಸಮಾನಧರ್ಮವು ಬೇರೆಬೇರೆಯಾದ ಶಬ್ದಗಳಿಂದ ಉಕ್ತವಾಗಿದ್ದಲ್ಲಿ **ಆವೃತ್ತಿದೀಪಕಾ**[12]ಲಂಕಾರವೆನ್ನಿಸಿಕೊಳ್ಳುವುದು.

---

11 ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ ||

12 ತ್ರಿವಿಧಂ ದೀಪಕಾವೃತ್ತೌ ಭವೇದಾವೃತ್ತಿದೀಪಕಂ |

ಲಕ್ಷ್ಯ

ಅಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ ಕಂ
ದಲಿ ಕುಸುಮಿಸಿದತ್ತುದ್ದಾಮನೀಪಾವನೀಜಾ ।
ವಲಿ ಬಿರಿದುವು ಜಾತೀಯೂಥಿಕಾಕೇತಕೀ ಸಂ
ಕುಲಮವಿರಲಗಂಧಾಮೋದಿತಾಶಾಂತರಾಲಂ ॥

ಇಲ್ಲಿ ವರ್ಣನೀಯವಾದ ಕುಟಜಾದಿಗಳಲ್ಲಿ ಅರಳಿರುವುದು ಸಮಾನ ಧರ್ಮ. ಈ ಧರ್ಮವೇ ಅಲರ್ದುವು, ಪೂತುವು, ಕುಸುಮಿಸಿದತ್ತು, ಬಿರಿದುವು—ಎಂಬುದಾಗಿ ಬೇರೆ ಬೇರೆ ಶಬ್ದಗಳಿಂದ ಉಕ್ತವಾಗಿದೆ.

ಒಂದೇ ವಸ್ತುವಿಗೆ ಸಂಬಂಧಪಟ್ಟ ಹಲವು ಕ್ರಿಯೆಗಳು ಕಾಲಕ್ರಮವನ್ನನುಸರಿಸಿ ವರ್ಣಿತವಾಗಿದ್ದಲ್ಲಿ **ಕಾರಕದೀಪಕಾ**[13]ಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೂಱಿದತ್ತು ಬಾ
ನ್ಗೊಗೆದುದು ನಿಂದು ಪೊಂಬೆಳಗುಮಂ ಪರಪಿತ್ತದು ಧಂ ಧಗಿಲ್ ಧಗಿಲ್ ।
ಧಗಿಲೆನುತಟ್ಟೆ ತಟ್ಟೆದುದು ಮುಟ್ಟಿತು ಸುಟ್ಟುದು ತಿಂದು ತೇಗಿದ
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ ॥

ಇಲ್ಲಿ ಒಂದಾದಮೇಲೆ ಮತ್ತೊಂದು ನಡೆದ ಕ್ರಿಯೆಗಳನ್ನು ಅವುಗಳ ಕ್ರಮವನ್ನನುಸರಿಸಿ ವರ್ಣಿಸಿದೆ.

## 9. ರೂಪಕ.

ಉಪಮಾನ ಉಪಮೇಯ ವಸ್ತುಗಳನ್ನು 'ಒಂದರಂತೆ ಮತ್ತೊಂದು ಇದೆ' ಎಂದು ಅವುಗಳ ಹೋಲಿಕೆ ಕಾಣುವಂತೆ ವರ್ಣಿಸದೆ, 'ಒಂದು ಮತ್ತೊಂದೇಯೆ' ಎಂದು ವರ್ಣಿಸಿದರೆ ಅದು ರೂಪಕಾಲಂಕಾರವಾಗುತ್ತದೆ. ಇದು 'ಅಭೇದ ರೂಪಕ' 'ತಾದ್ರೂಪ್ಯರೂಪಕ' ಎಂದು ಎರಡು ವಿಧ; ಏಕೆಂದರೆ ಕೆಲವು ಕಡೆ ಉಪಮಾನೋಪಮೇಯಗಳಿಗೆ ಅಭೇದವಿರುತ್ತದೆ. ಇನ್ನು ಕೆಲವು ಕಡೆ 'ತಾದ್ರೂಪ್ಯ'ವು (ಅದರಂತಿರುವುದು) ಇರುತ್ತದೆ. ಉದಾ: 'ಮುಖಚಂದ್ರ' 'ಮುಖವೆಂಬ ಬೇರೊಬ್ಬ ಚಂದ್ರ' ಇಲ್ಲಿ ಎರಡು ಸ್ಥಳಗಳಲ್ಲಿಯೂ ಸಾದೃಶ್ಯ

---

[13] ಕ್ರಮಿಕೈಕಗತಾನಾಂ ತು ಗುಂಭಃ ಕಾರಕದೀಪಕಂ ॥

[14] ವಿಷಯ್ಯಭೇದತಾದ್ರೂಪ್ಯರಂಜನಂ ವಿಷಯಸ್ಯ ಯತ್ ॥
ರೂಪಕಂ ತತ್ರಿಧಾಧಿಕ್ಯನ್ಯೂನತ್ವಾನುಭಯೋಕ್ತಿಭಿಃ ॥

ವೇನೋ ಅಡಗಿದೆ; ಆದರೆ ಒಂದು ಕಡೆ ಮುಖವು ಚಂದ್ರವೇ ಎಂದು ಅಭೇಧವೂ ಇನ್ನೊಂದು ಕಡೆ ಪ್ರಸಿದ್ಧಚಂದ್ರನಲ್ಲ, ಅವನಂತಿರುವ ಮತ್ತೊಬ್ಬ ಚಂದ್ರ ಎಂಬ ತಾದ್ರೂಪ್ಯವೂ ತೋರುತ್ತಿವೆ.

ಲಕ್ಷ್ಯ

ಅರಸಾಗಲೊಡಂ ಮೆಯ್ಮಱೆ |
ದು ರಾಜ್ಯಸುಖಸನ್ನಿಪಾತನಿದ್ರೆಯ ಕೈಕೊಂ |
ಡಿರುಳುಂ ಪಗಲುಂ ಜಾಡ್ಯದೆ |
ಮರವಟ್ಟಿಟ್ಟಿ ಱುವರಲ್ಲವೆಂತುಂ ಭೂಪರ್ ||

ಇಲ್ಲಿ 'ರಾಜ್ಯಸುಖವೆಂಬ ಸನ್ನಿಪಾತನಿದ್ರೆ' ಎಂಬುದಾಗಿ ರಾಜ್ಯಸುಖವನ್ನು ಸನ್ನಿಪಾತನಿದ್ರಾಭಿನ್ನವನ್ನಾಗಿ ಹೇಳಿದೆ. ಆದ್ದರಿಂದ ಇಲ್ಲಿ **ಅಭೇದರೂಪಕಾಲಂಕಾರ.**

ಲಕ್ಷ್ಯ

ಕಿಡಿಸಲ್ ಪಂಕಜದುರ್ಕನೇಂ ನೆಱೆಯದೋ ನೇತ್ರೋತ್ಪಲಾನಂದಮುಂ
ಪಡೆಯಲ್ ಸಾಲದೊ ಮನ್ಮಥಂಗೆ ಜಯಮುಂ ಮೇಣೀಯದೋ ಸಾಲದೇಂ |
ಗಡಮೀಕಾಂತೆಯ ವಕ್ತ್ರಚಂದ್ರನೆಲೆ ತಾನೇನೆಂದು ಚಂದ್ರಂ ನಭ
ಕ್ಕಡರ್ವಂ ಗೆಲ್ಲದೆ ತನ್ನೊಳುಳ್ಳಮೃತಮುಂ ಬಿಂಬಾಧರಸ್ಥಾಮೃತಂ ||

ಇಲ್ಲಿ ಪಸಿದ್ಧಚಂದ್ರನಿಂದ ಆಗತಕ್ಕ ಕಾರ್ಯವೆಲ್ಲವೂ ತದ್ರೂಪನಾದ ವಕ್ತ್ರಚಂದ್ರನಿಂದ ಆಗುವುದೆಂದು ವರ್ಣಿತವಾಗಿರುವುದರಿಂದ ಇದು **ತಾದ್ರೂಪ್ಯರೂಪಕ.**

ಮೇಲೆ ಹೇಳಿದ ರೂಪಕವೆರಡರಲ್ಲಿಯೂ ಆಧಿಕ್ಯವೂ ನ್ಯೂನತೆಯೂ ಕಂಡುಬರಬಹುದು.

ಲಕ್ಷ್ಯ

ಶ್ರೀವಧುವಿನಂಬಕಚಕೋರಕಂ ಪೊರೆಯೆ ಭ
ಕ್ತಾವಳಿಯ ಹೃತ್ಕುಮುದಕೋರಕಂ ಬಿರಿಯೆ ಜಗ
ತೀವಲಯದಮಲಸೌಭಾಗ್ಯರತ್ನಾಕರಂ ಪೆರ್ಚಿನಿಂ ಮೇರೆವರಿಯೆ |
ಆವಗಂ ಸರಸಕರುಣಾಮೃತದ ಕಲೆಗಳಿಂ
ತೀವಿದೆಳನಗೆಯ ಬೆಳ್ದಿಂಗಳಂ ಪಸರಿಸುವ
ದೇವಪುರಲಕ್ಷ್ಮೀರಮಣನಾಸ್ಯ ಚಂದ್ರನಾನಂದಮಂ ನಮಗೀಯಲಿ ||

ಇಲ್ಲಿ ಲೋಕಪ್ರಸಿದ್ಧಚಂದ್ರನ ಕಾರ್ಯವನ್ನು ಲಕ್ಷ್ಮೀರಮಣನಾಸ್ಯಚಂದ್ರನಲ್ಲಿ ತೋರಿಸಿರುವುದಲ್ಲದೆ ಸಾರ್ವಕಾಲಿಕ ಕಲಾವೈಶಿಷ್ಟ್ಯವನ್ನೂ ಸಾರ್ವಕಾಲಿಕ

ಚಂದ್ರಿಕಾವೈಶಿಷ್ಟ್ಯವನ್ನೂ ಹೇಳಿರುವುದರಿಂದ ಸಾಮಾನ್ಯ ಚಂದ್ರನಿಗಿಂತಲೂ ಉತ್ಕರ್ಷವು ಕಾಣಬರುತ್ತದೆ. ಆದ್ದರಿಂದ 'ಆಸ್ಯಚಂದ್ರಂ' ಎಂಬಲ್ಲಿ **'ಅಧಿಕ ತಾದ್ರೂಪ್ಯ ರೂಪಕ.'**

ಲಕ್ಷ್ಯ

ವದನಚತುಷ್ಕವಿಲ್ಲದ ರಜೋಗುಣವಿಲ್ಲದ ಪದ್ಮಪೀಠವಿ
ಲ್ಲದ ಕಳಹಂಸವಿಲ್ಲದ ಕಮಂಡಲುವಿಲ್ಲದ ಪಾಶರಜ್ಜುವಿ।
ಲ್ಲದ ವಿಮಳಾಕ್ಷಮಾಲಿಕೆಯುಮಿಲ್ಲದಪೂರ್ವವಿರಿಂಚಧರ್ಮಕೋ
ವಿದನಯಯುಕ್ತದಾನಪತಿ ಪೇಳ್ದಪೆನಾಂ ನಿನಗೊಂದು ಕಾರ್ಯಮಂ ||

ಇಲ್ಲಿ 'ಅಪೂರ್ವವಿರಿಂಚ'ನೆಂದು ಹೇಳಿರುವುದರಿಂದ ಬ್ರಹ್ಮನಿಗೆ ಅಸಾಧಾರಣವಾದ ಚತುರ್ವದನತ್ವಾದಿಗಳಿಲ್ಲದಿರುವುದು ನ್ಯೂನವಾಗಿ ಕಾಣುತ್ತದೆ. ಆದ್ದರಿಂದ ಇದು **ನ್ಯೂನತಾದ್ರೂಪ್ಯರೂಪಕ.**

ವರ್ಣ್ಯವೊಂದನ್ನು ಅನೇಕಪ್ರಕಾರವಾಗಿ ನಿರೂಪಣಮಾಡಿದ್ದಲ್ಲಿ **ಮಾಲಾ ರೂಪಕ**ವೆನ್ನಿಸಿಕೊಳ್ಳುವುದು.

ಲಕ್ಷ್ಯ

ಸಿರಿಗಧಿದೇವಿ ಶಾರದೆಯ ಸತ್ಕಳೆ ಸೈಪಿನ ಜನ್ಮಭೂಮಿ ಸ
ಚ್ಚರಿತದ ಸೀಮೆ ಸತ್ಯದ ತವರ್ಮನೆ ಪೆರ್ಮೆಗಡರ್ಪು ಸಿದ್ಧಿಗಾ
ಗರಮುತುಲೋತ್ಸವಕ್ಕೆ ನೆಲೆ ಚೆಲ್ವಿನ ಕೋಶಮನೂನಮಂಗಳೋ
ತ್ಕರನಿಧಿ ಗೌರಿ ರಂಜಿಸಿದಳಂಕದೊಳಿಂದುಕಳಾವತಂಸನಾ ||

ಒಂದು ರೂಪಕಕ್ಕೆ ಮತ್ತೊಂದು ರೂಪಕವು ಕಾರಣವಾದರೆ ಅಂಥ ರೂಪಕಕ್ಕೆ **ಪರಂಪರಿತರೂಪಕ**ವೆಂದು ಹೆಸರು.

ಲಕ್ಷ್ಯ

ಸನಕಾದ್ಯರ್ಕಳ ಮಾನಸಾಂಬುಜಮರಾಳಂ ನೀನೆ ವೇದಾಂತನಂ
ದನಕೇಳೀರಸಲೋಲದಿವ್ಯಶುಕರಾಜಂ ನೀನೆ ನಾದಾಂತಕಾಂ
ಚನಹರ್ಮ್ಯಾಂತರಭಾಸಮಾನಮಣಿದೀಪಂ ನೀನೆ ಶೈವಾಗಮಾ
ಘನಭೋಮಧ್ಯಮನೋಜ್ಞ ಬಾಲಮಿಹಿರಂ ನೀನೇ ಭವಾನಿಧವಾ ||

ಇಲ್ಲಿ ಮಾನಸವನ್ನು ಅಂಬುಜವನ್ನಾಗಿ ನಿರೂಪಣಮಾಡುವುದರಿಂದ ಭವಾನೀಧವನನ್ನು ಮರಾಳನನ್ನಾಗಿ ರೂಪಣಮಾಡಲಾಗಿರುವುದು. ಹೀಗೆಯೇ ಮಿಕ್ಕೆಡೆಯಲ್ಲಿಯೂ ಪರಂಪರಿತರೂಪಕವಾಗಿದೆ.

ಶ್ಲೇಷಮೂಲಕವಾದ ರೂಪಕಕ್ಕೆ 'ಶ್ಲಿಷ್ಟರೂಪಕ' ವೆಂದು ಹೆಸರು.

## 10. ದೃಷ್ಟಾಂತ.[15]

ಎರಡು ಬೇರೆ ಬೇರೆ ವಾಕ್ಯಗಳು ಪರಸ್ಪರ ಅರ್ಥಸಾದೃಶ್ಯದಿಂದ, ಒಂದರ ಪ್ರತಿಬಿಂಬ ಮತ್ತೊಂದು ಎಂದು ತೋರುತ್ತಿದ್ದರೆ, ಅದು ದೃಷ್ಟಾಂತಾಲಂಕಾರ.

ಲಕ್ಷ್ಯ

ನಿಂದಿಸುವರ್ ದುರ್ಜನರೆಂ
ಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ |
ಮಂದೇಹರ ಭಯದಿಂದರ
ವಿಂದಸಖಂ ನಿಜಮಯೂಖಮಂ ಪ್ರಸರಿಸನೇ ||

## 11. ಸ್ಮರಣ.[16]

ಯಾವುದಾದರೂ ಒಂದಾನೊಂದು ಪದಾರ್ಥದ ಅನುಭವವುಂಟಾದಾಗ ಅದರ ಹೋಲಿಕೆಯಿಂದ ಬೇರೆ ಪದಾರ್ಥದ ಜ್ಞಾಪಕವುಂಟಾದರೆ ಅದು ಸ್ಮರಣಾಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಜನಕಜೆಯ ವದನಮಂ ಸಿತ
ವನರುಹಮಂ ಚಂದ್ರಕಾಂತಮಣಿದರ್ಪಣಮಂ |
ನೆನೆಯಿಸಿದುದು ರಾಮಂಗಮ
ರನದಿಯ ಕಲಹಂಸನಂ ಸುಧಾಕರಬಿಂಬಂ ||

## 12. ಭ್ರಾಂತಿ.

ಒಂದನ್ನು ಬೇರೊಂದನ್ನಾಗಿ ತಿಳಿಯುವುದೇ ಭ್ರಾಂತಿ. ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಭ್ರಾಂತಿ ಭ್ರಾಂತ್ಯಲಂಕಾರ.

ಲಕ್ಷ್ಯ

ಪೊಸತಲರ್ದೊಂದು ತಾವರೆಯೆಗೆತ್ತು ಮುಖಾಬ್ಜಮನೊಂದು ತುಂಬಿ ಚುಂ
ಬಿಸೆ ಸತಿ ಬೆರ್ಚಿ ಪೆಟ್ಟಳಿಸಿ ನೋಟ್ಪುದುಮಾಕೆಯ ಕಣ್ಣ ಬೆಳ್ಪುಗಳ್ |
ಪಸರಿಸೆ ತುಂಬಿಗಳ್ ಕುವಲಯಂಗಳರಲ್ದುವೆಗೆತ್ತು ಮತ್ತೆಯುಂ
ಮುಸುಱುವುದುಂ ಗುಣಾರ್ಣವನನಾಗಳವಳ್ ಭಯದಿಂದಮಪ್ಪಿದಳ್ ||

---

[15] ಚೇದ್ಬಿಂಬಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ ||
[16] ಸ್ಯಾತ್ ಸ್ಮೃತಿಭ್ರಾಂತಿ ಸಂದೇಹೈಃ ತದಂಕಾಲಂಕೃತಿತ್ರಯಂ ||

## 13. ಸಂದೇಹ.

ಸಾದೃಶ್ಯಮೂಲಕವಾಗಿ ಉಕ್ತವಾಗಿರುವ ಸಂದೇಹವು ಸಂದೇಹಾಲಂಕಾರವಾಗುವುದು.

ಲಕ್ಷ್ಯ

ಮಸೆದೆಳಮಿಂಚೊ ರಂಜಿಸಿದ ರತ್ನಶಲಾಕೆಯೊ ಕಾಮದೇವನ
ರ್ಚಿಸಿದಲರಂಬೊ ಪೂತ ಲತೆಯೋ ನನೆಯೇಱ ಮಡಲ್ತ ಮಾವೊ ನು |
ಣ್ಣಿಸಿದಮೃತಾಂಶುಲೇಖೆಯೊ ವಿಲೋಕನಮಿಟ್ಟ ಸಜೀವಚಿತ್ರಮೋ
ಪೊಸನನೆದೊಟ್ಟ ಪದ್ಮಿನಿಯೊ ಕಯ್ಗೆಯೆ ಕಣ್ಗೆಸೆದಿರ್ದ ಕಾಂತೆಯೋ ||

ಈ ಜ್ಞಾಪಕ, ಭ್ರಮೆ, ಸಂದೇಹಗಳು ಸಾದೃಶ್ಯಮೂಲಕವಲ್ಲದಿದ್ದರೆ ಈ ಅಲಂಕಾರಗಳಾಗುವುದಿಲ್ಲ.

## 14. ಉತ್ಪ್ರೇಕ್ಷೆ[17]

ಒಂದಾನೊಂದು ಪದಾರ್ಥವನ್ನು ಮತ್ತೊಂದು ಪದಾರ್ಥವನ್ನಾಗಿ ಸಂಭಾವನೆ ಮಾಡುವುದೇ ಉತ್ಪ್ರೇಕ್ಷೆಯೆನ್ನಿಸಿಕೊಳ್ಳುವುದು. ಹಾಗೆ ಮತ್ತೊಂದು ಪದಾರ್ಥವೆಂದು ಸಂಭಾವನೆಮಾಡುವಲ್ಲಿ ಆ ಮತ್ತೊಂದರ ಧರ್ಮವು (ಇಲ್ಲಿ ಒಂದಾನೊಂದು ಪದಾರ್ಥವೆಂದು ಹೇಳಿರುವ) ವರ್ಣ್ಯದಲ್ಲಿ ಇದ್ದೇ ಇರಬೇಕು.

'ಸಂಭಾವನೆ'ಯೆನ್ನುವುದು ಒಂದು ವಿಧವಾದ ಜ್ಞಾನ. ಈ ಜ್ಞಾನವು ನಿಶ್ಚಯಜ್ಞಾನಕ್ಕಿಂತ ಕೀಳಾಗಿಯೂ ಸಂದೇಹಜ್ಞಾನಕ್ಕಿಂತ ಉತ್ಕೃಷ್ಟವಾಗಿಯೂ ಇರುವುದು.

ಉತ್ಪ್ರೇಕ್ಷೆಯಲ್ಲಿ (೧) ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿಯೂ, (೨) ಒಂದು ಪ್ರಕಾರದಿಂದಿರುವ ವಸ್ತುವನ್ನು (i) ಕಲ್ಪಿತಕಾರಣದಿಂದಲೋ ಅಥವಾ (ii) ಕಲ್ಪಿತಫಲಕ್ಕಾಗಿಯೋ ಮತ್ತೊಂದು ಪ್ರಕಾರದಿಂದ ಇರುವುದನ್ನಾಗಿಯೂ ಹೇಳುವ ಮೂರು ವಿಧವಾದ ಭೇದಗಳಿರುವುವು.

—ಪ್ರಥಮೋತ್ಪ್ರೇಕ್ಷೆಗೆ ಲಕ್ಷ್ಯ—

ಪೊಳೆವಿಂದೂಲರುಚಿಗಳ್
ಬಳಸಿ ನೃಪಾತ್ಮಜನನಂಗಜನ್ಮನ ಬೆಸದಿಂ |
ಬೆಳಪ ಶಶಿ ಕಾಪುವೇೞ್ದೊಡೆ
ಬಳಸಿದ ಬೆಳ್ದಿಂಗಳಂತಿರೇಂ ತೊಳಗಿದುವೋ ||

---

[17] ಸಂಭಾವನಾ ಸ್ಯಾದುತ್ಪ್ರೇಕ್ಷಾ ವಸ್ತುಹೇತುಫಲಾತ್ಮನಾ |

ಇಲ್ಲಿ ಕಂದರ್ಪದೇವನೆಂಬ ನೃಪಾತ್ಮಜನನ್ನು ಆವರಿಸಿಕೊಂಡಿರುವ ಚಂದ್ರೋಪಲ ಕಾಂತಿಯನ್ನು ನೋಡಿದರೆ ಮನ್ಮಥನ ಆಜ್ಞಾನುಸಾರವಾಗಿ ಚಂದ್ರನು ರಾಜಪುತ್ರನಿಗೆ ಕಾವಲಿಟ್ಟ ಬೆಳುದಿಂಗಳೋ ಎಂಬಂತೆ ಕಾಣುತ್ತಿತ್ತೆಂದು ಅರ್ಥ. ಇಂದೂಪಲರುಚಿ ಬೆಳ್ದಿಂಗಳಾಗಿ 'ಸಂಭಾವಿತ'ವಾಗಿ ಎಂದರೆ 'ಉತ್ಪ್ರೇಕ್ಷಿತ'ವಾಗಿ ಇರುವುದು. ಬೆಳ್ದಿಂಗಳಲ್ಲಿರುವಂತೆಯೇ ಚಂದ್ರೋಪಲಕಾಂತಿಯಲ್ಲಿಯೂ ಧವಳ ಪ್ರಕಾಶವು ಕಾಣಬರುತ್ತಿರುವುದೇ ಹೀಗೆ ಉತ್ಪ್ರೇಕ್ಷಿಸುವುದಕ್ಕೆ ಗಮ್ಯಮಾನವಾದ ನಿಮಿತ್ತ.

ಈ ಉತ್ಪ್ರೇಕ್ಷೆಯನ್ನೇ ವಸ್ತೂತ್ಪ್ರೇಕ್ಷೆಯೆಂಬುದಾಗಿಯೂ ಸ್ವರೂಪೋತ್ಪ್ರೇಕ್ಷೆಯೆಂಬುದಾಗಿಯೂ ಸಂಸ್ಕೃತದ ಆಲಂಕಾರಿಕರು ಹೇಳುವರು.

—ದ್ವಿತೀಯೋತ್ಪ್ರೇಕ್ಷೆಗೆ ಲಕ್ಷ್ಯ—

ತಳಿರ್ಗೊಯ್ವೆಳೆಯಳ ಚೆಂದುಟಿ
ದಳಿರಂ ತಳಿರ್ಗೆತ್ತು ಕರ್ದುಕಿದುದು ಪಿಕನೀ ಮಂ ।
ಜುಳಪಲ್ಲವಮೆಲ್ಲಮನೀ
ಗಳೆ ಪಱಿದಪಳೆಂಬ ಮುನಿಸಿನಿಂ ಕರ್ದುಕುವವೊಲ್ ॥

ಇಲ್ಲಿ ಕೋಗಿಲೆ ಚೆಂದುಟಿಯನ್ನು ಪಲ್ಲವಭ್ರಾಂತಿಯಿಂದ ಕದುಕಿರುವುದೇ ಹೊರತು ಮುನಿಸಿನಿಂದ ಕದುಕಲಿಲ್ಲ. ಹೀಗಿರುವುದರಿಂದ ಮುನಿಸಿನಿಂದ ಕರ್ದುಕಿತೆಂಬಂಶವು ಕವಿಕಲ್ಪಿತ. 'ವೊಲ್' ಎಂಬ ಪ್ರತ್ಯಯವು ಉತ್ಪ್ರೇಕ್ಷಾಬೋಧಕ.

—ತೃತೀಯೋತ್ಪ್ರೇಕ್ಷೆಗೆ ಲಕ್ಷ್ಯ—

ಆ ಸೇನಾರಜದಿಂ ಪರಿ
ಧೂಸರಮಾದುದು ನಿಜಾಂಗಮಂ ತೊಳೆಯಲ್ಕೆಂ ।
ದೋಸರಿಸದೆ ಪೊಕ್ಕಂತಿರೆ
ವಾಸರಕರನಪರವಾರಿನಿಧಿಯೊಳ್ ಪೊಕ್ಕಂ ॥

ಇಲ್ಲಿ ಸ್ವಾಭಾವಿಕವಾಗಿ ಸಮುದ್ರವನ್ನು ಪ್ರವೇಶಿಸಿದ ಸೂರ್ಯನನ್ನು ಸ್ನಾನಕ್ಕಾಗಿ ಸಮುದ್ರವನ್ನು ಪ್ರವೇಶಿಸಿದವನಂತೆ ಕವಿ ಕಲ್ಪಿಸಿ ಉತ್ಪ್ರೇಕ್ಷಿಸಿರುವನು.

ಇದುವರೆಗೂ ಇಲ್ಲಿ 'ಅಂತೆ' ಇತ್ಯಾದಿಯಾದ ಪ್ರಕಾರವಾಚಕಗಳು ಪ್ರಯುಕ್ತವಾಗಿರುವಲ್ಲಿ ಉತ್ಪ್ರೇಕ್ಷಾಲಂಕಾರವಿರುವುದೆಂಬಂಶವು ನಿರೂಪಿತವಾಗಿರುವುದು. ಹೀಗೆಯೇ 'ಎನೆ, ಎನಲ್, ಎಂಬಿನೆಗಂ' ಇತ್ಯಾದಿಯಾದ 'ಎನ್' ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪಗಳಿರುವಲ್ಲಿಯೂ 'ಅಂದಂ', 'ಮಾಟಕ್ಕೆ' ಇತ್ಯಾದಿಯಾದ ಪದಗಳ ಪ್ರಯೋಗವಿರುವಾಗಲೂ ಉತ್ಪ್ರೇಕ್ಷೆಯಾಗುವುದು.

ಲಕ್ಷ್ಯ

ಹೃದಯದೊಳಗಿಟ್ಟುಕೊಂಡುದೊ
ಪದೆಪಿಂ ಕಾಮಿನಿಯನೆನೆ ಮಣಿಸ್ತಂಭಸಮೂ |
ಹದೊಳೆಲ್ಲಮೆಯ್ದೆ ಮಾರ್ತೊಳ
ಗಿದುದಾಗಳ್ ರೂಪು ಚಿತ್ರರಥನಂದನೆಯಾ ||

ರಮಣೀರತ್ನಮನಾಗಳು
ಮೆಮೆಯಿಕ್ಕದೆ ನೋೞ್ಪ ಬಯಕೆಯಿಂ ಪಡೆದರೊ ತಾ|
ಮೆಮೆಯಿಕ್ಕಿದ ಕಣ್ಗಳನೆನ
ಲೆಮೆಯಿಕ್ಕದೆ ನೋಡುತಿರ್ದುದಬಲಾನೀಕಂ ||

ಕೂಡಿ ಮಣಿಭೂಷಣಧ್ವನಿ
ಗಾಡುವ ಸೋಗೆಗಳ ಪರೆದ ಪೀಲಿಯ ಕಣ್ಣಿಂ |
ಮಾಡಮೆ ಕನ್ಯಕೆಯಂ ನಡೆ
ನೋಡಲ್ ಕಣ್ದೆಱೆದುದೆಂಬಿನಂ ಸೊಗಯಿಸುಗುಂ ||

ಚಂಡಪರಾಕ್ರಮರ್ ದನುಜನಾಯಕರುಂ ರಣರಾಗದಿಂ ಪ್ರಭಾ
ಮಂಡಲಮುಖ್ಯನಾಯಕರೊಳೊರ್ವರನೊರ್ವರಿದಿರ್ಚುವಂದಮಂ|
ಕಂಡು ಕೃಪಾಳು ಮಾಣಿಸುವೆನಿಂದಿನ ಯುದ್ಧಮನೆಂಬ ಮಾೞ್ಕೆಯಿಂ
ಚಂಡಮರೀಚಿ ಪಶ್ಚಿಮಪಯೋಧಿಯೊಳೊಯ್ಯನೆ ಮೆಯ್ಯನಿಕ್ಕಿದಂ ||

ಈ ಉತ್ಪ್ರೇಕ್ಷಾಲಂಕಾರದ ಪ್ರಕರಣವನ್ನೂ ಹಿಂದೆ ಹೇಳಿರುವ ಉಪಮಾಲಂಕಾರದ ಪ್ರಕರಣವನ್ನೂ ನೋಡಿದಲ್ಲಿ 'ಅಂತೆ' ಮಾೞ್ಕೆ' ಇತ್ಯಾದಿ ಪದಗಳ ಪ್ರಯೋಗವಿರುವಾಗ, ಉಪಮಾನವಾಗಬಹುದಾದ ವಿಷಯವು ಲೋಕಪ್ರಸಿದ್ಧವಾಗಿದ್ದಲ್ಲಿ ಉಪಮಾಲಂಕಾರವಾಗುವುದೆಂಬುದಾಗಿಯೂ, ಹಾಗಲ್ಲದೆ ಉಪಮಾನವಾಗಬಹುದಾದ ವಿಷಯವು ಕವಿಕಲ್ಪಿತವಾಗಿದ್ದಲ್ಲಿ ಉತ್ಪ್ರೇಕ್ಷಾಲಂಕಾರವಾಗುವುದೆಂಬುದಾಗಿಯೂ ಹೆದ್ದಟ್ಟಾಗಿ ಗ್ರಹಿಸಬಹುದು.

## 15. ಅಪಹ್ನುತಿ.[18]

ವರ್ಣ್ಯಪದಾರ್ಥದ ನಿಜಸ್ವರೂಪವನ್ನು 'ಮುಚ್ಚಿ' (ಎಂದರೆ ಅದಲ್ಲವೆಂದು ನಿಷೇಧಿಸಿ) ಆದನ್ನು ಬೇರೆಯೊಂದನ್ನಾಗಿ ವರ್ಣಿಸುವುದು 'ಅಪಹ್ನುತಿ.'

---

[18] ಶುದ್ಧಾಪಹ್ನುತಿರನ್ಯಸ್ಯಾರೋಪಾರ್ಥೋ ಧರ್ಮನಿಹ್ನವಃ
ಕೈತವಾಪಹ್ನುತಿರ್ವ್ಯಕ್ತೌ ವ್ಯಾಜ್ಯಾದ್ಯೈರ್ನಿಹ್ನುತೈಃ ಪದೈಃ ||

ಲಕ್ಷ್ಯ

ಇದು ಪೂರ್ವದಿಶಾವಧುವೆ
ತ್ತಿದ ಶಶಿಮಣಿಮುಕುರಮಮೃತಕರಮಂಡಲಮ |
ಲ್ಲಿದು ಚಿಹ್ನಮಲ್ತು ಪ ನ್ಯದೊ
ಳೊದವಿದ ಮಾರ್ಪೊಳೆಪು ವಿಷ್ಣುಪದ ವಿಷ್ಣುವಿನಾ ||

ಇದು ಚಂದ್ರವರ್ಣನೆ. ಇಲ್ಲಿ, 'ಇದು ಚಂದ್ರಮಂಡಲವಲ್ಲ, ಚಂದ್ರಕಾಂತ ಮಣಿದರ್ಪಣ', 'ಅದರಲ್ಲಿರುವುದು ಕಳಂಕವಲ್ಲ, ವಿಷ್ಣುಪಾದದ ಪ್ರತಿಬಿಂಬ' ಎಂದು ಹೇಳಿದೆ.

ಕೈತವಾದಿಪದಗಳಿಂದ ಅಪಹ್ನವವು ಗಮ್ಯವಾದಲ್ಲಿ ಕೈತವಾಪಹ್ನುತ್ಯಲಂಕಾರ ವಾಗುವುದು.

ಲಕ್ಷ್ಯ

ನಗಿಸುತ್ತುಂ ಮಲ್ಲಿಕಾಕಾಮಿನಿಯನಳಿರವವ್ಯಾಜದಿಂ ಸೋಂಕಿ ಮೆಯ್ಯೊಳ್
ನೆಗಪುತ್ತುಂ ಚೈತ್ರದೂತೀಯುವತಿಗೆ ಮುಕುಳವ್ಯಾಜದಿಂ ಘರ್ಮವಾರ್ಬಿಂ |
ದುಗಳಂ ಮೇಣ್ಪೂತವಲ್ಲೀವನಿತೆಗೆ ಪಡೆಯುತ್ತಂಕುರವ್ಯಾಜದಿಂ ನೆ
ಟ್ಟಗೆ ರೋಮಾಂಚಂಗಳಂ ಸದ್ವಿಟನೆನೆ ಸುಱಿದಂ ವೇಗದೂರಂ ಸಮೀರಂ ||

ಇಲ್ಲಿ ಸತ್ಯವಲ್ಲವೆಂಬರ್ಥವನ್ನು ಬೋಧಿಸುವ ವ್ಯಾಜಶಬ್ದವಿರುವುದರಿಂದ ಇದು ನಗುವ ರವವೇ ಹೊರತು ಅಳಿರವವಲ್ಲವೆಂಬ ಅಪಹ್ನವವು ಗಮ್ಯವಾಗುತ್ತಿರುವುದು. ಈ ವಿಧವಾದ ಅಪಹ್ನವವು ಕೈತವಾಪಹ್ನುತಿಯೆನಿಸಿಕೊಳ್ಳುವುದು.

## 16. ಉಲ್ಲೇಖ.[19]

ನಾನಾಧರ್ಮಗಳಿರುವ ಪದಾರ್ಥವೊಂದನ್ನು ಒಬ್ಬೊಬ್ಬರು ಒಂದೊಂದು ಪ್ರಕಾರದಿಂದ ತಿಳಿದುಕೊಳ್ಳುವುದು ಉಲ್ಲೇಖಾಲಂಕಾರ.

ಲಕ್ಷ್ಯ

ಪ್ರತಿಮಲ್ಲರ್ ಗಿರಿಕಲ್ಪನೆಂದಿತರರೆಲ್ಲರ್ ಬಾಲನೆಂದಂಗನಾ
ತತಿ ಪುಷ್ಪಾಯುಧನೆಂದು ಗೋಪನಿವಹಂ ಸಾಮಾನ್ಯನೆಂದಾಕುಲಾ |
ಕೃತಿ ಕಂಸಂ ಲಯಕಾಲನೆಂದು ದಿವಿಜರ್ ವಿಶ್ವಾತ್ಮನೆಂದೀಕ್ಷಿಸಲ್
ದಿತಿಜಾರಾತಿ ವಿಚಿತ್ರಮೂರ್ತಿ ಪುಗುತಂದಂ ಮಲ್ಲರಂಗಾಗ್ರಮಂ ||

ಇಲ್ಲಿ ಶರೀರದಾರ್ಢ್ಯ ಬಾಲತ್ವ ಸೌಂದರ್ಯಶಾಲಿತ್ವಾದಿ ಗುಣಗಳಿರುವ ಕೃಷ್ಣ

[19] ಬಹುಭಿರ್ಬಹುಧೋಲ್ಲೇಖಾದೇಕಸ್ಯೋಲ್ಲೇಖ ಇಷ್ಯತೇ ||

ನೊಬ್ಬನನ್ನೇ ತಮ್ಮ ತಮ್ಮ ಮನೋವೃತ್ತಿಗನುಸಾರವಾಗಿ ಪ್ರತಿಮಲ್ಲಾದಿಗಳು ಭಿನ್ನ ಭಿನ್ನವಾಗಿ ತಿಳಿಯುತ್ತಾರೆ.

## 17. ಅರ್ಥಾಂತರನ್ಯಾಸ.[20]

ಸಾಮಾನ್ಯಾರ್ಥ ವಿಶೇಷಾರ್ಥಗಳೆರಡೂ ಉಕ್ತವಾಗಿದ್ದು ಒಂದರಿಂದ ಒಂದು ಸಮರ್ಥಿತವಾಗುತ್ತಿದ್ದರೆ ಅರ್ಥಾಂತರನ್ಯಾಸಾಲಂಕಾರವಾಗುವುದು.

ಲಕ್ಷ್ಯ

ಅತುಲಬಲವಿಕ್ರಮಪ್ರಾ
ನ್ವಿತನಸಮರ್ಥಂಗೆ ಮುನಿಯಲಱಿಗುಮೆಯಧಿಕೋ |
ನ್ನತಗಜನಿವಹಂ ಭೂಜ
ಪ್ರತತಿಯನುಡಿವಂತೆ ಪುಲ್ಲನೇನುಡಿದಪುದೇ ||

ಇಲ್ಲಿ 'ಅತುಲಬಲವಿಕ್ರಮಪ್ರಾನ್ವಿತನಸಮರ್ಥಂಗೆ ಮುನಿಯಲಱಿಗುಮೆ' ಎಂಬ ವಾಕ್ಯಾರ್ಥವು ಬಲಶಾಲಿಗಳೆಲ್ಲರಿಗೂ ಅನ್ವಯಿಸುವುದರಿಂದ ಸಾಮಾನ್ಯಾರ್ಥ ರೂಪವಾಗಿದೆ; ಮತ್ತು 'ಅಧಿಕೋನ್ನತಗಜನಿವಹಂ' ಇತ್ಯಾದಿಯಾದ ವಾಕ್ಯಾರ್ಥವು ಪ್ರಪಂಚದಲ್ಲಿರುವ ಅಂಥ ಬಲಶಾಲಿಗಳಲ್ಲೊಂದಾದ ಆನೆಯ ಪರವಾಗಿರುವುದರಿಂದ ವಿಶೇಷಾರ್ಥರೂಪವಾಗಿದೆ. 'ಅತುಲಬಲವಿಕ್ರಮಪ್ರಾನ್ವಿತಂ' ಇತ್ಯಾದಿ ವಾಕ್ಯಾರ್ಥವು 'ಅಧಿಕೋನ್ನತಗಜನಿವಹಂ' ಇತ್ಯಾದಿಯಾದ ವಾಕ್ಯಾರ್ಥದಿಂದ ಸಮರ್ಥಿತವಾಗಿದೆ.

ಈ ಮೇಲಿನ ಪದ್ಯದಲ್ಲಿ ವಿಶೇಷಾರ್ಥದಿಂದ ಸಾಮಾನ್ಯಾರ್ಥವು ಸಮರ್ಥಿತವಾಗಿದೆ. ಹೀಗೆಯೇ ಸಾಮಾನ್ಯಾರ್ಥದಿಂದ ವಿಶೇಷಾರ್ಥವೂ ಕೆಲವೆಡೆಯಲ್ಲಿ ಸಮರ್ಥಿತವಾಗುವುದು.

ಲಕ್ಷ್ಯ

ಜಲನಿಧಿ ಜಲಮಂ ಜಲಭೃ
ತ್ಕುಲಕ್ಕೆ ನಲಿದಿತ್ತುದತ್ತಮಿತ್ತ ನದೀನಿ |
ರ್ಮಲಸಲಿಲಂ ದೊರೆದುದು ಗಡ
ನೆಲದೊಳ್ ಕೊಟ್ಟಂಗೆ ಬಡತನಂ ಬಂದಪುದೇ ||

## 18. ಪರಿಕರ.[21]

ವಿಶೇಷಣವು ಸಾಭಿಪ್ರಾಯವಾಗಿದ್ದರೆ ಪರಿಕರಾಲಂಕಾರವೆನ್ನಿಸಿಕೊಳ್ಳುವುದು.

---

[20] ಉಕ್ತಿರರ್ಥಾಂತರನ್ಯಾಸಃ ಸ್ಯಾತ್ ಸಾಮಾನ್ಯವಿಶೇಷಯೋಃ |

[21] ಅಲಂಕಾರಃ ಪರಿಕರಃ ಸಾಭಿಪ್ರಾಯೇ ವಿಶೇಷಣೇ |

ಲಕ್ಷ್ಯ

ಅತಿಸುಖಿ ನೀಂ ಸುಕುಮಾರಂ
ಪ್ರತಿದಿನಮಾಭೀಲತಪಮನೆಂತೆಸಗುವೆ ಪೇಳ್ |
ಸಿತಗ ಶಿತಿಕಂಠನಲ್ಲ
ವ್ರತಕ್ಕೆ ತನುತರತಸಕ್ಕಮೇನೊಲ್ದಪನೇ ||

ಇದು ಇಂದ್ರಕೀಲಪರ್ವತದಲ್ಲಿ ಈಶ್ವರನನ್ನು ಕುರಿತು ತಪಸ್ಸನ್ನು ಮಾಡುತ್ತಿದ್ದ ಅರ್ಜುನನಿಗೆ ವೇಷಾಂತರದಿಂದ ಬಂದ ಇಂದ್ರನು ಹೇಳಿದ ಮಾತು. ಇಲ್ಲಿ ಅರ್ಜುನನಿಗೆ 'ಅತಿಸುಖಿ' ಯೆಂಬ ವಿಶೇಷಣವನ್ನು ಕೊಟ್ಟಿದೆ.

ಇದು ಇಂದ್ರಿಯನಿಗ್ರಹವು ಇಲ್ಲದವನೆಂಬ ಅಭಿಪ್ರಾಯದಿಂದ ಉಕ್ತವಾಗಿದೆ. ಏಕೆಂದರೆ, ಪ್ರಾಪಂಚಿಕ ವಿಷಯಗಳಲ್ಲಿ ಅತಿಲೋಲುಪನಾಗಿರತಕ್ಕವನಿಗೆ ವಿಷಯ ವೈಮುಖ್ಯರೂಪವಾದ ಇಂದ್ರಿಯನಿಗ್ರಹವು ಅಸಂಭಾವ್ಯ. 'ಸುಕುಮಾರಂ' 'ಆಭೀಲಂ' ಎಂಬ ವಿಶೇಷಣಗಳೂ ಹೀಗೆಯೇ. ಈ ವಿಶೇಷಣ ಭಾವವೆಲ್ಲವೂ 'ನೀಂ ತಪಮನೆಂತೆ ಸಗುವೆ ಪೇಳ್' ಎಂಬ ಆಕ್ಷೇಪಣೆಯನ್ನು ಪರಿಪೋಷಿಸುವುದು. ಹೀಗೆ ವಿಶೇಷಣದ ಅಭಿಪ್ರಾಯವು ವಾಚ್ಯಾರ್ಥವನ್ನು ಪರಿಪೋಷಿಸುವುದರ ಮೂಲಕ ವಾಚ್ಯಾರ್ಥಕ್ಕೆ ಪರಿಕರವಾಗುವುದರಿಂದ ಇದಕ್ಕೆ 'ಪರಿಕರಾಲಂಕಾರ'ವೆಂದು ಹೆಸರು ಬಂದಿದೆ.

## 19. ಪರಿಕರಾಂಕುರ.[22]

ವಿಶೇಷ್ಯವು ಸಾಭಿಪ್ರಾಯವಾಗಿದ್ದಲ್ಲಿ ಪರಿಕರಾಂಕುರಾಲಂಕಾರವೆನ್ನಿಸಿ ಕೊಳ್ಳುವುದು.

ಲಕ್ಷ್ಯ

ಶರ್ವಾಣಿಯ ಸೌಂದರ್ಯಮ |
ನೊರ್ವಂ ಬಣ್ಣಿಸುವನೆಂಬವಂ ಗಾಂಪಂ ಪ |
ನ್ನಿರ್ವರ್ ಭಾರತಿಯ ಸಾ
ಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ? ||

ಇಲ್ಲಿ 'ಭಾರತಿ'ಯೆಂಬ ವಿಶೇಷ್ಯವು, ವಾಗಭಿಮಾನದೇವತೆಯಾಗಿರುವುದರಿಂದ ವಿವರಿಸುವುದಕ್ಕೆ ಬೇಕಾದ ಸರ್ವವಾಗ್ವೈಖರಿಯನ್ನೂ ಸ್ವಾಧೀನದಲ್ಲಿಟ್ಟುಕೊಂಡಿರುವ ವರ್ಣನಸಮರ್ಥೆಯೆಂಬ ಅಭಿಪ್ರಾಯದಿಂದ ಗರ್ಭಿತವಾಗಿದೆ. ಹೀಗೆಯೇ 'ಫಣಿರಾಜ' ನೆಂಬ ವಿಶೇಷ್ಯವು, ವರ್ಣಿಸುವಾಗ ಒಂದು ಮುಖವು ಸೋತುಹೋದರೂ

---

[22] ಸಾಭಿಪ್ರಾಯೇ ವಿಶೇಷ್ಯೇತು ಭವೇತ್ ಪರಿಕರಾಂಕುರಃ ||

ಮತ್ತೊಂದು ಮುಖವನ್ನು ವಿನಿಯೋಗಿಸುವುದಕ್ಕೆ ಸಹಸ್ರಮುಖವಿರುವುದರಿಂದ ಯಾರಿಗೂ ಸಾಧ್ಯವಲ್ಲದ ವರ್ಣನೆಯನ್ನು ಮಾಡುವುದಕ್ಕೆ ಶಕ್ತನಾಗಿರುವನೆಂಬ ಅಭಿಪ್ರಾಯದಿಂದ ಗರ್ಭಿತವಾಗಿದೆ.

## 20. ಪರ್ಯಾಯೋಕ್ತಿ.[23]

ಯಾವ ಅರ್ಥವು ವ್ಯಂಗ್ಯವಾಗಬೇಕೆಂದು ಕವಿಗೆ ವಿವಕ್ಷಿತವೋ ಅದೇ ಅರ್ಥವೇ ಚಮತ್ಕಾರವಾದ ಬೇರೊಂದು ಪ್ರಕಾರದಿಂದ ಉಕ್ತವಾದಲ್ಲಿ ಪರ್ಯಾಯೋಕ್ತ್ಯಲಂಕಾರವೆನ್ನಿಸಿಕೊಳ್ಳುವುದು. 'ಪರ್ಯಾಯ'ವೆಂದರೆ ಪ್ರಕಾರಾಂತರವೆಂದರ್ಥ. ಪರ್ಯಾಯೋಕ್ತ (ಕ್ತಿ) ಎಂದರೆ ಪ್ರಕಾರಾಂತರದಿಂದ ಉಕ್ತವಾದ ವ್ಯಂಗ್ಯವುಳ್ಳದ್ದೆಂದು ಅರ್ಥ.

ಲಕ್ಷ್ಯ

ಹರಿಮುಖ್ಯಾಮರರಂ ಪಡಲ್ವಡಿಸಿ ಲೋಕಾನೀಕಮಂ ಪರ್ಬಿ ಮು
ಬ್ಬಿರದೇೞ್ತಂ ಪರ್ವೊಲೊತ್ತಿ ಸುತ್ತಿ ಪರಿತರ್ಪತ್ಯುಗ್ರಹಾಲಾಹಲೋ |
ತ್ಕರಮಂ ತಾಳದೊಡೋವೊ ದೇವಸತಿಯರ್ ಸೀಮಂತಸಿಂದೂರರಾ
ಗರಜಶ್ರೀಯನದೆಂತು ತಾಳ್ದಪರೊ ಪೇೞ್ ಶ್ರೀಶೈಲಜಾವಲ್ಲಭಾ ||

ಇಲ್ಲಿ ದೇವಸ್ತ್ರೀಯರಿಗೆ ಸೌಮಂಗಲ್ಯವು ಉಳಿಯುತ್ತಿರಲಿಲ್ಲವೆಂದರೆ ದೇವತೆಗಳೆಲ್ಲರೂ ಸಾಯುತ್ತಿದ್ದರೆಂಬರ್ಥವು ಗಮ್ಯವಾಗಬೇಕೆಂಬುದು ಕವಿಗೆ ವಿವಕ್ಷಿತ. ಈ ಗಮ್ಯಾರ್ಥವೇ "ದೇವಸತಿಯರ್ ಸೀಮಂತಸಿಂದೂರರಾಗರಜಶ್ರೀಯನದೆಂತು ತಾಳ್ದಪರೊ' ಎಂದು ಚಮತ್ಕಾರವಾದ ಬೇರೊಂದು ಪ್ರಕಾರದಿಂದ ಉಕ್ತವಾಗಿರುವುದು.

## 21. ಸಮಾಸೋಕ್ತಿ.[24]

ಪ್ರಸ್ತುತವೃತ್ತಾಂತದ ವರ್ಣನೆಯಲ್ಲಿರುವ ವಿಶೇಷಣದ ಸಾಮ್ಯದಿಂದ ಬೇರೊಂದು ಅಪ್ರಸ್ತುತವೃತ್ತಾಂತವು ಗಮ್ಯವಾಗುವುದಾದರೆ ಅದು ಸಮಾಸೋಕ್ತ್ಯಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಭವಬದ್ಧಕ್ರೋಧದಿಂ ಸಂಧಿಸೆ ಪೆಱಗೆ ತಮಂ ಸ್ಥಾನಮಂ ಬಿಟ್ಟು ತೇಜಂ
ತವೆ ಶೋಕಂ ಚಕ್ರವಾಕಕ್ಕೊಡರಿಸೆ ದಿನಸಶ್ರೀಯನೀಡಾಡಿ ಕೈಕೊಂ |

[23] ಪರ್ಯಾಯೋಕ್ತಂ ತು ಗಮ್ಯಸ್ಯ ವಚೋಭಂಗ್ಯಂತರಾಶ್ರಯಮ್ ||
[24] ಸಮಾಸೋಕ್ತಿಃ ಪರಿಸ್ಫೂರ್ತಿಃ ಪ್ರಸ್ತುತೇಽಪ್ರಸ್ತುತಸ್ಯ ಚೇತ್ ||

ಡವರೋಧಸ್ತ್ರೀಯರಂ ಪದ್ಮಿನಿಯರನೆನಸುಂ ನೋಡದುತ್ತಾನಪಾದಂ
ದಿವಸೇಂದ್ರಂ ಭೀತಿಯಿಂದಂಬರಮನುಟಿದು ವಾರಾಶಿಯಂ ಪೊಗಿ ಪೊಕ್ಕಂ ||

ಇಲ್ಲಿ ಅಸ್ತಂಗತನಾಗುವ ಸೂರ್ಯನು ಪ್ರಸ್ತುತನಾಗಿರುವನು. ಈ ಪ್ರಸ್ತುತಾರ್ಥ ವರ್ಣನೆಯಲ್ಲಿರುವ ವಿಶೇಷಣಗಳನ್ನು ನೋಡಿದರೆ, ಭವಬದ್ಧಕ್ರೋಧದಿಂದ ಶತ್ರುವು ಪೆರಗೆ ಸಂಧಿಸುತ್ತಿರಲು ರಾಜೇಂದ್ರನು ಸ್ವಸ್ಥಾನವನ್ನು ಬಿಟ್ಟು ತನ್ನ ರಾಜತೇಜಸ್ಸು ನಷ್ಟವಾಗುವಂತೆಯೂ ತನ್ನನ್ನೇ ನಂಬಿಕೊಂಡಿರುವ ಪರಿವಾರಕ್ಕೆ ಶೋಕವುಂಟಾಗುವಂತೆಯೂ ರಾಜ್ಯಲಕ್ಷ್ಮಿಯನ್ನು ತ್ಯಜಿಸಿ ತಾನು ಕೈಹಿಡಿದಿದ್ದ ಪದ್ಮಿನೀಜಾತಿಯರಾದ ಅಂತಃಪುರದ ಸ್ತ್ರೀಯರನ್ನು ನೋಡದೆಯೇ (ಓಡಿಹೋಗುವಾಗ) ಉತ್ತಾನಪಾದನಾಗಿ (ಹೊದ್ದುಕೊಂಡಿದ್ದ) ವಸ್ತ್ರವನ್ನು ಬಿಟ್ಟುಬಿಟ್ಟು ಓಡಿಹೋಗಿ ಸಮುದ್ರವನ್ನು ಹೊಕ್ಕನು—ಎಂಬ ದೇಶಭ್ರಷ್ಟನಾದ ರಾಜನೊಬ್ಬನ ಅಪ್ರಸ್ತುತ ವೃತ್ತಾಂತವು ಗಮ್ಯವಾಗಿರುವುದು.

## 22. ಅಪ್ರಸ್ತುತಪ್ರಶಂಸೆ.[25]

ಅಪ್ರಸ್ತುತವೃತ್ತಾಂತವರ್ಣನೆ ಪ್ರಸ್ತುತವೃತ್ತಾಂತವನ್ನು ತಿಳಿಯಪಡಿಸುವುದರಲ್ಲಿ ವಿಶ್ರಾಂತವಾದರೆ ಅಪ್ರಸ್ತುತಪ್ರಶಂಸಾಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಬರೆದೊಡೆ ಬಣ್ಣಂ ಬರ್ಕುಮೆ
ವಿರಚಿಸಿದೊಡೆ ಪಚ್ಚಮುಕ್ಕುಮೇ ದುತ್ತೂರಂ |
ಧರೆಯೊಳ್ ಕನಕಾಹ್ವಯಮಂ
ಧರಿಸಿರ್ದುಂ ಮಿಸುನಿಯಂತಿರಕ್ಕುಮೆ ಸೇವ್ಯಂ ||

ಇಲ್ಲಿ 'ಕನಕ'ವೆಂಬ ಹೆಸರುಳ್ಳ ಉಮ್ಮತ್ತಿಯ ಗಿಡವು ವರ್ಣಿತವಾಗಿದೆ. ಆದರೆ ಈ ಉಮ್ಮತ್ತಿಯನ್ನು ವರ್ಣಿಸುವುದಷ್ಟೇ ಕವಿಯ ಉದ್ದೇಶವಲ್ಲ. ಆದ್ದರಿಂದ ಈ ಉಮ್ಮತ್ತಿ ಅಪ್ರಸ್ತುತವೆಂಬುದಾಗಿಯೂ, ಯೋಗ್ಯತೆಯಿಲ್ಲದಿದ್ದರೂ ವಿದ್ವಾಂಸನೆಂದು ಹೆಸರನ್ನು ಇಟ್ಟುಕೊಂಡಿರುವ ಮೂರ್ಖನು ಪ್ರಸ್ತುತನೆಂಬುದಾಗಿಯೂ ಹೇಳಬಹುದು.

## 23. ಶ್ಲೇಷೆ.[26]

ಒಂದೇ ಶಬ್ದಾನುಪೂರ್ವಿಯಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕ ಬೇರೆ ಬೇರೆ ವಸ್ತುಗಳನ್ನು ವರ್ಣಿಸುವುದು ಶ್ಲೇಷಾಲಂಕಾರ.

---

25 ಅಪ್ರಸ್ತುತಪ್ರಶಂಸಾ ಸ್ಯಾತ್ ಸಾ ಯತ್ರ ಪ್ರಸ್ತುತಾಶ್ರಯಾ ||

26 ನಾನಾರ್ಥಸಂಶ್ರಯಃ ಶ್ಲೇಷಃ . . . .

ಲಕ್ಷ್ಯ

ಅತಿಶಯಪದಾರ್ಥನಿಕರ
ಪ್ರತೀತಿಯಂ ಪಡೆವ ಪಾದವಿನ್ಯಾಸಂ ಭೂ ।
ನುತಮಾಗದಲ್ತೆ ನಿರ್ದೋ
ಷತೆಯಿಂದಲ್ಲದೆ ಸಮಂತು ಕವಿಗಂ ರವಿಗಂ ||

ಇಲ್ಲಿ ಕವಿಯೂ ರವಿಯೂ ಏಕಾನುಪೂರ್ವಿಯಿಂದಲೇ ವರ್ಣಿತರಾಗಿರುವರು. ಈ ವರ್ಣನೆಯಲ್ಲಿ 'ಪದಾರ್ಥ' 'ಪಾದ' 'ನಿರ್ದೋಷತೆ' ಎಂಬ ಶಬ್ದಗಳಿಗೆ ಕವಿಯ ಪರವಾಗಿ 'ಶಬ್ದಾರ್ಥ' 'ಶ್ಲೋಕಪಾದ' 'ದೋಷಶೂನ್ಯತೆ' ಎಂದು ಅರ್ಥ; ರವಿಯ ಪರವಾಗಿ, 'ಪ್ರಪಂಚದಲ್ಲಿರುವ ಪದಾರ್ಥ' 'ಕಿರಣ' 'ರಾತ್ರಿ ಶೂನ್ಯತೆ' (ಹಗಲು) ಎಂದು ಅರ್ಥ.

## 24. ಸಹೋಕ್ತಿ.[27]

ಸಹೃದಯರಂಜಕವಾದ ಸಹಭಾವವಿದ್ದಲ್ಲಿ—ಎಂದರೆ ಎರಡು ವಸ್ತುಗಳು ಒಟ್ಟಿಗೆ ಇದ್ದುವು ಅಥವಾ ಒಟ್ಟಿಗೆ ಹೋದುವು ಎಂದು ಮುಂತಾಗಿ ವರ್ಣಿಸಿದರೆ—ಸಹೋಕ್ತ್ಯ ಲಂಕಾರವಾಗುವುದು.

ಲಕ್ಷ್ಯ

ಮುಗಿಲಂ ಮುಟ್ಟಿತ್ತು ಸೇನಾರಜದೊಡನೆ ಜಯೋಭಧ್ವಜಶ್ರೇಣಿ ದಿಗ್ಭಿ
ತ್ತಿಗಳಂ ಮುಟ್ಟಿತ್ತು ತೂರ್ಯಾರವದೊಡನೆ ಬಲಕ್ಷೋಭಶಬ್ದಂ ಪಯೋರಾ |
ಶಿಗಳಂ ಮುತ್ತಿಟ್ಟು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾದೃ
ಗ್ವಿಗಳದ್ಬಾಷ್ಪಾಂಬುಧಾರಾಪ್ರಸರಮೆನೆ ನೃಪಂ ದಿಗ್ಜಯೋದ್ಯುಕ್ತನಾದಂ ||

ಇಲ್ಲಿ ಮುಗಿಲನ್ನು ಮುಟ್ಟುವುದರಲ್ಲಿ ಜಯೋಭಧ್ವಜಶ್ರೇಣಿಗೆ ಸೇನಾರಜದ ಸಹಭಾವವಿರುವುದಲ್ಲದೆ ಈ ಸಹಭಾವವು ಸಹೃದಯರಂಜಕವಾಗಿರುವುದು. ಹೀಗೆಯೇ ಮುಂದೆ ಮತ್ತೆರಡು ಸಹೋಕ್ತಿಗಳಿವೆ.

## 25. ವಿನೋಕ್ತಿ.[28]

ಒಂದು ಪದಾರ್ಥವಿಲ್ಲದಿರುವುದರಿಂದ ವರ್ಣ್ಯವು ಹೀನವಾಗಿರುವಂತೆ ವರ್ಣಿತ

---

27 ಸಹೋಕ್ತಿಸ್ಸಹಭಾವಶ್ಚೇದ್ಭಾಸತೇ ಜನರಂಜನಃ

28 ವಿನೋಕ್ತಿಶ್ಚೇದ್ವಿನಾ ಕಿಂಚಿತ್ಪ್ರಸ್ತುತಂ ಹೀನಮುಚ್ಯತೇ |
ತಚ್ಚೇತ್ಕಿಂಚಿದ್ವಿನಾ ರಮ್ಯಂ ವಿನೋಕ್ತಿಸ್ಸಾಪಿ ಕಥ್ಯತೇ |

ವಾದರೂ ಅಥವಾ ರಮ್ಯವಾಗಿರುವಂತೆ ವರ್ಣಿತವಾದರೂ ವಿನೋಕ್ತ್ಯಲಂಕಾರ ವಾಗುವುದು.

ಲಕ್ಷ್ಯ

ಕಳಹಂಸಂ ಸುಟಿಯಡ ಪೂ
ಗೊಳನಮೃತಮರೀಚಿ ಬೆಳಗದಂಬರಚಕ್ರಂ |
ಕಳಭಂ ಸಂಚರಿಸದ ವನ
ವಳಯುಂ ಸುತನಾಡದಂಗಳಂ ರಂಜಿಕುಮೇ ||

## 26. ಅತಿಶಯೋಕ್ತಿ.

1. ಭೇದಕಾತಿಶಯೋಕ್ತಿ[29]

ಲೋಕಪ್ರಸಿದ್ಧ ಪದಾರ್ಥಕ್ಕಿಂತಲೂ ಬೇರೆಯಾಗದೆ ಇದ್ದರೂ ಬೇರೆಯೆಂದು ತೋರುವಂತೆ ವರ್ಣಿಸುವುದೇ ಭೇದಕಾತಿಶಯೋಕ್ತಿ.

ಇದು ಪೊಸರೀತಿ ನೋಡಿದು ನವೀನಮಲಂಕೃತಿ ನವ್ಯಭಾವವಿಂ
ತಿದು ನವವೃತ್ತಿ ಲೇಸಿದು ರಸಸ್ಥಿತಿ ನೂತ್ನಮಿದಲ್ತೆ ನೂತನಂ |
ಪದರಚನಾವಿಲಾಸಮಿದು ಕಬ್ಬಮಪೂರ್ವಮಿದೆಂದು ಕಬ್ಬಿಗರ್
ಪದೆದೊಲವಿಂದೆ ಕೀರ್ತಿಸೆ ನಿಮಿರ್ಚುವೆನೀ ಸುಭಗಪ್ರಬಂಧಮಂ ||

ಇಲ್ಲಿ ಕಾವ್ಯದಲ್ಲಿರುವ ರೀತಿ ಅಲಂಕಾರ ಮೊದಲಾದವುಗಳು ಲೋಕಪ್ರಸಿದ್ಧ ವಾದವುಗಳಿಗಿಂತಲೂ ಭಿನ್ನವಾಗದೆ ತತ್ಸಜಾತೀಯಗಳಾಗಿದ್ದರೂ, 'ಪೊಸತು' 'ನವೀನಂ' ಇತ್ಯಾದಿಯಾಗಿ ವಿಶೇಷಿಸಿ ಇದೇ ಬೇರೆಯೆಂದು ತೋರುವಂತೆ ವರ್ಣಿತ ವಾಗಿವೆ. ಈ ಭೇದಕಥನವೇ ಭೇದಕಾತಿಶಯೋಕ್ತಿ.

2. ಸಂಬಂಧಾತಿಶಯೋಕ್ತಿ[30]

ಒಂದಕ್ಕೊಂದಕ್ಕೆ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ವರ್ಣಿಸುವುದೇ ಸಂಬಂಧಾತಿಶಯೋಕಿ

ಲಕ್ಷ್ಯ

ಸಿರಿ ತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾಮ್ರಂ ಶಚೀದೇವಿಯಿ
ಟ್ಟರನೇಜಿಲ್ ಮಿಗೆ ರಂಭೆಯಿಟ್ಟ ಕದಳೀಷಂಡಂ ಸುರಸ್ತ್ರೀಯರಿ |

---

29 ಭೇದಕಾತಿಶಯೋಕ್ತಿಸ್ತು ತಸ್ಯೈವಾನ್ಯತ್ವವರ್ಣನಂ |
30 ಸಂಬಂಧಾತಿಶಯೋಕ್ತಿಸ್ಸ್ಯಾತ್ ಅಯೋಗೇ ಯೋಗಕಲ್ಪನಂ ||

ಟ್ಟರವಿಂದಾಕರಮುರ್ವಶೀವಧು ಸರಾಗಂ ತಂದ ಪೂಗದ್ರುಮಂ
ತರದಿಂದಾ ರತಿಯಿಟ್ಟ ದಾಡಿಮಕುಲಂ ಸಾರ್ವರ್ತುಕೋದ್ಯಾನದೊಳ್ ||

ಇಲ್ಲಿ ಹೇಳಿರುವ ಉದ್ಯಾನದಲ್ಲಿ ಅಶೋಕಾದಿಗಳಿರಬಹುದು ; ಆದರೆ 'ಸಿರಿತಂದಿಕ್ಕಿದ ಅಶೋಕೆ' ಮತ್ತು 'ವಾಗ್ವನಿತೆ ಇಟ್ಟ ಆವ್ರ'ವೇ ಮುಂತಾದುವುಗಳು ವಸ್ತುತಃ ಇಲ್ಲ. ಇಂಥ ಅಶೋಕಾದಿಗಳ ಸಂಬಂಧವಿಲ್ಲದಿದ್ದರೂ ಉದ್ಯಾನಕ್ಕೆ ತತ್ಸಂಬಂಧವಿರುವುದಾಗಿ ಹೇಳಿರುವುದೇ ಸಂಬಂಧಾತಿಶಯೋಕ್ತಿ.

3. ಅಸಂಬಂಧಾತಿಶಯೋಕ್ತಿ[31]

ಒಂದಕ್ಕೊಂದಕ್ಕೆ ಸಂಬಂಧವಿಲ್ಲವೆಂದು ಹೇಳುವುದೇ ಅಸಂಬಂಧಾತಿಶಯೋಕ್ತಿ.

ಲಕ್ಷ್ಯ

..............................ಆಸ್ಯಮಿಂಬಿಲ್ಲ ಭಾ।
ಸುರನೇತ್ರದ್ವಿತಯಪ್ರಚಾರತೆಗೆ, ಬೆನ್ನಿಂಬಿಲ್ಲ ಧಮ್ಮಿಲ್ಲಬಂ।
ಧುರಸೀಮಾವಳಯಕ್ಕೆ ನೋಡೆ.......................

ಇಲ್ಲಿ ಕಣ್ಣುಗಳಿಗೆ ಮುಖದಲ್ಲಿ ಸಾಕಾದಷ್ಟು ಅವಕಾಶವಿದ್ದೇ ಇದೆ. ಆದರೂ ಸಾಕಾದಷ್ಟುಮಟ್ಟಿನ ಅವಕಾಶವಿಲ್ಲವೆಂದು ವರ್ಣಿಸಿರುವುದೇ ಅಸಂಬಂಧಾತಿಶಯೋಕ್ತಿ. 'ಧಮ್ಮಿಲ್ಲ'ಕ್ಕೂ ಹೀಗೆಯೇ.

4. ರೂಪಕಾತಿಶಯೋಕ್ತಿ[32]

ಉಪಮಾನೋಪಮೇಯಗಳಲ್ಲಿ ಉಪಮೇಯವನ್ನು ಹೇಳದೆ ಇದ್ದರೂ ಅದು ಗಮ್ಯವಾಗಿ ಅದಕ್ಕೂ ಉಪಮಾನಕ್ಕೂ ಅಭೇದವು ಕಂಡುಬರುತ್ತಿದ್ದರೆ ಅದು 'ರೂಪಕಾತಿಶಯೋಕ್ತಿ'.

ಲಕ್ಷ್ಯ

ತಳಿರೊಳ್ ತಾರಗೆ ಮೂಡಿದಂದು ತರದಿಂ ಪೊಂಬಾಟಿಗಿಂಬಾದ ಕೋ।
ಮಳಭಾವಂ ಪೊರೆದಂದುಮಾನೆದಲೆ ನುಣ್ಪಂ ಪೆಂಪನಾಳ್ದಂದು ಪೊಂ।
ಬೆಳಗಂ ಕಂಬುಗಿದಂದು ಕನ್ನಡಿಗೆ ಕಣ್ಬಂದಂದು ಬಾಲೇಂದು ಪಿಂ
ಡಳಿದಾಳ್ವಂಧಡಿಯಿಂದಮಾಮುಡಿವರಂ ಬಣ್ಣಿಪ್ಪುದಾಕಾಂತೆಯಂ ||

31 ಯೋಗೇಪ್ಯಯೋಗೋಽಸಂಬಂಧಾತಿಶಯೋಕ್ತಿರಿತೀಷ್ಯತೇ ||
32 ರೂಪಕಾತಿಶಯೋಕ್ತಿಸ್ಸ್ಯಾತ್ ನಿಗೀರ್ಯಾಧ್ಯವಸಾನತಃ ||

ಇಲ್ಲಿ ಹೆಜ್ಜೆ, ಕಾಲುಗುರು, ತೊಡೆ, ಮುಂತಾದವುಗಳಿಗೆ ತಳಿರ್, ತಾರಗೆ, ಪೊಂಬಾಟೆ, ಮೊದಲಾದವು ಕ್ರಮವಾಗಿ ಉಪಮಾನವಾಗಿರುವುವು. ಆದರೆ ಈ ಉಪಮಾನಗಳಿಗೆ ಉಪಮೇಯವಾದ ಪಾದಾದಿಗಳನ್ನು ಹೇಳಿಲ್ಲ; ಆದರೂ ಆ ಉಪಮೇಯಗಳು ಈ ಉಪಮಾನಗಳಿಂದ ತೋರುತ್ತವೆ; ಇದಕ್ಕೆ ಅವುಗಳಲ್ಲಿ ಕವಿಯಿಂದ ಕಲ್ಪಿತವಾದ ಪರಸ್ಪರ ಅಭೇದವೇ ಕಾರಣ. ಆದ್ದರಿಂದ ಇದು 'ರೂಪಕಾತಿಶಯೋಕ್ತಿ.'

5. ಅತ್ಯಂತಾತಿಶಯೋಕ್ತಿ[33]

ಕಾರಣಕ್ಕೂ ಕಾರ್ಯಕ್ಕೂ ಇರಬೇಕಾದ ಪೌರ್ವಾಪರ್ಯವು ತಲೆಕೆಳಗಾಗಿ ವರ್ಣಿತವಾದರೆ ಅದು ಅತ್ಯಂತಾತಿಶಯೋಕ್ತಿ.

ಲಕ್ಷ್ಯ

ಈತನಾರರ್ಜುನನೊ ಹೋ ಹೋ
ಮಾತು ಮಾಣಲಿ ಮಾಣಲೆಂಬೀ
ಮಾತು ಹಿಂಚಿತು ಮುನ್ನೆ ಮೌನದೊಳಿರ್ದುದಾಸ್ಥಾನ ||

ಈ ವರ್ಣನೆ, ಕಾರ್ಯದ ಶೀಘ್ರತೆಯನ್ನು ವ್ಯಕ್ತಪಡಿಸುತ್ತದೆ.

## 27. ಅತ್ಯುಕ್ತಿ.[34]

ಅದ್ಭುತವಾಗಿಯೂ ಅಸಂಭಾವಿತವಾಗಿಯೂ ಇರುವಂತೆ ಹೇಳಿದ ಶೌರ್ಯೌದಾರ್ಯ ಸೌಂದರ್ಯಾದಿಗಳ ವರ್ಣನೆ ಅತ್ಯುಕ್ತ್ಯಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನೆಯ್ದೆ ಬಿಚ್ಚಿ ವಿ
ಸ್ಫುರಿತತದುತ್ತ್ರತಾಪನಾತಪದಾರಿಸಿ ಸೂಡಿ ತಾರಕೋ |
ತ್ಕರಕುಸುಮಂಗಳಂ ತಳೆದು ಚಂದ್ರಿಕೆಯೆಂಬ ವಿಶಾಲಚೇಲಮಂ
ಧರಣಿಪಕೀರ್ತಿಕಾಂತೆ ವಿಧುದರ್ಪಣಮಂ ನೆರೆ ನಿಂದು ನಿಟ್ಟಿಪಳ್ ||

ಇದು ಸತ್ಯೇಂದ್ರಚೋಳನ ಕೀರ್ತಿಯ ವರ್ಣನೆ. ಅವನ ಕೀರ್ತಿ, ದೇವನದೀಪರ್ಯಂತವಾಗಿ ವ್ಯಾಪಿಸಿತೆನ್ನುವುದು ಅದ್ಭುತ ಮತ್ತು ಅಸಂಭಾವಿತ.

---

33 ಅತ್ಯಂತಾತಿಶಯೋಕ್ತಿಸ್ಸ್ಯಾತ್ ಪೌರ್ವಾಪರ್ಯವ್ಯತಿಕ್ರಮೇ ||

34 ಅತ್ಯುಕ್ತಿರದ್ಭುತಾತಥ್ಯಶೌರ್ಯೌದಾರ್ಯಾದಿವರ್ಣನಂ ||

## 28. ಆಕ್ಷೇಪ.[35]

ಮೊದಲು ಏನಾದರೂ ಒಂದು ವಿಷಯವನ್ನು ಹೇಳಿ, ಆಮೇಲೆ ವಿಚಾರ ಮಾಡಿ, ಆ ವಿಷಯವಿಲ್ಲದಿದ್ದರೂ ಕೊರತೆಯಿಲ್ಲ ಎಂದು ಸಮರ್ಥಿಸುವುದ ಆಕ್ಷೇಪಾಲಂಕಾರ.

ಲಕ್ಷ್ಯ

ಮಲೆನಾಡ ಮನ್ನೆಯರಿರಾ
ತೊಲಗಿಂ ಮಹಿಶೂರ ಬಲದ ದೂಳ್ಗಾಣದ ಮುನ್ |
ತೊಲಗದೊಡವಿರಿಮದರ್ಕಂ
ಫಲವೊಳವಾ ಬರ್ದಿಲನಾಡು. ನೆಲೆವೀಡಕ್ಕುಂ ||

ಮೊದಲು ನಿಷೇಧವಿದ್ದಂತೆ ತೋರಿ ಅನಂತರ ಆ ನಿಷೇಧವು ಅರ್ಥಾಂತರದಲ್ಲಿ ಕೊನೆಗಾಣುವುದಾದರೆ ಅದೂ ಆಕ್ಷೇಪ :

ಲಕ್ಷ್ಯ

ಒಡನಮೃತಂ ಜನಿಯಿಸೆ ಪಾ
ಲ್ಗಡಲೊಳ್ ವಿಧು ಪುಟ್ಟಿದಂ ಕಳಾಮಯನೆಂಬೀ |
ನುಡಿ ಪುಸಿ ಜಡಾತ್ಮಕಂ ವಿಷ
ದೊಡನೆ ವಿಷಾಕರದೊಳೊಗೆದನೆಂಬುದೆ ತಥ್ಯಂ ||

ಅರ್ಥಾಲಂಕಾರಗಳಲ್ಲಿ ಅನೇಕಕ್ಕೆ ಸಾದೃಶ್ಯವೇ ಮೂಲ; ಆದ್ದರಿಂದ ಅವುಗಳನ್ನು 'ಉಪಮಾಪ್ರಪಂಚ'ವೆಂದೇ ವಾಮನನು ಹೇಳಿದ್ದಾನೆ. ಹೀಗೆ ಮುಖವು ಚಂದ್ರನಂತಿದೆ ಎನ್ನುವುದೇ ಉಪಮಾಲಂಕಾರ. ಚಂದ್ರನಂತೆ ಮುಖ, ಮುಖದಂತೆ ಚಂದ್ರ ಎಂದರೆ ಉಪಮೇಯೋಪಮೆ. ಮುಖ ಮುಖದಂತಿದೆ ಎಂದರೆ ಅನನ್ವಯ. ಮುಖದಂತೆ ಚಂದ್ರ ಎಂದರೆ ಪ್ರತೀಪ. ಚಂದ್ರನನ್ನು ನೋಡಿ ಮುಖವನ್ನು ನೆನೆದನು, ಎಂದರೆ ಸ್ಮೃತಿಮದಲಂಕಾರ. ಮುಖವೆಂಬ ಚಂದ್ರನೆಂದರೆ ರೂಪಕ. ಮುಖಚಂದ್ರನಿಂದ ತಾಪ ಆರುತ್ತದೆ ಎಂದರೆ ಪರಿಣಾಮ. ಇದೇನು ಮುಖವೋ ಚಂದ್ರನೋ ಎಂದಲ್ಲಿ ಸಂದೇಹ. ಚಂದ್ರನೆಂದಾಕೆಯ ಮುಖಕ್ಕೆ ಚಕೋರವು ಎರಗುವುದು ಎಂದರೆ ಭ್ರಾಂತಿಮದಲಂಕಾರ. ಮುಖವನ್ನು ಕಂಡು ಚಕೋರವು ಚಂದ್ರನೆಂದೂ ಭ್ರಮರವು ಕಮಲವೆಂದೂ ನಲಿಯುವುವು ಎಂದರೆ ಉಲ್ಲೇಖ. ಇದು ಚಂದ್ರನಲ್ಲದೆ ಮುಖವಲ್ಲ ಎಂದಲ್ಲಿ ಅಪಹ್ನವ. ಧರೆಯಲ್ಲಿ ನಿನ್ನ ಮುಖ,

---

[35] ಆಕ್ಷೇಪಸ್ಸ್ವಯಮುಕ್ತಸ್ಯ ಪ್ರತಿಷೇಧೋ ವಿಚರಣಾತ್ |
ನಿಷೇಧಾಭಾಸಮಾಕ್ಷೇಪಂ ಬುಧಾಃ ಕೇಚನ ಮನ್ವತೇ ||

ಅಂಬರದಲ್ಲಿ ಚಂದ್ರ ಎಂದರೆ ದೃಷ್ಟಾಂತ. ಚಂದ್ರನು ಆಕೆಯ ಮುಖದೊಡನೆ ಇರುಳಲ್ಲಿ ಮೆರೆಯುತ್ತಾನೆ ಎಂದಲ್ಲಿ ಸಹೋಕ್ತಿ. ಮುಖವೆತ್ತ ಚಂದ್ರನೆತ್ತ ಎಂದಲ್ಲಿ ವಿಷಮಾಲಂಕಾರ.

ಹೀಗೆ ಔಪಮ್ಯಮೂಲಕವಾದ ಅಲಂಕಾರಗಳೇ ಹೆಚ್ಚು; ಆದ್ದರಿಂದ ಈ ವಿಭಾಗಕ್ಕೆ ಇಲ್ಲಿ ಹೆಚ್ಚು ಅವಕಾಶವನ್ನು ಕೊಟ್ಟಿದೆ.

## II. ವಿರೋಧಮೂಲಕವಾದ ಅಲಂಕಾರಗಳು

### 29. ವಿಶೇಷೋಕ್ತಿ.[36]

ಕಾರಣವು ಸಮಗ್ರವಾಗಿದ್ದರೂ ಕಾರ್ಯವು ಉಂಟಾಗದಿದ್ದಲ್ಲಿ ವಿಶೇಷೋಕ್ತ್ಯಲಂಕಾರ.

ಲಕ್ಷ್ಯ

ಅಳಿಕುಲಮೆಲ್ಲ ಪೀರ್ದೊಡರೆಯಾಗದ ಸನ್ಮಧು ಮಂದಮಾರುತಂ
ಸೆಳೆದೊಡೆ ಕುಂದದಿರ್ಪ ನಱುಗಂಪಲರೊಳ್ ಗಿಳಿವಿಂಡು ಪೀರ್ದೊಡಂ।
ಕಳೆಯದೆ ತುಂಬಿ ತೋರ್ಪ ರಸವಾ ಪೊಸಪಣ್ಣೊಳನೇಕಕೋಕಿಲಾ
ವಳಿ ಮುಱಿದೊಟ್ಟೆ ಪಿಂಗದ ತಳಿರ್ ಕಿಱುಮಾಮರದೊಳ್ ವಿರಾಜಿಕುಂ॥

### 30. ವಿಭಾವನಾ.[37]

ಸರಿಯಾದ ಅಥವಾ ತಕ್ಕಷ್ಟು ಕಾರಣವಿಲ್ಲದೆ ಕಾರ್ಯವುಂಟಾದಂತೆ ವರ್ಣಿತವಾದರೆ ಅದು 'ವಿಭಾವನಾ.' (1) ಕಾರಣವಿಲ್ಲದೆಯೇ ಕಾರ್ಯೋತ್ಪತ್ತಿ. (2) ವಿರುದ್ಧ ಸಾಮಗ್ರಿಯಿಂದ ಕಾರ್ಯೋತ್ಪತ್ತಿ. (3) ಕಾರಣವಲ್ಲದ್ದರಿಂದ ಕಾರ್ಯೋತ್ಪತ್ತಿ. (4) ಪ್ರತಿಬಂಧಕವಿರುವಾಗ ಕಾರ್ಯೋತ್ಪತ್ತಿ. (5) ಅಸಮಗ್ರವಾದ ಕಾರಣದಿಂದ ಕಾರ್ಯೋತ್ಪತ್ತಿ. (6) ಕಾರ್ಯದಿಂದಲೇ ಕಾರಣೋತ್ಪತ್ತಿ ಎಂದು ಆರು ವಿಧ. ಇವುಗಳಲ್ಲಿ ಇಲ್ಲಿ ಎರಡಕ್ಕೆ ಮಾತ್ರ ಲಕ್ಷ್ಯವನ್ನು ತೋರಿಸಿದೆ.

---

36 ಕಾರ್ಯಾಜನಿರ್ವಿಶೇಷೋಕ್ತಿಸ್ಸತಿ ಪುಷ್ಕಲಕಾರಣೇ।

37 ವಿಭಾವನಾ ವಿನಾಪಿ ಸ್ಯಾತ್ ಕಾರಣಂ ಕಾರ್ಯಜನ್ಮ ಚೇತ್।
ಕಾರಣಸ್ಯಾಸಮಗ್ರತ್ವೇ ಕಾರ್ಯೋತ್ಪತ್ತಿಶ್ಚ ಸಾಮತಾ॥
ಕಾರ್ಯೋತ್ಪತ್ತಿಸ್ತೃತೀಯಾ ಸ್ಯಾತ್ ಸತ್ಯಪಿ ಪ್ರತಿಬಂಧಕೇ॥
ವಿರುದ್ಧಾತ್ ಕಾರ್ಯಜನ್ಮಾಪಿ ದೃಷ್ಟಾ ಕಾಚಿದ್ವಿಭಾವನಾ॥
ಅಕಾರಣಾತ್ ಕಾರ್ಯಜನ್ಮ ದೃಷ್ಟಾ ಕಾಚಿದ್ವಿಭಾವನಾ॥
ಕಾರ್ಯಾತ್ ಕಾರಣಜನ್ಮಾಪಿ ದೃಷ್ಟಾ ಕಾಚಿದ್ವಿಭಾವನಾ॥

ಲಕ್ಷ್ಯಗಳು

(i) ಮದನೋಗ್ರಾಗ್ನಿ ಮನಕ್ಕೆ ಮಾಳ್ಪುದು ಮಹಾಸಂತಾಪಮಂ ಜ್ವಾಲೆಯಿ
ಲ್ಲದೆಯುಂ, ಕಣ್ಮಲರ್ಗಳ್ಗೆ ಪೊಣ್ಮಿಸುವುದಂಭೋಧಾರೆಯಂ ಧೂಮಮಿ |
ಲ್ಲದೆಯುಂ, ಮೆಯ್ಗೊಗೆಯಿಪ್ಪುದಗ್ಗಲಿಪ ಪಾಂಡುಚ್ಛಾಯೆಯಂ ಭಸ್ಮಮಿ
ಲ್ಲದೆಯುಂ, ತಾನೆಣಿಸಲ್ ವಿಚಿತ್ರಮಿದನಂತಿಂತುಂತೆನಲ್ ಬರ್ಕುಮೇ ||

ಇಲ್ಲಿ ಜ್ವಾಲಾದಿ ಕಾರಣಗಳಿಲ್ಲದಿರುವಾಗ ಸಂತಾಪಾದಿ ಕಾರ್ಯಗಳುಂಟಾಗಿರುವುವು.

(ii) ಸ್ಫುರಿತತಟಿತ್ಪ್ರಭಾಪ್ರತತಿ ಕಟ್ಟಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ |
ರ್ಭರಪರಿತಾಪಮಂ ಕುಟಜಕುಂದನವೋದ್ಗಮವಾಟಿ ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ||

ಇದು ವರ್ಷಾಕಾಲವರ್ಣನೆ; ಇಲ್ಲಿ ತಟಿತ್ಪ್ರಭಾದಿಗಳು ಪ್ರಕಾಶಾದಿಕಾರ್ಯವನ್ನು ಮಾಡದೆ ತದ್ವಿರುದ್ಧವಾದ ಅಂಧಕಾರಾದಿಗಳನ್ನು ಮಾಡುವುದು ವಿರುದ್ಧ ಸಾಮಗ್ರಿಯಿಂದುಂಟಾದ ಕಾರ್ಯ. (ವಿರಹಿಗಳಿಗೆ ಉಂಟಾಗುವ ಬುದ್ಧಿಮಾಲಿನ್ಯವೇ ಆ ಅಂಧಕಾರ.)

## 31. ವಿಷಮ.[38]

(1) ಪರಸ್ಪರ ಅನುಗುಣವಲ್ಲದ ಪದಾರ್ಥಗಳು ಒಟ್ಟಿಗೆ ಸೇರಿವೆ ಎಂದು ವರ್ಣಿಸಿದರೆ ವಿಷಮಾಲಂಕಾರವಾಗುವುದು.

ಲಕ್ಷ್ಯ

ಎಳಗೆಂಪನುಗುಳ್ವ ಮೃದುಕೋ
ಮಲಪದಕಮಲಂಗಳೀಗಳತಿಕಠಿನಮೆನಿ |
ಪ್ಪಿಳೆಯೊಳ್ ಹರ ಹರ ಕಲ್ನೆಲ
ಕಳವಟ್ಟುವಿವೆಂತು ಬಾಲಹಂಸೀಯಾನೇ ||

ಇಲ್ಲಿ ಪಾದಕಮಲ ಕಲ್ನೆಲಗಳಿಗೆ ಇರುವ ಘಟನೆ ಅತಿ ಮಾರ್ದವ ಮತ್ತು ಅತಿ ಕಾಠಿನ್ಯ ಇವುಗಳಿಂದ ಪರಸ್ಪರ ಅನನುಗುಣವಾಗಿರುವುದು.

---

[38] ವಿಷಮಂ ವರ್ಣ್ಯತೇ ಯತ್ರ ಘಟನಾಽನನುರೂಪಯೋಃ |
ವಿರೂಪಕಾರ್ಯಸ್ಯೋತ್ಪತ್ತಿರಪರಂ ವಿಷಮಂ ಮತಂ |
ಅನಿಷ್ಟಸ್ಯಾಪ್ಯವಾಪ್ತಿಶ್ಚ ತದಿಷ್ಟಾರ್ಥಸಮುದ್ಯಮಾತ್ ||

(2) ಕಾರಣಗುಣಕ್ಕಿಂತ ಕಾರ್ಯಗುಣವು ಭಿನ್ನವಾಗಿದ್ದಲ್ಲಿ ಮತ್ತೊಂದು ವಿಧವಾದ ವಿಷಮಾಲಂಕಾರವಾಗುವುದು.

ಲಕ್ಷ್ಯ

ಎನಗಾಲೋಕನಮಾತ್ರದಿ
ನನುರಾಗಮನುಂಟುಮಾಡಿ ನೀಲಚ್ಛವಿಯಂ ।
ಮನವಂ ಋಜುವಮಾಡಿದುವೀ
ವನಿತೆಯ ಕೊಂಕಿದ ಕುರುಳ್ಗಳಿದುಃ ಬಿಸವಂದಂ ॥

ಇಲ್ಲಿ ಕುರುಳುಗಳ ಕಪ್ಪು ಅನುರಾಗವನ್ನು (ಕೆಂಪನ್ನು) ಉಂಟುಮಾಡಿದೆ. ಅವುಗಳ ಕೊಂಕು ಋಜುತ್ವವನ್ನುಂಟುಮಾಡಿದೆ ಎಂದು ಕವಿ ವರ್ಣಿಸಿದ್ದಾನೆ.

ಇಷ್ಟಸಿದ್ಧಿಗಾಗಿ ಪ್ರಯತ್ನಿಸಿದಾಗ (3) ಇಷ್ಟಾರ್ಥಸಿದ್ಧಿಯಾಗದಂತಾದರೂ (4) ಅನರ್ಥಪ್ರಾಪ್ತಿಯಾದಂತಾದರೂ ವರ್ಣಿತವಾದರೆ ಅದೂ ವಿಷಮಾಲಂಕಾರ :

ಲಕ್ಷ್ಯಗಳು

ಬೆಳಗಂ ಕತ್ತಲಿಸುವ ಮೆಳೆ
ಯೊಳಗಂ ಪೊಕ್ಕಲ್ಲಿ ತನ್ನ ಕಣ್ಗಳ ಬೆಳಗಿಂ ।
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಳೆ ಶಬರಿ ಸೊಬಗಟುದಿರ್ದಳ್ ॥

ಇಲ್ಲಿ, ಶಬರಿಯೊಬ್ಬಳು ಕತ್ತಲೆ ಇರುವ ಸ್ಥಳ ಬೇಕೆಂದು ಒಂದು ಮೆಳೆಯೊಳಕ್ಕೆ ಹೋದರೆ, ಅದರ ಕತ್ತಲೆಯೆಲ್ಲವೂ ತನ್ನ ಕಣ್ಣುಗಳ ಬೆಳಕಿನಿಂದ ಹೋಗಿ ಇಷ್ಟಾರ್ಥ ಪ್ರಾಪ್ತಿಯಾಗದಿರುವುದು.

ಭಾವಿಸಿ ಭವನಂ ಕುಸುಮಾ
ಸ್ತ್ರಾವಳಿಯಿಂದೆಚ್ಚು ಗೆಲ್ವೆಯೆಂದಿರ್ದೆನಿದಿಂ ।
ತೋವೊ ನಿಟಿಲಾಗ್ನಿಯಿಂದಂ
ಬೇವುದನಾನೆತ್ತ ಬಲ್ಲೆನಲರ್ವಿಲ್ಲರಸಾ ॥

ಇದು ದಗ್ಧನಾದ ಮನ್ಮಥನನ್ನು ನೋಡಿದ ರತಿಯ ಪ್ರಲಾಪ. ಇಲ್ಲಿ ಈಶ್ವರ ನನ್ನು ಗೆಲ್ಲುವುದೇ ಇಷ್ಟಾರ್ಥ. ಈ ಇಷ್ಟವು ಸಿದ್ಧಿಸದೆ, ಅಲರ್ವಿಲ್ಲನ ದಹನರೂಪವಾದ ಅನರ್ಥವೇ ಪ್ರಾಪ್ತವಾಯಿತು.

## 32. ಸಮ.[39]

(i) ಅನುರೂಪ ಪದಾರ್ಥಗಳ ಘಟನೆಯ ವರ್ಣನೆ ಸಮಾಲಂಕಾರವೆನ್ನಿಸಿಕೊಳ್ಳುವುದು.

ಲಕ್ಷ್ಯ

ಸ್ತ್ರೀರತ್ನಮೀಗಳೀಕೆಯೆ
ಧಾರಿಣಿಯೊಳ್ ಪುರುಷರತ್ನಮೀತನೆ ಸದೃಶಾ ।
ಕಾರರನಿವರಂ ಕೂಡಿ ಪ
ಯೋರುಹಜಂಗಕ್ಕೆ ಸಮುಸಮಾಯೋಗಯಶಂ ॥

(ii) ಕಾರ್ಯಕಾರಣಗಳಿಗೆ ಸಮಾನಗುಣತ್ವವು ವರ್ಣಿತವಾಗಿದ್ದಲ್ಲಿಯೂ ಸಮಾಲಂಕಾರವೇ.

ಲಕ್ಷ್ಯ

ಸುಡದೆ ಕನಲ್ವ ಕಿಚ್ಚಿನೊಡನಾಡಿದ ತೆಂಬೆಲರಾತಪಂಗಳೊಳ್
ಪೊಡರ್ವ ಸರೋರುಹಂ ಸುಡದೆ ನುಂಗುವ ಪಾವಿನ ಪಲ್ಲ ನಂಜುಗಿ ।
ರ್ಚಡರ್ದಮೃತಾಂಶುಮಂಡಲಮದೇಂ ಸುಡದೇ ಹಿಮಮುಂಡು ಬಾಳ್ವ ಕ
ಣ್ಮಡುವಿನ ಪೂವೆ ಸುಟ್ಟಪುದಿದಯ್ಯೊ ವಿಯೋಗಿಗಳೆಂತು ಬಾಳ್ದಪರ್ ॥

ಇಲ್ಲಿ ಅಗ್ನಿಯ ಸಹವಾಸವಿರುವ ಗಾಳಿಗೆ ಅಗ್ನಿಯ ಗುಣವಾದ ಸುಡುವುದೆಂಬ ಗುಣವು ಬಂದಿರುವುದೆಂದು ಹೇಳಿದೆ. ಹೀಗೆಯೇ ಮಿಕ್ಕೆರಡರಲ್ಲಿಯೂ ಗ್ರಹಿಸಿಕೊಳ್ಳಬೇಕು.

## 33. ವಿರೋಧಾಭಾಸ.[40]

ವಿರೋಧವು ವಸ್ತುತಃ ಇಲ್ಲದೆ, ಇರುವಂತೆ ಮಾತ್ರ ತೋರಿದರೆ ವಿರೋಧಾಭಾಸಾಲಂಕಾರವಾಗುವುದು ('ಅಭಾಸ'ವೆಂದರೆ ನಿಜವಾಗಿ ಇಲ್ಲದಿದ್ದರೂ ಇರುವಂತೆ ತೋರುತ್ತಿರುವುದು.)

ಲಕ್ಷ್ಯ

ಕನಕನಗೇಂದ್ರಧರ್ಮಕರನಾಗಿಯುಮುನ್ನತಧರ್ಮಹಂತೃ ಸಂ
ಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಂ ಪ್ರದತ್ತಕಾ ।
ಮನುಮೆನಿಸಿರ್ದು ಕಾಮಮಥನಂ ಪರಮೋಕ್ಷದನಾಗಿಯುಂ ಸನಾ
ತನಪರಮೋಕ್ಷಲಬ್ಧನೆನಿಸಿರ್ದನಹೀಂದ್ರಭೂಷಣಂ ॥

---

39 ಸಮಂ ಸ್ಯಾದ್ವರ್ಣನಂ ಯತ್ರ ದ್ವಯೋರಪ್ಯನುರೂಪಯೋಃ ।
40 ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ ॥

ಈ ಪದ್ಯದಲ್ಲಿ ವರ್ಣಿತನಾದ ಈಶ್ವರನು 'ಮೇರುಪರ್ವತದಷ್ಟು ಧರ್ಮ ಮಾಡುವವನಾದರೂ ಉನ್ನತವಾದ ಧರ್ಮವನ್ನು ಹಾಳುಮಾಡುವವನು' ಎಂದು ಹೇಳಿದಲ್ಲಿ ವಿರೋಧ ಕಾಣುವುದು. ಆದರೆ ಧರ್ಮವೆಂಬ ಶಬ್ದಕ್ಕೆ ಧನುಸ್ಸೆಂದೂ ಯಮಧರ್ಮನೆಂದೂ ಅರ್ಥವಾಗುವುದು. ಆದ್ದರಿಂದ 'ಕನಕನಗೇಂದ್ರರೂಪವಾದ ಚಾಪವೇ ಕರದಲ್ಲಿ ಉಳ್ಳವನೂ ಉನ್ನತನಾದ ಯಮನನ್ನು ಹೊಡೆದವನೂ' ಎಂಬ ಅರ್ಥವನ್ನು ಹೇಳಿದಲ್ಲಿ ವಿರೋಧ ಹೋಗುವುದು. ಆದ್ದರಿಂದ ಇಲ್ಲಿ 'ವಿರೋಧಾಭಾಸ'.

ಹೀಗೆಯೇ 'ಸಂಜನಿತಪರಾರ್ಥನಾಗಿಯುಮುದಗ್ರಪರಾರ್ಥ್ಯಹರಂ' ಎಂಬಲ್ಲಿರುವ 'ಪರಾರ್ಥ' ಶಬ್ದಕ್ಕೆ ಪರರ ಪ್ರಯೋಜನ ಮತ್ತು ಪರವಸ್ತುವೆಂಬ ಅರ್ಥದ್ವಯವನ್ನೂ, ಮುಂದಿರುವ 'ಕಾಮ' ಶಬ್ದಕ್ಕೆ ಇಷ್ಟಾರ್ಥ ಮತ್ತು ಮನ್ಮಥನೆಂಬ ಅರ್ಥದ್ವಯವನ್ನೂ, 'ಪರಮೋಕ್ಷ' ಶಬ್ದಕ್ಕೆ ಪರಮವಾದ ಉಕ್ಷವೆಂದರೆ ಎತ್ತೆಂಬುದಾಗಿಯೂ ಪರವೆಂದರೆ ಉತ್ಕೃಷ್ಟವಾದ ಮೋಕ್ಷವೆಂಬದಾಗಿಯೂ ಅರ್ಥದ್ವಯವನ್ನಲ್ಲದೆ 'ಸನಾತನಪರ ಮೋಕ್ಷಲಬ್ಧ'ನೆಂಬಲ್ಲಿ ವಿರೋಧಪರಿಹಾರಕವಾದ ಅರ್ಥವನ್ನು ಹೇಳುವಾಗ ಸ್ವವಾಹನ ಭೂತವಾದ ಉಕ್ಷವೆಂಬರ್ಥವನ್ನು ಹೇಳಿದಲ್ಲಿ ವಿರೋಧವೂ ವಿರೋಧಪರಿಹಾರವೂ ತೋರಿಬರುತ್ತವೆ.

## III. ಶೃಂಖಲಾಮೂಲಕವಾದ ಅಲಂಕಾರಗಳು

### 34. ಸಾರ.[41]

ಉತ್ತರೋತ್ತರೋತ್ಕರ್ಷವರ್ಣನೆ ಎಂದರೆ ಒಂದಕ್ಕಿಂತ ಮತ್ತೊಂದು ಅತಿಶಯ ವಾಗಿದೆ ಎಂದು ಹೇಳುವುದು ಸಾರಾಲಂಕಾರ.

ಲಕ್ಷ್ಯ

ಕಲಿ ಪಾರ್ಥಂ ಪಾರ್ಥನಿಂದಂ ಕಲಿ ರವಿತನಯಂ ಪಾರ್ಥನಿಂ ಕರ್ಣನಿಂದಂ
ಕಲಿ ಭೀಮಂ ಪಾರ್ಥನಿಂ ಕರ್ಣನಿನನಿಲಜನಿಂ ರಾಘವಾಧೀಶಭೃತ್ಯಂ |
ಕಲಿ ಶಕ್ರಾಪತ್ಯನಿಂ ಕರ್ಣನಿನನಿಲಜನಿಂದಂಜನಾಪುತ್ರನಿಂದಂ
ಕಲಿ ಧಾತ್ರೀಚಕ್ರದೊಳ್ ವಿಕ್ರಮಗುಣನಿಲಯಂ ವೀರಮಾರ್ತಾಂಡದೇವಂ ||

### 35. ಏಕಾವಳಿ.[42]

ಮೊದಲು ಗೃಹೀತವಾಗಿ ಅನಂತರ ತ್ಯಕ್ತವಾಗುವ ಪದಾರ್ಥ ಪರಂಪರೆಯ ವರ್ಣನೆ ಏಕಾವಳ್ಯಲಂಕಾರವೆನ್ನಿಸಿಕೊಳ್ಳುವುದು.

---

41 ಉತ್ತರೋತ್ತರಮುತ್ಕರ್ಷಃ ಸಾರ ಇತ್ಯಭಿಧೀಯತೇ |

42 ಗೃಹೀತಮುಕ್ತರೀತ್ಯಾರ್ಥಶ್ರೇಣಿರೇಕಾವಳೀ ಮತಾ ||

ಲಕ್ಷ್ಯ

ನನೆಯನೆ ಪೇಱು ಕೆಂದಳಿರೊಳೆಯ್ದೆ ಬಱಲ್ದೆಳಮಾವು ಭಂದ ಮಾ
ವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್ ।
ಜಿನುಗುವ ತುಂಬಿ ತುಂಬಿಯೊಳರಲ್ದರಲೆಂದಿವಱಿಂ ಬಸಂತರಾ
ಜನ ಮನೆಯಂತೆ ಕಣ್ಗೆಸೆದು ತೋಱುಗುಮಲ್ಲಿಯ ನಂದನಾಳಿಗಳ್ ॥
(ಇದೇ ಆವಳ್ಯಲಂಕಾರವೆಂದು ಕಾವ್ಯಾವಲೋಕನದಲ್ಲಿ ಉಕ್ತವಾಗಿರುವುದು.)

## IV. (i) ತರ್ಕನ್ಯಾಯ ಮೂಲಕವಾದ ಅಲಂಕಾರಗಳು.

### 36. ಕಾರಣ.[43]

ಕಾರ್ಯದೊಡನೆ ಹೇಳಿರುವ ಕಾರಣವರ್ಣನೆ ಕಾರಣಾಲಂಕಾರವಾಗುವುದು.

ಲಕ್ಷ್ಯ

ಮುಗುಳ ತೊಡಂಬೆ ಮಾಧವಿಗೆ ಮಾಮರನೊಳ್ ಕಳಿಕಾಳಿ ಚೆಲ್ವ ಮ
ಲ್ಲಿಗೆಗೆ ಪೊದಟ್ಟ ಪೂಗುಡಿ ಪಯೋಜಿನಿಗುಳ್ಳಲರಿಂಪುವೆತ್ತ ಸಂ ।
ಪಗೆಗಲರ್ಜೊಂಪಮುದ್ಗಮದ ಮಂಜರಿ ಪಾಟಳಿಗಾಗೆ ಬಂದನಿಂ
ದಗಣಿತಕೋಕಿಲಾಳಿಕುಲಸಮ್ಮದಕಾರಿ ಮನೋಜ್ಞಮಾಧವಂ ॥

ಕಾರ್ಯಕಾರಣಗಳಿಗೆ ಅಭೇದವನ್ನು ವರ್ಣಿಸುವುದೂ ಕಾರಣಾಲಂಕಾರದ ಭೇದವೆಂಬುದಾಗಿ ಕೆಲವರು ಹೇಳುವರು.

ಪಿಕಕುಲದ ಸೊರ್ಕು ಮಧುಕರ
ನಿಕರದ ಮದಮರಗಿಳಿಗಳ ಗರ್ವಂ ನವಚೂ ।
ತಕುಜಂ ಮಲ್ಲಿಗೆ ದಾಡಿಮ
ನಿಕಾಯಮುಂಕುರದೆ ಪುಷ್ಪದಿಂ ಫಲದಿಂದಂ ॥

(ನವಚೂತಕುಜಂ ಅಂಕುರದೆ ಪಿಕಕುಲದ ಸೊರ್ಕು, ಮಲ್ಲಿಗೆ ಪುಷ್ಪದಿಂ ಮಧುಕರ ನಿಕರದ ಮದಂ, ದಾಡಿಮನಿಕಾಯಂ ಫಲದಿಂದಂ ಅರಗಿಳಿಗಳ ಗರ್ವಂ— ಎಂದು ಅನ್ವಯ.) ಇಲ್ಲಿ ಪಿಕಕುಲದ ಸೊಕ್ಕೆಂಬ ಕಾರ್ಯಕ್ಕೂ ತತ್ಕಾರಣವಾದ ನವ ಚೂತಕುಜಕ್ಕೂ ಅಭೇದವನ್ನು ಹೇಳಿರುವುದರಿಂದ ಕಾರಣಾಲಂಕಾರ. ಹೀಗೆಯೇ ಮಲ್ಲಿಗೆಯಲ್ಲಿಯೂ ದಾಡಿಮ ನಿಕಾಯದಲ್ಲಿಯೂ ಹೇಳಬೇಕು.

---

[43] ಕಾರಣಸ್ಯ ಸ ಕಾರ್ಯಸ್ಯ ವರ್ಣನಂ ಕಾರಣಂ ವಿದುಃ ।
ಕಾರ್ಯಕಾರಣಯೋರೈಕ್ಯಂ ಕಾರಣಂ ಕೇಚಿದೂಚಿರೇ ॥

ವಿಚಾರ : ರೂಪಕಾಲಂಕಾರದಲ್ಲಿ ಅಭೇದಕಲ್ಪನೆ ಸಾದೃಶ್ಯಮೂಲಕವಾಗಿಯೂ ಇಲ್ಲಿ ಕಾರ್ಯಕಾರಣಮೂಲಕವಾಗಿಯೂ ಇರುವುದು.

## 37. ಅನುಮಾನ.[44]

ಕಾರ್ಯದಿಂದ ಕಾರಣವನ್ನು ಊಹಿಸಿ ಕಂಡುಹಿಡಿದಲ್ಲಿ ಅನುಮಾನಾಲಂಕಾರ ವಾಗುವುದು.

ಲಕ್ಷ್ಯ

ಸುದತಿಯ ಸುಯ್ಗಳಿಂ ಬನಮೆ ಬೆಂದುದು ಬೇಯಮೊಡೇಕೆ ಕೆಚ್ಚನಾ
ದುದೊ ತನಿವಣ್ಗಳಂ ಸವಿದಕೀರದ ಚಂಚುವವೇಕೆ ಮೂಗುವ |
ಟ್ಟುದೊ ಮಧು ಪೋಪುದುಂ ಕಳಿಕೆಗರ್ಚಿದ ಕೋಗಿಲೆಯೇಕೆ ಪಾಱಿ ಪೋ
ದುದೊ ಶಿಶಿರಾಂಬುಜಾಕರಕೆ ತುಂಬಿ ತುಡುಂಕಿ ನವಪ್ರಸೂನಮಂ ||

ಬೆಂಕಿಯಲ್ಲಿ ಬೆಂದರೆ ಲೋಹಾದಿಗಳು ಕೆಂಪಗಾಗುವುದು ಸ್ವಭಾವ ; ಗಿಣಿಯ ಕೊಕ್ಕು ಕೆಂಪಗಿರುವುದರಿಂದ ಹೀಗೆ ಅದೂ ಬೆಂಕಿಯಲ್ಲಿ ಬೆಂದಿರಬೇಕೆಂಬುದು 'ಅನುಮಾನ'. ಕೋಗಿಲೆ ತುಂಬಿಗಳ ವಿಚಾರವೂ ಹೀಗೆಯೇ.

## 38. ಕಾವ್ಯಲಿಂಗ.[45]

ಸಹೃದಯರು ಒಪ್ಪುವ ಕಾರಣವನ್ನು ಕೊಟ್ಟು, ಸಂದಿಗ್ಧವೋ ಅಸಂಭಾವ್ಯವೋ ಆದ ವಿಷಯವನ್ನು ಸಮರ್ಥಿಸಿದರೆ ಕಾವ್ಯಲಿಂಗಾಲಂಕಾರವಾಗುವುದು.

ಲಕ್ಷ್ಯ

ಬಾಣಂ ವಲ್ಲಭನಕ್ಕುಮೆಂದು ಪಡೆದಾವಾಗ್ದೇವಿಗಬ್ಜೋದ್ಭವಂ
ಜಾಣಿಂ ಬಾಣಿಯೆನಿಪ್ಪದೊಂದು ಪೆಸರಂ ಮುನ್ನಿತ್ತನೆಂದಂದು ಪೋ |
ಮಾಣಿನ್ನನ್ಯಕವಿಸ್ತುತಿವ್ಯಸನಮಂ ವಾಗ್ಜಾತಚಾತುರ್ಯಗೀ
ರ್ವಾಣಂ ತಾನೆನೆ ಸಂದ ಬಾಣನೆ ವಲಂ ವಂದ್ಯಂ ಪೆಱರ್ ವಂದ್ಯರೇ ||

ಇಲ್ಲಿ ಇತರರು ವಂದ್ಯರಾಗದೆ ಬಾಣನೊಬ್ಬನು ಮಾತ್ರವೇ ವಂದ್ಯನಾಗಿರುವ ನೆಂದು ಹೇಳಿರುವ ವಿಷಯಕ್ಕೆ ಬ್ರಹ್ಮನು ಸರಸ್ವತಿಗೆ 'ಬಾಣಿ'ಯೆಂಬ ಹೆಸರನ್ನು ಕೊಟ್ಟಿರುವುದೇ ಸಮರ್ಥಕವಾದ ಸಾಧನ.

ವಿಚಾರ : ಹಿಂದಿನ ಅನುಮಾನಾಲಂಕಾರದಲ್ಲಿ ಕಾರ್ಯದಿಂದ ಕಾರಣದ

---

[44] ಲಿಂಗಜ್ಞಾನಾತ್ ಸಾಧ್ಯಸಿದ್ಧಿರನುಮಾನಮಿಹೋಚ್ಯತೇ ||
[45] ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಂ ||

ಅನುಮಿತಿ ವಿವೃತವಾಗುವುದು. ಕಾವ್ಯಲಿಂಗದಲ್ಲಿ ಸಂದಿಗ್ಧವಿಷಯದ ಸಮರ್ಥನೆಗೆ ಇರಬೇಕಾದ ಕಾರಣವು ಸ್ಪಷ್ಟವಾಗಿ ಕಾಣುತ್ತಿರುವುದು.

## IV. (ii) ವಾಕ್ಯನ್ಯಾಯ ಮೂಲಕವಾದ ಅಲಂಕಾರಗಳು

### 39. ಸಮುಚ್ಚಯ.[46]

(i) ಏಕಕಾಲಿಕವಾದ ಅನೇಕ ಕ್ರಿಯೆಗಳ ವರ್ಣನೆ ಸಮುಚ್ಚಯಾಲಂಕಾರ.

ಲಕ್ಷ್ಯ

ಎಲರಿಂದೆಚ್ಚುತ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್
ಚಲೆಯಾದಳ್ ಮೂರ್ಛೆವೋದಳ್ ಮಱೆದಳೊಱಗಿದಳ್ ಕಂದಿದಳ್
ಕುಂದಿದಳ್ ಕೋ।
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ತಳತ್ತಳ್ ಬೆಮರ್ತಳ್
ನೆಲೆಯಿಂದಂ ಬಿಟ್ಟಳೆಟ್ಟಳ್ ವಿರಹದುರಿಯ ಸಂತಾಪವಿಭ್ರಾಂತಿಯಿಂದಂ ||

(ii) ಒಂದು ಕಾರ್ಯಕ್ಕೆ ಅನೇಕ ಕಾರಣಗಳನ್ನು ವರ್ಣಿಸಿದ್ದರೂ ಸಮುಚ್ಚಯಾಲಂಕಾರವಾಗುವುದು.

ಲಕ್ಷ್ಯ

ಪಾಡುವ ತುಂಬಿ ತೀಡುವೆಲರಾಡುವ ಸೋಗೆ ಕೊಳಂಗಳೊಳ್ ತುಳುಂ
ಕಾಡುವ ಬಾಳೆ ಕೋಡುವ ಪುಟಿಲ್ ಸಲೆ ಕೂಡುವ ಕೊಂಚೆ ಮುಟ್ಟೆ ಮು।
ದ್ದಾಡುವ ಜಕ್ಕವಕ್ಕಿ ನಲಿದಾಡುವ ಕನ್ನಡವಕ್ಕಿ ಮುದ್ದುಮಾ
ತಾಡುವ ಜಾಣವಕ್ಕಿ ನಡೆ ನೋಡುವರ್ಗಂ ಪ್ರೀತಿಯನುಂಟುಮಾಡುಗುಂ ||

ಇಲ್ಲಿ ಪ್ರೀತಿಯುಂಟುಮಾಡುವ ಕಾರ್ಯದಲ್ಲಿ ತುಂಬಿ ಎಲರ್ ಮೊದಲಾದ ಅನೇಕ ಪದಾರ್ಥಗಳು ಕಾರಣವಾಗಿರುವುವು.

### 40. ಪರಿಸಂಖ್ಯೆ.[47]

ಒಂದೆಡೆಯಲ್ಲಿ ಒಂದಾನೊಂದು ಪದಾರ್ಥವಿರುವುದೆಂದು ತೋರಿಸಿ ಅಲ್ಲಿ ಅದೇ ಪದದ ದೋಷರೂಪವಾದ ಅರ್ಥವಿಲ್ಲವೆಂದು ನಿಷೇಧಿಸುವುದೇ ಪರಿಸಂಖ್ಯಾಲಂಕಾರವೆನ್ನಿಸಿಕೊಳ್ಳುವುದು.

---

[46] ಬಹೂನಾಂ ಯುಗಪದ್ಭಾವಭಾಜಾಂ ಗುಂಭಃ ಸಮುಚ್ಚಯಃ ||
[47] ಪರಿಸಂಖ್ಯಾನಿಷಿಧ್ಯೈಕಮೇಕಸ್ಮಿನ್ ವಸ್ತುಯಂತ್ರಣಂ ||

ಲಕ್ಷ್ಯ

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳಲ್ಲದಹಿತತ್ವಂ ಪೊಂ|
ಗೇದಗೆಯ ಪೊದಱೊಳಲ್ಲದಿ
ಳಾದುರ್ಧರಕಂಟಕತ್ವಮಿಲ್ಲಾನಾಡೊಳ್ ||

(ಇಲ್ಲಿ "ವಂಶಚ್ಛೇದಂ ಮೇದರೊಳಲ್ಲದೆ ಆ ನಾಡೊಳಿಲ್ಲ. ಅಹಿತತ್ವಂ ಗಾರುಡದೊಳಲ್ಲದೆ ಆ ನಾಡೊಳಿಲ್ಲ. ಇಳಾದುರ್ಧರಕಂಟಕತ್ವಂ ಪೊಂಗೇದಗೆಯ ಪೊದಱೊಳಲ್ಲದೆ ಆ ನಾಡೊಳಿಲ್ಲ" ಎಂದು ಅನ್ವಯ.) ಈ ವಾಕ್ಯಗಳಲ್ಲೊಂದಾದ ವಂಶಚ್ಛೇದಂ ಇತ್ಯಾದಿಯಾದ ಮೊದಲನೆಯ ವಾಕ್ಯದಲ್ಲಿ ವಂಶಚ್ಛೇದವು ಮೇದರಲ್ಲಿ ಇತ್ತೇ ಹೊರತು ಆ ನಾಡಿನಲ್ಲಿ ಇರಲಿಲ್ಲವೆಂದು ಅರ್ಥವಾಗುವುದು. ಇಲ್ಲಿ ವಂಶಚ್ಛೇದವೆಂಬ ಪದಕ್ಕೆ ಸಂತತಿನಾಶವೆಂಬುದಾಗಿಯೂ ಎರಡರ್ಥವನ್ನು ಹೇಳಬಹುದು. ಇದರಿಂದ (ಬಿದಿರನ್ನು ತುಂಡಿಸುವುದೆಂಬ) ವಂಶಚ್ಛೇದವೆನ್ನುವುದು ಮೇದರಲ್ಲಿ ಇರುವುದೇ ಹೊರತು ಆ ನಾಡಿನಲ್ಲಿ (ಸಂತತಿನಾಶವೆಂಬ) ವಂಶಚ್ಛೇದವೆನ್ನುವುದು ಇಲ್ಲವೆಂದು ಅರ್ಥ. ಹೀಗೆಯೇ 'ಅಹಿತತ್ವಂ' 'ಕಂಟಕತ್ವಂ' ಎಂಬ ಕಡೆಗಳಲ್ಲಿಯೂ ಊಹಿಸಿಕೊಳ್ಳಬೇಕು.

## 41. ಯಥಾಸಂಖ್ಯೆ[48]

ಸಂಖ್ಯಾಕ್ರಮುವನ್ನು ಅನುಸರಿಸಿರುವ ಅನ್ವಯಕ್ರಮುವೇ ಯಥಾಸಂಖ್ಯಾಲಂಕಾರ.

ಲಕ್ಷ್ಯ

ಕಳಕಂಠಂಗಳ ಬಗ್ಗಣೆ
ಗಿಳಿಗಳ ಚಪ್ಪರಣೆಯಳಿಗಳಿಂಚರಮೆಸೆಗುಂ |
ತಳಿರ್ಗಳ್ ತನಿವಣ್ಗಳ್ ಸುಮ
ಕುಳಂಗಳಿಡಿಕಿಱಿದ ಜಾತಶಾಖಾಂತರದೊಳ್ ||

# IV. (iii) ಲೋಕನ್ಯಾಯ ಮೂಲಕವಾದ ಅಲಂಕಾರಗಳು

## 42. ಸ್ವಭಾವೋಕ್ತಿ.[49]

ವಸ್ತುಗಳ ಜಾತಿ ಗುಣ ಕ್ರಿಯಾದಿಗಳನ್ನು ಇದ್ದದ್ದಿದ್ದಹಾಗೇ ವರ್ಣಿಸುವುದು 'ಸ್ವಭಾವೋಕ್ತಿ.'

---

48 ಯಥಾಸಂಖ್ಯಂ ಕ್ರಮೇಣೈವ ಕ್ರಮಿಕಾಣಾಂ ಸಮನ್ವಯಃ ||
49 ಸ್ವಭಾವೋಕ್ತಿಸ್ಸ್ವಭಾವಸ್ಯ ಜಾತ್ಯಾದಿಸ್ಥಸ್ಯ ವರ್ಣನಂ ||

ಲಕ್ಷ್ಯ

ತಳಿರ ತಲೆಗಟ್ಟು ದಂತದ
ಬಳೆ ಕತ್ತುರಿಬೊಟ್ಟು ಮುತ್ತಿನೇಕಾವಳಿ ಬಿಲ್ ।
ಪೊಳೆವಂಬು ಬೆನ್ನ ನಿಡುಬ
ತ್ತಳಿಕೆ ವಿರಾಜಿಸೆ ಪುಳಿಂದನಂದೊಳವೊಳ್ಕಂ ॥

## 43. ಮೀಲಿತ.[50]

ಒಂದು ಪದಾರ್ಥವು ತನಗೆ ಸದೃಶವಾದ ಪದಾರ್ಥದಲ್ಲಿ ಐಕ್ಯವನ್ನು ಪಡೆದು (ಆ ಸದೃಶ ಪದಾರ್ಥಕ್ಕಿಂತ ಬೇರೆಯಾಗಿ) ಕಾಣದೆ ಹೋದಲ್ಲಿ ಮೀಲಿತಾಲಂಕಾರ ವಾಗುವುದು.

ಲಕ್ಷ್ಯ

ಕಾಲಿಂದಿಯಸಿತಜಲದೊಳ
ಗೋಲಾಡುವ ಕೃಷ್ಣನಂ ಸವರ್ಣತೆಯಿಂ ಗೋ।
ಪಾಲಕುಮಾರರ್ ನೋಡಿಯು
ಮಾಲೋಲಮನಸ್ಕರಱಿಯದಾಕುಲವುತ್ತರ್ ॥

(ಕಾವ್ಯಾವಲೋಕನಕಾರನು ಈ ಅಲಂಕಾರವನ್ನು ತಿರೋಹಿತಾಲಂಕಾರವೆಂದು ಹೇಳುತ್ತಾನೆ.)

## 44. ಉನ್ಮೀಲಿತ.[51]

ಒಂದು ಪದಾರ್ಥವು ತನಗೆ ಸದೃಶವಾದ ಪದಾರ್ಥದಲ್ಲಿ ಐಕ್ಯವನ್ನು ಪಡೆದಿರು ವಾಗ ಕಾರಣಾಂತರದಿಂದ ಭೇದಸ್ಫೂರ್ತಿಯುಂಟಾದಲ್ಲಿ ಮೀಲಿತಕ್ಕೆ ಪ್ರತಿದ್ವಂದ್ವಿ ಯಾದ ಉನ್ಮೀಲಿತಾಲಂಕಾರವಾಗುವುದು.

ಲಕ್ಷ್ಯ

ಮುಸುಕೆ ಹರಿಕಾಂತಿ ನೀಲೀ
ವಸನಂ ಸ್ಪರ್ಶಾನುಮೇಯಮಾದುದು ರಾಮಂ ।
ಗಸಿತಾಂಬರಮಂ ಮಱಿವಿಡಿ
ದ ಸುವರ್ಣದ ವಿದ್ಧದಂತಿರುದ್ಧವನೆಸೆದಂ ॥

---

[50] ಮೀಲಿತಂ ಯದಿ ಸಾದೃಶ್ಯಾತ್ ಭೇದ ಏವ ನ ಲಕ್ಷ್ಯತೇ ॥
[51] ಭೇದವೈಶಿಷ್ಟ್ಯಯೋಃ ಸ್ಫೂರ್ತಾವುನ್ಮೀಲಿತ ವಿಶೇಷಕಾ ॥

ಇಲ್ಲಿ, ಕೃಷ್ಣನ ಶರೀರಕಾಂತಿಯೂ ಬಲರಾಮನ ನೀಲೀವಸನವೂ ಒಂದಾಗಿ ಸೇರಿ ಅವುಗಳಿಗೆ ವ್ಯತ್ಯಾಸಕಾಣದೆ ಹೋಗಿದ್ದಾಗ, ಕೈಯಿಂದ ಮುಟ್ಟಿ ಬಟ್ಟೆಯನ್ನು ಊಹಿಸಿಕೊಂಡಿತೆಂದು ಹೇಳಿದೆ.

## 45. ತದ್ಗುಣ.[52]

ಯಾವುದಾದರೂ ಒಂದು ವಸ್ತು ತನ್ನ ಗುಣವನ್ನು ಬಿಟ್ಟು ಮತ್ತೊಂದು ವಸ್ತುವಿನ ಗುಣವನ್ನು ಪಡೆಯಿತೆಂದು ವರ್ಣಿಸುವುದು ತದ್ಗುಣಾಲಂಕಾರ.

ಲಕ್ಷ್ಯ

ತಾರಾಚಲಘನಗುಹೆಯೊಳ
ಗೈರಾವತವಿರ್ಪ ತೆಱದೆ ಶಶಿಮಣಿಸೌಧಾ|
ಗಾರದೆ ತದ್ರುಚಿಧವಳಾ
ಕಾರಾನ್ವಿತಭದ್ರಗಜಮದೇನೊಪ್ಪಿದುದೋ ||

ಇಲ್ಲಿ ಚಂದ್ರಕಾಂತಶಿಲಾಕಾಂತಿಯಿಂದ ಭದ್ರಗಜವು ಬೆಳ್ಳಗಾಯ್ತೆಂದು ಹೇಳಿದೆ.

## 46. ಅನುಗುಣ.[53]

ಮೊದಲೇ ಇದ್ದ ಗುಣಕ್ಕೆ ಅನ್ಯವಸ್ತುಸಂಬಂಧದಿಂದ ಉತ್ಕರ್ಷವುಂಟಾದಲ್ಲಿ ಅದು ಅನುಗುಣಾಲಂಕಾರ.

ಲಕ್ಷ್ಯ

ಮೊದಲೊಳ್ ಸೊರ್ಕಿದವಂಗೆ ಕಳ್ ವಿಷದಿನಳ್ಕಿರ್ದಂಗೆ ದುರ್ನಿದ್ರೆ ಕಾ
ಣದವಂಗುರ್ವಿದ ಮರ್ವು ದಿಗ್ಭ್ರಮೆ ಪದಂಗೆಟ್ಟಂಗೆ ಪೈಶಾಚಿಕಂ |
ಗೆ ದುರಾವೇಶಮಧಾರ್ಮಿಕಂಗೆ ಕುಮತಂ ತತ್ತ್ವಪ್ರಮೂಢಂಗೆ ಬೀ
ಸಿದ ಕಣ್ಮಾಯದ ಕುಂಚದಂತೆ ನಗಾದತ್ತಾಗಳೇನೆಂಬುದೋ ||

## 47. ಪ್ರತ್ಯನೀಕ.[54]

ಶತ್ರು ಬಲಶಾಲಿಯಾಗಿರುವಾಗ ಅವನನ್ನು ಬಿಟ್ಟು ಅವನ ಕಡೆಯವರ ಮೇಲೆ ಪರಾಕ್ರಮ ಪ್ರದರ್ಶನಮಾಡುವುದರ ವರ್ಣನೆ ಪ್ರತ್ಯನೀಕಾಲಂಕಾರ.

---

[52] ತದ್ಗುಣಃ ಸ್ವಗುಣತ್ಯಾಗಾದನ್ಯದೀಯಗುಣಗ್ರಹಃ ||
[53] ಪ್ರಾಕ್ಸಿದ್ಧಸ್ವಗುಣೋತ್ಕರ್ಷೋಽನುಗುಣಃ ಪರಸನ್ನಿಧೇಃ ||
[54] ಪ್ರತ್ಯನೀಕಂ ಬಲವತಃ ಶತ್ರೋಃ ಪಕ್ಷೇ ಪರಾಕ್ರಮಃ ||

ಲಕ್ಷ್ಯ

ತಮಮೆಂದು ವಿಧುಂತುದನಾ
ಮಮನಿಟ್ಟದಱಿಂಗರುಚಿಯನಾಂತುದಿದೆಂದಾ |
ಹಿಮರುಚಿ ಸದೆದಂ ಕರದಿಂ
ತಿಮಿರಮನಿನಿಸುೞಿಯದಂತೆ ಬಿಡದೆಲ್ಲೆಡೆಯೊಳ್ ||

ಇಲ್ಲಿ ಚಂದ್ರನು ರಾಹುವಿನ ಮೇಲೆ ಕೈಮಾಡಲಾರದೆ ಅವನ ('ತಮ'ವೆಂಬ) ಹೆಸರನ್ನೂ (ಕಪ್ಪು) ಬಣ್ಣವನ್ನು ಪಡೆದಿರುವ ಕತ್ತಲೆಯನ್ನೂ ಸದೆದನೆಂದು ವರ್ಣಿಸಿದೆ.

## V. ಗೂಢಾರ್ಥಪ್ರತೀತಿ ಮೂಲಕವಾದ ಅಲಂಕಾರಗಳು

### 48. ವ್ಯಾಜಸ್ತುತಿ.[55]

ಸ್ತೋತ್ರದ ರೂಪದಲ್ಲಿ ನಿಂದೆಯೂ, ನಿಂದೆಯ ರೂಪದಲ್ಲಿ ಸ್ತೋತ್ರವೂ ವರ್ಣಿತವಾದರೆ ಅದು 'ವ್ಯಾಜಸ್ತುತಿ.'

ಲಕ್ಷ್ಯ

ಓಜೆಯೆ ನಿನಗಿದು ಜಹ್ನುತ
ನೂಜೆಯೆ ದಿವಕುಯ್ಯುತಿರ್ದಪೌ ಪಾಪಿಗಳಂ ||

ಇಲ್ಲಿ ಗಂಗೆಯನ್ನು ನಿಂದಿಸುವ ರೂಪದಲ್ಲಿ ಸ್ತುತಿಸಿದೆ.

### 49. ವ್ಯಾಜನಿಂದೆ.[56]

ಒಂದು ನಿಂದೆಯಿಂದ ಮತ್ತೊಂದು ನಿಂದೆ ಗೋಚರಿಸಿದರೆ ಅದು 'ವ್ಯಾಜನಿಂದೆ.'

ಲಕ್ಷ್ಯ

........ನಿನ್ನಾ |
ಒಂದನೆ ತಲೆಯಂ ಚಿವುಟಿದ
ನಂದದಱಿಂ ಹರನೆ ನಾಡೆ ನಿಂದ್ಯಂ ವಿಧಿಯೇ ||

ಇಲ್ಲಿ ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಮಾತ್ರ ಚಿವುಟಿಹಾಕಿದ್ದು ಈಶ್ವರನ ತಪ್ಪೆಂದು ಈಶ್ವರನನ್ನು ನಿಂದಿಸುವದರ ಮೂಲಕ ಬ್ರಹ್ಮನನ್ನೂ ನಿಂದಿಸಿದೆ.

---

[55] ಉಕ್ತಿರ್ವ್ಯಾಜಸ್ತುತಿರ್ನಿಂದಾಸ್ತುತಿಭ್ಯಾಂ ಸ್ತುತಿನಿಂದಯೋಃ ||
[56] ನಿಂದಾಯಾ ನಿಂದಯಾ ವ್ಯಕ್ತಿರ್ವ್ಯಾಜನಿಂದೇತಿ ಗೀಯತೇ ||

ಈಶ್ವರನು ಬ್ರಹ್ಮನನ್ನು ಪೂರ್ತಿ ನಾಶಗೊಳಿಸಿಬಿಟ್ಟಿದ್ದರೆ ಅವನ ಕಾಟವಿರುತ್ತಿರಲಿಲ್ಲವೆಂದೂ, ವಿಧಿ (ಬ್ರಹ್ಮ) ಅಂಥ ಕೆಟ್ಟವನೆಂದೂ ಭಾವ.

## 50. ಮಿಶ್ರಾಲಂಕಾರಗಳು.[57]

ಅನೇಕ ಅಲಂಕಾರಗಳು ಒಂದಡೆಯಲ್ಲಿರುವಾಗ 'ಸಂಸೃಷ್ಟಿ'ಯೆಂದೂ 'ಸಂಕರ'ವೆಂದೂ ಮಿಶ್ರಾಲಂಕಾರಗಳಾಗುವುವು. ಸಂಸೃಷ್ಟಿಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ 'ಸಂಕರ'ವೆನ್ನುವುದು ಹಾಲು ನೀರುಗಳಂತೆ ಸೇರಿಹೋಗಿ ಒಂದಕ್ಕೆ ಮತ್ತೊಂದು ಉಪಜೀವಕವಾಗಿರುತ್ತದೆ.

ಲಕ್ಷ್ಯ

ಪಾರದೆ ಪರಾರ್ಥಮಂ ವರಯತಿಗೆ ಭಂಗಮಂ
ತಾರದೆ ನಿಜಾನ್ವಯಕ್ರಿಯೆಗಳ್ಗೆ ದೂಷಣಂ
ಬಾರದೆ ವಿಶೇಷಗುಣಗಣಕಲಾಗೌರವಂ ತೀರದೆ ದುರುಕ್ತಿಗಳ್ಗೆ ।
ಸೇರದೆ ಸುಮಾರ್ಗದೊಳ್ ನಡೆವ ಸತ್ಪುರುಷನ ಗ
ಭೀರದೆಸೆಯಂ ಪೋಲ್ವ ಕಾವ್ಯಪ್ರಬಂಧಮಂ
ಶಾರದೆಯ ಕರುಣದಿಂ ಪೇಳ್ವೆನಾಂ ದೋಷಮಂ ತೊಱೆದೆಲ್ಲರುಂ
ಕೇಳ್ವುದು ॥

ಇಲ್ಲಿ ಕಾವ್ಯಪ್ರಬಂಧವು ಸತ್ಪುರುಷನ ಗಭೀರದೆಸೆಯನ್ನು ಹೋಲುವುದೆಂದು ಹೇಳಿರುವುದರಿಂದ ಉಪಮಾಲಂಕಾರ. ಹಾಗೆಯೇ ಪ್ರತಿಪಾದದಲ್ಲಿಯೂ 'ರದೆ' ಎಂಬ ಶಬ್ದಾನುಪೂರ್ವಿ ಕಾಣಬರುವುದರಿಂದ ವೃತ್ತ್ಯನುಪ್ರಾಸ. ಈ ಅಲಂಕಾರವೆರಡರಲ್ಲಿ ಯಾವದೊಂದು ಅಲಂಕಾರವೂ ಮತ್ತೊಂದರ ಸಹಾಯವನ್ನು ಕೋರದೆ ಇರುವುದಲ್ಲದೆ ಅವು 'ತಿಲ ತಂಡುಲ' (ಎಳ್ಳು ಅಕ್ಕಿ)ಗಳಂತೆ ಇದ್ದು ಅವುಗಳನ್ನು ಬೇರೆ ಮಾಡಲು ಸಾಧ್ಯವಾಗಿದೆ.

ವಿದಳಿಸೆ ಘನದಂತಿ ಬಿಸಿ
ಲ್ಗುದುರೆಗಳಂ ಪನಿತು ಪೆತ್ತ ನೆತ್ತರ ಪನಿಯಂ ।
ದದಿನಲ್ಲಲ್ಲಿಗೆ ಕಣ್ಗೊಳಿ
ಸಿದತ್ತು ಕಾರ್ಮುಕದೊಳಿಂದ್ರಗೋಪಕಲಾಪಂ ॥

---

[57] ಸ್ಫುಟಭೇದಾವಲಂಕಾರಾವೇಕತ್ರ ಭವತೋ ಯದಿ ।
ಅಲಂಕಾರಸ್ವರೂಪಜ್ಞಾ ಸ್ಸಂಸೃಷ್ಟಿಂ ತಾಂ ಪ್ರಚಕ್ಷತೇ
ಅಲಂಕೃತೀನಾಮಸ್ಪಷ್ಟಭೇದಾನಾಂ ಯತ್ತು ಮೇಳನಂ
ಸ ಸಂಕರಸ್ತಸ್ಯ ಭೇದಾಶ್ಚತ್ವಾರಸ್ಸಮುದಾಹೃತಾಃ ॥

ಇಲ್ಲಿ ಇಂದ್ರಗೋಪವೆಂಬ ಹುಳುವನ್ನು ನೆತ್ತರ ಪನಿಯೆಂದು ಉತ್ಪ್ರೇಕ್ಷಿಸಿದೆ. ಘನದಂತಿ ಬಿಸಿಲ್ಗುದುರೆಗಳನ್ನು ಸೀಳಿದ್ದರಿಂದ ಈ ನೆತ್ತರ ಹನಿ ಉಂಟಾಗಿರುವುದೆಂದು ನೆತ್ತರ ಹನಿಗೆ ಕಾರಣವು ಪ್ರದರ್ಶಿತವಾಗಿದೆ. ಈ ಪ್ರದರ್ಶಿತವಾಗಿರುವ ಕಾರಣದಲ್ಲಿ 'ಘನದಂತಿ' ಎಂಬುದಾಗಿ ರೂಪಕವಿದೆ. ಮತ್ತು ಬಿಸಿಲ್ಗುದುರೆಯೆಂಬಲ್ಲಿ ಬಿಸಿಲಲ್ಲಿರುವ ಕುದುರೆಯೆಂಬುದಾಗಿ ಶ್ಲಿಷ್ಟರೂಪಕವೂ ಕಾಣುತ್ತಿದೆ. ಈ ಎರಡು ರೂಪಕಗಳೂ ಇಲ್ಲದಿದ್ದರೆ ನೆತ್ತರ ಹನಿಗೆ ಅವಕಾಶವಿಲ್ಲವಾಗುವುದರಿಂದ 'ನೆತ್ತರ ಹನಿ'ಯೆಂಬ ಉತ್ಪ್ರೇಕ್ಷೆಗೆ ಈ ರೂಪಕದ್ವಯವೂ ಉಪಜೀವಕವೆಂದು ಹೇಳಬೇಕು. ಮತ್ತು 'ಘನ' ದಿಂದಾದ ಮೃಗತೃಷ್ಣೆಯ ನಾಶನವನ್ನೇ ವಿದಳನವೆಂದು ಹೇಳಿರುವುದರಿಂದ 'ವಿದಳಿಸೆ' ಎಂಬಲ್ಲಿ ರೂಪಕಾತಿಶಯೋಕ್ತಿ ಇದ್ದು ಅದೂ ಉತ್ಪ್ರೇಕ್ಷೆಗೆ ಅಂಗವಾಗಿದೆ. ಹೀಗೆ ಇಲ್ಲಿ ಉತ್ಪ್ರೇಕ್ಷೆಯೊಂದಕ್ಕೆ ಅನೇಕಾಲಂಕಾರಗಳು ಅಂಗವೆನಿಸಿಕೊಂಡಿರುವ 'ಅಂಗಾಂಗಿಭಾವ ಮೂಲಕವಾದ ಸಂಕರ'ವೆಂದು ಹೇಳಬೇಕು.

# ೧. ಭಾಷಾಚರಿತ್ರೆಯ ಉದ್ದೇಶ ಮತ್ತು ಸಾಧನ

**ಭಾಷಾರೂಪಗಳು : ಶಾಬ್ದ, ಚಾಕ್ಷುಷ.** ಮನುಷ್ಯನು ತನ್ನ ನೆರೆಹೊರೆಯವರೊಂದಿಗೆ ವ್ಯವಹಾರಮಾಡುವುದಕ್ಕೆ ಭಾಷೆ ಆವಶ್ಯಕವಾದ ಸಾಧನವಾಗಿದೆ. ಭಾಷೆಗೆ ಶಾಬ್ದ, ಚಾಕ್ಷುಷ ಎಂದು ಎರಡು ರೂಪಗಳಿವೆ. ಇವುಗಳಲ್ಲಿ ಶಾಬ್ದರೂಪವು ನೈಸರ್ಗಿಕವಾದದ್ದು. ಏಕೆಂದರೆ ಮೊದಲು ಮೊದಲು ಜನರು ತಮ್ಮ ಅಭಿಪ್ರಾಯಗಳನ್ನು ಇತರರಿಗೆ ತಿಳಿಸುವುದೂ, ಇತರರ ಅಭಿಪ್ರಾಯಗಳನ್ನು ತಾವು ತಿಳಿದುಕೊಳ್ಳುವುದೂ ಬಾಯಿಮಾತಿನಿಂದ; ಅನಾಗರಿಕರಾದ ಜನರು ಈಗಲೂ ತಮ್ಮ ವ್ಯವಹಾರದಲ್ಲಿ ಈ ರೂಪವೊಂದನ್ನೇ ಇಟ್ಟುಕೊಂಡಿರುವರು. ಆದರೆ ಈ ಸಾಧನವು ಅತೃಪ್ತಿಕರವಾದದ್ದು; ಏಕೆಂದರೆ ಇದಕ್ಕೆ ಇರುವ ವ್ಯಾಪ್ತಿ ಅತ್ಯಂತ ಸಂಕುಚಿತವಾದದ್ದು. ಆ ವ್ಯಾಪ್ತಿಗೆ ಕಾಲ ದೇಶಗಳ ಇಕ್ಕಟ್ಟಾದ ಪರಿಮಿತಿ ಇರುತ್ತದೆ. ಮನುಷ್ಯನು ಬಾಯಿಮಾತಿನಿಂದ ತತ್ಕಾಲದಲ್ಲಿ ತನ್ನ ಮುಂದೆ ಇರುವವರಿಗೆ ಮಾತ್ರ ತನ್ನ ಅಭಿಪ್ರಾಯಗಳನ್ನು ತಿಳಿಸಬಹುದು. ಆ ಅಭಿಪ್ರಾಯವು ಇತರ ಕಾಲದೇಶಗಳಲ್ಲಿರುವವರಿಗೆ ತಿಳಿಯಬೇಕಾದರೆ ಬಾಯಿಮಾತು ಸಾಲದು; ಭಾಷೆ ಚಾಕ್ಷುಷ ರೂಪವನ್ನು ಹೊಂದಬೇಕಾಗುತ್ತದೆ. ಬರವಣಿಗೆಯ ಭಾಷೆಯನ್ನು ಬಾಯಿಮಾತಿನ ಪ್ರತಿನಿಧಿ ಎಂದು ಹೇಳಬಹುದು. ಬಾಯಿಮಾತಿನ ವ್ಯಾಪ್ತಿಯನ್ನು ವಿಸ್ತರಿಸುವುದೇ ಅದರ ಮುಖ್ಯಪ್ರಯೋಜನ.

**ಭಾಷಾಭೇದಗಳು : ವ್ಯಾವಹಾರಿಕ, ಗ್ರಾಂಥಿಕ.** ಭಾಷೆಗಳನ್ನು ವ್ಯಾವಹಾರಿಕ, ಗ್ರಾಂಥಿಕ ಎಂದು ವಿಭಾಗಿಸಬಹುದು. ವ್ಯಾವಹಾರಿಕವೆಂದರೆ ಜನರು ಮಾತನಾಡುತ್ತಿರುವ ಭಾಷೆ. ಇದನ್ನು ಜೀವದ್ಭಾಷೆಯೆಂದೂ ಕರೆಯುತ್ತಾರೆ.

ಉದಾ : ಕನ್ನಡ, ತೆಲುಗು, ತಮಿಳು, ಹಿಂದಿ, ಮರಾಠಿ, ಉರ್ದು, ಇಂಗ್ಲಿಷ್.

ಗ್ರಾಂಥಿಕವೆಂದರೆ ಅಭಿವೃದ್ಧಿಹೊಂದಿ ಗ್ರಂಥಸ್ಥವಾಗಿರುವ ಭಾಷೆ.

ಉದಾ : ಸಂಸ್ಕೃತ, ಪಾಳಿ, ಲ್ಯಾಟಿನ್, ಕನ್ನಡ, ಇಂಗ್ಲಿಷ್.

ಈಗ ವ್ಯವಹಾರದಲ್ಲಿಲ್ಲದೆ ಗ್ರಂಥಗಳಲ್ಲಿ ಮಾತ್ರ ದೊರೆಯುವ ಭಾಷೆಯನ್ನು ಮೃತಭಾಷೆಯೆಂದು ಕರೆಯುತ್ತಾರೆ.

ಉದಾ : ಸಂಸ್ಕೃತ, ಪಾಳಿ, ಅರಬ್ಬಿ, ಲ್ಯಾಟಿನ್.

ಗ್ರಾಂಥಿಕರೂಪವನ್ನು ಹೊಂದದೆ ಕೇವಲ ವ್ಯವಹಾರಕ್ಕೆ ಮಾತ್ರ ಉಪಯೋಗಿಸುವ ಭಾಷೆಯನ್ನು ಕ್ಷುಲ್ಲಕಭಾಷೆಯೆನ್ನುತ್ತಾರೆ.

ಉದಾ : ಬಡಗ, ತೊದವ.

ಕನ್ನಡ ವ್ಯಾವಹಾರಿಕವೂ ಗ್ರಾಂಥಿಕವೂ ಆದ ಭಾಷೆಗಳಲ್ಲಿ ಒಂದಾಗಿದೆ.

**ಭಾಷಾಚರಿತ್ರೆಯ ಉದ್ದೇಶ:** ಪ್ರವಾಹದ ನೀರಿನಂತೆ ನಿರಂತರವೂ ವ್ಯತ್ಯಾಸವನ್ನು ಹೊಂದುತ್ತಾ ಹೋಗುತ್ತಿರುವುದೇ ವ್ಯಾವಹಾರಿಕ ಅಥವಾ ಜೀವದ್ಭಾಷೆಯ ನೈಸರ್ಗಿಕಲಕ್ಷಣ. ಆ ವ್ಯತ್ಯಾಸವು ಉದ್ದೇಶಪೂರ್ವಕವಾದದ್ದಲ್ಲ; ಆಗಾಗುತ್ತಿರುವ ಹಾಗೆ ಗಮನಕ್ಕೆ ಬರುವುದೂ ಇಲ್ಲ. ಆದರೆ ಅವ್ಯಕ್ತವಾಗಿ ಸಂಭವಿಸುವ ಆ ವ್ಯತ್ಯಾಸದಲ್ಲಿ ಕಾಲಕ್ರಮದಲ್ಲಿ ಬೆಳೆದು ವ್ಯಕ್ತವಾಗಿ ಬರುವಂತಾಗುತ್ತದೆ. ಆಗ ಭಾಷೆ ಅವಸ್ಥಾಂತರವನ್ನು ಪಡೆಯಿತೆಂದು ಹೇಳಬಹುದು. ಕಾಲಕ್ರಮವಾಗಿ ಭಾಷೆ ಬೆಳೆದ ಹಾಗೆಲ್ಲ ಅದರಲ್ಲಿ ಗಮನಕ್ಕೆ ಬರುವಂತಿರುವ ಅವಸ್ಥಾಭೇದಗಳನ್ನೂ ಅವುಗಳಿಗೆ ಸಾಧ್ಯವಾಗುವಷ್ಟು ಮಟ್ಟಿಗೆ ಕಾರಣಗಳನ್ನೂ ತಿಳಿಸಿ ಕೊಡುವುದೇ ಭಾಷಾಚರಿತ್ರೆಯ ಉದ್ದೇಶ.

ಕ್ಷುಲ್ಲಕಭಾಷೆ ಬೆಳೆಯುತ್ತದೆಯಾದರೂ ಅದರ ಚರಿತ್ರೆಯನ್ನು ತಿಳಿಯಲಾಗುವುದಿಲ್ಲ. ಏಕೆಂದರೆ ಅದು ಕಾಲಕ್ರಮದಲ್ಲಿ ಯಾವ ಯಾವ ವ್ಯತ್ಯಾಸಗಳನ್ನು ಹೊಂದಿತೆಂಬುದನ್ನು ಕಂಡುಹಿಡಿಯುವುದಕ್ಕೆ ಅವಶ್ಯಸಾಧನವು ಎಂದರೆ ಗ್ರಂಥಾದಿಗಳು ಆ ಭಾಷೆಗೆ ಇರುವುದಿಲ್ಲ. ಮೃತಭಾಷೆಗೂ ಅದರ ವ್ಯಾವಹಾರಿಕ ಸ್ಥಿತಿ ನಿಂತುಹೋದಂದಿನಿಂದ ಚರಿತ್ರೆ ಇರುವುದಿಲ್ಲವೆಂದು ಹೇಳಬಹುದು. ಯಾವ ಭಾಷೆ ಜನರ ಬಳಕೆಯಲ್ಲಿರುವುದರಿಂದ ನಿತ್ಯಪರಿವರ್ತನಶೀಲವಾಗಿರುವುದೋ ಮತ್ತು ಗ್ರಂಥಸ್ವರೂಪವನ್ನು ಪಡೆದಿರುವುದರಿಂದ ಆ ಪರಿವರ್ತನದ ಪರಿಚಯವನ್ನು ಪಡೆಯಲು ಸಾಧನವನ್ನು ಉಂಟುಮಾಡಿಕೊಟ್ಟಿರುವುದೋ ಆ ಭಾಷೆಗೆ ಮಾತ್ರ ಸ್ಪಷ್ಟವಾದ ಚರಿತ್ರೆ ಇರುವುದು ಸಾಧ್ಯ.

ಭಾಷಾಚರಿತ್ರೆಗೆ ಮುಖ್ಯವಾಗಿ ಇರುವ ಆಧಾರವು ಗ್ರಾಂಥಿಕಭಾಷೆ. ವ್ಯಾವಹಾರಿಕ ಭಾಷೆಯ ವರ್ತಮಾನರೂಪವೂ ಒಂದು ಸಾಧನ. ಭಾಷೆಯ ಶಾಬ್ದರೂಪವು ಎಂದರೆ ಬಾಯಿಮಾತು ನೈಸರ್ಗಿಕವೆಂದೂ ಚಾಕ್ಷುಷರೂಪವು ಎಂದರೆ ಬರವಣಿಗೆ ಅದರ ಪ್ರತಿನಿಧಿಮಾತ್ರವೆಂದೂ, ಹಿಂದೆಯೇ ತಿಳಿದಿದ್ದೇವೆ. ಬರವಣಿಗೆ ಬಾಯಿಮಾತಿನ ಸ್ವರೂಪವನ್ನು ಸ್ಥೂಲವಾಗಿ ತಿಳಿಸಬಲ್ಲುದೇ ಹೊರತು ಸಮಗ್ರವಾಗಿ ತಿಳಿಸಲಾರದು. ಅಷ್ಟೇ ಅಲ್ಲ. ಬಾಯಿಮಾತಿನ ಬಹುಮುಖವೂ ಅವಿಚ್ಛಿನ್ನವೂ ಆದ ಪರಿವರ್ತನವನ್ನು ತಡೆದು ಭಾಷೆಗೆ ಏಕರೂಪತೆಯನ್ನೂ ಸ್ಥಾಯಿತ್ವವನ್ನೂ ಉಂಟುಮಾಡಲು ಸಾಧನವಾಗುತ್ತದೆ. ಆದರೂ ಮಾತಿನ ಭಾಷೆಯಲ್ಲಾಗುವ ವ್ಯತ್ಯಾಸಗಳು ಬರವಣಿಗೆಯ ಭಾಷೆಯಲ್ಲಿಯೂ ತಕ್ಕಮಟ್ಟಿಗೆ ತಲೆದೋರುತ್ತವೆ. ಆದುದರಿಂದ ಭಾಷಾಚರಿತ್ರೆ ಭಾಷೆಯ ಚರಿತ್ರೆಯನ್ನು ಸಮಗ್ರವಾಗಿ ತಿಳಿಸಲಾರದೆ ಅದನ್ನು ಅಸಮಗ್ರವಾಗಿಯೂ, ಸ್ಥೂಲವಾಗಿಯೂ ಮಾತ್ರ ತಿಳಿಸುವುದು ಅನಿವಾರ್ಯವಾಗಿದೆ.

## ೨. ಭಾಷೆಯ ಬೆಳೆವಳಿಗೆ; ಕಾರಣಗಳು—ಆಂತರ, ಬಾಹ್ಯ

**ಭಾಷೆ ರೂಪಾಂತರವನ್ನು ಹೊಂದುವುದು :** ದೇಶಭೇದದಿಂದಲೂ ಕಾಲ ಭೇದದಿಂದಲೂ ಭಾಷೆಯಲ್ಲಿ ವ್ಯತ್ಯಾಸವು ಬಹುಮುಖದಿಂದ ಆಗಿ ಭಾಷೆ ರೂಪಾಂತರ ವನ್ನು ಹೊಂದುತ್ತಾ ಹೋಗುತ್ತದೆ. ಹೀಗೆ ರೂಪಾಂತರವನ್ನು ಹೊಂದುತ್ತಾ ಹೋಗುವುದನ್ನೇ ಭಾಷೆಯ ಬೆಳೆವಳಿಗೆ ಎಂದು ಕರೆಯಬಹುದು.

**ಅದರ ಕಾರ್ಯಗಳು :** ಭಾಷೆ ರೂಪಾಂತರವನ್ನು ಹೊಂದುವಾಗ ಆಗತಕ್ಕ ಕಾರ್ಯಗಳನ್ನು ಸ್ಥೂಲವಾಗಿ ಮೂರು ಪಂಗಡಗಳಾಗಿ ವಿಭಾಗಿಸಬಹುದು.

1. ಇದ್ದುದರಲ್ಲಿ ಕೆಲವು ಭಾಗಗಳು ಅಳಿದು ಹೋಗುವುದು.
   ಉದಾ : ಹಳಗನ್ನಡದಲ್ಲಿದ್ದ ೞ, ಱ ಎಂಬ ಅಕ್ಷರಗಳೂ, ಬಾನ್, ವಿಾನ್ ಮೊದಲಾದ ಶಬ್ದಗಳೂ ಹೊಸಗನ್ನಡದಲ್ಲಿ ಇಲ್ಲದಿರುವುದು.
2. ಇಲ್ಲದೆ ಇದ್ದುದು ಹೊಸದಾಗಿ ಸೇರುವುದು.
   (1) ಹಳೆಯ ಶಬ್ದಗಳನ್ನು ಸೇರಿಸಿ ಹೊಸ ಸಮಾಸಪದಗಳನ್ನು ಮಾಡುವುದು.
   ಉದಾ : ಗುಂಡುಸೂಜಿ, ಆಕಾಶಬುಟ್ಟಿ, ಸೀಮೆಯೆಣ್ಣೆ.
   (2) ಅನ್ಯಭಾಷೆಯ ಶಬ್ದಗಳನ್ನು ಸೇರಿಸಿಕೊಳ್ಳುವುದು.
   ಉದಾ : ದಿವಾನ, ಮುನುಷಿ, ಲಾಯರು, ಪೋಲೀಸು, ಹೋಟಲು.
   (3) ಇದ್ದುದೇ ವ್ಯತ್ಯಾಸವಾಗಿ ರೂಪಾಂತರವನ್ನು ಹೊಂದುವುದು.
   ಉದಾ : ಹಳಗನ್ನಡದ ಪಾಲ್, ಅಂತಪ್ಪ ಮೊದಲಾದ ಶಬ್ದಗಳು ಹೊಸಗನ್ನಡದಲ್ಲಿ ಹಾಲು, ಅಂಥ ಎಂಬ ಹೊಸರೂಪಗಳನ್ನು ಹೊಂದಿರುವುದು.

ಈ ಮೂರು ಕಾರ್ಯಗಳೂ ಸಾಮಾನ್ಯವಾಗಿ ಒಟ್ಟಾಗಿಯೇ ನಡೆಯುತ್ತಾ ಇರುತ್ತವೆ.

**ಭಾಷೆಯ ಬೆಳೆವಳಿಗೆಯ ಕಾರ್ಯಗಳು : ಆಂತರ, ಬಾಹ್ಯ.** ಹೀಗೆ ಭಾಷೆ ವ್ಯತ್ಯಾಸ ಹೊಂದುವುದಕ್ಕೆ ಇರುವ ಮುಖ್ಯವಾದ ಕಾರಣಗಳನ್ನು ಆಂತರ, ಬಾಹ್ಯ ಎಂದು ಎರಡು ಪಂಗಡಗಳಾಗಿ ವಿಭಾಗಿಸಬಹುದು. ಮಾನವಸಾಮಾನ್ಯ ವಾದ ಸೌಲಭ್ಯಾಕಾಂಕ್ಷೆಯೂ ವೈಯಕ್ತಿಕವಾದ ಉಚ್ಚಾರಣ ಭೇದವೂ ಮುಖ್ಯವಾದ ಆಂತರಿಕ ಅಥವಾ ನೈಸರ್ಗಿಕ ಕಾರಣವಾಗಿರುತ್ತವೆ. ಬೇರೆ ಭಾಷೆಯನ್ನಾಡುವ ಜನರೊಂದಿಗೆ ಅಥವಾ ಬೇರೆ ಭಾಷೆಯೊಂದಿಗೆ ಆಗುವ ಸಂಸರ್ಗವೇ ಬಾಹ್ಯಕಾರಣ.

ಭಾಷೆ ದೇಶಕಾಲ ಭೇದದಿಂದ ವ್ಯತ್ಯಾಸವನ್ನು ಹೊಂದುವುದಕ್ಕೆ ಆಂತರಿಕ ಕಾರಣವೇ ಸಾಕಾಗಿರುತ್ತದೆ. ಬಾಹ್ಯ ಕಾರಣವು ಆ ವ್ಯತ್ಯಾಸವನ್ನು ಹೆಚ್ಚಿಸುತ್ತದೆ.

**ನೈಸರ್ಗಿಕಕಾರಣ : 1. ವರ್ಣೋತ್ಪತ್ತಿಸ್ಥಾನಭೇದ.** ಜನರು ಭಾಷೆಯನ್ನು ಕಲಿಯುವುದು ಅನುಕರಣದಿಂದ. ಮಕ್ಕಳು ಮನೆಯಲ್ಲಿ ತಂದೆ ತಾಯಿ ಮೊದಲಾದವರು ಮಾತಾಡುವುದನ್ನು ಅನುಕರಣಮಾಡಿ ಮಾತನ್ನು ಕಲಿಯುವುದೇ ಇದಕ್ಕೆ ಸ್ಪಷ್ಟವಾದ ಉದಾಹರಣೆಯಾಗಿದೆ. ಒಬ್ಬರು ಮತ್ತೊಬ್ಬರನ್ನು ಎಷ್ಟೇ ಚೆನ್ನಾಗಿ ಅನುಕರಣಮಾಡಿದರೂ ಅದರಲ್ಲಿ ಸೂಕ್ಷ್ಮವಾದ ವ್ಯತ್ಯಾಸ ಇದ್ದೇ ಇರುತ್ತದೆ. ಇದಕ್ಕೆ ಕಾರಣವೇನೆಂದರೆ ಬೇರೆಬೇರೆ ಜನರ ವರ್ಣೋತ್ಪತ್ತಿಸ್ಥಾನದಲ್ಲಿ ಭೇದವಿರುವುದು. ಶಾರೀರ, ಧ್ವನಿ, ಸ್ಥಾಯಿ ಇವುಗಳಲ್ಲಿ ಒಬ್ಬೊಬ್ಬರ ಮಾತಿಗೂ ವ್ಯತ್ಯಾಸವಿರುತ್ತದೆ ಎಂಬುದು ಎಲ್ಲರಿಗೂ ತಿಳಿದ ವಿಷಯ.

ವರ್ಣೋಚ್ಚಾರಣೆಯಲ್ಲಿ ಹೀಗೆ ವೈಯಕ್ತಿಕವಾದ ಭೇದವಿದ್ದರೂ ಒಂದೇ ಕುಟುಂಬಕ್ಕೆ ಸೇರಿದ ಜನರ ಉಚ್ಚಾರಣೆಯಲ್ಲಿ ಬಹುಮಟ್ಟಿಗೆ ಏಕರೂಪತೆ ಕಂಡು ಬರುತ್ತದೆ. ಇದಕ್ಕೆ ಕಾರಣವೇನೆಂದರೆ, ಅವರು ಒಟ್ಟಿಗೆ ಜೀವನಮಾಡುವುದರಿಂದ ಅರಿತೋ ಅರಿಯದೆಯೋ ತಮ್ಮ ತಮ್ಮ ಮಾತಿನಲ್ಲಿರುವ ಉಚ್ಚಾರಣ ಭೇದವನ್ನು ಬಹುಮಟ್ಟಿಗೆ ಕಡಿಮೆಮಾಡಿಕೊಳ್ಳುತ್ತಾರೆ. ಹೀಗೆ ಸಂಸರ್ಗವು ಶಬ್ದೋಚ್ಚಾರಣೆಯ ಏಕರೂಪತೆಗೆ ಸಹಾಯಮಾಡುತ್ತದೆ. ಒಂದು ಕುಟುಂಬ ಭಾಷೆಯನ್ನು ಹೇಗೆ ಸ್ವಲ್ಪ ಹೆಚ್ಚು ಕಡಿಮೆ ಒಂದೇ ಎಂದು ಹೇಳಬಹುದೋ ಹಾಗೆಯೇ ಒಂದು ಊರಿನ ಅಥವಾ ಪ್ರಾಂತದ ಜನರ ಭಾಷೆಯನ್ನೂ ಒಂದೇ ಎಂದು ಹೇಳಬಹುದು. ಆದರೆ ಒಂದೇ ಕುಟುಂಬದವರ ಭಾಷೆಯಲ್ಲಿ ಇರುವಷ್ಟು ಸಾದೃಶ್ಯವು ಒಂದೇ ಊರಿನಲ್ಲಿರುವ ಭಾಷೆಯಲ್ಲಾಗಲಿ, ಒಂದೇ ಊರಿನವರಲ್ಲಿರುವಷ್ಟು ಒಂದೇ ಪ್ರಾಂತದಲ್ಲಿರುವ ಭಾಷೆಯಲ್ಲಾಗಲಿ ಇರುವುದು ಅಸಂಭವ. ಏಕೆಂದರೆ ಸಂಸರ್ಗವು ಅಷ್ಟು ನಿಕಟವಾಗಿರುವುದಿಲ್ಲ. ಜನರಲ್ಲಿ ಸಂಸರ್ಗವು ಎಷ್ಟು ನಿಕಟವಾಗಿರುವುದೋ ಅವರಾಡುವ ಭಾಷೆಯಲ್ಲಿ ಅಷ್ಟಷ್ಟು ಏಕರೂಪತೆ ಇರುವುದೆಂದು ಹೇಳಬಹುದು.

**2. ಸೌಲಭ್ಯಾಕಾಂಕ್ಷೆ:** ನೈಸರ್ಗಿಕ ಕಾರಣಗಳಲ್ಲಿ ಎರಡನೆಯದು ಸೌಲಭ್ಯಾಕಾಂಕ್ಷೆ. ಮನುಷ್ಯನು ಸಾಮಾನ್ಯವಾಗಿ ಯಾವ ಕೆಲಸದಲ್ಲಿಯೇ ಆಗಲಿ ಕಷ್ಟವನ್ನು ಕಡಿಮೆಮಾಡಿಕೊಂಡು ಆದಷ್ಟು ಸುಲಭವಾಗಿ ಆ ಕೆಲಸವನ್ನು ಮಾಡಬೇಕೆಂದು ಇಚ್ಛಿಸುತ್ತಾನೆ. ಮಾತನಾಡುವುದರಲ್ಲಿಯೂ ಹೀಗೆಯೇ ಮಾಡುತ್ತಾನೆ. ಉದಾ: ಅನೇಕರು 'ಮಾಡುವುದಕ್ಕೆ' ಎಂಬುದಕ್ಕೆ ಬದಲಾಗಿ 'ಮಾಡೋಕೆ' ಎಂದು ಹೇಳುತ್ತಾರೆ. ಇದಕ್ಕೆ ಕಾರಣವನ್ನು ಕೆಲವರು ಸೋಮಾರಿತನ (Laziness)ವೆಂದೂ ಮತ್ತೆ ಕೆಲವರು ಮಿತವ್ಯಯಾಸಕ್ತಿ (Economy) ಯೆಂದೂ ಮತ್ತೆ ಕೆಲವರು ಸೌಲಭ್ಯಾಕಾಂಕ್ಷೆಯೆಂದೂ ಹೇಳುತ್ತಾರೆ. 'ಮಾಡುವುದಕ್ಕೆ' ಎಂಬುದಕ್ಕಿಂತಲೂ 'ಮಾಡೋಕೆ' ಎಂಬುದು ಸುಲಭ. ಇಲ್ಲಿ ಮತ್ತೊಂದು ಉದಾಹಣೆಯನ್ನು

ತೆಗೆದುಕೊಳ್ಳಬಹುದು. ಹಳಗನ್ನಡದ ವಿಜಾತೀಯ ಸಂಯುಕ್ತಾಕ್ಷರಗಳು ಹೊಸಗನ್ನಡದಲ್ಲಿ ರೂಪಾಂತರವನ್ನು ಹೊಂದುತ್ತವೆ. ಅವು ಕೆಲವು ವೇಳೆ :

(1) ಸಜಾತೀಯ ಸಂಯುಕ್ತಾಕ್ಷರಗಳಾಗುತ್ತವೆ. ಉದಾ : ಉೞ್ಕೆ-ಉಕ್ಕೈ; ಕರ್ಪು-ಕಪ್ಪು.

(2) ಬೇರೆ ಬೇರೆ ಅಕ್ಷರಗಳಾಗುತ್ತವೆ. ಉದಾ : ಬೆಳ್ಪು-ಬಿಳುಪು, ಪೊಗೞ್ಕೆ-ಹೊಗಳಿಕೆ.

(3) ಅವುಗಳಲ್ಲಿ ಒಂದು ಲೋಪವಾಗುತ್ತದೆ. ಉದಾ : ಅಗೞ್ತೆ-ಅಗತೆ; ಕೞಲ್ಚು-ಕಳಚು.

ಹೀಗಾಗುವುದಕ್ಕೆ ಕಾರಣವು ವಿಜಾತೀಯ ಸಂಯುಕ್ತಾಕ್ಷರಗಳನ್ನು ಉಚ್ಚರಿಸುವುದರ ಕಷ್ಟವನ್ನು ದೂರಮಾಡುವುದು ಎಂದು ಹೇಳಬಹುದು.

**ಬಾಹ್ಯಕಾರಣ : ಅನ್ಯಭಾಷಾಸಂಸರ್ಗ.** ಒಂದು ಭಾಷೆಯನ್ನಾಡುವ ಜನರಿಗೆ ಮತ್ತೊಂದು ಭಾಷೆಯನ್ನಾಡುವ ಜನರೊಂದಿಗೆ ಸಂಸರ್ಗವಾದಾಗ ಆ ಸಂಸರ್ಗದ ಸ್ವರೂಪಗಾಢತೆಗಳಿಗನುಗುಣವಾಗಿ ಅದರ ಪರಿಣಾಮವಾಗುತ್ತದೆ. ಅಂಥ ಸಂಸರ್ಗದ ಫಲಗಳಲ್ಲಿ ಮುಖ್ಯವಾದುದು ಆ ಅನ್ಯಭಾಷೆಯ ಶಬ್ದಗಳು ಸೇರುವುದು. ಇದು ಭಾಷೆಯ ಶಬ್ದಕೋಶವು ಹೆಚ್ಚುವುದಕ್ಕೆ ಕಾರಣವಾಗುತ್ತದೆ. ಆ ಅನ್ಯಭಾಷೆಯ ಜನರ ಸಂಸರ್ಗವು ಪ್ರಬಲವಾದುದಾದರೆ ಅವರ ಮಾತುಗಳೇ ಹೆಚ್ಚು ಪ್ರಬಲವಾಗಿ ಭಾಷೆಯಲ್ಲಿದ್ದ ಮಾತುಗಳು ಮೂಲೆಗೆ ಬಿದ್ದುಹೋಗಬಹುದು. ಸಂಸ್ಕೃತದ ಪೂರ್ವ, ಪಶ್ಚಿಮ, ದಕ್ಷಿಣ, ಉತ್ತರ ಎಂಬ ಶಬ್ದಗಳು ರೂಢಿಗೆ ಬಂದು ಮೂಡಲು, ಪಡವಲು, ತೆಂಕಲು, ಬಡಗಲು ಎಂಬ ಕನ್ನಡದ ಶಬ್ದಗಳು ಮೂಲೆಗೆ ಬಿದ್ದುಹೋಗಿರುವುದೇ ಇದಕ್ಕೆ ನಿದರ್ಶನವಾಗಿದೆ. ಹೀಗೆ ಶಬ್ದಕೋಶದ ಮೇಲೆ ಪರಿಣಾಮವಾಗುವುದು ಮಾತ್ರವಲ್ಲದೆ ವ್ಯಾಕರಣಪ್ರಕ್ರಿಯೆಗಳಲ್ಲಿಯೂ ಅಕ್ಷರೋಚ್ಚಾರಣೆಯಲ್ಲಿಯೂ ವ್ಯತ್ಯಾಸವಾಗುವುದೂ ಉಂಟು.

ಭಾಷೆಯ ಬೆಳೆವಳಿಗೆಗೆ ಮೇಲೆ ಹೇಳದವುಗಳಲ್ಲದೆ ಇತರ ಕಾರಣಗಳೂ ಉಂಟು. ಆದರೆ ಮೇಲೆ ಹೇಳಿದವುಗಳೇ ಮುಖ್ಯವಾದವುಗಳು. ಇವುಗಳ ಕಾರ್ಯವು ಬಹು ಸೂಕ್ಷ್ಮವಾಗಿರುವಂತೆ ಕಂಡುಬಂದರೂ ಇವುಗಳೇ ಕಾಲಕ್ರಮದಲ್ಲಿ ಒಂದು ಭಾಷೆ ವೈಲಕ್ಷಣ್ಯಗಳನ್ನು ಹೊಂದಿ ಅವಸ್ಥಾಂತರಗಳನ್ನೂ ಪ್ರಾಂತಭೇದಗಳನ್ನೂ ಪಡೆಯುವುದಕ್ಕೂ, ಕೆಲವು ವೇಳೆ ಕವಲೊಡೆದು ಬೇರೆ ಭಾಷೆಗಳಾಗುವುದಕ್ಕೂ, ಕಾರಣವಾಗಿವೆ.

## ೩. ದೇಶಭೇದದಿಂದಾಗುವ ಪರಿಣಾಮಗಳು

### 1. ಪ್ರಾಂತಭೇದಗಳು.

**ಪ್ರಾಂತಭೇದಗಳಾಗಲು ಕಾರಣ:** ಒಂದು ಭಾಷೆಯನ್ನಾಡುವ ಜನರಲ್ಲಿ ಸಂಸರ್ಗವು ಎಷ್ಟೆಷ್ಟು ಹೆಚ್ಚಾಗಿರುವುದೋ ಅವರು ಆಡುವ ಮಾತಿನಲ್ಲಿ ಏಕರೂಪತೆ ಅಷ್ಟಷ್ಟು ಇರುವುವೆಂದು ಹಿಂದೆ ಹೇಳಿದೆ. ಆ ಸಂಸರ್ಗವು ಕಡಿಮೆಯಾದಷ್ಟೂ ಭೇದಗಳು ಹೆಚ್ಚುತ್ತಿರುವುದು ಸ್ವಾಭಾವಿಕವಾಗಿರುತ್ತದೆ. ಸಂಸರ್ಗವು ಕಡಿಮೆಯಾಗುವುದಕ್ಕೆ ದೇಶವು (1) ವಿಸ್ತಾರವಾಗಿರುವುದು ಒಂದು ಕಾರಣ. ದೇಶವು ವಿಸ್ತಾರವಾಗಿದ್ದು (2) ಒಂದು ಕಡೆಯ ಜನರು ಮತ್ತೊಂದು ಕಡೆಯ ಜನರೊಂದಿಗೆ ಕಲೆಯುವುದಕ್ಕೆ ಪ್ರತಿಬಂಧಕಗಳಿರುವುದರಿಂದಾಗಲಿ (3) ಒಂದೊಂದು ಭಾಗವು ಒಂದೊಂದು ಆಧಿಪತ್ಯಕ್ಕೆ ಒಳಪಡುವುದರಿಂದಾಗಲಿ ಒಂದು ಪ್ರಾಂತದ ಜನರಿಗೂ ಮತ್ತೊಂದು ಪ್ರಾಂತದ ಜನರಿಗೂ ಬಳಕೆ ಕಡಿಮೆಯಾಗಬಹುದು. ಇದರ ಜತೆಗೆ ಬೇರೆ ಬೇರೆ ಭಾಷೆಗಳನ್ನಾಡುವ ಜನರ ಸಂಸರ್ಗವುಂಟಾದರೆ ಮಾತಿನಲ್ಲಿ ವೈಲಕ್ಷಣ್ಯಗಳು ಇನ್ನೂ ಹೆಚ್ಚಿ ಒಂದೇ ಭಾಷೆಯಲ್ಲಿ ನಾನಾಪ್ರಾಂತಭೇದಗಳಾಗುತ್ತವೆ.

**ಕನ್ನಡನಾಡು ವಿಸ್ತಾರವಾದದ್ದು. ಪರ್ವತ, ನದಿ ಇತ್ಯಾದಿ:** ದೂರ ಹೆಚ್ಚಿದಷ್ಟೂ ಬಳಕೆ ಕಡಿಮೆಯಾಗಿ ಬೇರೆ ಬೇರೆ ಕಡೆಯ ಜನರು ಆಡುವ ಮಾತಿನಲ್ಲಿ ವ್ಯತ್ಯಾಸವು ಹೆಚ್ಚುವುದರಿಂದ ಕನ್ನಡನಾಡಿನ ವಿಸ್ತಾರವೇ ಕನ್ನಡದಲ್ಲಿ ಪ್ರಾಂತಭೇದಗಳುಂಟಾಗಲು ಸಾಕಾಗಿದೆ. ದೇಶದ ಮಧ್ಯದಲ್ಲಿರುವ ದೊಡ್ಡ ನದಿಗಳೂ (ತುಂಗಭದ್ರಾ, ಕೃಷ್ಣಾ) ಪರ್ವತಶ್ರೇಣಿಗಳೂ (ಪಶ್ಚಿಮ ಘಟ್ಟಗಳು) ಬಳಕೆ ಕಡಿಮೆಯಾಗಲು ಕಾರಣವಾಗಿವೆ. ಈಗ ಪ್ರಯಾಣಸೌಕರ್ಯಗಳೂ ವ್ಯವಹಾರ ಸಾಧನಗಳೂ ಹೆಚ್ಚಾಗಿರುವುದರಿಂದ ದೂರವಾಗಲಿ ಪ್ರಾಂತಭೇದಗಳಾಗಲಿ ಪರ್ವತ ನದಿಗಳಾಗಲಿ ಪ್ರಾಂತಭೇದಕ್ಕೆ ಅಷ್ಟು ಮುಖ್ಯ ಕಾರಣಗಳಾಗಿಲ್ಲ.

**ರಾಜಕೀಯ ವಿಭಾಗಗಳು**: ಬೇರೆ ಬೇರೆ ಕಡೆಯವರಿಗೆ ಸಂಸರ್ಗ ಕಡಿಮೆಯಾಗಲು ಪ್ರಕೃತಿನಿರ್ಮಿತಗಳಾದ ಪರ್ವತನದಿಗಳಿಗಿಂತಲೂ ಮನುಷ್ಯಕಲ್ಪಿತವಾದ ರಾಜಕೀಯವಿಭಾಗಗಳು ಪ್ರಬಲತರವಾದ ಕಾರಣಗಳು. ಬೊಂಬಾಯಿ ಆಧಿಪತ್ಯದ ಕನ್ನಡಿಗರು, ನೈಜಾಮ್ ಇಲಾಖೆಯ ಕನ್ನಡಿಗರು, ಮದ್ರಾಸು ಆಧಿಪತ್ಯದ ಕನ್ನಡಿಗರು, ಮೈಸೂರಿನ ಕನ್ನಡಿಗರು— ಇವರಿಗೆ ಪರಸ್ಪರ ಸಂಸರ್ಗವು ಈಗ ಕಡಿಮೆಯಾಗಿರುವುದಕ್ಕೆ ಈ ರಾಜಕೀಯವಿಭಾಗಗಳೇ ಮುಖ್ಯಕಾರಣ. ಕರ್ಣಾಟಕವು ವಿಜಯನಗರದ ಸಾಮ್ರಾಜ್ಯದ ಕಾಲದಲ್ಲಿ ಅಲ್ಲದೆ ಮತ್ತಾವ ಕಾಲದಲ್ಲಿಯೂ ಒಂದೇ ಆಧಿಪತ್ಯಕ್ಕೆ ಒಳಪಟ್ಟಿರಲಿಲ್ಲ. ಆದರೆ ಹಿಂದೆ ರಾಜಕೀಯ ವಿಭಾಗವು ಈಗಿನಷ್ಟು

ಪರಿಣಾಮಕಾರಕವಾಗಿರಲಿಲ್ಲ; ಕರ್ಣಾಟಕವು ಇಷ್ಟು ತುಂಡುತುಂಡಾಗಿ ವಿಭಕ್ತ ವಾಗಿಯೂ ಇರಲಿಲ್ಲ.

**ಅನ್ಯಭಾಷಾಸಂಸರ್ಗ :** ಪ್ರಾಂತಭೇದಗಳಾಗಲು ಅನ್ಯಭಾಷಾಸಂಸರ್ಗವೂ ಒಂದು ಮುಖ್ಯಕಾರಣ. ಕರ್ಣಾಟಕದ ಎಲ್ಲ ಪ್ರಾಂತದ ಜನರಿಗೂ ಸಾಮಾನ್ಯವಾದ ಸಂಸ್ಕೃತ ಪ್ರಾಕೃತ ಉರ್ದು ಇಂಗ್ಲಿಷ್ ಭಾಷೆಗಳ ಸಂಸರ್ಗವಲ್ಲದೆ ಒಂದೊಂದು ಪ್ರಾಂತ ದವರಿಗೆ ಒಂದೊಂದು ಪರಭಾಷೆಯ ಸಂಸರ್ಗವು ವಿಶೇಷವಾಗಿದೆ. ಬೊಂಬಾಯಿ ಆಧಿ ಪತ್ಯದ ಕನ್ನಡಿಗರಿಗೆ ಮಹಾರಾಷ್ಟ್ರ, ನೈಜಾಮ್ ಇಲಾಖೆಯವರಿಗೆ ಆ ಇಲಾಖೆಯ ರಾಜಭಾಷೆಯಾದ ಉರ್ದು, ಮದ್ರಾಸು ಇಲಾಖೆಯಲ್ಲಿ ಒಂದು ಭಾಗದವರಿಗೆ ತೆಲುಗು, ಇನ್ನೊಂದು ಭಾಗದವರಿಗೆ ತಮಿಳು, ಮತ್ತೊಂದು ಭಾಗದವರಿಗೆ ತುಳು ಮಲೆಯಾಳ ಈ ಭಾಷೆಗಳ ಸಂಸರ್ಗವು ಅಧಿಕವಾಗಿದೆ. ಆಯಾ ಭಾಗದ ಕನ್ನಡಿಗರು ತಮ್ಮ ನೆರೆ ಯಲ್ಲಿರುವ ಅನ್ಯಭಾಷಾ ಜನರೊಂದಿಗೆ ಒಂದೇ ಆಧಿಪತ್ಯಕ್ಕೆ ಒಳಪಟ್ಟಿರುವುದರಿಂದ ಆಯಾ ಭಾಗದ ಕನ್ನಡಿಗರಿಗೆ ಅವರ ನೆರೆಹೊರೆಯವರಾದ ಅನ್ಯಭಾಷಾಜನರೊಂದಿ ಗಿರುವಷ್ಟು ಸಂಸರ್ಗವು ಬೇರೆ ಪ್ರಾಂತದ ಕನ್ನಡಿಗರೊಂದಿಗೆ ಇರುವುದು ಸಾಧ್ಯವಲ್ಲ.

ಹೀಗೆ ದೇಶದ ವಿಸ್ತಾರ, ಪ್ರಕೃತಿಗತವಾದ ಪ್ರಯಾಣಪ್ರತಿಬಂಧಕಗಳು, ರಾಜ ಕೀಯ ವಿಭಾಗ, ಅನ್ಯಭಾಷಾ ಸಂಸರ್ಗ ಇವುಗಳ ಫಲವಾಗಿ ಕನ್ನಡದಲ್ಲಿ ಪ್ರಾಂತ ಭೇದಗಳುಂಟಾಗಿವೆ. ಸಾವಿರಾರು ವರ್ಷಗಳಿಂದಲೂ ಬೆಳೆದುಕೊಂಡು ಬಂದಿರುವ ಸಾಹಿತ್ಯವು ಎಲ್ಲ ಪ್ರಾಂತದವರಿಗೂ ಸಾಮಾನ್ಯವಾಗಿರುವುದರಿಂದ ಅದು ಈ ಪ್ರಾಂತ ಭೇದಗಳು ಅತಿಯಾಗಲು ಪ್ರಬಲವಾದ ಪ್ರತಿಬಂಧಕವಾಗಿದೆ. ಈ ಪ್ರಾಂತಭೇದಗಳು ಮಾತಿನ ಭಾಷೆಯಲ್ಲಿ ದೊರೆಯುವಷ್ಟು ಬರೆಹದ ಭಾಷೆಯಲ್ಲಾಗಲಿ ಗದ್ಯಕಾವ್ಯಗಳಲ್ಲಿ ತೋರುವಷ್ಟು ಪದ್ಯಕಾವ್ಯಗಳಲ್ಲಾಗಲಿ ತೋರಿಬರುವುದಿಲ್ಲ.

**ಮೈಸೂರಿನ ಮತ್ತು ಧಾರ್ವಾಡದ ಕನ್ನಡ : ಭೇದಗಳು.** ಈಗ ಕನ್ನಡ ದಲ್ಲಿ ಧಾರ್ವಾಡ ಕನ್ನಡ, ಮೈಸೂರು ಕನ್ನಡ, ಮಂಗಳೂರು ಕನ್ನಡ ಎಂದು ಮೂರು ಪ್ರಾಂತಭೇದಗಳಿವೆ. ಧಾರ್ವಾಡ(ಉತ್ತರ ಕರ್ಣಾಟಕ)ದ ಕನ್ನಡಕ್ಕೂ ಮೈಸೂರು ಕನ್ನ ಡಕ್ಕೂ ಇರುವಷ್ಟು ಭೇದವು ಮಂಗಳೂರು ಕನ್ನಡಕ್ಕೂ ಮೈಸೂರು ಕನ್ನಡಕ್ಕೂ ಇರುವು ದಿಲ್ಲ. ಪ್ರಾಂತಭೇದಗಳ ವೈಲಕ್ಷ್ಯಣ್ಯವನ್ನು ತಿಳಿಸುವುದಕ್ಕಾಗಿ ಇಲ್ಲಿ ಮೈಸೂರು ಧಾರ್ವಾಡಗಳ ಕನ್ನಡಕ್ಕಿರುವ ಮುಖ್ಯಭೇದಗಳಲ್ಲಿ ಕೆಲವನ್ನು ಕೊಟ್ಟಿದೆ.

1. ಮೈಸೂರು ಪ್ರಾಂತದಲ್ಲಿ ಎಕಾರಾಂತವಾಗಿ ಉಚ್ಚರಿಸುವ ಶಬ್ದಗಳು ಧಾರ್ವಾಡ ಪ್ರಾಂತದ ಉಚ್ಚಾರಣೆಯಲ್ಲಿ ಇಕಾರಾಂತವಾಗುತ್ತವೆ.

ಉದಾ : (ಮೈ) ಕುದುರೆ, ಒಂಟೆ, ಆನೆ. (ಧಾ) ಕುದುರಿ, ಒಂಟಿ, ಆನಿ.

2. ಮೈಸೂರು ಪ್ರಾಂತದಲ್ಲಿ ವ್ಯಂಜನಾಂತ ಶಬ್ದಗಳಿಗೆ ಹತ್ತಿಸುವ ಸ್ವರವು 'ಉ'; ಧಾರ್ವಾಡ ಪ್ರಾಂತದಲ್ಲಿ 'ಅ.'

ಉದಾ : (ಮೈ) ಬಟ್ಟಲು, ಇಂಗ್ಲೆಂಡು. (ಧಾ) ಬಟ್ಟಲ, ಇಂಗ್ಲೆಂಡ.

3. ಮೈಸೂರು ಪ್ರಾಂತದಲ್ಲಿ ಇದೆ' 'ಇವೆ' ಎಂಬ ಕ್ರಿಯಾಪದಗಳು ರೂಢಿಯಲ್ಲಿವೆ; ಧಾರ್ವಾಡ ಪ್ರಾಂತದಲ್ಲಿ 'ಅದೆ' 'ಅವೆ' ಎಂಬುವು ರೂಢಿಯಲ್ಲಿವೆ.

4. ಮೈಸೂರು ಪ್ರಾಂತದಲ್ಲಿ ಕ್ರಿಯಾಪದಗಳಿಗೆ ನಪುಂಸಕಲಿಂಗದಲ್ಲಿ 'ಉದು' 'ಉವು' ಎಂಬ ಪ್ರತ್ಯಯಗಳು ಹತ್ತುತ್ತವೆ; ಧಾರ್ವಾಡ ಪ್ರಾಂತದಲ್ಲಿ 'ಅದು' 'ಅವು' ಎಂಬುವು ಹತ್ತುತ್ತವೆ.

5. ಕೆಲವು ಶಬ್ದಗಳನ್ನು ಒಂದೊಂದು ಪ್ರಾಂತದವರು ಒಂದೊಂದು ಅರ್ಥದಲ್ಲಿ ಉಪಯೋಗಿಸುತ್ತಾರೆ.

ಉದಾ : ತಿಂಡಿ, ಬಚ್ಚಲು.

6. ಅನ್ಯಭಾಷಾ ಶಬ್ದಗಳು ಒಂದೊಂದು ಪ್ರಾಂತದಲ್ಲಿ ಒಂದೊಂದು ರೂಢಿಯಲ್ಲಿವೆ.

ಉದಾ: (ಮೈ) ಹರಾಜು, ಆಮಂತ್ರಣ, ಪ್ರಯಾಣ. (ಧಾ) ಲಿಲಾವು, ನಿಮಂತ್ರಣ, ಪ್ರವಾಸ.

7. ಪ್ರಯೋಗದಲ್ಲಿ ಕೆಲವು ವ್ಯತ್ಯಾಸಗಳು ಕಂಡುಬರುತ್ತವೆ.

ಉದಾ : (ಧಾ) ಇದಕ್ಕೆ ಕೆರೆಯೆನ್ನುತ್ತಾರೆ. (ಮೈ) ಇದನ್ನು ಕೆರೆಯೆನ್ನುತ್ತಾರೆ.
(ಧಾ) ನೀನು ಈ ಕೆಲಸವನ್ನು ಮಾಡಲಿಕ್ಕೇಬೇಕು.
(ಮೈ) ನೀನು ಈ ಕೆಲಸವನ್ನು ಮಾಡಲೇಬೇಕು.

8. ಧಾರ್ವಾಡದ ಮಾತನಾಡುವ ಭಾಷೆಯಲ್ಲಿ ಒಂದು ತೆರದ ಸ್ವರವು (accent) ಕೇಳಿಬರುತ್ತದೆ.

ಉದಾ : ಯಾಕೋ ತಮ್ಮಾ!

**ಉತ್ತರ ದಕ್ಷಿಣ ಮಾರ್ಗಗಳು—ಕವಿರಾಜಮಾರ್ಗ :** ಈಗ ಇರುವಂತೆಯೇ ಹಿಂದಿನ ಕಾಲದಲ್ಲಿಯೂ ಪ್ರಾಂತಭೇದಗಳಿದ್ದಿರಬೇಕು. ಆದರೆ ಅವುಗಳನ್ನು ಇಂಥವೇ ಎಂದು ನಿರ್ಧರಿಸುವುದಕ್ಕೆ ತಕ್ಕ ಸಾಧನಗಳಿಲ್ಲ. ನೃಪತುಂಗನು ದಕ್ಷಿಣಮಾರ್ಗ ಉತ್ತರಮಾರ್ಗಗಳೆಂಬ ಎರಡು ಭೇದಗಳು ಕನ್ನಡದಲ್ಲಿರುವುವೆಂದು ಕವಿರಾಜಮಾರ್ಗದಲ್ಲಿ ಹೇಳಿದ್ದಾನೆ. ನಾಗವರ್ಮ ಭಟ್ಟಾಕಳಂಕರೂ ಹಾಗೆ ಎರಡು ಮಾರ್ಗಗಳುಂಟೆಂದು ಒಪ್ಪಿರುತ್ತಾರೆ. ಈಗ ಕೆಲವರು ಆ ಅಭಿಪ್ರಾಯವನ್ನು ಒಪ್ಪುತ್ತಾರೆ, ಕೆಲವರು ಒಪ್ಪುವುದಿಲ್ಲ. ಇಲ್ಲಿ ದಕ್ಷಿಣೋತ್ತರ

ಮಾರ್ಗಗಳಿಗಿರುವ ಆ ಭೇದಗಳಾವುವೆಂಬುದನ್ನು ತಿಳಿಸಿ ಆ ಮತಕ್ಕೆ ಸಾಧಕಬಾಧಕ ಗಳಾದ ಕಾರಣಗಳನ್ನು ಕೊಟ್ಟಿದೆ.

ಈ ವಿಷಯವಾಗಿ ಕವಿರಾಜಮಾರ್ಗದಲ್ಲಿ ಹೀಗೆ ಹೇಳಿದೆ:

೧. ನೋಡುವೆ೯, ಬೇಡುವೆ೯ ಎಂಬುದು ಉತ್ತರಮಾರ್ಗವಾಚಕ; ನೋೞ್ಪೆ೯, ಬೇೞ್ಪೆ೯ ಎಂಬುದು ದಕ್ಷಿಣಮಾರ್ಗವಾಚಕ.

೨. ಸೂಡುವೆ೯ ಎಂದಲ್ಲದೆ ಸೂೞ್ಪೆ೯ ಎಂದೂ, ಕೂಡುವೆ೯ ಎಂದಲ್ಲದೆ ಕೂೞ್ಪೆ೯ ಎಂದೂ, ಕಾಡುವೆ೯ ಎಂದಲ್ಲದೆ ಕಾೞ್ಪೆ೯ ಎಂದೂ, ತೋಡುವೆ೯ ಎಂದಲ್ಲದೆ ತೋೞ್ಪೆ೯ ಎಂದೂ ಹೇಳಕೂಡದು.

೩. ಬರಿಸುವೆ೯, ಇರಿಸುವೆ೯, ತರಿಸುವೆ೯ ಎಂಬುದು ದಕ್ಷಿಣಮಾರ್ಗವಾಚಕ; ಬರಿಪೆ೯, ಇರಿಪೆ೯, ತರಿಪೆ೯ ಎಂಬುದು ಉತ್ತರಮಾರ್ಗವಾಚಕ; ಬರಿಪ್ಪೆ೯, ಇರಿಪ್ಪೆ೯, ತರಿಪ್ಪೆ೯ ಎಂಬುದು ಉತ್ತರೋತ್ತರಮಾರ್ಗವಾಚಕ.

೪. ಪರಸುವೆ೯ ಎಂದಲ್ಲದೆ ಪರಪೆ೯ ಎಂದಾಗಲಿ, ಬೆರಸುವೆ೯ ಎಂದಲ್ಲದೆ ಬೆರಪೆ೯ ಎಂದಾಗಲಿ ಹೇಳಕೂಡದು. ಇದೂ ಅಲ್ಲದೆ ಸರ್ವನಾಮಗಳಲ್ಲಿ ಆ೯ ಆಮ್ ಎಂಬುವು ದಕ್ಷಿಣಮಾರ್ಗದವು; ನಾ೯ ನಾಮ್ ಎಂಬವು ಉತ್ತರ ಮಾರ್ಗದವು.

**ಈ ವಿಷಯದಲ್ಲಿರುವ ಮತಭೇದ. ಮಾರ್ಗಭೇದ ಉಂಟೆಂಬ ಮತ:** ಈ ದಕ್ಷಿಣೋತ್ತರ ಮಾರ್ಗಭೇದಗಳು ಇದ್ದುದು ನಿಶ್ಚಯವೆಂದೂ ಆ ಭೇದ ಗಳುಂಟಾಗಲು ತಮಿಳು ತೆಲುಗು ಭಾಷೆಗಳ ದೃಢ ಸಂಪರ್ಕವೇ ಕಾರಣವೆಂದೂ ಕೆಲವರು ಹೇಳುತ್ತಾರೆ. ಅವರ ಮತವನ್ನು ಹೀಗೆ ವಿವರಿಸಬಹುದು. 'ೞ' ಎಂಬ ಅಕ್ಷರವು ತಮಿಳಿನಲ್ಲಿದೆ, ತೆಲುಗಿನಲ್ಲಿಲ್ಲ. ತಮಿಳಿನಲ್ಲಿ ಶಬ್ದಗಳು ವ್ಯಂಜನಾಂತ ಗಳಾಗಿರುವುದುಂಟು; ತೆಲುಗಿನಲ್ಲಿ ಹಾಗಿಲ್ಲದೆ ಸ್ವರಾಂತಗಳಾಗಿರುತ್ತವೆ. ಆದುದರಿಂದ 'ಮಾಡು' ಎಂಬ ಧಾತುವಿಗೆ ವ+ಎನ್ ಎಂಬ ಪ್ರತ್ಯಯಗಳು ಸೇರಿದಾಗ ದಕ್ಷಿಣಮಾರ್ಗದಲ್ಲಿ ಧಾತುವಿನ ಅಂತ್ಯ 'ಉ'ಕಾರವು ಪ್ರಧಾನವಲ್ಲದ ಕಾರಣ ಅದು ಲೋಪವಾಗಿ 'ಡ'ಕಾರಕ್ಕೆ ೞಾದೇಶವಾಗುತ್ತದೆ; ಉತ್ತರ ಮಾರ್ಗದಲ್ಲಿ ಈ 'ಉ' ಮುಖ್ಯವಾದುದು; ೞಕಾರವಿಲ್ಲ; ಆದುದರಿಂದ ಮಾಡುವೆ೯ ಎಂಬ ರೂಪವಾಗುತ್ತದೆ. ಹಾಗೆಯೇ 'ನಾನು' ಎಂಬ ಸರ್ವನಾಮರೂಪವು ತೆಲುಗಿನಲ್ಲಿದೆ. 'ಆ೯' ಎಂಬ ರೂಪವು ತಮಿಳಿನಲ್ಲಿದೆ. ಆದುದರಿಂದ ಉತ್ತರ ಮಾರ್ಗದಲ್ಲಿ ನಾನ್, ನಾವಮ್ ಎಂದೂ, ದಕ್ಷಿಣಮಾರ್ಗದಲ್ಲಿ ಆ೯, ಆಮ್ ಎಂದೂ

ಪ್ರಯೋಗವಿದೆ. ಬರಿಸುರ್ವೆ, ಬರಿರ್ಪೆ ಎಂಬ ರೂಪಗಳು ಈ ತತ್ತ್ವದ ಪ್ರಕಾರ ಹೇಗೆ ಸಿದ್ಧಿಸುತ್ತವೆಂಬುದನ್ನು ಆ ಪಕ್ಷದವರು ಸರಿಯಾಗಿ ತಿಳಿಸುವುದಿಲ್ಲ.*

**ಮಾರ್ಗಭೇದವಿಲ್ಲವೆಂಬ ಮತ:** ಇದಕ್ಕೆ ಪ್ರತಿಯಾಗಿ ಕೆಲವರು ಹೀಗೆ ಹೇಳುತ್ತಾರೆ. ನೃಪತುಂಗನು ಹೇಳುವ ಮಾರ್ಗಭೇದಗಳು ಎಷ್ಟು ಕಾಲದವರೆಗೆ ನಿಂತಿದ್ದುವು? ಹತ್ತನೆಯ ಶತಮಾನದಲ್ಲಿ ಹುಟ್ಟಿದ ಪಂಪಭಾರತದಲ್ಲಿ ನೋೞ್ಪ, ಮಾೞ್ಪ, ಬೇೞ್ಪ ಎಂಬ ರೂಪಗಳು ದೊರೆಯುತ್ತವೆ. ಹಾಗಾದರೆ ಉತ್ತರ ಕರ್ಣಾಟಕದ ಪಂಪನ ತಿರುಳ್ಗನ್ನಡವು ದಕ್ಷಿಣಮಾರ್ಗಕ್ಕೆ ಸೇರಿದುದಾಯಿತು. ಆದಿಪುರಾಣದಲ್ಲಿ ಕೊಲಿಪ, ಲಲ್ಲಯಿಪ—ಈ ರೂಪಗಳಲ್ಲದೆ ಶೋಕಿಪ್ಪ ಎಂಬ ರೂಪವು ದೊರೆಯುತ್ತದೆ. ಅಷ್ಟೇ ಅಲ್ಲ. ಶಿವಮೊಗ್ಗೆಯ ಶಾಸನವೊಂದರಲ್ಲಿ ಪುರುಡಿಪ್ಪ ಎಂಬ ರೂಪವು ಹೇಗೆ ಬಂದಿತು? 'ನಮಗೆ' 'ಎಮ್ಮೊಳ್' ಎಂಬ ಎರಡು ರೂಪಗಳೂ ಪಂಪರಾಮಾಯಣದ ಮೊದಲನೆಯ ಎರಡು ಪದ್ಯಗಳಲ್ಲಿಯೇ ಇವೆಯಲ್ಲ!

**ಸಿದ್ಧಾಂತ:** ನೃಪತುಂಗನ ಕಾಲದಲ್ಲಿ ಅಥವಾ ಅದಕ್ಕೆ ಹಿಂದಿನ ಕಾಲದಲ್ಲಿ ಕನ್ನಡದ ಪೂರ್ಣಪರಿಚಯವನ್ನು ಹೊಂದಲು ಸಾಕಾದಷ್ಟು ಗ್ರಂಥಗಳು ಈಗ ದೊರೆಯುವುದಿಲ್ಲ. ನೃಪತುಂಗನ ಕಾಲಕ್ಕೇ ಎರಡು ಮಾರ್ಗದ ಪ್ರಯೋಗಗಳೂ ಎಲ್ಲ ಪ್ರಾಂತಗಳಲ್ಲಿಯೂ ರೂಢಿಯಲ್ಲಿದ್ದುವೆಂಬುದಕ್ಕೆ ದಕ್ಷಿಣೋತ್ತರಮಾರ್ಗ ಭೇದವನ್ನು ಸೂಚಿಸುವ ಕವಿರಾಜಮಾರ್ಗದ ಭಾಗವೇ ಆಧಾರವಾಗಿದೆ. ಅದರಲ್ಲಿ ಕಾಡುರ್ವೆ ತೋಡುರ್ವೆ ಎಂಬಿವನ್ನು ಕಾಟ್ಪ್ರೆ ತೋಟ್ಪ್ರೆ ಎಂದೂ, ಪರಸುರ್ವೆ ಬೆರಸುರ್ವೆ ಎಂಬಿವನ್ನು ಪರರ್ಪೆ ಬೆರರ್ಪೆ ಎಂದೂ ಪ್ರಯೋಗಮಾಡಕೂಡದೆಂದು ಹೇಳಿದೆ. ಉತ್ತರಮಾರ್ಗದ ಪ್ರಯೋಗಗಳಲ್ಲಿ ಕೆಲವನ್ನಾದರೂ ದಕ್ಷಿಣಮಾರ್ಗದವರೂ ದಕ್ಷಿಣ ಮಾರ್ಗದ ಪ್ರಯೋಗಗಳಲ್ಲಿ ಕೆಲವನ್ನಾದರೂ ಉತ್ತರಮಾರ್ಗದವರೂ ಆಗ ಪ್ರಯೋಗ ಮಾಡುತ್ತಿದ್ದರೆಂದು ಇದರಿಂದ ಸಿದ್ಧವಾಗುವುದಿಲ್ಲವೆ?†

ಮುಂದಿನ ಪ್ರಕರಣದಲ್ಲಿ ನಿರೂಪಿಸುವಂತೆ ಕನ್ನಡ ತೆಲುಗು ತಮಿಳು— ಈ ಮೂರೂ ಒಂದೇ ಮೂಲಭಾಷೆಯಿಂದ ಹುಟ್ಟಿದುವಾದುದರಿಂದ ತೆಲುಗು ತಮಿಳುಗಳ ಸಂಪರ್ಕದಿಂದಲೇ ಉತ್ತರದಕ್ಷಿಣಮಾರ್ಗಭೇದವುಂಟಾಯಿತೆಂಬ ವಾದವು ಸಮರ್ಪಕವಾದುದಲ್ಲ. ಹಿಂದೆಯೇ ಹೇಳಿದಂತೆ ದೇಶವಿಸ್ತಾರದಿಂದ

---

* ತೆಲುಗಿನಲ್ಲಿಯೂ ನಾನ್ ಎಂಬ ಸರ್ವನಾಮದ ಪ್ರಯೋಗವಿರುವಂತೆಯೇ ಅನ್ (ಇದು 'ಏನು' ಎಂಬ ರೂಪವನ್ನು ತೆಲುಗಿನಲ್ಲಿ ಪಡೆದಿದೆ) ಎಂಬ ಪ್ರಯೋಗವೂ ಉಂಟು.

† ದಂಡಿಯ ಕಾವ್ಯಾದರ್ಶದಲ್ಲಿ ಹೇಳಿರುವ ವೈದರ್ಭೀಗೌಡೀರೀತಿಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನೃಪತುಂಗನು ಕನ್ನಡದಲ್ಲಿ ದಕ್ಷಿಣೋತ್ತರಮಾರ್ಗಗಳನ್ನು ಹೇಳಿರುವಂತಿದೆ. ಇವು ಶಬ್ದರೂಪಕ್ಕಿಂತಲೂ ರೀತಿಭೇದಕ್ಕೆ ಹೆಚ್ಚಾಗಿ ಅನ್ವಯಿಸುತ್ತವೆ. (ಪುಟ ೨೩೫ ನೋಡಿ).

ಪೂರ್ವದಲ್ಲಿಯೂ ಪ್ರಾಂತಭೇದವಿತ್ತೆಂದು ಸ್ಥೂಲವಾಗಿ ಒಪ್ಪಿಕೊಳ್ಳಬಹುದು. ಆ ವ್ಯತ್ಯಾಸವು ಇಂಥದೇ ಎಂದು ನಿರ್ಧರಿಸುವುದಕ್ಕೆ ಪ್ರಯತ್ನಿಸುವುದು ಪ್ರಕೃತ ಸ್ಥಿತಿಯಲ್ಲಿ ಸಾಹಸಕಾರ್ಯವೆಂದು ತೋರುತ್ತದೆ.

## 2. ಭಿನ್ನಭಾಷೆಗಳು.

**ಪ್ರಾಂತಭೇದಗಳೇ ಭಿನ್ನಭಾಷೆಗಳಾಗಬಹುದು :** ಒಂದು ಭಾಷೆಯನ್ನಾಡುವ ಜನರು ವಾಸಮಾಡುವ ದೇಶವು ವಿಸ್ತಾರವಾಗಿದ್ದು ಒಂದು ಕಡೆಯ ಜನರಿಗೂ ಮತ್ತೊಂದು ಕಡೆಯ ಜನರಿಗೂ ಬಳಕೆ ಕಡಮೆಯಾಗದೆ ಪ್ರಾಂತಭೇದಗಳುಂಟಾಗುವುವೆಂಬುದನ್ನು ಹಿಂದಿನ ಪ್ರಕರಣದಲ್ಲಿ ತಿಳಿಸಿದೆ. ಆ ಬಳಕೆ ತೀರ ಕಡಮೆಯಾಗಿ ಅಥವಾ ಇಲ್ಲದಂತಾಗಿ ಎಲ್ಲ ಪ್ರಾಂತದವರಿಗೂ ಸಾಮಾನ್ಯವಾದ ಗ್ರಂಥರಾಶಿಯೂ ಇಲ್ಲದೆ ಹೋದ ಪಕ್ಷದಲ್ಲಿ ಪ್ರಾಂತವೈಲಕ್ಷಣ್ಯಗಳು ಬೆಳೆದು ಒಂದು ಪ್ರಾಂತದ ಜನರ ಭಾಷೆ ಕೆಲವು ಕಾಲಾನಂತರ ಮತ್ತೊಂದು ಪ್ರಾಂತದವರಿಗೆ ಅರ್ಥವಾಗದಂತಾಗಬಹುದು. ಆಗ ಪ್ರಾಂತಭೇದಗಳು ಭಿನ್ನಭಾಷೆಗಳಾಗಿ ಪರಿಣಮಿಸುತ್ತವೆ.

**ಕನ್ನಡ, ತೆಲುಗು, ತಮಿಳು ಮೊದಲಾದ ದ್ರಾವಿಡ ಭಾಷೆಗಳ ಮಾತೃಭಾಷೆ.** ಕನ್ನಡ ತೆಲುಗು ತಮಿಳು ಮಲೆಯಾಳ ತುಳು ಕೊಡಗು ಬಡಗ ಮೊದಲಾದ ಭಾಷೆಗಳಿಗೆ ಪರಸ್ಪರ ಇರುವ ಹೋಲಿಕೆಯನ್ನು ನೋಡಿದರೆ ಈ ಭಾಷೆಗಳೆಲ್ಲವೂ ಒಂದೇ ಮೂಲಭಾಷೆಯಿಂದ ಹುಟ್ಟಿರಬೇಕೆಂದು ಗೊತ್ತಾಗುತ್ತದೆ. ಈ ಎಲ್ಲ ಭಾಷೆಗಳಿಗೂ ಸಂಸ್ಕೃತವೇ ಮಾತೃಭಾಷೆಯೆಂದು ಪ್ರಾಚೀನಪಂಡಿತರು ಅಭಿಪ್ರಾಯಪಟ್ಟಿದ್ದರು. ಆಧುನಿಕ ಪಂಡಿತರು ಸಂಸ್ಕೃತಕ್ಕಿಂತ ಬೇರೆಯಾದ ಭಾಷೆಯೊಂದು ಈ ಭಾಷೆಗಳ ಮಾತೃಭಾಷೆಯಾಗಿದ್ದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿ ಯಾವ ಮತವು ವಿಶ್ವಾಸಾರ್ಹವಾದುದೆಂಬುದು ವಿಚಾರ ಯೋಗ್ಯವಾದ ವಿಷಯವಾಗಿದೆ.

**ಪ್ರಾಚೀನಮತ—ಮಾತೃಭಾಷೆ ಸಂಸ್ಕೃತ. ಕಾರಣ—ಸಂಸ್ಕೃತ ಪ್ರಾಕೃತ ಶಬ್ದಗಳು.** ಕನ್ನಡ ಮೊದಲಾದ ದ್ರಾವಿಡ ಭಾಷೆಗಳು ಗ್ರಾಂಥಿಕ ರೂಪವನ್ನು ಹೊಂದುವ ಕಾಲಕ್ಕೆ ಮುಂಚೆಯೇ ಅವಕ್ಕೆ ಸಂಸ್ಕೃತಭಾಷೆಯ ಪ್ರಬಲವಾದ ಸಂಸರ್ಗವಾಗಿತ್ತು. 'ಆರ್ಯರು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು ; ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ದಗಳನ್ನು ಹೊಂದಿಸಿಕೊಟ್ಟು ಭಾಷೆಯನ್ನು ಪುಷ್ಟಿಮಾಡಿದರು ; ಬರಹವನ್ನು ಕಲಿಸಿಕೊಟ್ಟರು ; ಕಾವ್ಯಸ್ವರೂಪವನ್ನು ತೋರಿಸಿಕೊಟ್ಟರು ; ಆ ಕಾಲಕ್ಕೆ ಬೇಕಾದ ವೃತ್ತಗಳನ್ನೂ ಅಲಂಕಾರ ವ್ಯಾಕರಣಗಳನ್ನೂ ಪುರಾಣ ಇತಿಹಾಸಗಳನ್ನೂ ಒದಗಿಸಿಕೊಟ್ಟರು. ಈ ರೀತಿ ಉಳದ ಹೊಲದಲ್ಲಿ ಬೆಳೆಮಾಡಿ ನಾಡೆಲ್ಲಾ ಜೀವಕಳೆಯಿಂದ ತುಂಬಿ ತುಳುಕಾಡು

ವಂತೆ ಮಾಡಿಟ್ಟರು.' ಹೀಗಾಗಿ ದ್ರಾವಿಡ ಭಾಷೆಗಳಲ್ಲಿ, ಅದರಲ್ಲಿಯೂ ಗೌರವಾರ್ಹವಾದ ಗ್ರಾಂಥಿಕಭಾಷೆಯಲ್ಲಿ, ಅನೇಕ ಸಂಸ್ಕೃತ ಶಬ್ದಗಳು ಇದ್ದಂತೆಯೇ (ತತ್ಸಮ ಸಂಸ್ಕೃತ) ಅಥವಾ ಹೆಚ್ಚು ಕಡಮೆ ವಿಕಾರವನ್ನು ಹೊಂದಿ (ಪ್ರಾಕೃತ-ತದ್ಭವ) ಪ್ರಯೋಗಕ್ಕೆ ಬಂದಿವೆ. ಸಾಮಾನ್ಯವಾಗಿ ನೋಡಿದರೆ ಈ ಭಾಷೆಗಳಿಗೆ ಈ ಮಾತುಗಳೇ ಮುಖ್ಯವಾದುವು. ಗ್ರಾಂಥಿಕಭಾಷೆಗೆ ಇವು ಅತ್ಯವಶ್ಯವಾದುವು. ಸಂಸ್ಕೃತಜನ್ಯಗಳಲ್ಲದ ಶಬ್ದಗಳೂ (ದೇಶ್ಯಗಳು) ಈ ಭಾಷೆಗಳಲ್ಲಿದ್ದುವೆಂಬುದು ಪ್ರಾಚೀನಪಂಡಿತರಿಗೆ ಗೊತ್ತಿಲ್ಲದೇ ಇರಲಿಲ್ಲ. ಆದರೆ ಅವುಗಳಿಗೆ ಅವರು ಹೆಚ್ಚು ಪ್ರಾಶಸ್ತ್ಯ ಕೊಡಲಿಲ್ಲ. ಸಂಸ್ಕೃತಜನ್ಯಗಳೇ ಆದ ಪ್ರಾಕೃತ ಭಾಷೆಗಳಲ್ಲಿ (ಉದಾ: ಈಗಿನ ಉತ್ತರ ಇಂಡಿಯಾದ ಬಂಗಾಳಿ, ಹಿಂದಿ ಮೊದಲಾದವು) ದೇಶ್ಯಶಬ್ದಗಳಿವೆ. ಹಾಗೆಯೇ ಕನ್ನಡ ಮೊದಲಾದ ಭಾಷೆಗಳಲ್ಲಿಯೂ ಇವೆ. ಪ್ರಾಕೃತದಲ್ಲಿ ಹೇಗೋ ಹಾಗೆಯೇ ಕನ್ನಡ ಮೊದಲಾದ ಭಾಷೆಗಳಲ್ಲಿಯೂ ಅವು ಪ್ರಧಾನವಲ್ಲವೆಂದು ಅವರು ಭಾವಿಸಿದಂತೆ ತೋರುತ್ತದೆ. ಆದುದರಿಂದಲೇ ಪ್ರಾಕೃತಭಾಷೆಗಳಿಗೆ ಹೇಗೋ ಹಾಗೆಯೇ ಕನ್ನಡ ಮೊದಲಾದುವುಗಳಿಗೂ ಸಂಸ್ಕೃತವು ಮಾತೃಭಾಷೆಯೆಂದು ಅವರು ನಿರ್ಧರಿಸಿದರು.

**ಆಧುನಿಕಮತ—ಮಾತೃಭಾಷೆ ಸಂಸ್ಕೃತವಲ್ಲ. ಕಾರಣಗಳು—ದೇಶ್ಯ ಶಬ್ದಗಳು, ವ್ಯಾಕರಣ.** ಈ ಸಿದ್ಧಾಂತವು ತಪ್ಪೆಂದು ಆಧುನಿಕ ಪಂಡಿತರು ಅಭಿಪ್ರಾಯಪಡುತ್ತಾರೆ. ಕನ್ನಡ ಮೊದಲಾದ ಭಾಷೆಗಳಲ್ಲಿ ಅನೇಕ ಸಂಸ್ಕೃತಶಬ್ದಗಳು ವಿಕಾರವನ್ನು ಹೊಂದಿಯೂ ಹೊಂದದೆಯೂ ಸೇರಿರುವುವೆಂಬುದನ್ನು ಯಾರೂ ಇಲ್ಲವೆಂದು ಹೇಳುವಹಾಗಿಲ್ಲ. ಆದರೆ ದೇಶ್ಯಶಬ್ದಗಳ ವಿಚಾರದಲ್ಲಿ ಪ್ರಾಚೀನ ಪಂಡಿತರ ಅಭಿಪ್ರಾಯವು ವಿಶ್ವಾಸಾರ್ಹವಾದುದಲ್ಲ. ಪ್ರಾಕೃತಭಾಷೆಗಳಲ್ಲಿರುವ ದೇಶ್ಯಶಬ್ದಗಳ ಸಂಖ್ಯೆ ಕಡಮೆ; ಅವು ಆ ಭಾಷೆಗೆ ಅಷ್ಟು ಮುಖ್ಯವಾದುವೂ ಅಲ್ಲ. ಅವಿಲ್ಲದಿದ್ದರೂ ದಿನಚರ್ಯೆಯ ವ್ಯವಹಾರ ನಡೆಯಬಹುದು. ಕನ್ನಡ ಮೊದಲಾದ ಭಾಷೆಗಳಲ್ಲಿ ಹಾಗಿಲ್ಲ. ದೇಶ್ಯಶಬ್ದಗಳ ಸಂಖ್ಯೆ ಹೆಚ್ಚು. ಅವು ದಿನಚರ್ಯೆಯ ವ್ಯವಹಾರಕ್ಕೆ ಅನಿವಾರ್ಯವಾಗಿ ಅವಶ್ಯವಾದುವು. ಒಂದು ಭಾಷೆಗೆ ಅತ್ಯಗತ್ಯವಾದ ಶಬ್ದಗಳು—ನಾಮಪದಗಳಲ್ಲಿ, ದೇಹದ ಅಂಗಪ್ರತ್ಯಂಗಗಳ ಹೆಸರುಗಳು, ಜನರಿಗಿರುವ ಪರಸ್ಪರ ಸಂಬಂಧವನ್ನು ಸೂಚಿಸುವ ಶಬ್ದಗಳು, ದೇಶದಲ್ಲಿರುವ ಪ್ರಾಣಿಗಳ ಮತ್ತು ಗಿಡಬಳ್ಳಿಗಳ ಹೆಸರುಗಳು, ಸರ್ವನಾಮಗಳು, ಸಂಖ್ಯಾವಾಚಕಗಳು, ಧಾತುಗಳು ಇತ್ಯಾದಿ. ಭಾವನಾಮಗಳು ಮತ್ತು ಶಾಸ್ತ್ರ, ರಾಜ್ಯ, ಸಮಾಜ, ನಾಗರಿಕತೆ ಮೊದಲಾದ ವಿಷಯಗಳಿಗೆ ಸಂಬಂಧಪಟ್ಟ ಶಬ್ದಗಳು ಒಂದು ಭಾಷೆಗೆ ಅನ್ಯಭಾಷೆಗಳಿಂದ ಬರತಕ್ಕುವು. ಹೀಗೆ ಅನ್ಯಭಾಷೆಗಳಿಂದ ಬಂದು ಸೇರುವ ಶಬ್ದಗಳು ಬಹುಮಟ್ಟಿಗೆ ನಾಮಪದಗಳು, ಕ್ರಿಯಾಪದಗಳು, ಗುಣವಾಚಕಗಳು, ಕ್ರಿಯಾವಿಶೇಷಣಗಳು. ಆದರೆ ಇವುಗಳ ಸಂಖ್ಯೆ ಕಡಮೆ; ಸರ್ವನಾಮಗಳೂ ಅವ್ಯಯ

ಗಳೂ ಸೇರುವುದಿಲ್ಲವೆಂದೇ ಹೇಳಬಹುದು. ಕೆಲವು ವೇಳೆ ಅನ್ಯಭಾಷೆಗಳ ಪ್ರಭಾವವು ಪ್ರಬಲವಾದುದಾಗಿದ್ದರೆ ಆ ಭಾಷೆಯ ಶಬ್ದಗಳೇ ವಿಶೇಷವಾಗಿ ರೂಢಿಗೆ ಬಂದು ಅನೇಕ ದೇಶ್ಯಶಬ್ದಗಳು ಅಳಿದುಹೋಗಬಹುದು. ಆದರೆ ಪರಭಾಷೆಯ ಪ್ರಭಾವವು ವ್ಯಾಕರಣಪ್ರಕ್ರಿಯೆಗಳ ಮೇಲೆ ಎಂದಿಗೂ ಹೆಚ್ಚು ಪರಿಣಾಮಕಾರಕವಾಗುವುದಿಲ್ಲ. ಹೀಗೆ ಭಾಷೆಗೆ ಆವಶ್ಯಕವಾದ ಶಬ್ದಗಳ ದೃಷ್ಟಿಯಿಂದಲೂ ವ್ಯಾಕರಣ ದೃಷ್ಟಿಯಿಂದಲೂ ಪರೀಕ್ಷಿಸಿದರೆ ಕನ್ನಡ ತೆಲುಗು ಮೊದಲಾದ ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯಗಳಲ್ಲವೆಂದೂ ಅವೆಲ್ಲವೂ ಸಂಸ್ಕೃತವಲ್ಲದ ಒಂದೇ ಮೂಲ ಭಾಷೆಯಿಂದ ಹುಟ್ಟಿದುವೆಂದೂ ಅವುಗಳಿಗೆ ಪರಸ್ಪರ ಅಕ್ಕತಂಗಿಯರ ಸಂಬಂಧವಿರುವುದೆಂದೂ ತೋರಿಸುವುದಕ್ಕಾಗಿ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿದೆ :

(1) ಶಬ್ದಗಳು :

| | **ಕನ್ನಡ** | **ತಮಿಳು** | **ತೆಲುಗು** | **ಸಂಸ್ಕೃತ** |
|---|---|---|---|---|
| ದೇಹದ ಅಂಗಗಳು— | ಕಯ್ | ಕಯ್ | ಕಯ್ (ಚೇಯಿ) | ಹಸ್ತ |
| | ತಲೆ | ತಲೈ | ತಲ | ಶಿರಸ್ |
| | ಬೆರಲ್ | ವಿರಲ್ | ವ್ರೇಲು | ಅಂಗುಲಿ |
| | ಬಾಯ್ | ವಾಯ್ | ವಾಯಿ | ವದನ |
| ಸಂಬಂಧವಾಚಕಗಳು— | ಅಣ್ಣ | ಅಣ್ಣ | ಅನ್ನ | ಭ್ರಾತೃ |
| | ತಮ್ಮ | ತಂಬಿ | ತಮ್ಮುಡು | ಭ್ರಾತೃ |
| | ತಾಯ್ | ತಾಯ್ | ತಾಯಿ | ಮಾತೃ |
| | ತಂದೆ | ತಂದೈ | ತಂಡ್ರಿ | ಪಿತೃ |
| ಸಾಮಾನ್ಯ ಪ್ರಾಣಿಗಳು— | ಹುಲಿ(ಪುಲಿ) | ಪುಲಿ | ಪುಲಿ | ವ್ಯಾಘ್ರ |
| | ಇಲಿ | ಎಲಿ | ಎಲುಕ | ಮೂಷಕ |
| | ಎತ್ತು | ಎರುದು | ಎದ್ದು | ವೃಷಭ |
| | ಹಾವು(ಪಾವು) | ಪಾಂಬು | ಪಾಮು | ಸರ್ಪ |
| ಸಾಮಾನ್ಯ ಪದಾರ್ಥಗಳು— | ಹಾಲು(ಪಾಲ್) | ಪಾಲ್ | ಪಾಲು | ಕ್ಷೀರ |
| | ಬಾಗಿಲು | ವಾಯಿಲ್ | ವಾಕಿಲಿ | ಕವಾಟ |
| | ಉಪ್ಪು | ಉಪ್ಪು | ಉಪ್ಪು | ಲವಣ |
| | ಕೊಡೆ | ಕುಡೈ | ಗೊಡುಗು | ಆತಪತ್ರ |
| ಸರ್ವನಾಮಗಳು— | ನಾನು | ಯಾರ್ನ್, ನಾರ್ನ್ | ನೇನು | ಅಹಂ |
| | ನೀನು | ನೀರ್ನ್ | ನೀವು | ತ್ವಂ |

| | ಕನ್ನಡ | ತಮಿಳು | ತೆಲುಗು | ಸಂಸ್ಕೃತ |
|---|---|---|---|---|
| | ಅವನು | ಅವರ್ | ವಾಡು | ಸಃ |
| | ಅದು | ಅದು | ಅದಿ | ತತ್ |
| ಸಂಖ್ಯಾವಾಚಕಗಳು— | ಎರಡು | ಇರಂಡು | ರೆಂಡು | ದ್ವಿ |
| | ಮೂಱು | ಮೂನ್ಱು | ಮೂಡು | ತ್ರಿ |
| | ಪತ್ತು | ಪತ್ತು | ಪದಿ | ದಶ |
| | ನೂಱು | ನೂಱು | ನೂರು | ಶತ |
| ಧಾತುಗಳು— | ಹೋಗು (ಪೋಗು) | ಪೋ | ಪೋ | ಗಮ್ |
| | ತಿನ್ನು | ತಿನ್ | ತಿನು | ಅದ್ |
| | ಪೊಗೞ್ | ಪುಗೞ್ | ಪೊಗಡು | ಸ್ತು |
| | ಬಿಡು | ವಿಡು | ವಿಡು | ತ್ಯಜ್ |

(2) ವ್ಯಾಕರಣಪ್ರಕ್ರಿಯೆಗಳು :

ಲಿಂಗ : ದ್ರಾವಿಡಭಾಷೆಗಳಲ್ಲಿ ಲಿಂಗವು ಅರ್ಥಕ್ಕೆ ಅನುಸಾರವಾಗಿರುತ್ತದೆ. ಪುರುಷವಾಚಕಶಬ್ದಗಳು ಪುಲ್ಲಿಂಗ, ಸ್ತ್ರೀವಾಚಕಶಬ್ದಗಳು ಸ್ತ್ರೀಲಿಂಗ ಇತ್ಯಾದಿ. ಸಂಸ್ಕೃತದಲ್ಲಿ ಹಾಗಿಲ್ಲ. ಹೆಂಡತಿ ಎಂಬ ಅರ್ಥವನ್ನೇ ಕೊಡುವ ಮೂರು ಶಬ್ದಗಳು ಮೂರು ಲಿಂಗಗಳಲ್ಲಿರುವುದು ಇದಕ್ಕೆ ನಿದರ್ಶನವಾಗಿದೆ.

ವಚನ: ದ್ರಾವಿಡ ಭಾಷೆಗಳಲ್ಲಿ ಏಕವಚನ ಬಹುವಚನ ಎಂದು ಎರಡು ವಚನಗಳು ಮಾತ್ರ ಇವೆ; ಸಂಸ್ಕೃತದಲ್ಲಿ ದ್ವಿವಚನವು ಬೇರೆ ಇದೆ.

ವಿಭಕ್ತಿ : ದ್ರಾವಿಡ ಭಾಷೆಗಳಲ್ಲಿ ಎರಡು ವಚನಗಳಲ್ಲಿಯೂ ಒಂದೇ ವಿಧವಾದ ವಿಭಕ್ತಿಪ್ರತ್ಯಯಗಳು ಸೇರುತ್ತವೆ. ಸಂಸ್ಕೃತದಲ್ಲಿ ಹಾಗಿಲ್ಲ.

ಗುಣವಾಚಕ : ಗುಣವಾಚಕಗಳಿಗೆ ಸಂಸ್ಕೃತದಲ್ಲಿ ತರ ತಮ ಭಾವವುಂಟು; ದ್ರಾವಿಡಭಾಷೆಗಳಲ್ಲಿಲ್ಲ.

ಕ್ರಿಯಾಪದ: ದ್ರಾವಿಡಭಾಷೆಗಳ ಕ್ರಿಯಾಪದಗಳಲ್ಲಿ ಪ್ರತ್ಯೇಕವಾದ ನಿಷೇಧ ರೂಪವುಂಟು; ಸಂಸ್ಕೃತದಲ್ಲಿ ಇಲ್ಲ.

ಪ್ರತ್ಯಯಗಳು : ಕೃತ್‌ತದ್ಧಿತ ಪ್ರತ್ಯಯಗಳು ದ್ರಾವಿಡಭಾಷೆಗಳಲ್ಲಿಯೂ ಸಂಸ್ಕೃತದಲ್ಲಿಯೂ ಬೇರೆಬೇರೆಯಾಗಿವೆ.

ಪ್ರಯೋಗ : ಸಂಸ್ಕೃತದಲ್ಲಿ ಕರ್ಮಣಿ ಪ್ರಯೋಗವುಂಟು; ದ್ರಾವಿಡಭಾಷೆಗಳಲ್ಲಿ ರೂಢಿಯಾಗಿ ಇಲ್ಲ.

ಶಬ್ದಗಳಲ್ಲಿಯೂ ವ್ಯಾಕರಣಪ್ರಕ್ರಿಯೆಗಳಲ್ಲಿಯೂ ಭೇದವಿರುವುದು ಮಾತ್ರವಲ್ಲದೆ ಅಕ್ಷರಗಳಲ್ಲಿಯೂ ಭೇದವಿದೆ. ಸಂಸ್ಕೃತದಲ್ಲಿ ಎ ಒ ಎಂಬ ಸ್ವರಗಳೂ ಱ ಳ ೞ ಎಂಬ ವ್ಯಂಜನಗಳೂ ಇಲ್ಲ; ದ್ರಾವಿಡಭಾಷೆಗಳಲ್ಲಿವೆ. ಸಂಸ್ಕೃತದಲ್ಲಿ ಋ ೠ ಌ ೡ ಎಂಬ ಸ್ವರಗಳೂ ಶ ಷ ಎಂಬ ವ್ಯಂಜನಗಳೂ ಇವೆ; ದ್ರಾವಿಡಭಾಷೆಗಳಲ್ಲಿಲ್ಲ. ಮಹಾಪ್ರಾಣಾಕ್ಷರಗಳೂ ದ್ರಾವಿಡಭಾಷೆಗಳಲ್ಲಿ ಇಲ್ಲವೆಂದೇ ಹೇಳಬಹುದು.

**ಮೂಲದ್ರಾವಿಡ:** ಬಂಗಾಳಿ, ಹಿಂದಿ, ಗುಜರಾತಿ ಮೊದಲಾದ ಉತ್ತರ ಇಂಡಿಯದ ಭಾಷೆಗಳಿಗೆ ಸಂಸ್ಕೃತಭಾಷೆಯು ಮಾತೃಭಾಷೆಯಾಗಿರುವಂತೆ ಕನ್ನಡ, ತೆಲುಗು, ತಮಿಳು ಮೊದಲಾದ ದಕ್ಷಿಣ ಇಂಡಿಯದ ಭಾಷೆಗಳಿಗೂ ಮಾತೃಭಾಷೆಯೊಂದಿತ್ತಷ್ಟೆ. ಅದನ್ನು ಮೂಲದ್ರಾವಿಡಭಾಷೆಯೆಂದು ಕರೆಯಬಹುದು. ಆ ಮೂಲದ್ರಾವಿಡಭಾಷೆಯ ಸ್ವರೂಪವೇನು, ಅದು ಯಾವಾಗ ಕವಲೊಡೆದು ಬೇರೆಬೇರೆ ಭಾಷೆಗಳಾಗಿ ಪರಿಣಮಿಸಿತು ಎಂಬುದನ್ನು ಸ್ಪಷ್ಟವಾಗಿ ನಿರ್ಧರಿಸುವುದಕ್ಕೆ ಯಾವ ಆಧಾರಗಳೂ ಈಗ ಇಲ್ಲ. ಆದರೆ ಕನ್ನಡ, ತೆಲುಗು, ತಮಿಳು, ಮಲೆಯಾಳ ಇವುಗಳ ಗ್ರಾಂಥಿಕಭಾಷೆಗಳಿಗೆ ಈಗ ಇರುವ ಮತ್ತು ಹಿಂದೆ ಇದ್ದ ಹೋಲಿಕೆಯ ಆಧಾರದ ಮೇಲೆ ಅವುಗಳಲ್ಲಿ ಮೊದಲು ಯಾವುದು ಕವಲೊಡೆದು ಭಿನ್ನಭಾಷೆಯಾಯಿತು, ಆಮೇಲೆ ಯಾವುದು ಭಿನ್ನಭಾಷೆಯಾಯಿತೆಂಬುದನ್ನು ಊಹಿಸಬಹುದು.

**ಕನ್ನಡಕ್ಕೂ ತೆಲುಗಿಗೂ ಲಿಪಿಯಲ್ಲಿ ಇರುವ ಸಮೀಪ ಸಂಬಂಧ:** ಲಿಪಿಯ ದೃಷ್ಟಿಯಿಂದ ನೋಡಿದರೆ ತೆಲುಗಿಗೂ ಕನ್ನಡಕ್ಕೂ ಸಮೀಪ ಸಂಬಂಧವಿದೆ. ಶಬ್ದರೂಪ ವ್ಯಾಕರಣಪ್ರಕ್ರಿಯಾದಿಗಳಲ್ಲಿ ಕನ್ನಡಕ್ಕೂ ತಮಿಳಿಗೂ ಸಮೀಪಸಂಬಂಧವಿದೆ. ಈ ಸಂಬಂಧವು ಈಗ ಇರುವುದಕ್ಕಿಂತಲೂ ಹಿಂದೆ ಇನ್ನೂ ಹೆಚ್ಚಾಗಿತ್ತು. ಇದನ್ನು ಇಲ್ಲಿ ಸ್ವಲ್ಪ ವಿವರಿಸಬಹುದು.

ನಮಗೆ ದ್ರಾವಿಡವರ್ಣಗಳ ಪರಿಚಯವುಂಟಾಗುವುದು ಸುಮಾರು ಕ್ರಿ. ಶ. ಐದನೆಯ ಶತಮಾನದಿಂದ. ಆಗಿನಿಂದಲೂ ಶಾಸನಗಳು ದೊರೆಯುತ್ತವೆ. ಆ ಶಾಸನಗಳನ್ನು ನೋಡಿದರೆ ದ್ರಾವಿಡಭಾಷಾ ಲಿಪಿಗಳೆಲ್ಲವೂ ಒಂದೇ ಲಿಪಿಯಿಂದ ಹುಟ್ಟಿದುವೆಂದು ಗೊತ್ತಾಗುತ್ತದೆ. ಅಷ್ಟೇ ಅಲ್ಲ. ಇಂಡಿಯದ ಎಲ್ಲ ಭಾಷೆಗಳ ಲಿಪಿಗಳಿಗೂ ಅಶೋಕನ ಕೆಲವು ಶಾಸನಗಳಲ್ಲಿ ಕಂಡುಬರುವ "ಬ್ರಾಹ್ಮೀ" ಲಿಪಿಯು ಮೂಲವೆಂದು ಲಿಪಿಶಾಸ್ತ್ರಜ್ಞರು ನಿಶ್ಚಯಿಸಿರುತ್ತಾರೆ. ಹೀಗೆ ದ್ರಾವಿಡಲಿಪಿಗಳ ಮೂಲವು ಒಂದೇ ಆದರೂ ಅವು ಕಾಲಕ್ರಮದಲ್ಲಿ ರೂಪಾಂತರವನ್ನು ಹೊಂದಿ ಈಗ ಕೆಲವು ಒಂದಕ್ಕೊಂದು ಹೋಲಿಕೆ ಇಲ್ಲದಂತಾಗಿವೆ. ಆರನೆಯ ಶತಮಾನದಿಂದಲೂ ಕನ್ನಡ ದೇಶವನ್ನು ಆಳುತ್ತಿದ್ದ ಸಂತತಿಗಳ ಅರಸರು ತೆಲುಗು ದೇಶವನ್ನೂ ಆಳುತ್ತಿದ್ದುದರಿಂದ ತೆಲುಗು ಕನ್ನಡ ಲಿಪಿಗಳು ಒಂದೇ ರೀತಿಯಾಗಿ ಬೆಳೆಯಲು

ಕಾರಣವಾಯಿತೆಂದು ಹೇಳಬಹುದು. ಈ ವಿಧವಾದ ಸಂಬಂಧವು ಅಷ್ಟಾಗಿ ಕನ್ನಡಕ್ಕೂ ತಮಿಳಿಗೂ ಇರಲಿಲ್ಲ. ಆದುದರಿಂದ ತಮಿಳು ಲಿಪಿ ಸ್ವತಂತ್ರವಾಗಿ ಬೆಳೆದು ತೆಲುಗು ಕನ್ನಡಗಳ ಲಿಪಿಗಳಿಂದ ತೀರ ಭಿನ್ನವಾಗಿಹೋಗಿದೆ. ತೆಲುಗು ಕನ್ನಡ ಲಿಪಿಗಳಿಗೆ ಈಗಲೂ ಸಾದೃಶ್ಯವಿದೆ. ಹಿಂದೆ ಇದಕ್ಕಿಂತಲೂ ಹೆಚ್ಚಾಗಿ ಸಾದೃಶ್ಯವಿತ್ತು. ಮೊದಲಿನಿಂದ ಎಂದರೆ ಸುಮಾರು ಕ್ರಿ. ಶ. ಐದನೆಯ ಶತಮಾನ ದಿಂದ ಒಂಬತ್ತನೆಯ ಶತಮಾನದವರೆಗೆ ಅಕ್ಷರಗಳು ಚೌಕವಾಗಿಯೂ ಕೋಣಾಕಾರ ವಾಗಿಯೂ ಇರುತ್ತವೆ; ಒಂಬತ್ತನೆಯ ಶತಮಾನದಿಂದ ಹದಿನೈದನೆಯ ಶತಮಾನದ ವರೆಗೆ ದುಂಡಾಗಿ ಅಂದವಾಗಿರುತ್ತವೆ. ಅಲ್ಲಿಯವರೆಗೂ ತೆಲುಗು ಕನ್ನಡ ಲಿಪಿಗಳ ಭೇದವನ್ನು ತಿಳಿಯುವುದು ಅಸಾಧ್ಯ. ಅಲ್ಲಿಂದೀಚೆಗೆ ಸ್ವಲ್ಪಸ್ವಲ್ಪ ಭೇದಗಳು ಕಂಡುಬರಲು ಆರಂಭವಾಗಿ ಮುದ್ರಣವು ಏರ್ಪಟ್ಟನಂತರ ಆ ಭೇದಗಳು ಹೆಚ್ಚಿ ತೆಲುಗು ಕನ್ನಡ ಲಿಪಿಗಳಿಗಿರುವ ಭೇದವು ತಟ್ಟನೆ ಗೊತ್ತಾಗುವ ಹಾಗಾಗಿದೆ.*

**ದ್ರಾವಿಡ ಭಾಷೆಗಳಿಗಿರುವ ಸಂಬಂಧ ಸಾಮೀಪ್ಯ:** ಶಬ್ದರೂಪಗಳಲ್ಲಿಯೂ ವ್ಯಾಕರಣಪ್ರಕ್ರಿಯೆಗಳಲ್ಲಿಯೂ ಕನ್ನಡಕ್ಕೂ ತಮಿಳಿಗೂ ಈಗ ಹೋಲಿಕೆ ಕಡಮೆ ಯಾಗಿದೆ. ಹಳಗನ್ನಡದಲ್ಲಿ ಹೆಚ್ಚು ಹೋಲಿಕೆ ಇದೆ. ಪೂರ್ವದ ಹಳಗನ್ನಡದಲ್ಲಿ ಈ ಹೋಲಿಕೆಯು ಮತ್ತೂ ಹೆಚ್ಚುತ್ತದೆ. ತೆಲುಗು ತಮಿಳುಗಳಿಗಾಗಲಿ ತೆಲುಗು ಕನ್ನಡಗಳಿಗಾಗಲಿ ಇಷ್ಟು ಹೋಲಿಕೆ ಇರುವುದಿಲ್ಲ.

ಭಾಷೆಗಳಿಗಿರುವ ಸಂಬಂಧಸಾಮೀಪ್ಯವನ್ನು ನಿರ್ಣಯಿಸುವುದಕ್ಕೆ ಲಿಪಿಸಾದೃಶ್ಯ ಕ್ಕಿಂತಲೂ ಶಬ್ದರೂಪ ವ್ಯಾಕರಣಪ್ರಕ್ರಿಯೆಗಳಲ್ಲಿ ಕಂಡುಬರುವ ಸಾದೃಶ್ಯವೇ ಪ್ರಬಲ ತರವಾದ ಆಧಾರ. ಈ ಆಧಾರವನ್ನಿಟ್ಟುಕೊಂಡು ನೋಡಿದರೆ ತಮಿಳಿಗೂ ಮಲೆ ಯಾಳಕ್ಕೂ ಇರುವಷ್ಟು ಹೋಲಿಕೆಯು ತಮಿಳಿಗೂ ಕನ್ನಡಕ್ಕೂ ಇಲ್ಲ. ತಮಿಳಿಗೂ ಕನ್ನಡಕ್ಕೂ ಇರುವಷ್ಟು ಹೋಲಿಕೆಯು ತಮಿಳಿಗೂ ತೆಲುಗಿಗೂ ಇಲ್ಲ. ಭಾಷಾ ತತ್ತ್ವಜ್ಞರು ಮಲೆಯಾಳವು ತಮಿಳಿನಿಂದ ಹುಟ್ಟಿದುದೆಂದು ಅಭಿಪ್ರಾಯಪಡುತ್ತಾರೆ. ಈ ಹೋಲಿಕೆಯಲ್ಲಿ ಕಂಡುಬರುವ ವ್ಯತ್ಯಾಸವನ್ನು ನೋಡಿದರೆ ಮೂಲಭಾಷೆ ಯಿಂದ ಮೊದಲು ಪ್ರತ್ಯೇಕವಾದುದು ತೆಲುಗು ಭಾಷೆಯೆಂದೂ, ಆಮೇಲೆ ತಮಿಳು ಕನ್ನಡಗಳು ಕವಲೊಡೆದುವೆಂದೂ, ಆಮೇಲೆ ತಮಿಳಿನಿಂದ ಮಲೆಯಾಳ ಹುಟ್ಟಿತೆಂದೂ ಹೇಳಬಹುದು. ಇದನ್ನೇ ರೇಖಾರೂಪವಾಗಿ ಹೀಗೆ ತೋರಿಸ ಬಹುದು.

---

* ಕಾಲಕ್ರಮದಲ್ಲಿ ಅಕ್ಷರಗಳ ರೂಪವು ಮಾರ್ಪಡುವುದಕ್ಕೆ ಕಾರಣವು ಅವು ಅಂದ ವಾಗಿರಬೇಕೆಂಬ ಅಭಿಲಾಷೆ, ಸುಲಭವಾಗಿಯೂ ವೇಗವಾಗಿಯೂ ಬರೆಯಬೇಕೆಂಬ ಇಚ್ಛೆ—ಇವು ಎಂದೂ, ದಕ್ಷಿಣಇಂಡಿಯದ ಅಕ್ಷರಗಳು ದುಂಡಾಗುವುದಕ್ಕೆ ಕಾರಣವು ಓಲೆಪತ್ರಗಳ ಮೇಲೆ ಉಕ್ಕಿನ ಕಂಠದಿಂದ ಬರೆಯುವ ಪದ್ಧತಿಯೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.




ಗ್ರಾಂಥಿಕವಾದ ಈ ನಾಲ್ಕು ಭಾಷೆಗಳಲ್ಲದೆ ತುಳು ಕೊಡಗು ಬಡಗ ತೊದವ ಮೊದಲಾದ ದಕ್ಷಿಣಇಂಡಿಯದ ಇತರ ಭಾಷೆಗಳೂ ರಾಜಮಹಾಲ್ ಮೊದಲಾದ ಕೆಲವು ಉತ್ತರ ಇಂಡಿಯದ ಭಾಷೆಗಳೂ ದ್ರಾವಿಡಭಾಷಾವರ್ಗಕ್ಕೆ ಸೇರಿದುವೆಂದು ಗೊತ್ತಾಗಿದೆ. ತೊದವ ಬಡಗ ಮೊದಲಾದ ದಕ್ಷಿಣ ಇಂಡಿಯದ ಕ್ಷುಲ್ಲಕ ಭಾಷೆಗಳು ಕನ್ನಡದ ಪಂಗಡಕ್ಕೆ ಸೇರಿದುವೆಂದು ಕೆಲವರು ಪಂಡಿತರು ಅಭಿಪ್ರಾಯಪಡುತ್ತಾರೆ.

**ದ್ರಾವಿಡರು ಇಂಡಿಯದ ಮೂಲನಿವಾಸಿಗಳೇ?** ಉತ್ತರ ಇಂಡಿಯದ ವಾಯುವ್ಯಮೂಲೆಯಲ್ಲಿಯೂ ಮತ್ತೆ ಕೆಲವು ಪ್ರಾಂತಗಳಲ್ಲಿಯೂ ದ್ರಾವಿಡಭಾಷೆಗಳು ಕಂಡುಬರುವುದರಿಂದಲೂ ಪ್ರಾಕೃತಭಾಷೆಗಳಲ್ಲಿ ಸಂಸ್ಕೃತಜನ್ಯವಲ್ಲದ ಕೆಲವು ದೇಶ್ಯಶಬ್ದಗಳಿರುವುದರಿಂದಲೂ ದ್ರಾವಿಡರು ಆರ್ಯರಂತೆಯೇ, ಆದರೆ ಅವರಿಗಿಂತಲೂ ಬಹಳ ಹಿಂದೆ, ಹೊರಗಿನಿಂದ ಇಂಡಿಯ ದೇಶಕ್ಕೆ ಬಂದರೆಂದೂ ಆಮೇಲೆ ಆರ್ಯರು ಬಂದು ಪ್ರಬಲರಾಗುತ್ತ ಬಂದಹಾಗೆಲ್ಲ ಇವರು ದಕ್ಷಿಣಕ್ಕೆ ಒತ್ತಲ್ಪಟ್ಟರೆಂದೂ ಊಹಿಸಲು ಅವಕಾಶವುಂಟಾಗುತ್ತದೆ. ಆರ್ಯರೂ ದ್ರಾವಿಡರೂ ಒಂದೇ ಬುಡಕಟ್ಟಿನವರೆಂದೂ ಕೆಲವರು ಹೇಳುತ್ತಾರೆ. ಆದರೆ ಈ ಮಾತನ್ನು ಭಾಷಾತತ್ತ್ವಜ್ಞರು ಒಪ್ಪಿರುವಂತೆ ಕಂಡುಬರುವುದಿಲ್ಲ.

## ೪. ಕಾಲಭೇದದಿಂದಾಗುವ ಪರಿಣಾಮ— ಅವಸ್ಥಾಂತರಗಳು

**ಕನ್ನಡಭಾಷೆಯ ಪ್ರಥಮ ಪರಿಚಯ : ಕ್ರಿ.ಶ. ೬ ನೆಯ ಶತಮಾನ—ಶಾಸನಗಳು.** ಮೂಲದ್ರಾವಿಡಭಾಷೆಯು ಕವಲೊಡೆದು ಅವುಗಳಲ್ಲಿ ಒಂದು ಕವಲು ಕನ್ನಡವೆಂಬ ಸ್ವತಂತ್ರ ಭಾಷೆಯಾಯಿತೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಕನ್ನಡವು ಯಾವಾಗ ಸ್ವತಂತ್ರ ಭಾಷೆಯಾಯಿತು, ಆಗ ಅದರ ಸ್ವರೂಪವು ಹೇಗಿತ್ತು ಎಂಬಿವು ಗೊತ್ತಿಲ್ಲ. ಆ ಕಾಲದಲ್ಲಿ ಕನ್ನಡವು ಕೇವಲ ವ್ಯಾವಹಾರಿಕ ರೂಪದಲ್ಲಿ ಇತ್ತೇ ಅಥವಾ ಗ್ರಾಂಥಿಕ ರೂಪವನ್ನು ಪಡೆದಿತ್ತೇ ಎಂಬುದನ್ನು ನಿರ್ಣಯಿಸುವುದಕ್ಕೆ ಸಾಧಕವಾದ ಆಧಾರಗಳಾವುವೂ ಇಲ್ಲ. ನಮಗೆ ಕನ್ನಡದ ಪ್ರಥಮ ಪರಿಚಯವಾಗುವುದು ಸುಮಾರು ಕ್ರಿ.ಶ. ಆರನೆಯ ಶತಮಾನದಿಂದ. ಅಲ್ಲಿಂದೀಚೆಗೆ ಕನ್ನಡದ ಶಾಸನಗಳು ದೊರೆತಿರುತ್ತವೆ. ಅದಕ್ಕೆ ಹಿಂದೆಯೂ ನಮ್ಮ ದೇಶದಲ್ಲಿ ಶಾಸನಗಳು ಹುಟ್ಟಿದ್ದುವು. ಆದರೆ ಅವು ಕನ್ನಡದಲ್ಲಿಲ್ಲ. ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿವೆ. ಇದನ್ನು ನೋಡಿದರೆ ಕನ್ನಡವು ಸುಮಾರು ಆರನೆಯ ಶತಮಾನದವರೆಗೂ ಗ್ರಾಂಥಿಕರೂಪವನ್ನು ಪಡೆದಿರಲಿಲ್ಲವೋ ಏನೋ ಎಂಬ ಸಂಶಯವುಂಟಾಗುತ್ತದೆ.*

**ಕನ್ನಡಭಾಷೆಯ ವ್ಯಾಪನೆ** : ಕ್ರಿ.ಶ. ಆರನೆಯ ಶತಮಾನದಿಂದ ಕನ್ನಡ ಶಾಸನಗಳು ದೊರೆಯುತ್ತವೆ. ಸುಮಾರು ಒಂಬತ್ತನೆಯ ಶತಮಾನದವರೆಗೂ ಶಾಸನಗಳು ಸಾಮಾನ್ಯವಾಗಿ ಗದ್ಯರೂಪದಲ್ಲಿರುತ್ತವೆ. ಪದ್ಯರೂಪದಲ್ಲಿರುವುದೂ ಉಂಟು. ಒಂಬತ್ತನೆಯ ಶತಮಾನದಿಂದ ಈಚೆಗೆ ಶಾಸನಗಳ ಶೈಲಿಯು ಪ್ರೌಢವಾಗಿ ಅವು ಕಾವ್ಯಗಳಂತಿರುತ್ತವೆ. ಅಲ್ಲದೆ ಒಂಬತ್ತನೆಯ ಶತಮಾನದಿಂದ ಕನ್ನಡ ಕಾವ್ಯಗಳೂ ದೊರೆಯುತ್ತವೆ. ಅದಕ್ಕೆ ಹಿಂದೆ ಕನ್ನಡದಲ್ಲಿ ಅನೇಕ ಗ್ರಂಥಗಳು ಹುಟ್ಟಿದ್ದುವು. ಕವಿರಾಜಮಾರ್ಗದಿಂದ ಆ ಕಾಲದ ಕೆಲವರು ಕವಿಗಳ ಹೆಸರುಗಳು ಕೂಡ ಗೊತ್ತಾಗುತ್ತವೆ. ಆದರೆ ಗ್ರಂಥಗಳಾವುವೂ ಈಗ ದೊರೆತಿಲ್ಲ. ಹೀಗೆ ಸುಮಾರು ಹದಿನೈದು ಶತಮಾನಗಳಿಂದಲೂ ಕನ್ನಡ ಭಾಷೆಯು ಕಾಲಕ್ರಮವಾಗಿ ಹೇಗೆ ರೂಪಾಂತರವಾಗುತ್ತಾ ಬಂದಿತೆಂಬುದನ್ನು ತಿಳಿದುಕೊಳ್ಳುವುದಕ್ಕೆ ಆಧಾರವಿದೆ.

**ಕನ್ನಡಭಾಷೆಯ ಅವಸ್ಥಾಭೇದಗಳು :** ಅವಿಚ್ಛಿನ್ನವಾಗಿ ಮಾರ್ಪಡುತ್ತಿರುವುದು ವ್ಯಾವಹಾರಿಕಭಾಷೆಯ ನೈಸರ್ಗಿಕಲಕ್ಷಣವೆಂದೂ ಅದರಲ್ಲಿ ಆಗುವ

---

* ಕ್ರಿ.ಶ. ಎರಡನೆಯ ಶತಮಾನದ ಒಂದು ಗ್ರೀಕ್ ನಾಟಕದಲ್ಲಿ ಕನ್ನಡ ವಾಕ್ಯಗಳಿವೆ ಎಂದು ಡಾಕ್ಟರ್ ಹುಲ್ಷ್ ಅವರು ಹೇಳುತ್ತಾರೆ.

ವ್ಯತ್ಯಾಸಗಳು ಆಗುತ್ತಿದ್ದ ಹಾಗೆಯೇ ಗಮನಕ್ಕೆ ಬರುವಂತಿರುವುದಿಲ್ಲವೆಂದೂ ಕೆಲವು ಕಾಲ ಕಳೆದ ಮೇಲೆ ಅವು ಗಮನಕ್ಕೆ ಬರುವಂತಾಗಿ ಭಾಷೆಯು ಒಂದು ಅವಸ್ಥಾನ (stage)ವನ್ನು ಮುಟ್ಟಿತೆಂದು ಹೇಳುವ ಸ್ಥಿತಿ ಬರುತ್ತದೆಯೆಂದೂ ಹಿಂದೆ ಹೇಳಿದೆ. ಕನ್ನಡ ಭಾಷೆಯೂ ಕಾಲಕ್ರಮದಲ್ಲಿ ಹೀಗೆ ಮಾರ್ಪಟ್ಟಿದೆ. ಕನ್ನಡ ಭಾಷೆಯ ರೂಪವು ಎಷ್ಟು ಮಾರ್ಪಟ್ಟಿರುವುದೆಂದರೆ ಈಗ ಕನ್ನಡ ಮಾತನಾಡುವ ಜನರು ಅಭ್ಯಾಸ ಮಾಡದೇ ಹೋದರೆ ಪ್ರಾಚೀನ ಶಾಸನಗಳನ್ನೂ ಗ್ರಂಥಗಳನ್ನೂ ಓದಿ ಅರ್ಥಮಾಡಿ ಕೊಳ್ಳುವುದು ಕಷ್ಟವಾಗುತ್ತದೆ. ಭಾಷೆಯು ಕಾಲಕ್ರಮದಲ್ಲಿ ಇಷ್ಟು ವ್ಯತ್ಯಾಸವನ್ನು ಹೊಂದುತ್ತಾ ಬಂದಿತು. ಬೇರೆ ಬೇರೆ ಕಾಲಗಳಲ್ಲಿ ಕಂಡುಬರುವ ಭಾಷೆಯ ವೈಲಕ್ಷಣ್ಯ ಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡ ಭಾಷೆಗೆ ಎಷ್ಟು ಅವಸ್ಥೆಗಳವೆಯೆಂಬುದನ್ನು ಆಧುನಿಕ ಪಂಡಿತರು ನಿರ್ಧರಿಸಿರುತ್ತಾರೆ.

**ಭಾಷೆಯ ಬೆಳೆವಳಿಗೆ—ಕಾಲವಿಭಾಗ—ಮತಭೇದಗಳು :** ರೈಸ್ ಸಾಹೇಬರೂ ಕಿಟಲ್ ಸಾಹೇಬರೂ ಕನ್ನಡಭಾಷೆಗೆ ಮೂರು ಅವಸ್ಥೆಗಳುಂಟೆಂದು ಅಭಿಪ್ರಾಯ ಪಟ್ಟಿದ್ದಾರೆ. ರೈಸ್ ಸಾಹೇಬರ ಅಭಿಪ್ರಾಯದಂತೆ ಕನ್ನಡ ಭಾಷೆಗೆ ಪೂರ್ವದ ಹಳಗನ್ನಡ, ಹಳಗನ್ನಡ, ಹೊಸಗನ್ನಡ ಎಂಬ ಮೂರು ರೂಪಗಳಿವೆ; ಪೂರ್ವದ ಹಳಗನ್ನಡವು ಕ್ರಿ.ಶ. ಏಳನೆಯ ಶತಮಾನದ ಅಂತ್ಯದವರೆಗೂ ಹಳಗನ್ನಡವು ಅಲ್ಲಿಂದ ಹದಿನಾಲ್ಕನೆಯ ಶತಮಾನದವರೆಗೂ ಹೊಸಗನ್ನಡವು ಅಲ್ಲಿಂದ ಈಚೆಗೂ ಕಂಡುಬರುತ್ತವೆ. ಕಿಟಲ್ ಸಾಹೇಬರವರು ಕನ್ನಡಕ್ಕೆ ಹಳಗನ್ನಡ, ಮಧ್ಯ ಕಾಲದ ಕನ್ನಡ, ಹೊಸಗನ್ನಡ ಎಂಬ ಮೂರು ರೂಪುಗಳಿವೆಯೆಂದೂ ಕ್ರಿ.ಶ. ಆರನೆಯ ಶತಮಾನದಿಂದ ಕ್ರಿ.ಶ. ೧೨೫೦ರ ವರೆಗೆ ಹಳಗನ್ನಡವೂ, ೧೨೫೦ ರಿಂದ ೧೫೦೦ ರವರೆಗೆ ಮಧ್ಯಕಾಲದ ಕನ್ನಡವೂ, ಅಲ್ಲಿಂದೀಚೆಗೆ ಹೊಸಗನ್ನಡವೂ ಪ್ರಚಾರದಲ್ಲಿವೆ ಯೆಂದೂ ಹೇಳುತ್ತಾರೆ. ಕವಿಚರಿತೆಕಾರರು ರೈಸ್ ಸಾಹೇಬರ ಅಭಿಪ್ರಾಯವನ್ನೇ ಅನುಮೋದಿಸುವಂತೆ ತೋರುತ್ತದೆ.

**ಪೂರ್ವದ ಹಳಗನ್ನಡ—ಮಧ್ಯಕಾಲದ ಕನ್ನಡ, ಮತಭೇದದ ಅಭಿಪ್ರಾಯ :** ರೈಸ್ ಸಾಹೇಬರು ಪೂರ್ವದ ಹಳಗನ್ನಡವೊಂದಿದೆಯೆಂದೂ ಅದು ಕ್ರಿ. ಶ. ಏಳನೆಯ ಶತಮಾನದ ಅಂತ್ಯದವರೆಗೂ ಪ್ರಚಾರದಲ್ಲಿತ್ತೆಂದೂ ಹೇಳಿರು ವುದನ್ನು ಕಿಟಲ್ ಸಾಹೇಬರು ಒಪ್ಪುವಂತೆ ಕಾಣುವುದಿಲ್ಲ. ಇದರ ಅರ್ಥವೇನೆಂದರೆ ಒಂದು ಕಾಲದ ಭಾಷೆಯು ಕೆಲವು ವಿಶೇಷಲಕ್ಷಣಗಳಿಂದ ಕೂಡಿದ್ದು ಒಂದು ಪ್ರತ್ಯೇಕ ಅವಸ್ಥೆಯನ್ನು ಹೊಂದಿತ್ತೆಂದು ರೈಸ್‌ರವರು ಅಭಿಪ್ರಾಯಪಡುತ್ತಾರೆ. ಆ ವ್ಯತ್ಯಾಸಗಳು ಭಾಷೆಯು ಒಂದು ಅವಸ್ಥೆಯನ್ನು ಪಡೆದಿತ್ತು ಎಂದು ಹೇಳು ವುದಕ್ಕೆ ಸಾಕಾಗುವಷ್ಟು ಇಲ್ಲ ಎಂಬುದೇ ಕಿಟಲ್ ಸಾಹೇಬರ ಮತ. ಮಧ್ಯದ ಕನ್ನಡದ ವಿಷಯದಲ್ಲಿಯೂ ಹೀಗೆಯೇ. ಕಿಟಲ್ ಸಾಹೇಬರು ಭಾಷೆಯು ಒಂದು ಅವಸ್ಥೆಯನ್ನು ಪಡೆದಿತ್ತು ಎಂದು ಹೇಳುವಷ್ಟರ ಮಟ್ಟಿನ ವಿಶೇಷ ಲಕ್ಷಣಗಳು

ಆ ಕಾಲದ ಭಾಷೆಯಲ್ಲಿವೆ ಎಂದು ಅಭಿಪ್ರಾಯಪಡುವುದನ್ನು ರೈಸ್ ಸಾಹೇಬರು ಒಪ್ಪಿಲ್ಲವೆಂದು ಹೇಳಬಹುದು.

**ಪೂರ್ವದ ಹಳಗನ್ನಡ; ರೈಸ್ ಸಾಹೇಬರು ಕೊಡುವ ಕಾರಣಗಳು.** ಪೂರ್ವದ ಹಳಗನ್ನಡ ಎಂಬ ಒಂದು ಅವಸ್ಥೆಯು ಕನ್ನಡಕ್ಕೆ ಇತ್ತೆಂದು ರೈಸ್ ಸಾಹೇಬರು ಹೇಳುವುದಕ್ಕೆ ಇರುವ ಆಧಾರಗಳು ಎರಡು :

೧. ಕವಿರಾಜಮಾರ್ಗ ಮೊದಲಾದ ಹಳಗನ್ನಡ ಭಾಷೆಯ ಗ್ರಂಥಗಳಲ್ಲಿ ಅವುಗಳ ಕಾಲಕ್ಕೆ ಹಿಂದಿನ ಭಾಷೆಯು ಹಳಗಳನ್ನಡವೆಂದು ಕರೆಯಲ್ಪಟ್ಟಿರುವುದು. ರೈಸ್‌ರವರ ಅಭಿಪ್ರಾಯದಂತೆ ಹಳಗನ್ನಡಕ್ಕೆ ಹಳಗನ್ನಡವಾದುದೇ ಪೂರ್ವದ ಹಳಗನ್ನಡ.

೨. ಒಂಬತ್ತನೆಯ ಶತಮಾನದಿಂದೀಚಿನ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ ಕಂಡುಬಾರದಿರುವ ಕೆಲವು ಭಾಷಾವೈಲಕ್ಷಣ್ಯಗಳು ಎಂಟನೆಯ ಶತಮಾನದ ಹಿಂದಿನ ಶಾಸನಗಳಲ್ಲಿ ಕಂಡುಬರುವುವು. ಎಂದರೆ ಹಳಗನ್ನಡವ್ಯಾಕರಣ ಪ್ರಕ್ರಿಯೆಗಳಿಂದ ಸಿದ್ಧಿಸದ ಕೆಲವು ಪ್ರಯೋಗಗಳು ಕಂಡುಬರುವುವು.

ಈ ಅಭಿಪ್ರಾಯವನ್ನು ವಿಶದಪಡಿಸುವುದಕ್ಕಾಗಿ ಇಲ್ಲಿ ಒಂದೆರಡು ಉದಾಹರಣೆಗಳನ್ನು ಕೊಡಬಹುದು.

1. ದ್ವಿತೀಯಾವಿಭಕ್ತಿಪ್ರತ್ಯಯ. (ಹಳಗನ್ನಡ) ಅಂ, (ಪೂರ್ವದ ಹಳಗನ್ನಡ) ಆಂ.

(i) ಪ್ರಾಸಾದಾಂತರ**ಮಾಂ** ವಿಚಿತ್ರಕನಕಪ್ರಜ್ವಲ್ಯರ್ದಿ ಮಿಕ್ಕು**ದಾಂ**

(ii) ಅವರ್ ಸ್ವರ್ಗಾಗ್ರ **ಮಾನೇಱಿ**ದಾರ್ (೭೦೦)

(iii) ದೇಗುಲ**ಮಾಂ** ಮಾಡಿದ ಸೂತ್ರಧಾರಿ ಶ್ರೀ ಗುಂಡಂ (೭೪೦)

(iv) ಇ**ದಾಂ** ಅಟಿವೋಂ (೭೪೦)

2. ಷಷ್ಠೀ ವಿ.ಪ್ರ. (ಹಳಗನ್ನಡ) ಅ, (ಪೂರ್ವದ ಹಳಗನ್ನಡ) ಆ.

(i) ಮಹಾರಾಜಾಧಿರಾಜ ಪರಮೇಶ್ವರ ಭಟಾರರಾ ದತ್ತಿ (೭೩೩)

(ii) ಇವರಾ ಮುದುತಾಯ್ವಿರ್ (೭೦೦)

(iii) ಏೞನೆ**ಯಾ** ನರಕ**ದಾ** ಪುೞು ಅಕ್ಕುಂ (೫೯೭)

3. ಸಪ್ತಮಿ ವಿ.ಪ್ರ. (ಹಳಗನ್ನಡ) ಒಳ್, (ಪೂರ್ವದ ಹಳಗನ್ನಡ) ಉಳ್.

(i) ಮೆಚ್ಚೆನಾನೀ ಧರಣಿ**ಯುಳ್**ಇರವಾನೆಂದು ಸನ್ಯಾಸನಂಗೆಯ್ದು (೭೦೦)

(ii) ಕೞ್ವೊಪ್ಪಿನಾವೆಟ್ಟ**ದುಳ್** (೭೦೦)

(iii) ವೈಶಾಖಮಾಸ**ದುಳ್** ದೇಶಾಧಿಪತಿಗಳಪ್ಪೊರ್ಗೆ ಕುಡುವ ತೆಱಂ (೭೫೫)

4. ಆಖ್ಯಾತ ಪ್ರತ್ಯಯಗಳು.

| ಏಕ | ಬಹು | ಏಕ | ಬಹು |
|---|---|---|---|
| (ಹ.ಗ.) ಅನ್ | ಅರ್, | (ಪೂ.ಹ.ಗ.) ಓರ್ ಆರ್ | ಒರ್ ಆರ್ |

(i) ನಂದಿಸೇನಪ್ರವರಮುನಿವರ್ರ ದೇವಲೋಕಕ್ಕೆ ಸಂ**ದಾರ್**.
(ii) ಅವರ್ ಸ್ವರ್ಗಾಗ್ರಮಾನೇಱಿ**ದಾರ್**.
(iii) ಎರಡುಂ ನಾಟ್ಕಿ ರಾಜಾಶ್ರಾವಿತಮಾಗೆ ಪ್ರಸಾದಂಕೆ**ಯ್ದಾರ್**.
(iv) ರೇವಟಿ ದಿವಜ್ಜರ ತೆಂಕಣ ದಿಶೆ ಮಾಡಿ**ದೊರ್**.

ನಿಷೇಧಪ್ರತ್ಯಯ. (ಹಳಗನ್ನಡ) ಅ, (ಪೂರ್ವದ ಹಳಗನ್ನಡ) ಆ.
ಪ್ರಥಮ ಪುರುಷ ಪ್ರತ್ಯಯಗಳು.
(i) ಸಿದ್ಧಸಮಯಂ **ತಪ್ಪಾದೆ** ನೋಂತಿಂಬಿನಿನ್.
(ii) ವಿತ್ತಿದಲ್ಲಿ ವೆಳೆ**ಯಾದೆ** ಕೆಡುಗೆ.

ಮೇಲೆ ಹೇಳಿದ ವ್ಯಾಕರಣಪ್ರಕ್ರಿಯೆಗಳಲ್ಲದೆ ಶಬ್ದರೂಪಗಳಲ್ಲಿಯೂ ಭಿನ್ನತೆ ಕಂಡುಬರುತ್ತದೆ.

ಉದಾ : (ಪೂ.ಹ.ಗ.) ವೆಟ್ಟ, ವಿತ್ತು, ವೆಳೆ; (ಹ.ಗ.) ಬೆಟ್ಟ, ಬಿತ್ತು, ಬೆಳೆ;
(ಪೂ.ಹ.ಗ.) ಎಱಿದು, ಕೆಡುಗ; (ಹ.ಗ.) ಇಱಿದು, ಕಿಡುಗೆ.

ರೈಸ್ ಸಾಹೇಬರ ಸಿದ್ಧಾಂತವನ್ನು ಒಪ್ಪದವರು ಅವರ ಮತವನ್ನು ಹೀಗೆ ಖಂಡಿಸುತ್ತಾರೆ—

**ರೈಸ್ ಸಾಹೇಬರ ಮತಕ್ಕೆ ವಿರೋಧವಾದ ಅಂಶಗಳು.** ೧. ಕವಿರಾಜಮಾರ್ಗ ಮೊದಲಾದ ಹಳಗನ್ನಡಗ್ರಂಥಗಳಲ್ಲಿ ಪ್ರಯೋಗವಾಗಿರುವ 'ಪಟಗನ್ನಡ' ಎಂಬ ಮಾತಿನ ಅರ್ಥವು ಆ ಗ್ರಂಥಗಳ ಕನ್ನಡದಿಂದ ಭಿನ್ನವಾದುದೆಂದಿರಲಾರದು. 'ವೇದ' ಎಂಬುದಕ್ಕೆ ಪ್ರತಿಪದವಾದ 'ಪಟವಾತು' ಎಂಬ ಮಾತಿನಲ್ಲಿ ಪಟ ಎಂಬ ಶಬ್ದಕ್ಕೆ ಇರುವ ಅರ್ಥವೇ ಎಂದರೆ, ಬಹುಕಾಲದಿಂದಿರುವ, ಪುರಾತನವಾದ, ಎಂಬ ಅರ್ಥವು ಪಟಗನ್ನಡ ಎಂಬಲ್ಲಿಯೂ ಇರುತ್ತದೆಂದು ಹೇಳಬಹುದು.

೨. ಕ್ರಿ. ಶ. ಎಂಟನೆಯ ಶತಮಾನಕ್ಕೆ ಹಿಂದಿನ ಕನ್ನಡದಲ್ಲಿ ಹಳಗನ್ನಡದಿಂದ ಭಿನ್ನವಾದ ಕೆಲವು ರೂಪಗಳಿರುವುದು ನಿಜ. ಆದರೆ ಹಳಗನ್ನಡ ರೂಪಗಳೂ ಇವೆ. ಅಷ್ಟೇ ಅಲ್ಲ. ಅವಕ್ಕಿಂತಲೂ ಇವೇ ಹೆಚ್ಚು.

೩. ರೈಸ್ ಸಾಹೇಬರು ಪೂರ್ವದ ಹಳಗನ್ನಡದಲ್ಲಿದ್ದುವೆಂದು ಹೇಳುವ ರೂಪಗಳು ಹಳಗನ್ನಡದ ರೂಪಗಳಿಗಿಂತಲೂ ಹಿಂದಿನವಾಗಿರಬೇಕು. ಅವುಗಳು ವ್ಯತ್ಯಾಸವಾಗಿ ಹಳಗನ್ನಡ ರೂಪಗಳುಂಟಾಗಿರಬೇಕು. ನಿಜಾಂಶವು ಇದಕ್ಕೆ ವಿರುದ್ಧವಾಗಿರುವಂತೆ ತೋರಿಸಬಹುದು. ಉದಾಹರಣೆಗೆ **ಅನ್** ಪ್ರತ್ಯಯವನ್ನು ತೆಗೆದುಕೊಳ್ಳೋಣ. ರೈಸ್ ಸಾಹೇಬರ ಮತದ ಪ್ರಕಾರ ಇದು ಹಳಗನ್ನಡದ

ಅಸ್ ಪ್ರತ್ಯಯದ ಪೂರ್ವರೂಪ. ಕ್ರಿಯಾಪದಗಳಿಗೆ ಹತ್ತುವ ಪುರುಷವಾಚಕ ಪ್ರತ್ಯಯಗಳು ಪುರುಷವಾಚಕ ಸರ್ವನಾಮಗಳೆಂದು ಗೊತ್ತಾಗಿದೆ. ಆದುದರಿಂದ ಆ ಸರ್ವನಾಮಗಳ ಆದಿರೂಪಗಳು ಆ್ೞ ಆಳ್, ಆರ್ ಇತ್ಯಾದಿಯಾಗಿದ್ದಿರಬೇಕು. ಆದರೆ ನಮಗೆ ಅವ್ರಾೞ, ಅವಾಳ್ ಮೊದಲಾದ ರೂಪಗಳು ದೊರೆಯುವುದಿಲ್ಲ. ಅಲ್ಲದೆ ತೃತೀಯಾದಿ ವಿಭಕ್ತಿಗಳಲ್ಲಿ ಎನ್ನ, ಎಮ್ಮ, ಎಮಗೆ ಮೊದಲಾದ ರೂಪಗಳಾಗುತ್ತವೆ. ಇದರಿಂದ ಅೞ ಎಂಬುದರ ಸ್ವರವು ಹ್ರಸ್ವವಾದುದೆಂದು ಗೊತ್ತಾಗುತ್ತದೆ. ಇದರಿಂದ ನಿಜಾಂಶವು ರೈಸ್ ಸಾಹೇಬರ ಮತಕ್ಕೆ ವಿರುದ್ಧವಾದುದೆಂಬುದು ಸ್ಪಷ್ಟವಾಗುತ್ತದೆ. ಅೞ ಎಂಬುದೇ ಮೂಲರೂಪ. ಆೞ ಎಂಬುದು ಅದರಿಂದ ಹುಟ್ಟಿದುದು. ಇದು ಮಾತನಾಡುವ ಭಾಷೆಯಲ್ಲಿ ಮಾತ್ರ ಪ್ರಯೋಗದಲ್ಲಿದ್ದು ಸಾಹಿತ್ಯದಲ್ಲಿ ಅಪೂರ್ವವಾಗಿ ಪ್ರಯೋಗವಾಗುತ್ತದೆ.

**ಸಿದ್ಧಾಂತ:** ರೈಸ್ ಸಾಹೇಬರ ಮತಕ್ಕೆ ಸಾಧಕಬಾಧಕಗಳಾದ ಅಂಶಗಳನ್ನೆಲ್ಲಾ ಪರಿಶೀಲಿಸಿದರೆ ಕನ್ನಡ ಭಾಷೆಗೆ ಹಳಗನ್ನಡ ರೂಪವು ಬರುವುದಕ್ಕೆ ಮುಂಚೆ ಮತ್ತೊಂದು ರೂಪವು—ಪೂರ್ವದ ಹಳಗನ್ನಡ ರೂಪವು—ಇತ್ತೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಈಗ ದೊರೆತಿರುವ ಕ್ರಿ. ಶ. ಎಂಟನೆಯ ಶತಮಾನದ ವರೆಗಿನ ಶಾಸನಗಳಲ್ಲಿ ಹಳಗನ್ನಡ ಶಬ್ದರೂಪಗಳಿಂದ ಭಿನ್ನವಾದ ಕೆಲವು ಶಬ್ದರೂಪಗಳೂ ಹಳಗನ್ನಡ ವ್ಯಾಕರಣಗಳಿಂದ ಸಿದ್ಧಿಸದ ಕೆಲವು ಪ್ರಯೋಗಗಳೂ ಇರುವುವಷ್ಟೆ. ಅವು ತಮಿಳು ರೂಪಗಳನ್ನೂ ಪ್ರಯೋಗಗಳನ್ನೂ ವಿಶೇಷವಾಗಿ ಹೋಲುತ್ತವೆ. ತಮಿಳು ಕನ್ನಡಗಳೆರಡೂ ಹಿಂದೆ ಒಂದು ಕಾಲದಲ್ಲಿ ಒಂದೇ ಭಾಷೆಯಾಗಿದ್ದುದರಿಂದ ಆ ಶಬ್ದರೂಪಗಳೂ ಪ್ರಯೋಗಗಳೂ ಹಳಗನ್ನಡಕ್ಕೆ ಹಿಂದಿನದಾದ ಪೂರ್ವದ ಹಳಗನ್ನಡದ ಕಾಲದವುಗಳೆಂದು ಹೇಳಬಹುದು. ಆದರೆ ಪೂರ್ವದ ಹಳಗನ್ನಡದ ಕಾಲವು ಯಾವಾಗ ಮುಗಿಯಿತು. ಹಳಗನ್ನಡದ ಕಾಲವು ಯಾವಾಗ ಆರಂಭವಾಯಿತು ಎಂಬ ವಿಷಯದಲ್ಲಿ ರೈಸ್ ಸಾಹೇಬರ ಮತವು ಸಮಂಜಸವಾಗಿಲ್ಲ. ಏಕೆಂದರೆ (೧) ಭಾಷೆಯು ಜನರು ಹಳೆಯ ಅಂಗಿಯನ್ನು ತೆಗೆದುಹಾಕಿ ಹೊಸ ಅಂಗಿಯನ್ನು ತೊಟ್ಟುಕೊಂಡಂತೆ ಎಂದೋ ಒಂದು ದಿನ ಒಂದು ಅವಸ್ಥೆಯನ್ನು ಬಿಟ್ಟು ಮತ್ತೊಂದು ಅವಸ್ಥೆಯನ್ನು ಪಡೆಯುವುದಿಲ್ಲ. ಅದಕ್ಕೆ ಕೆಲವು ಕಾಲ ಬೇಕಾಗುತ್ತದೆ. ಹಿಂದಿನ ಅವಸ್ಥೆಯ ಚಿಹ್ನೆಗಳು ಒಂದೊಂದಾಗಿ ಮರೆಯಾಗುತ್ತಾ ಹೊಸ ಅವಸ್ಥೆಯ ಚಿಹ್ನೆಗಳು ಒಂದೊಂದಾಗಿ ತಲೆದೋರುತ್ತಾ ಇದ್ದು ಕೆಲವು ಕಾಲ ಕಳೆದಮೇಲೆ ಹೊಸ ಅವಸ್ಥೆಯ ಚಿಹ್ನೆಗಳು ನೆಲೆಯಾಗಿ ನಿಂತು ಹಳೆಯ ಅವಸ್ಥೆಯ ಚಿಹ್ನೆಗಳು ಕಾಣದಂತಾಗುತ್ತವೆ. ರೈಸ್ ಸಾಹೇಬರು ಹೇಳುವಂತೆ ಕ್ರಿ. ಶ. ಏಳನೆಯ ಶತಮಾನದ ಅಂತ್ಯದವರೆಗೂ ಪೂರ್ವದ ಹಳಗನ್ನಡವು ಪ್ರಚಾರದಲ್ಲಿದ್ದು ಅದರ ಕೂಡಲೆ ಎಂಟನೆಯ ಶತಮಾನದಲ್ಲಿ ಹಳಗನ್ನಡವು ಪ್ರಚಾರಕ್ಕೆ ಬರುವುದು ಅಸಂಭವ. (೨) ಕ್ರಿ. ಶ. ಆರನೆಯ ಶತಮಾನದಿಂದ ಎಂಟನೆಯ

ಶತಮಾನದವರೆಗಿನ ಶಾಸನಗಳಲ್ಲಿ ಹಳಗನ್ನಡದಿಂದ ಭಿನ್ನವಾದ ಶಬ್ದರೂಪಗಳೂ ಪ್ರಯೋಗಗಳೂ ಇರುವಂತೆಯೇ ಹಳಗನ್ನಡದ ಶಬ್ದರೂಪಗಳೂ ಪ್ರಯೋಗಗಳೂ ಇವೆ. ಅಷ್ಟೇ ಅಲ್ಲ. ಅವಕ್ಕಿಂತಲೂ ಇವು ಹೆಚ್ಚು ಹೆಚ್ಚಾಗಿ ಕಂಡುಬರುತ್ತವೆ. ಇದರಿಂದ ಕನ್ನಡ ಭಾಷೆಗೆ ಹಳಗನ್ನಡರೂಪವು ರೈಸ್‌ರವರ ಪೂರ್ವದ ಹಳಗನ್ನಡ ಕಾಲದಲ್ಲಿಯೇ ಪ್ರಚಾರಕ್ಕೆ ಬರುತ್ತಿತ್ತೆಂದು ಹೇಳಬೇಕಾಗುತ್ತದೆ. ಸಾರಾಂಶವೇನೆಂದರೆ ಕನ್ನಡ ಭಾಷೆಗೆ ಪೂರ್ವದ ಹಳಗನ್ನಡವೆಂಬ ಒಂದು ಅವಸ್ಥೆಯಿತ್ತೆಂದು ಇಟ್ಟುಕೊಳ್ಳಬೇಕು; ಆದರೆ ಅದರ ಕಾಲದ ಪರಿಮಿತಿಯನ್ನು ನಿರ್ಧರಿಸುವುದು ಕಷ್ಟ. ರೈಸರು ಪೂರ್ವದ ಹಳಗನ್ನಡವೆಂದು ಕರೆಯುವ ಕಾಲವನ್ನು ಪೂರ್ವದ ಹಳಗನ್ನಡವು ಹಳಗನ್ನಡವಾಗಿ ರೂಪಾಂತರವಾಗುತ್ತಿದ್ದ ಕಾಲವೆಂದು ಕರೆಯಬಹುದು.

**ನಡುಗನ್ನಡ: ಯಾವಾಗ ಆರಂಭವಾಯಿತು?** ರೈಸ್ ಸಾಹೇಬರು ನಡುಗನ್ನಡಕಾಲ ಒಂದು ಇತ್ತೆಂದು ಹೇಳಿಲ್ಲ. ಹಳಗನ್ನಡ ಕಾಲವು ಹದಿನಾಲ್ಕನೆಯ ಶತಮಾನಕ್ಕೆ ಮುಗಿಯುತ್ತದೆಂದೂ ಆಗ್ಗೆ ಹೊಸಗನ್ನಡ ಕಾಲವು ಆರಂಭವಾಗುತ್ತದೆಂದೂ ಹೇಳುತ್ತಾರೆ. ಭಾಷೆಯು ಒಂದು ಅವಸ್ಥೆಯನ್ನು ಬಿಟ್ಟು ಮತ್ತೊಂದು ಅವಸ್ಥೆಯನ್ನು ಹೊಂದಬೇಕಾದರೆ ಕೆಲವು ಕಾಲ ಬೇಕೆಂಬುದನ್ನು ಹಿಂದೆಯೇ ವಿವರಿಸಿದ್ದೇವೆ. ಆದಕಾರಣ ಹಳಗನ್ನಡ ಹೊಸಗನ್ನಡ ಕಾಲಗಳಿಗೆ ಮಧ್ಯೆ ನಡುಗನ್ನಡದ ಕಾಲವೊಂದುಂಟೆಂಬ ಕಿಟ್ಟೆಲ್ ಸಾಹೇಬರ ಮತವು ಸರಿಯಾದದ್ದು. ಆದರೆ ಈ ನಡುಗನ್ನಡದ ಕಾಲವು ಕ್ರಿ. ಶ. ೧೨೫೦ರಲ್ಲಿ ಆರಂಭವಾಯಿತೆಂದು ಅವರು ಹೇಳುವುದನ್ನು ಒಪ್ಪಲಾಗುವುದಿಲ್ಲ. ಆ ಕಾಲಕ್ಕೆ ಹಿಂದೆಯೇ ನಡುಗನ್ನಡ ಭಾಷೆಯು ತಲೆದೋರುತ್ತಿತ್ತು. ಉದಾಹರಣೆಗೆ ಹಳಗನ್ನಡದಲ್ಲಿದ್ದ ಱಕಾರೋಚ್ಚಾರಣೆಯು ಹರಿಹರನ ಕಾಲಕ್ಕೇ ಹೋಗಿತ್ತು. ನಡುಗನ್ನಡದ ಶಬ್ದರೂಪಗಳೂ ಪ್ರಯೋಗಗಳೂ ಹದಿಮೂರನೆಯ ಶತಮಾನಕ್ಕೆ ಎಷ್ಟೋ ಹಿಂದೆಯೇ ಕಂಡುಬರುತ್ತವೆ.

ಉದಾಹರಣೆ

(i) ತೆಗೆವಾರುವಮಂ **ಹಾರುವ** ಬಗೆಯಂ (ಕ್ರಿ.ಶ. ೧೧೧೮). (ಹಳಗನ್ನಡ) ಪಾರ್ವ.

(ii) ಎಂದುದಂ ಕೊಟ್ಟ **ಅಳುಕಿ ಬಳುಕಿ** ಭೃತ್ಯತ್ವಮಂ ಪೊಣ್ದಾರ್ (ಕ್ರಿ. ಶ. ೧೦೭೪). (ಹಳಗನ್ನಡ) ಅಳ್ಕಿ, ಬಳ್ಕಿ.

(iii) ಈ ಗುಣಿ ಶಂಕನಂ **ಪೊಗಟುಗುಂ** (ಕ್ರಿ.ಶ. ೧೦೬೦.) (ಹಳಗನ್ನಡ) ಪೊಗೞ್ಗುಂ.

ಈ ವಿಧವಾದ ಪ್ರಯೋಗಗಳು ಗ್ರಂಥಗಳಲ್ಲಿ ವಿಶೇಷವಾಗಿ ಕಂಡುಬರುವುದಿಲ್ಲ ವೆಂಬುದೂ ಇದಕ್ಕಿಂತಲೂ ಹೆಚ್ಚಾಗಿ ಹಳಗನ್ನಡ ಪ್ರಯೋಗಗಳು ದೊರೆಯುತ್ತ ವೆಂಬುದೂ ನಿಜ. ಆದರೆ ಅಪೂರ್ವವಾಗಿ ದೊರೆಯುವ ಈ ಉದಾಹರಣೆಗಳು, ಅಂತಹ ಪ್ರಯೋಗಗಳು ಆ ಕಾಲವಲ್ಲಿ ಜನರಾಡುವ ಭಾಷೆಯಲ್ಲಿ ವಾಡಿಕೆಯಾಗಿದ್ದುವೆಂಬುದಕ್ಕೆ ನಿದರ್ಶನಗಳಾಗಿವೆ. ಇದರಿಂದ ಜನ. ಭಾಷೆಯಲ್ಲಿ ನಡುಗನ್ನಡದ ಕಾಲವು ಸುಮಾರು ಕ್ರಿ. ಶ. ೧೧೦೦ಕ್ಕೇ ಆರಂಭವಾಗಿದ್ದಿರಬೇಕೆಂದು ತೋರುತ್ತದೆ.

**ಹಳಗನ್ನಡ, ನಡುಗನ್ನಡ, ಹೊಸಗನ್ನಡ; ಇವು ಗ್ರಾಂಥಿಕ ಭಾಷೆಯಲ್ಲಿ ಈಗಲೂ ಇವೆ.** ಈಗಿನ ಸಾಹಿತ್ಯದಲ್ಲಿ ಎಂದರೆ ಗ್ರಾಂಥಿಕ ಭಾಷೆಯಲ್ಲಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಈ ಮೂರು ಭಾಷಾರೂಪಗಳೂ ಪ್ರಚಾರದಲ್ಲಿವೆ. ಓದುಗಬ್ಬಗಳ (ಉದಾ : ಚಂಪೂಕಾವ್ಯಗಳ) ಭಾಷೆಯನ್ನು ಹಳಗನ್ನಡವೆಂದೂ ಹಾಡುಗಬ್ಬಗಳ (ಉದಾ : ಷಟ್ಪದೀ ಕಾವ್ಯಗಳ) ಭಾಷೆಯನ್ನು ನಡುಗನ್ನಡವೆಂದೂ ಈಗಿನ ಗದ್ಯಗ್ರಂಥಗಳ ಭಾಷೆಯನ್ನು ಹೊಸಗನ್ನಡವೆಂದೂ ಹೇಳಬಹುದು. ಈಗಲೂ ಕಂದವೃತ್ತಗಳನ್ನು ಬರೆಯುವವರು ಹಳಗನ್ನಡದಲ್ಲಿಯೂ ಷಟ್ಪದಿ ಮೊದಲಾದುವನ್ನು ಬರೆಯುವವರು ನಡುಗನ್ನಡದಲ್ಲಿಯೂ ಬರೆಯುತ್ತಾರೆ. ಆದಕಾರಣ ಹಳಗನ್ನಡ ನಡುಗನ್ನಡಗಳು ಸಾಹಿತ್ಯದಲ್ಲಿ ಇದುವರೆಗೂ ಉಳಿದುಕೊಂಡು ಬಂದಿವೆಯೆಂದೇ ಹೇಳಬೇಕಾಗುತ್ತದೆ. ಹಳಗನ್ನಡವು ಹೊಸಗನ್ನಡವಾಗಿ ಕ್ರಮಕ್ರಮವಾಗಿ ಮಾರ್ಪಡುತ್ತಿರುವ ಕಾಲದ ಭಾಷೆಯಾದ ನಡುಗನ್ನಡದಲ್ಲಿ ಹಳಗನ್ನಡ ಹೊಸಗನ್ನಡ ಭಾಷೆಗಳ ಮಿಶ್ರಣವು ಕಂಡುಬರುತ್ತದೆ. ಅದರಲ್ಲಿ ಹಳಗನ್ನಡ ಹೊಸಗನ್ನಡ ಎರಡೂ ಅಲ್ಲದ ಶಬ್ದರೂಪಗಳೂ ಪ್ರಯೋಗಗಳೂ ದೊರೆಯುತ್ತವೆ. ಕಾಲಕ್ರಮದಲ್ಲಿ ಹೊಸಗನ್ನಡ ರೂಪಗಳು ನೆಲಸಿ ಮಿಕ್ಕವು ಲೋಪವಾಗಿಹೋದವು.

## ೫. ಅಕ್ಷರ ಪ್ರಕರಣ

**ಕನ್ನಡ ವರ್ಣಮಾಲೆ:** ಪ್ರತಿಯೊಂದು ಭಾಷೆಗೂ ಅದರ ಶಬ್ದಗಳಲ್ಲಿ ಸೇರಿರುವ ವರ್ಣಗಳನ್ನೇ ಲಕ್ಷ್ಯವಾಗಿಟ್ಟು ವರ್ಣಸಮಾಮ್ನಾಯ ಮಾಡುವುದು ಉಚಿತವಾದದ್ದು. ಆದರೆ ಕರ್ಣಾಟಕ ವ್ಯಾಕರಣಗಳನ್ನು ನಿರ್ಮಿಸಿದವರು ಹಾಗೆ ಮಾಡಿಲ್ಲ. ಅವರು ಸಂಸ್ಕೃತ ವರ್ಣಮಾಲೆಯನ್ನು ಮೊದಲು ನಿರೂಪಿಸಿ ಆಮೇಲೆ ಕನ್ನಡ ಭಾಷೆಗಿರುವ ವೈಲಕ್ಷಣ್ಯಗಳನ್ನು ತಿಳಿಸುತ್ತಾರೆ. ಅವರು ಹೀಗೆ ಮಾಡುವುದಕ್ಕೆ ಕಾರಣವೇನೆಂಬುದನ್ನು ಕಂಡುಹಿಡಿಯುವುದು ಕಷ್ಟವಲ್ಲ. ಕನ್ನಡ ವ್ಯಾಕರಣಗಳನ್ನು ಬರೆದವರು ಸಂಸ್ಕೃತದಲ್ಲಿ ಪಾಂಡಿತ್ಯವನ್ನು ಪಡೆದವರಾಗಿದ್ದರು. ಅಲ್ಲದೆ, ಕನ್ನಡಕ್ಕೆ ಸಂಸ್ಕೃತವು ಮಾತೃಭಾಷೆಯೆಂದು ಭಾವಿಸಿದ್ದರು. ಆದಕಾರಣ ಅವರು ಸಂಸ್ಕೃತ ವರ್ಣಮಾಲೆಯನ್ನೇ ಆಧಾರವಾಗಿಟ್ಟುಕೊಂಡು ಕನ್ನಡ ವರ್ಣಮಾಲೆಯನ್ನು ನಿರ್ಮಿಸುವುದು ಸ್ವಾಭಾವಿಕವೇ ಆಗಿದೆ.

**ಕನ್ನಡ ವರ್ಣಮಾಲೆಗೆ ಸೇರತಕ್ಕ ಅಕ್ಷರಗಳು: ಕೇಶಿರಾಜನ ಮತ.** ಕನ್ನಡದಲ್ಲಿ ಶುದ್ಧಗೆ ಅಥವಾ ಶುದ್ಧಾಕ್ಷರಗಳು ನಾಲ್ವತ್ತೇಳೆಂದು ಕೇಶಿರಾಜನು ನಿರ್ಣಯಿಸಿರುತ್ತಾನೆ. ಹೀಗೆ ನಿರ್ಣಯಿಸುವಾಗ ಅವನು ಅನುಸರಿಸಿರುವ ಮಾರ್ಗವಿದು: ಸಂಸ್ಕೃತ ವರ್ಣಮಾಲೆಯಲ್ಲಿ ೫೨ ಅಕ್ಷರಗಳಿವೆ. ಆ ಅಕ್ಷರಗಳಲ್ಲಿ ಕೆಲವು ಕನ್ನಡದಲ್ಲಿಲ್ಲ. ಅವು ಯಾವುವೆಂದರೆ ಋ ೠ ಌ ೡ ಎಂಬ ನಾಲ್ಕು ಸ್ವರಗಳು, ಶ ಷ (ಕ್ಷ)ಳ ಎಂಬ ಮೂರು ಅವರ್ಗೀಯಗಳು, ೱಕ ೲಪ ವಿಸರ್ಗ ಎಂಬ ಮೂರು ಯೋಗವಾಹಗಳು ಹೀಗೆ ಸಂಸ್ಕೃತದಲ್ಲಿರುವ ಹತ್ತು ಅಕ್ಷರಗಳು ಕನ್ನಡದಲ್ಲಿಲ್ಲ. ಆದುದರಿಂದ ಕನ್ನಡ ವರ್ಣಮಾಲೆಗೆ ಉಳಿಯುವ ಅಕ್ಷರಗಳು ೪೨. ಸಂಸ್ಕೃತದಲ್ಲಿಲ್ಲದ ಐದು ಅಕ್ಷರಗಳು ಕನ್ನಡದಲ್ಲಿವೆ. ಅವು ಯಾವುವೆಂದರೆ, ಎ ಒ ಎಂಬ ಸ್ವರಗಳೆರಡು, ಱ ೞ (ಕು)ಳ ಎಂಬ ಮೂರು ಅವರ್ಗೀಯ ವ್ಯಂಜನಗಳು. ಈ ಐದೂ ದೇಶೀಯಾಕ್ಷರಗಳು. ಇವುಗಳು ಸೇರಿ ಕನ್ನಡ ವರ್ಣಮಾಲೆಯಲ್ಲಿ ೪೭ ಅಕ್ಷರಗಳಾಗುತ್ತವೆ.

**ಮಹಾಪ್ರಾಣಾಕ್ಷರಗಳು ಕನ್ನಡ ವರ್ಣಮಾಲೆಗೆ ಸೇರತಕ್ಕುವಲ್ಲ:** ಮಹಾಪ್ರಾಣಾಕ್ಷರಗಳು ಶುದ್ಧಗೆಗೆ ಸೇರಿದುವೇ ಎಂಬ ವಿಚಾರದಲ್ಲಿ ಕೇಶಿರಾಜನಿಗೆ ಸಂದೇಹವಿದ್ದಂತೆ ತೋರುತ್ತದೆ. ಆತನು ಮಹಾಪ್ರಾಣಾಕ್ಷರಗಳನ್ನು "ಮಾರ್ಗವಿದರು" ಸಂಖ್ಯೆಯಲ್ಲಿಯೂ ಅನುಕರಣದಲ್ಲಿಯೂ ಪ್ರಯೋಗಿಸುತ್ತಾರೆಂದು ಮೊದಲು ಹೇಳಿ, ಆಮೇಲೆ "ಒಪ್ಪುವ ಕನ್ನಡದೊಳ್ ಸ್ವಭಾವದಿಂ **ಕೆಲವು** ಮಹಾಪ್ರಾಣಂಗಳೊಳವು" ಎಂದು ಹೇಳಿದ್ದಾನೆ. ಕೇಶಿರಾಜನಿಗೆ ಹಿಂದಿನವನಾದ ನಾಗವರ್ಮನಿಗೆ ಕೇಶಿರಾಜನಿಗಿಂತಲೂ ಹೆಚ್ಚು ಸಂದೇಹವಿದ್ದಂತೆ ತೋರುತ್ತದೆ. ಆತನು ಈ ವಿಷಯದಲ್ಲಿ ಹೀಗೆ ಹೇಳಿದ್ದಾನೆ: "ನಾತ್ರ ಪ್ರಾಯೇಣ ವರ್ಗಾಣಾಂ

ದ್ವಿತೀಯಚತುರ್ಥಾಃ. ಪ್ರಾಯೇಣೇತಿ ವಚನಾತ್ ಸಂಖ್ಯಾನುಕರಣಾದೌ ದೃಶ್ಯಂತೇ." ಮಹಾಪ್ರಾಣಾಕ್ಷರಗಳು ಶುದ್ಧಗೆಗೆ ಸೇರಿದುವಲ್ಲವೆಂದೇ ಹೇಳಬೇಕು. ಏಕೆಂದರೆ (೧) ಕೇಶಿರಾಜನು ಸಂಖ್ಯಾವಾಚಕಗಳಿಗೆ ಉದಾಹರಣೆಯಾಗಿ ಕೊಟ್ಟಿರುವ ಶಬ್ದಗಳೆಲ್ಲವೂ ಸಾಸಿರ ಎಂಬ ಉತ್ತರಪದವುಳ್ಳ ಸಮಾಸ ಶಬ್ದಗಳು. ಸಾಸಿರ ಎಂಬುದು ಕನ್ನಡ ಶಬ್ದವಲ್ಲ; ಸಹಸ್ರ ಎಂಬ ಸಂಸ್ಕೃತ ಶಬ್ದದಿಂದ ಹುಟ್ಟಿದ ತದ್ಭವ. ಆದಕಾರಣ ಶುದ್ಧ ಕನ್ನಡ ಸಂಖ್ಯಾವಾಚಕಗಳಲ್ಲಿ ಮಹಾ ಪ್ರಾಣಾಕ್ಷರಗಳಿವೆ ಯೆಂಬುದಕ್ಕೆ ಪ್ರಮಾಣವಿಲ್ಲದಂತಾಯಿತು. ಒಂಭತ್ತು ತೊಂಭತ್ತು ಮೊದಲಾದ ಶಬ್ದಗಳಲ್ಲಿ ಕಂಡುಬರುವ ಮಹಾಪ್ರಾಣಾಕ್ಷರಗಳು ಅಜ್ಞತೆಯಿಂದ ಬಂದವು. (೨) ಮಹಾಪ್ರಾಣಾಕ್ಷರಗಳುಳ್ಳ ಅನುಕರಣಶಬ್ದಗಳನ್ನು ಭಾಷೆಗೆ ಆಧಾರವಾಗಿಟ್ಟು ಕೊಳ್ಳಲಾಗುವುದಿಲ್ಲ. ಅವು ಅಲ್ಪಪ್ರಾಣಗಳಾಗಿ ಇದ್ದಿರಬಹುದು. (೩) ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಸ್ವಭಾವದಿಂದಿರುವುವೆಂಬುದಕ್ಕೆ ಉದಾಹರಣೆಯಾಗಿ ಕೇಶಿರಾಜನು ಕೊಟ್ಟಿರುವ ಶಬ್ದಗಳು ಕನ್ನಡ ಶಬ್ದಗಳಲ್ಲ; ಪ್ರಾಕೃತ ಅಥವಾ ಮರಾಠಿ ಭಾಷೆಯಿಂದ ಕನ್ನಡಕ್ಕೆ ಸೇರಿದ ಶಬ್ದಗಳ ಹಾಗೆ ಕಾಣುತ್ತವೆ. ಉದಾ: ಠಾಣ, ಥಾಪನೆ, ಕಂಭ, ಭಾಸೆ. ಇವು ಕ್ರಮವಾಗಿ ಸ್ಥಾನ, ಸ್ಥಾಪನೆ, ಸ್ತಂಭ, ಭಾಷಾ ಎಂಬ ಸಂಸ್ಕೃತ ಶಬ್ದಗಳಿಂದ ಹುಟ್ಟಿದ ಪ್ರಾಕೃತ ಶಬ್ದಗಳು. ಹೀಗೆ ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳು ಶುದ್ಧಗೆಗೆ ಸೇರುತ್ತವೆಂದು ಸ್ಥಾಪಿಸಲು ಕೇಶಿರಾಜನು ಕೊಡುವ ಲಕ್ಷ್ಯಗಳು ಸಾರ್ಥಕವಾದುವಲ್ಲವೆಂದು ಗೊತ್ತಾಗುತ್ತದೆ. ಕನ್ನಡದಲ್ಲಿ ಸ್ವಾಭಾವಿಕವಾಗಿ ಮಹಾಪ್ರಾಣಾಕ್ಷರಗಳಿರಲಿಲ್ಲವೆಂಬುದಕ್ಕೆ ಅವು ತಮಿಳಿನಲ್ಲಿಲ್ಲ ದಿರುವುದು ಸಾಧಕವಾಗಿದೆ. ಈ ಹತ್ತು ಮಹಾಪ್ರಾಣಾಕ್ಷರಗಳನ್ನು ಕಳೆದರೆ ಶುದ್ಧಗೆ ಯಲ್ಲಿ ಉಳಿಯುವುವು ೩೭ ಅಕ್ಷರಗಳು.*

**ಐ, ಔ, ಅನುಸ್ವಾರಗಳೂ ಕನ್ನಡ ವರ್ಣಮಾಲೆಗೆ ಸೇರತಕ್ಕುವಲ್ಲ:** ಕನ್ನಡಕ್ಕೆ ಐ, ಔ, ಎಂಬೆರಡು ಸ್ವರಗಳೂ ಅನುಸ್ವಾರವೂ ನಿಸರ್ಗವಾಗಿ ಸೇರಿದುವಲ್ಲ. ಕನ್ನಡ ಶಬ್ದಗಳಲ್ಲಿಯೂ ಕನ್ನಡ ಸಂಧಿಗಳಲ್ಲಿಯೂ ಐ ಔ ಎಂಬ ಅಕ್ಷರಗಳು ಆವಶ್ಯಕವಲ್ಲ. ಪದಮಧ್ಯ ಯತ್ವ ವತ್ವಗಳಿಗೆ ಐತ್ವ ಔತ್ವಗಳು ಬರುವುವೆಂದು ಕೇಶಿರಾಜಾದಿಗಳೇ ಹೇಳಿದ್ದಾರೆ. ಕೌಂಗು, ಕೈಗೈ, ಮೈ ಇವುಗಳನ್ನು ಕವುಂಗು, ಕೆಯ್ಗೆಯ್, ಮೆಯ್ ಎಂಬುದಾಗಿ ಬರೆಯಬಹುದು. ಕನ್ನಡದಲ್ಲಿ ಅನುಸ್ವಾರವು ಅನುನಾಸಿಕಗಳಿಗೆ ಆದೇಶವಾಗುವುದರಿಂದಲೂ ಅದಕ್ಕೆ ಸ್ವತಂತ್ರವಾದ ಸ್ಥಿತಿಯಿಲ್ಲ ವಾದುದರಿಂದಲೂ ಅದನ್ನು ಬಿಟ್ಟುಬಿಡಬಹುದು. ಮೇಲೆ ಹೇಳಿದ ೩೭ ಅಕ್ಷರಗಳಲ್ಲಿ ಈ ಮೂರು ಹೋದರೆ ಉಳಿಯುವುವು ೩೪ ಅಕ್ಷರಗಳು ಮಾತ್ರ.

---

* ಸಂಸ್ಕೃತ ಶಬ್ದಗಳಲ್ಲಿ ಬರುವ ಥಕಾರ ಷಕಾರಗಳಲ್ಲದೆ, ಕನ್ನಡದಲ್ಲಿಯೇ ಹೊಸಗನ್ನಡ ಕಾಲದಲ್ಲಿ ಅಂಥ, ಇಂಥ, ಎಂಥ ಮತ್ತು ಅಷ್ಟು, ಇಷ್ಟು, ಎಷ್ಟು ಎಂಬ ಶಬ್ದಗಳಲ್ಲಿ ಥಕಾರ, ಷಕಾರಗಳಲ್ಲಿ ಹುಟ್ಟಿವೆ. (ಅಂತಪ್ಪ> ಅಂತಹ> ಅಂಥ; ಏಸುಟು> ಎಷ್ಟು. ಗ್ರಾಮ್ಯ-ಏಟು.)

ಹಳಗನ್ನಡವು ಕೆಲವು ವ್ಯತ್ಯಾಸಗಳನ್ನು ಹೊಂದುತ್ತಾ ನಡುಗನ್ನಡವಾಗಿ ಈಗ ಹೊಸ ಕನ್ನಡವಾಗಿ ಪರಿಣಮಿಸಿರುವುದಷ್ಟೆ. ಆ ವ್ಯತ್ಯಾಸಗಳನ್ನು, ಅಕ್ಷರಗಳಲ್ಲಿ ಕಂಡುಬರುವುವು, ಶಬ್ದಗಳಲ್ಲಿ ಕಂಡುಬರುವುವು, ವ್ಯಾಕರಣಪ್ರಯೋಗದಲ್ಲಿ ಕಂಡು ಬರುವುವು ಎಂದು ಸ್ಥೂಲವಾಗಿ ಮೂರು ಭಾಗವಮಾಡಬಹುದು. ಈ ಪ್ರಕರಣದಲ್ಲಿ ಅಕ್ಷರಗಳಿಗೆ ಸಂಬಂಧಿಸಿದ ಕೆಲವು ಮುಖ್ಯವಾದ ವ್ಯತ್ಯಾಸಗಳು ನಿರೂಪಿತ ವಾಗುತ್ತವೆ.

**1.** (i) ಱ> ಳ—ಹಳಗನ್ನಡದಲ್ಲಿದ್ದ ಎರಡು ಅಕ್ಷರಗಳು ಹೊಸಗನ್ನಡದಲ್ಲಿ ಕಂಡುಬರುವುದಿಲ್ಲ. ಆ ಅಕ್ಷರಗಳು ಱ ಮತ್ತು ೞ. ಈ ಎರಡು ಅಕ್ಷರಗಳೂ ತಮಿಳಿನಲ್ಲಿ ಈಗಲೂ ಇವೆ; ೞ ಎಂಬುದು ಒಂದು ಮಾತ್ರ ತೆಲುಗಿನಲ್ಲಿದೆ. ಹೊಸಗನ್ನಡದಲ್ಲಿ ಈ ಎರಡೂ ಇಲ್ಲ.

ಪ್ರಾಚೀನಕಾಲದಲ್ಲಿ ಱಕಾರವು ಕನ್ನಡ ಜನರ ಉಚ್ಚಾರಣೆಯಲ್ಲಿದ್ದಿರಬೇಕು. ಅದರ ಉಚ್ಚಾರಣೆಯು ಯಾವಾಗ ನಿಂತಿತು? ೧೨ನೆಯ ಶತಮಾನದ ಹೊತ್ತಿಗೆ ಆ ಅಕ್ಷರವು ಜನರ ಉಚ್ಚಾರಣೆಯಿಂದ ಲೋಪವಾಗಿತ್ತೆಂದು

ನೋಡುವೊಡೊಂದಕ್ಕರಮದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನಂ |
ಕೂಡೆ ಕವಿತತಿ ವಿಚಾರಿಸ
ಬೇಡದಱಿಂ ರಳಕುಳಕ್ಷಳಂಗಳನಿದಱೊಳ್ ||

ಎಂಬ ಪದ್ಯದಲ್ಲಿ ಹರಿಹರ ಕವಿಯು ಕಂಠೋಕ್ತವಾಗಿ ಹೇಳಿದ್ದಾನೆ. ಹರಿಹರನ ಕಾಲಕ್ಕೆ ಎಷ್ಟು ಹಿಂದೆ ಱಕಾರೋಚ್ಚಾರಣೆಯು ನಿಂತಿತೆಂಬುದನ್ನು ಸ್ಥೂಲವಾಗಿ ಶಾಸನಗಳಿಂದ ನಿರ್ಣಯಿಸಬಹುದು. ಸುಮಾರು ಆರನೆಯ ಶತಮಾನದಿಂದ ಒಂಬತ್ತನೆಯ ಶತಮಾನದವರೆಗೂ ಱಕಾರವು ಪ್ರಯೋಗದಲ್ಲಿರುವುದು ಕಂಡುಬರುತ್ತದೆ. ಆಮೇಲೆ ಅದು ಳಕಾರವಾಗಿಯೂ, ಸಂಯುಕ್ತಾಕ್ಷರವಾಗಿದ್ದಾಗ ರಕಾರವಾಗಿಯೂ ಮಾರ್ಪಡು ವುದಕ್ಕೆ ಪ್ರಾರಂಭವಾಗುತ್ತದೆ. ಆದುದರಿಂದ ಒಂಬತ್ತನೆಯ ಶತಮಾನದ ಅಂತ್ಯ ಅಥವಾ ಹತ್ತನೆಯ ಶತಮಾನದ ಆದಿಭಾಗದ ಹೊತ್ತಿಗೆ ಅದು ಜನರ ಉಚ್ಚಾರಣೆ ಯಿಂದ ಲೋಪವಾಗಲಾರಂಭವಾಯಿತೆಂದು ಇಟ್ಟುಕೊಳ್ಳಬಹುದು.

ಉಚ್ಚಾರಣೆ ನಿಂತ ಒಡನೆಯೇ ಱಕಾರದ ಪ್ರಯೋಗವು ಬರವಣಿಗೆಯಿಂದ ಲೋಪವಾಗಲಿಲ್ಲ. ಮೇಲೆ ಹೇಳಿದ ಪದ್ಯದಲ್ಲಿ ಹರಿಹರನು ಪ್ರಾಸದ ವಿಚಾರದಲ್ಲಿ ೞಱಕುಳಕ್ಷಳ ಭೇದವನ್ನು ತಾನು ಗಮನಿಸುವುದಿಲ್ಲವೆಂದು ಹೇಳಿರುವನೇ ಹೊರತು ೞಱಾಕ್ಷರವನ್ನು ಪ್ರಯೋಗಿಸುವುದಿಲ್ಲವೆಂದು ಹೇಳಿಲ್ಲ. ಜನರು ಬರವಣಿಗೆಯಲ್ಲಿ ಱಕಾರವನ್ನು ಪ್ರಯೋಗಿಸುತ್ತಿದ್ದರು. ಆದರೆ ಆ ಅಕ್ಷರದ ಪ್ರಯೋಗದಲ್ಲಿ ತಪ್ಪು ಗಳಾಗಲು ಆರಂಭವಾಯಿತು. ಬಾಯಿಯಲ್ಲಿ ಹೇಳುವುದೊಂದು ಬರೆಯುವುದೊಂದು

ಆಯಿತು. ಕೇಶಿರಾಜನ ಕಾಲಕ್ಕೆ ಆ ಅಕ್ಷರದ ಪ್ರಯೋಗವು ಅವ್ಯವಸ್ಥಿತವಾಗಿತ್ತೆಂದು ತೋರುತ್ತದೆ. ಕೇಶಿರಾಜನು ಅದರ ಪ್ರಯೋಗದಲ್ಲಿ ಒಂದು ವ್ಯವಸ್ಥೆಯನ್ನು ಮಾಡಿ ೞಕಾರವನ್ನು ಉಳಿಸುವುದಕ್ಕೆ ಪ್ರಯತ್ನಮಾಡಿದ್ದಾನೆ. ೞಕಾರವಿರಬೇಕಾದ ಕೆಲವು ಶಬ್ದಗಳಲ್ಲಿ ಳಕಾರವು ರೂಢಿಗೆ ಬಂದಿತ್ತು. ದಾಳಿಂಬ ಕುಂಬಳ ಮೊದಲಾದುವು ಡಕಾರಕ್ಕೆ ಹುಟ್ಟಿ ೞದ ಅಪಭ್ರಂಶತೆಯನ್ನು ಪಡೆದಿದ್ದರೂ ರೂಢಿಯ ಕುಳಗಳೇ ಎಂದು ಕೇಶಿರಾಜನೇ ಒಪ್ಪಬೇಕಾಯಿತು. ಮತ್ತೆ ಕೆಲವು ೞಕ್ಕೆ ಸಂದೇಹವೆಂದೂ ಅವುಗಳ ಪ್ರಯೋಗವನ್ನು ಪ್ರಾಚೀನಪ್ರಯೋಗಗಳಿಂದ ಕಂಡುಕೊಳ್ಳಬೇಕೆಂದೂ ಹೇಳಿ ೞಾಕ್ಷರವುಳ್ಳ ಶಬ್ದಗಳ ಪಟ್ಟಿಯೊಂದನ್ನು ಕೊಟ್ಟಿರುತ್ತಾನೆ. ಈಗ ಈ ಅಕ್ಷರ ವನ್ನು ತಮಿಳುದೇಶದಲ್ಲಿ ಎಲ್ಲಾ ಪ್ರಾಂತಗಳಲ್ಲಿಯೂ ಒಂದೇ ರೀತಿಯಾಗಿ ಉಚ್ಚರಿ ಸುವುದಿಲ್ಲವೆಂದೂ ಕೆಲವೆಡೆ ಳಕಾರದಂತೆಯೂ ಕೆಲವೆಡೆ ಷ (zh,rzh) ಕಾರ ದಂತೆಯೂ ಕೆಲವೆಡೆ ಯಕಾರದಂತೆಯೂ ಉಚ್ಚರಿಸುವರೆಂದೂ ಗೊತ್ತಾಗುತ್ತದೆ. ಪ್ರಾಚೀನ ಕನ್ನಡಿಗರು ೞಕಾರವನ್ನು ಹೇಗೆ ಉಚ್ಚರಿಸುತ್ತಿದ್ದರೋ ಗೊತ್ತಿಲ್ಲ. ಡಕಾರ ಹುಟ್ಟುವ ಸ್ಥಾನವನ್ನು ಒತ್ತಿ ಉಚ್ಚರಿಸಿದರೆ ಈ ಅಕ್ಷರವು ಹುಟ್ಟುತ್ತದೆಂದು ಕೇಶಿ ರಾಜನು ಹೇಳಿದ್ದಾನೆ. ೧೦-೧೧-೧೨ ನೆಯ ಶತಮಾನಗಳಿಂದ ಈಚಿನ ಶಾಸನಗಳಲ್ಲಿ ಅದು ಳಕಾರವಾಗಿ ಮಾರ್ಪಡುವುದು ಕಂಡುಬರುತ್ತದೆ.

ಉದಾ : ಪೇಳ್, ಏಳು, ಪಾಳ್, ಪೊಗಳ್ ಇತ್ಯಾದಿ.

ೞಕಾರವು ಮತ್ತೊಂದು ವ್ಯಂಜನದೊಡನೆ ಸೇರಿ ಸಂಯುಕ್ತಾಕ್ಷರವಾಗಿದ್ದಾಗ ರಕಾರವಾಗುವುದೂ ಉಂಟು. ಉದಾ : ಕರ್ಚು, ಬಿರ್ದು, ಗರ್ದೆ. ಆ ಅಕ್ಷರವು ಜನರ ಬಳಕೆಯ ಮಾತಿನಲ್ಲಿ ಯಾವಾಗ ಇಲ್ಲದಂತಾಯಿತೋ ಆಗಲೇ ಅದರ ಕೊನೆಗಾಲಕ್ಕೆ ಆರಂಭವಾಯಿತೆಂದು ಹೇಳಬಹುದು. ಕೆಲವು ಕಾಲ ಗ್ರಂಥಸ್ಥವಾಗಿ ಪಂಡಿತರ ಲೇಖನದಲ್ಲಿ ಹಾಗೂ ಹೀಗೂ ಉಳಿಯಿತು. ಗ್ರಂಥರಚನೆಯು ಪಂಡಿತರಿಗೆ ಸೇರಿದುದು ಮಾತ್ರವೇ ಅಲ್ಲದೆ ಸಾಮಾನ್ಯರಿಗೂ ಸೇರಿದ ಕಾರ್ಯವಾದ ಹಾಗೆಲ್ಲಾ ೞಕಾರದ ನಾಶಕ್ಕೆ ಕಾರಣವು ಒಟ್ಟಿತು. ಕೇಶಿರಾಜನಂತಹ ಪಂಡಿತರು ಎಷ್ಟು ಪ್ರಯತ್ನಮಾಡಿದರೂ ಆ ಅಕ್ಷರವನ್ನು ಉಳಿಸಿಕೊಳ್ಳಲಾಗಲಿಲ್ಲ. ಕಾಲಕ್ರಮವಾಗಿ ಬರವಣಿಗೆಯಿಂದಲೂ ಅದು ಲೋಪವಾಗಿ ಹೋಯಿತು.

(ii) ಱ>ರ—ಱಕಾರವು ಹರಿಹರ ಕೇಶಿರಾಜರ ಕಾಲದಲ್ಲಿಯೂ ಉಚ್ಚಾರಣೆ ಯಲ್ಲಿತ್ತೆಂದು ತೋರುತ್ತದೆ. ಆ ಅಕ್ಷರದ ವಿಚಾರವಾಗಿ ಯಾವ ವಿವಾದವೂ ಕಂಡುಬಾರದಿರುವುದೇ ಇದಕ್ಕೆ ನಿದರ್ಶನವಾಗಿದೆ. ಕಾಲಕ್ರಮದಲ್ಲಿ ಱ, ರ ಈ ಎರಡು ಅಕ್ಷರಗಳಿಗೂ ಉಚ್ಚಾರಣೆಯಲ್ಲಿ ಭೇದವಿಲ್ಲದಂತಾಗಿ ಱಕಾರವು ಅಳಿದುಹೋದಂತೆ ಕಾಣುತ್ತದೆ. ಆ ಅಕ್ಷರವು ಸುಮಾರು ಕ್ರಿ. ಶ. ೧೬ ನೆಯ ಶತಮಾನದವರೆಗೂ ಪ್ರಯೋಗದಲ್ಲಿತ್ತು. ಈಚೆಗೆ ಆಧುನಿಕ ಕಾಲದಲ್ಲಿ ಲೋಪವಾಗಿ ಹೋಯಿತು.

ಟಕಾರ ಱಕಾರಗಳ ಉಚ್ಚಾರಣೆಯು ಳಕಾರ ರಕಾರಗಳಿಂದ ಸ್ಪಷ್ಟವಾಗಿರು ವರೆಗೂ ಕವಿಗಳು ಪ್ರಾಸಸ್ಥಾನದಲ್ಲಿ ಟಕಾರ ಳಕಾರಗಳನ್ನೂ, ಱಕಾರ ರಕಾರಗಳನ್ನೂ ಬೆರೆಸುತ್ತಿರಲಿಲ್ಲ. ಅವು ಒಂದೇ ರೀತಿ ಉಚ್ಚಾರಣೆಯನ್ನು ಪಡೆದ ಮೇಲೆ ಮಿಶ್ರ ಪ್ರಾಸಕ್ಕೆ ಆರಂಭವಾಯಿತು.

2. **ಪ>ಹ**—ಹಳಗನ್ನಡದಲ್ಲಿ ಶಬ್ದಗಳಲ್ಲಿನ ಪಕಾರವು ಹೊಸಗನ್ನಡದಲ್ಲಿ ಬಹುಶಃ ಹಕಾರವಾಗಿ ಪರಿಣಮಿಸುತ್ತದೆ.

ಉದಾ : ಪರಿ>ಹರಿ, ಅಂತಪ್ಪ>ಅಂತಹ, ಪಾಲ್>ಹಾಲು ಇತ್ಯಾದಿ. ಪಕಾರವು ಈಗಲೂ ಉಚ್ಚಾರಣೆಯಲ್ಲಿಯೂ ಬರವಣಿಗೆಯಲ್ಲಿಯೂ ಇರುತ್ತದೆಯಾದ ಕಾರಣ ಱ ಟ ಕಾರಗಳಂತೆ ಅದು ಲೋಪವಾಗಿದೆಯೆಂದು ಹೇಳಲಾಗುವುದಿಲ್ಲ. ಹಾಗಾದರೆ ಹಳಗನ್ನಡದ 'ಪ'ಕಾರವು ಹೊಸಗನ್ನಡದಲ್ಲಿ 'ಹ'ಕಾರವಾಗಿ ಏಕೆ ಪರಿಣಮಿಸಿತು ? ಅನ್ಯಭಾಷಾಸಂಸರ್ಗವೇ ಇದಕ್ಕೆ ಕಾರಣವಿರಬಹುದೆಂದು ತೋರುತ್ತದೆ. ಏಕೆಂದರೆ ಹಳಗನ್ನಡದಲ್ಲಿ ಪಕಾರವು ಹಕಾರವಾಗಿ ಪರಿಣಮಿಸುವುದು ತದ್ಭವ ಶಬ್ದಗಳಲ್ಲಿ ಕಂಡುಬರುತ್ತದೆ.

ಉದಾ : ಪಿಶುನ>ಹಿಸುಣ, ಗೋಪುರ>ಗೋಹುರ ಇತ್ಯಾದಿ. ಅಲ್ಲದೆ ಹಲವು ದೇಶ್ಯಪದಗಳಲ್ಲಿಯೂ ಕಂಡುಬರುತ್ತಿತ್ತೆಂದು ಕೇಶಿರಾಜನು ತಿಳಿಸಿ, ಹಲಗೆ, ಹಂದರ್, ಹಂದಿ ಮೊದಲಾದ ಕೆಲವು ಉದಾಹರಣೆಗಳನ್ನು ಕೊಟ್ಟು "ಇದು ದೇಸಿಯೊಳ್ ಚೆಲ್ವು" ಎಂದು ಹೇಳುತ್ತಾನೆ. ದ್ರಾವಿಡ ಭಾಷೆಗಳಲ್ಲಿ ಪಕಾರವು ವಿಶೇಷವಾಗಿ ರೂಢಿಯಲ್ಲಿರುವುದರಿಂದ ಕನ್ನಡ ಜನರಿಗೆ ಸಂಸ್ಕೃತ ಶಬ್ದಗಳ ಪಕಾರವನ್ನು ಹಕಾರವಾಗಿ ಉಚ್ಚರಿಸುವ ಆವಶ್ಯಕತೆ ಇರಲಿಲ್ಲ; ಆದಕಾರಣ ಆ ತದ್ಭವ ರೂಪಗಳು ಪ್ರಾಕೃತಭಾಷೆಯಿಂದ ಉಂಟಾದುವು ಎಂದು ನಿರ್ಧರಿಸಬಹುದು. ಆ ಪ್ರಾಕೃತಭಾಷಾಸಂಸರ್ಗದಿಂದ ಕನ್ನಡ ಭಾಷೆಯಲ್ಲಿಯೂ ಪಕಾರವು ಹಕಾರವಾಗುವ ಪರಿಸ್ಥಿತಿಯುಂಟಾಯಿತೆಂದು ಊಹಿಸಬೇಕಾಗಿದೆ.

ಪಕಾರವು ಹಕಾರವಾಗಿ ಹೇಗೆ ಪರಿಣಮಿಸಿತು ? ಅದನ್ನು ಜನರು ಮೊದಲು ಮಹಾಪ್ರಾಣವಾಗಿ ಎಂದರೆ ಫ ಎಂದು ಉಚ್ಚರಿಸುತ್ತಾ ಆಮೇಲೆ ಅದನ್ನು ಹ ಎಂಬುದಾಗಿ ಉಚ್ಚರಿಸಿದ್ದರೂ ಇರಬಹುದು. ಅಲ್ಪಪ್ರಾಣಗಳನ್ನು ಮಹಾಪ್ರಾಣಗಳಾಗಿ ಉಚ್ಚರಿಸುವುದು ಅಸಂಭವವಲ್ಲ. ಉದಾ : ಭತ್ತ, ಧೊರೆ, ಭಾವಿ, ಥಳಕು. ಮಹಾಪ್ರಾಣಾಕ್ಷರಗಳು ಹಕಾರವಾಗಿ ಉಳಿಯುವುದೂ ಉಂಟೆಂದು ಶಬ್ದಶಾಸ್ತ್ರದಿಂದ ಗೊತ್ತಾಗುತ್ತದೆ. ಉದಾಹರಣೆಗೆ ಸಂಸ್ಕೃತದ ಹಂಸ ಎಂಬ ಶಬ್ದವು ಘಂಸ ಎಂಬುದರ ಈಚಿನ ರೂಪವೆಂತಲೂ ಘಂಸದಲ್ಲಿರುವ ಗಕಾರವು ಗೂಸ್ (goose) ಎಂದು ಮತ್ತೊಂದು ಆರ್ಯಭಾಷೆಯಲ್ಲಿರುತ್ತದೆಂದೂ ಶಬ್ದಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

3. **ಪದಾಂತವ್ಯಂಜನಗಳು**—ಹೊಸಗನ್ನಡಕ್ಕೂ ಹಳಗನ್ನಡಕ್ಕೂ ಉಚ್ಚಾ

ರಣೆಯ ವಿಷಯದಲ್ಲಿರುವ ಮತ್ತೊಂದು ವಿಶೇಷವೇನೆಂದರೆ ವ್ಯಂಜನಾಂತಗಳಾದ ಶಬ್ದಗಳು ಸ್ವರಾಂತಗಳಾಗುವುದು. ಹಾಗೆ ಸೇರತಕ್ಕ ಸ್ವರವು ಸಾಮಾನ್ಯವಾಗಿ 'ಉ'* ಉದಾ: ಉಸಿರ್>ಉಸಿರು, ಕಣ್>ಕಣ್ಣು, ಪಲ್>ಹಲ್ಲು, ಕೆಸಱ್>ಕೆಸರು ಇತ್ಯಾದಿ. ಯಕಾರಾಂತಗಳಿಗೆ ಇಕಾರವು ಸೇರುತ್ತದೆ. ಉದಾ: ಮೆಯ್>ಮೆಯ್ಯಿ, ಬಾಯ್>ಬಾಯಿ. ಪ್ರತ್ಯಯಗಳ ಅಂತ್ಯ ವ್ಯಂಜನಕ್ಕೂ ಸ್ವರ ಸೇರುತ್ತದೆ. ಉದಾ: ರಾಮನಂ>ರಾಮನನ್ನು, ಮರಂ>ಮರವು, ಪೋದಂ>ಹೋದನು ಇತ್ಯಾದಿ; ಕೆಲವು ವೇಳೆ ಅಂತ್ಯವ್ಯಂಜನವು ಲೋಪವಾಗುತ್ತದೆ. ಉದಾ:—ಮರ, ಹೋದ. "ನಮ್ಮಲ್ಲಿ ಖಾತಿಯ ಧರಿಸಿದನು ಜಯವಧುವ ವರಿಸಿದ."

ನಡುಗನ್ನಡದಲ್ಲಿ ಕಣು, ಹಲು ಇತ್ಯಾದಿ ರೂಪಗಳೂ ದೊರೆಯುತ್ತವೆ, ಇವು ಗ್ರಾಂಥಿಕಪ್ರಯೋಗಗಳೆಂದು ತೋರುತ್ತದೆ. ಹೊಸಗನ್ನಡದಲ್ಲಿ ಉಕಾರ ಹೊಂದಿದ ರೂಪವು ಗ್ರಾಂಥಿಕವೆಂದು ಪರಿಗಣಿತವಾಗಿದೆ. ವ್ಯಂಜನಲೋಪವಾದ ರೂಪವು ಮಾತನಾಡುವ ಭಾಷೆಯಲ್ಲಿ ರೂಢಿಯಾಗಿದೆ.

ಶಬ್ದಗಳ ಅಂತ್ಯವ್ಯಂಜನಕ್ಕೆ ಸ್ವರ ಸೇರುವುದಕ್ಕೆ ಬಹು ಪ್ರಾಚೀನಕಾಲದಲ್ಲಿಯೇ ಆರಂಭವಾದಂತೆ ತೋರುತ್ತದೆ. ಉದಾಹರಣೆಗೆ ಪದಿನೇಳು ಎಂಬ ರೂಪವು ಹತ್ತನೆಯ ಶತಮಾನದ ಶಾಸನವೊಂದರಲ್ಲಿ ದೊರೆಯುತ್ತದೆ. ಏಳು ಎಂಬ ರೂಪವು ೧೧, ೧೨ ನೆಯ ಶತಮಾನಗಳ ಶಾಸನಗಳಲ್ಲಿ ಕ್ವಚಿತ್ತಾಗಿ ಕಂಡುಬರುತ್ತದೆ. ಇದನ್ನು ನೋಡಿದರೆ ೧೦ ನೆಯ ಶತಮಾನದ ಹೊತ್ತಿಗೇ ವ್ಯಂಜನಾಂತ ಶಬ್ದಗಳನ್ನು ಸ್ವರಾಂತವಾಗಿ ಉಚ್ಚರಿಸುವ ಪದ್ಧತಿಯು ರೂಢಿಗೆ ಬರುತ್ತಿತ್ತೆಂದು ತೋರುತ್ತದೆ. ಹೀಗೆ ಮಾತನಾಡುವ ಭಾಷೆಯಲ್ಲಿ ರೂಢಿಗೆ ಬಂದಿದ್ದ ಪ್ರಯೋಗವು ಹದಿಮೂರನೆಯ ಶತಮಾನದ ಹೊತ್ತಿಗೆ ಗ್ರಾಂಥಿಕಭಾಷೆಯಲ್ಲಿಯೂ ಕಂಡುಬರುತ್ತಿತ್ತೆಂದೂ ಊಹಿಸುವುದಕ್ಕೆ ಶಬ್ದಮಣಿದರ್ಪಣದಲ್ಲಿ ಆಧಾರಗಳು ದೊರೆಯುತ್ತವೆ.

ಉದಾ: (1) ೪೮ ನೆಯ ಸೂತ್ರದಲ್ಲಿ

ಯ ರ ಲ ಣ ನ ಳ ಱ ೞ ವರ್ಣೋ
ತ್ಕರಮೆ ವಲಂ ಪದದ ಕಡೆಯೊಳಸ್ವರವಿಧಿಯಂ ।
ಪಿರಿದುಂ ತಾಳ್ದುಗುಮಿವನಱಿ
ವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್ ॥

* ಈಗ ಇಂಗ್ಲಿಷ್ ಶಬ್ದಗಳಿಗೂ ಹೀಗೆಯೇ ಉಕಾರವನ್ನು ಸೇರಿಸುತ್ತೇವೆ. ಉದಾ: ಮೇಷ್ಟರು, ಕಾಲೇಜು. ಧಾರವಾಡದ ಕಡೆ ಅಕಾರವನ್ನು ಸೇರಿಸುತ್ತಾರೆ–ಮಾಸ್ತರ, ಕಾಲೇಜ.

ಎಂದು ಕೇಶಿರಾಜನು ಹೇಳುವುದನ್ನು ನೋಡಿದರೆ ಆ ಕಾಲದಲ್ಲಿ ಕೆಲವರು ಅಂಥ ಶಬ್ದಗಳನ್ನೂ ಸ್ವರಾಂತವಾಗಿ ಪ್ರಯೋಗಿಸುತ್ತಿದ್ದರೆಂದು ತೋರುತ್ತದೆ.

(2) ಧಾತುಪಾಠದಲ್ಲಿ ಕೇಶಿರಾಜನು ಕೊಟ್ಟಿರುವ ಒಳಚು, ತೋಚು ಮೊದಲಾದ ಧಾತುಗಳ ಅಂತ್ಯ ಉಕಾರವು ಮೂಲರೂಪದ್ದಲ್ಲವೆಂದು ಅವುಗಳ ಭೂತ ರೂಪದಿಂದಲೂ ಕೆಲವುವೇಳೆ ಭವಿಷ್ಯದ್ರೂಪದಿಂದಲೂ ಊಹಿಸಬಹುದಾಗಿದೆ.

**4. ವಿಜಾತೀಯ ಸಂಯುಕ್ತಾಕ್ಷರಗಳು**—ಹಳಗನ್ನಡದ ವಿಜಾತೀಯ ಸಂಯುಕ್ತಾಕ್ಷರಗಳು ಹೊಸಗನ್ನಡದಲ್ಲಿ (i) ಕೆಲವು ವೇಳೆ ಸಜಾತೀಯ ಸಂಯುಕ್ತಾಕ್ಷರಗಳಾಗುತ್ತವೆ. ಉದಾ : ಅಱ್ದು > ಅರ್ದು > ಅದ್ದು ; ಗಱ್ದೆ > ಗರ್ದೆ > ಗದ್ದೆ ; ಸೊರ್ಕು > ಸೊಕ್ಕು ; ಕರ್ಪು > ಕಪ್ಪು ; ಪೆರ್ಮೆ > ಹೆಮ್ಮೆ ; ಒರ್ವನ್ > ಒಬ್ಬನ್ > ಒಬ್ಬನು. ಕರ್ವು > ಕರ್ಬು > ಕಬ್ಬು. (ii) ಕೆಲವುವೇಳೆ ಮೊದಲನೆಯ ಅಕ್ಷರಕ್ಕೆ ಸ್ವರವು ಸೇರಿ ಬೇರೆ ಬೇರೆ ಸ್ವರಾಂತಗಳಾದ ಅಕ್ಷರಗಳಾಗುತ್ತವೆ. ಉದಾ : ಬಳ್ಕು > ಬಳುಕು, ನುಣ್ಪು > ನುಣುಪು. ಈ ವಿಧವಾದ ವ್ಯತ್ಯಾಸಗಳು ೧೦ನೆಯ ಶತಮಾನದ ಹೊತ್ತಿಗೇ ಮಾತಿನ ಭಾಷೆಯಲ್ಲಿ ಕಂಡುಬರುತ್ತಿದ್ದುವೆಂದು ತೋರುತ್ತದೆ. ಉದಾಹರಣೆಗೆ ಕ್ರಿ.ಶ. ೯೨೯ರಲ್ಲಿ ಹುಟ್ಟಿದ ಒಂದು ಶಾಸನದಲ್ಲಿ ಕಚ್ಚು (ಕಱ್ಚು) ಎಂಬ ರೂಪವು ದೊರೆಯುತ್ತದೆ. ಕೇಶಿರಾಜನ ಕಾಲಕ್ಕೇ ಗ್ರಾಂಥಿಕಭಾಷೆಯಲ್ಲಿಯೂ ಇವು ರೂಢಿಗೆ ಬರುತ್ತಿದ್ದುವೆಂದು ಊಹಿಸಬಹುದು. ಹಾಗಿಲ್ಲದಿದ್ದರೆ ಉರ್ದು, ಬಿರ್ದು ಮೊದಲಾದ ಶಬ್ದಗಳು ಸರೇಫ ಪದಗಳೆಂದು ತಿಳಿಸಿ ಅಂಥ ಶಬ್ದಗಳ ಪಟ್ಟಿಯನ್ನು (ಸೂತ್ರ ೩೭-೪೧) ಕೇಶಿರಾಜನು ಕೊಡಬೇಕಾದ ಅಗತ್ಯವಿರುತ್ತಿರಲಿಲ್ಲ. ಕಾಣ್ಕೆ, ಪೂಣ್ಕೆ ಮೊದಲಾದುವನ್ನು ಕಾಣಿಕೆ, ಪೂಣಿಕೆ ಎಂದು ಬರೆಯುವುದು ತಪ್ಪೆಂದು ಕೇಶಿರಾಜನು ಹೇಳುವುದನ್ನು ನೋಡಿದರೆ (ಸೂ. ೨೧೧) ಆ ತೆರದ ರೂಪಗಳು ಪ್ರಯೋಗದಲ್ಲಿ ಕಂಡುಬರುತ್ತಿದ್ದುವೆಂದು ಹೇಳಬಹುದು. (iii) ಕೆಲವು ವೇಳೆ ಮೊದಲನೆಯ ಅಕ್ಷರವು ಲೋಪವಾಗುತ್ತದೆ. ಉದಾ : ನಾಣ್ಚು > ನಾಚು, ತೋರ್ಚು > ತೋಚು, ಸೋಲ್ತು > ಸೋತು, ಬಱ್ದುಂಕು > ಬರ್ದುಂಕು > ಬದುಕು. ಹೀಗೆ ಮಧ್ಯೆ ಇದ್ದ ವ್ಯಂಜನವು ಲೋಪವಾಗುವುದಕ್ಕೆ ಕಾರಣವೇನು ? ಹಳಗನ್ನಡ ಕಾಲದಲ್ಲಿಯೋ ಪೂರ್ವದ ಹಳಗನ್ನಡ ಕಾಲದಲ್ಲಿಯೋ ಮಾತುಗಳಲ್ಲಿ ಯಾವುದೋ ಒಂದು ಅಕ್ಷರದ ಮೇಲೆ ಸ್ವರ (accent) ರೂಢಿಯಲ್ಲಿದ್ದು ಅದರ ಪರಿಣಾಮದಿಂದಲೇ ಹೀಗಾಗಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ. ದ್ವಿತ್ವಗಳು ಕೆಲವು ವೇಳೆ ಶೈಥಿಲ್ಯವನ್ನು ಹೊಂದುವುದು ಈ ಮತಕ್ಕೆ ಸಾಧಕವಾಗುವಂತೆ ತೋರುತ್ತದೆ.

ಉದಾ : ಮುಗುಳ್ಗಳ್, ಪೊಗೞ್ಗೆ, ಬುಧರ್ಗೆ, ಎಂಬಲ್ಲಿ ಮೊದಲನೆಯ

ಅಕ್ಷರದ ಮೇಲೆ ಸ್ವರದ ಒತ್ತು ಬಿದ್ದರೆ ಶಿಥಿಲದ್ವಿತ್ವವಾಗುತ್ತದೆ. ಎರಡನೆಯ ಅಕ್ಷರದ ಮೇಲೆ ಬಿದ್ದರೆ ಶಿಥಿಲವಾಗುವುದಿಲ್ಲ.[1]

**5. ಸ್ಥಾನಪಲ್ಲಟ**—ಕೆಲವು ಶಬ್ದಗಳಲ್ಲಿ ವರ್ಣವಿಪರ್ಯಯವು ಕಂಡುಬರುತ್ತದೆ. ಉದಾ: ಅಲರ್ > ಅರ[illegible] ; ನೆಳಲ್ > ನೆರಳು ; ಅಸಗ > ಅಗಸ. ಸ್ವರವು ಮುಂದಿನ ವ್ಯಂಜನದೊಡನೆ ಸೇರುವುದು. ಉದಾ : ಎಹಗೆ > (ಹ. ಎಗೆ ?) > ಹೇಗೆ; ಅಹಗೆ > (ಹ. ಅಗೆ ?) > ಹಾಗೆ; ಅಹುದು > (ಹ. ಉದು ?) > ಹೌದು.

**6. ಲ > ಳ**—ಹಳಗನ್ನಡದಲ್ಲಿ ಲಾಂತವಾಗಿದ್ದ ಅನೇಕ ಶಬ್ದಗಳು ಹೊಸಗನ್ನಡದಲ್ಲಿ ಳಾಂತಗಳಾಗಿ ಪರಿಣಮಿಸುತ್ತವೆ.

ಉದಾ—ಬೆರಲ್ > ಬೆರಳು, ಕೊರಲ್ > ಕೊರಳು.

ಈ ವಿಧವಾದ ವ್ಯತ್ಯಾಸವು ಕೇಶಿರಾಜನ ಕಾಲಕ್ಕೆ ರೂಢಿಗೆ ಬಂದಿದ್ದಂತೆ ಗೊತ್ತಾಗುತ್ತದೆ. ಕೇಶಿರಾಜನು ನಿತ್ಯಲಾಂತಗಳಾದ ಕೊರಲ್, ಬೆರಲ್ ಮೊದಲಾದ ಶಬ್ದಗಳನ್ನು ಗ್ರಾಮ್ಯರು ತಿಳಿವಳಿಕೆಯಿಲ್ಲದೆ ಳಾಂತಗಳಾಗಿ ಉಚ್ಚರಿಸುವರೆಂದು ತಿಳಿಸುತ್ತಾನೆ. ಆತನು ಲಾಂತಗಳೆಂದು ಹೇಳುವ ಶಬ್ದಗಳೆಲ್ಲವೂ ಈಗ ಳಾಂತಗಳಾಗಿ ಪ್ರಯೋಗವಾಗುತ್ತವೆ.

**7. ಬಿಂದುಲೋಪ**—ಹಳಗನ್ನಡದಲ್ಲಿ ಸಬಿಂದುಕವಾಗಿದ್ದ ಅನೇಕ ಶಬ್ದಗಳು ಈಗ ಅಬಿಂದುಕಗಳಾಗಿ ಉಚ್ಚರಿಸಲ್ಪಡುತ್ತವೆ. ಉದಾ: ಬೆಡಂಗು > ಬೆಡಗು ; ಸೆರಂಗು > ಸೆರಗು ; ದಾಂಟು > ದಾಟು ; ಅವುಂಕು > ಅವುಕು > ಔಕು.

ಈ ವಿಧವಾದ ಅನುಸ್ವಾರಲೋಪವು ಕೇಶಿರಾಜನ ಕಾಲಕ್ಕೆ ಹಿಂದೆಯೇ ಆರಂಭವಾಗಿತ್ತು. ಕದಂಪು ಮೊದಲಾದ ಕೆಲವು ಶಬ್ದಗಳು ವಿಕಲ್ಪಬಿಂದುಗಳೆಂದು ಕೇಶಿರಾಜನೇ ಹೇಳಿದ್ದಾನೆ. (ಇಱುಂಪೆ > ಇಱುಪೆ > ಇರುವೆ). ನಿತ್ಯಬಿಂದುಗಳೆಂದು ಆತನು ಹೇಳಿರು ಅನೇಕ ಶಬ್ದಗಳೂ ಈಗ ಅಬಿಂದುಕಗಳಾಗಿ ಪರಿಣಮಿಸಿವೆ.

**8. ಆ, ಏ > ಯಾ ; ಓ > ವಾ**—(ಹಳಗನ್ನಡ) ಆರ್ > (ಹೊಸಗನ್ನಡ) ಯಾರು, ಏಕೆ > ಯಾಕೆ, ಏತರ್ಕೆ > ಯಾತಕ್ಕೆ, ಬೇಡ > ಬ್ಯಾಡ, ಬೇಸರ > ಬ್ಯಾಸರ, ಬೇಟೆ > ಬ್ಯಾಟೆ.

---

[1] ಕನ್ನಡದ ಅವನ್, ಇವನ್, ಎಂಬಿವು ತೆಲುಗಿನಲ್ಲಿ ವಾಡು, ವೀಡು ಎಂಬುದಾಗಿಯೂ, ಅವರ್ ಇವರ್ ಎಂಬಿವು ವಾರು, ವೀರು ಎಂಬುದಾಗಿಯೂ, ಎರಡು ಎಂಬುದು ರೆಂಡು ಎಂಬುದಾಗಿಯೂ, ಆಗದು ಎಂಬುದು ಕಾದು ಎಂಬುದಾಗಿಯೂ ಪ್ರಯೋಗವಾಗುತ್ತವೆ. ತೆಲುಗಿನಲ್ಲಿ ಸ್ವರವು ಅವನ್, ಇವನ್ ಮೊದಲಾದ ಶಬ್ದಗಳ ಎರಡನೆಯ ಅಕ್ಷರದ ಮೇಲೆ ಬೀಳುವುದರಿಂದ ಹೀಗಾಗುವುದೆಂದು ಕೆಲವರು ಊಹಿಸುತ್ತಾರೆ.

ಕೋಪ > ಕ್ವಾಪ, ಓಟ > ವಾಟ, ಓರೆ > ವಾರೆ, ತೋಟ > ತ್ವಾಟ. ಗ್ರಂಥಸ್ಥಭಾಷೆಯಲ್ಲಿ ಯಾರು, ಯಾಕೆ,·ಯಾತಕ್ಕೆ ಎಂಬ ರೂಪಗಳು ತಲೆದೋರುತ್ತಿವೆ. ಮಿಕ್ಕವು ಮಾತಿನ ಭಾಷೆಯಲ್ಲಿ ಮಾತ್ರ ಇವೆ. ಅವುಗಳನ್ನು ಇಲ್ಲಿ ಉದಹರಿಸಿರುವುದು ಅಂಥ ಪ್ರಯೋಗಗಳು ಗ್ರಾಂಥಿಕಪ್ರಯೋಗಕ್ಕೆ ಅರ್ಹವೆಂಬುದಕ್ಕಲ್ಲ; ಉಚ್ಚಾರಣೆಯ ಪರಿಣಾಮಗಳನ್ನು ತೋರಿಸುವುದಕ್ಕೆ.

## ೬. ಶಬ್ದಪ್ರಕರಣ

**ದೇಶ್ಯಗಳು, ಅನ್ಯದೇಶ್ಯಗಳು :** ಕನ್ನಡ ಭಾಷೆಯಲ್ಲಿರುವ ಶಬ್ದಗಳನ್ನು ತತ್ಸಮ, ತದ್ಭವ, ದೇಶ್ಯ, ಅನ್ಯದೇಶ್ಯ ಎಂದು ನಾಲ್ಕು ಪಂಗಡಗಳಾಗಿ ವಿಭಾಗಿಸುವ ರೂಢಿ ಇದೆ. ಇವಲ್ಲದೆ ಮತ್ತೊಂದು ಜಾತಿಯ ಶಬ್ದಗಳು ಕನ್ನಡ ಭಾಷೆಯಲ್ಲಿರುವುವೆಂದು ಕೇಶಿರಾಜನು ಅಭಿಪ್ರಾಯಪಡುವಂತೆ ತೋರುತ್ತದೆ. ಆತನ ಶಬ್ದಮಣಿದರ್ಪಣದ ೨೯೭, ೨೯೮ ನೆಯ ಸೂತ್ರಗಳಲ್ಲಿ ಮಣಿ, ಮಂಚ, ಪಟ್ಟ, ತೋರಣ ಮೊದಲಾದ ೨೧ ಶಬ್ದಗಳನ್ನು ತಿಳಿಸಿ ಅವುಗಳಿಗೆ ತತ್ಸಮ ಎಂಬ ಹೆಸರನ್ನು ಕೊಟ್ಟು "ಈ ಶಬ್ದಂಗಳ್ ಸಂಸ್ಕೃತಕ್ಕಂ ಕನ್ನಡಕ್ಕಂ ಸರಿ" ಎಂದು ಹೇಳಿದ್ದಾನೆ. ಈ ರೂಢಿಯ ವಿಭಾಗವು ಹೇಗಾದರೂ ಇರಲಿ. ಭಾಷಾಶಾಸ್ತ್ರ ದೃಷ್ಟಿಯಿಂದ ಕನ್ನಡ ಭಾಷೆಯಲ್ಲಿ ಕಂಡುಬರುವ ಶಬ್ದಗಳನ್ನು ದೇಶ್ಯಗಳು, ಅನ್ಯದೇಶ್ಯಗಳು ಎಂದು ಎರಡು ಪಂಗಡಗಳಾಗಿ ವಿಭಾಗಿಸಬಹುದು. ತತ್ಸಮ ತದ್ಭವಗಳು ಸಂಸ್ಕೃತದಿಂದ ಕನ್ನಡಕ್ಕೆ ಬಂದುವು. ಆದುದರಿಂದ ಅವು ಅನ್ಯದೇಶ್ಯಗಳು. ಮಿಕ್ಕ ಅನ್ಯದೇಶ್ಯಗಳಿಗಿಂತಲೂ ಅವು ಹಿಂದಿನಿಂದಲೂ ವಿಶೇಷವಾಗಿ ಕನ್ನಡಕ್ಕೆ ಸೇರಿ ಪ್ರಾಮುಖ್ಯತೆಯನ್ನು ಹೊಂದಿರುವುದರಿಂದಲೂ ಸಂಸ್ಕೃತವೇ ಕನ್ನಡಕ್ಕೆ ಮಾತೃಭಾಷೆಯೆಂಬ ಅಭಿಪ್ರಾಯವು ಇದ್ದುದರಿಂದಲೂ ಅವಕ್ಕೆ ಪ್ರತ್ಯೇಕಸ್ಥಾನವು ದೊರೆತಿದೆ. ಇದನ್ನು ಅನುಸರಿಸಿ ಅನ್ಯದೇಶ್ಯಗಳನ್ನು ಸಂಸ್ಕೃತದಿಂದ ಬಂದುವು, ಇತರ ಭಾಷೆಗಳಿಂದ ಬಂದುವು ಎಂದು ಎರಡು ಭಾಗ ಮಾಡಬಹುದು.

**ದೇಶ್ಯಶಬ್ದಗಳ ಉತ್ಪತ್ತಿ :** ದೇಶ್ಯಶಬ್ದಗಳೆಂದರೆ ಒಂದು ಭಾಷೆಯ ಸ್ವಂತ ಶಬ್ದಗಳು. ಎಂದರೆ ಆ ಭಾಷೆಯನ್ನಾಡುವ ಜನರಿಂದಲೇ ಕಲ್ಪಿತವಾದವು. ಕೇವಲ ಅನಾಗರಿಕ ಸ್ಥಿತಿಯಲ್ಲಿರುವ ಜನರೂ ಒಬ್ಬರೊಡನೊಬ್ಬರು ಮಾತನಾಡುತ್ತಾರೆ. ಹಾಗೆ ಮಾತನಾಡುವಾಗ ತಮ್ಮ ಮನಸ್ಸಿನ ಅಭಿಪ್ರಾಯಗಳನ್ನು ಇತರರಿಗೆ ತಿಳಿಸಲು ಕೆಲವು ಶಬ್ದಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಅವುಗಳನ್ನು ಹೇಗೆ ಕಲ್ಪಿಸಿಕೊಳ್ಳುತ್ತಾರೆಂದು ನಿರ್ಧರಿಸುವುದು ಕಷ್ಟ. ಒಂದು ಮತದವರು ಭಾಷೆಯ ಶಬ್ದಗಳು ಅನುಕರಣದಿಂದ ಹುಟ್ಟುತ್ತವೆಂದು ಹೇಳುತ್ತಾರೆ. ಉದಾಹರಣೆಗೆ ಎರಡು ಪಕ್ಷಿಗಳ ಹೆಸರುಗಳನ್ನು ತೆಗೆದುಕೊಳ್ಳಬಹುದು. ಒಂದು ಪಕ್ಷಿ ಕಾ, ಕಾ ಎಂದು ಕೂಗುತ್ತದೆ; ಮತ್ತೊಂದು ಗೂ, ಗೂ ಎಂದು ಕೂಗುತ್ತದೆ. ಮೊದಲನೆಯದನ್ನು ಕಾಗೆ ಎಂದೂ, ಎರಡನೆಯದನ್ನು ಗೂಗೆ ಎಂದೂ ಜನರು ಕರೆದರು. ಶಬ್ದಗಳು ಹುಟ್ಟುವುದು ಹೀಗೆಯೇ ಎಂದು ಅವರು ಹೇಳುತ್ತಾರೆ. ಆದರೆ ಯಾವ ಭಾಷೆಯಲ್ಲಾಗಲಿ ಇಂಥ ಶಬ್ದಗಳು ಇರುವುದು ಕೆಲವು ಮಾತ್ರ. ಹೆಚ್ಚು ಶಬ್ದಗಳಿಗೆ ಜನರು ಅರ್ಥವನ್ನು ಹೇಗೆ ಕಲ್ಪಿಸಿಕೊಂಡರೋ ಹೇಳುವುದು ಅಸಾಧ್ಯ.

**ದೇಶ್ಯಶಬ್ದಗಳ ಬೆಳೆವಳಿಗೆ—ಕೃದಂತ ತದ್ಧಿತಾಂತಗಳು—ಸಮಾಸ**

**ಶಬ್ದಗಳು** : ಮೊದಲು ಮೊದಲು ಜನರು ಶಬ್ದಗಳನ್ನು ಕಲ್ಪಿಸುತ್ತಾ ಹೋಗುತ್ತಾರೆ. ಕೆಲವು ಕಾಲವಾದಮೇಲೆ ಹೀಗೆ ಹೊಸಹೊಸ ಶಬ್ದಗಳನ್ನು ಕಲ್ಪಿಸುವುದನ್ನು ನಿಲ್ಲಿಸಿ, ಇದ್ದ ಭಾಷಾಸಾಮಗ್ರಿಯನ್ನೇ ಉಪಯೋಗಿಸಿಕೊಂಡು ಆದರಿಂದ ಶಬ್ದಕೋಶವನ್ನು ಬೆಳೆಸುತ್ತಾರೆ. ಇದನ್ನು ಎರಡು ವಿಧವಾಗಿ ಮಾಡುತ್ತಾರೆ.

೧. ಮೂಲಶಬ್ದಗಳಿಗೆ ಪ್ರತ್ಯಯಗಳನ್ನು ಹತ್ತಿಸುವುದರಿಂದ—

ಉದಾ : ಹಾಡು, ಹಾಡುಗಾರ, ಹಾಡುಗಾರಿಕೆ, ಹಾಡಿದವನು, ಹಾಡಿದುದು. ಕೃದಂತ ತದ್ಧಿತಾಂತಗಳೆಲ್ಲವೂ ಈ ತೆರದ ಶಬ್ದಗಳು. ಕೆಲವು ಶಬ್ದಗಳಿಗಿರುವ ರೂಪ ಸಾದೃಶ್ಯವನ್ನೂ ಅರ್ಥಸಾದೃಶ್ಯವನ್ನೂ ನೋಡಿದರೆ ಅವೆಲ್ಲವೂ ಒಂದೇ ಮೂಲಶಬ್ದದ ರೂಪಭೇದಗಳೆಂದು ಗೊತ್ತಾಗುತ್ತದೆ.

ಉದಾ : ಹಂಗು, ಪಾಂಗು, ಹಂಚು, ಹಕ್ಕು, ಹಗೆ, ಹಗಲು; ಬಗೆ, ಬಗಿ—
ಇವೆಲ್ಲಕ್ಕೂ *ಪಕ್ (= ಭೇದಿಸು) ಎಂಬ ಅರ್ಥವುಳ್ಳ ಮೂಲ ಧಾತುವೊಂದು ಇರಬೇಕೆಂದು ತೋರುತ್ತದೆ.

ಹಾಗೆಯೇ ಮುಚ್ಚು, ಮುಸುಕು, ಮುಸುಂಬು, ಮುಗಿಲ್, ಮುಗುಳ್, ಮೊಗ್ಗು, ಮೊಗೆ ಇವೆಲ್ಲವೂ *ಮುಕ್ (=ಮುಚ್ಚಿಕೊಳ್ಳುವುದು) ಎಂಬ ಒಂದೇ ಮೂಲ ಧಾತುವಿನಿಂದ ಹುಟ್ಟಿದುವೆಂದು ತೋರುತ್ತದೆ.

೨. ಎರಡು ಮೂರು ಶಬ್ದಗಳನ್ನು ಸೇರಿಸಿ ಸಮಾಸಶಬ್ದವನ್ನು ಕಲ್ಪಿಸುವುದರಿಂದ—

ಉದಾ : ಬೆಳ್ದಿಂಗಳ್, ಕರ್ಬೊನ್, ಕಣ್ಣೀರ್, ಕಣ್ಬನಿ.

ಕೆಲವು ವೇಳೆ ಶಬ್ದಗಳು ಎಷ್ಟುಮಟ್ಟಿಗೆ ಸೇರಿಹೋಗುತ್ತವೆಯೆಂದರೆ ಸಮಾಸ ಶಬ್ದವನ್ನು ನೋಡಿದರೆ ಅದರಲ್ಲಿ ಎರಡು ಮೂಲಶಬ್ದಗಳು ಸೇರಿವೆಯೆಂದು ಸುಲಭವಾಗಿ ಗೊತ್ತಾಗುವುದಿಲ್ಲ.

ಉದಾ : ಎಣ್ಣೆ (ಎಳ್+ನೆಯ್), ಬೆಣ್ಣೆ (ಬೆಳ್+ನೆಯ್), ಕಬ್ಬುನ, ಕಬ್ಬಿಣ, (ಕರ್+ಪೊನ್) ಇತ್ಯಾದಿ.

ಅನ್ಯಭಾಷಾ ಜನರೊಂದಿಗೆ ಸಂಸರ್ಗವಾದಾಗ ಹೊಸ ಹೊಸ ಶಬ್ದಗಳಿಗೂ ಅಭಿಪ್ರಾಯಗಳಿಗೂ ಸಂಬಂಧಿಸಿದ ಅನ್ಯಭಾಷಾಶಬ್ದಗಳು ಬಂದು ಸೇರಬಹುದು. ಆಗಲೂ ಜನರು ಸಾಧ್ಯವಾದಮಟ್ಟಿಗೂ ತಮ್ಮ ಭಾಷೆಯಲ್ಲಿರುವ ಶಬ್ದಗಳನ್ನೇ ಜೋಡಿಸುತ್ತಾರೆ. ಇಂಥ ಎಷ್ಟೋ ಮಾತುಗಳನ್ನು ಕನ್ನಡಜನರು ಕಲ್ಪಿಸಿದ್ದಾರೆ.

ಉದಾ : ಅಜಮಗಂ (= ಧರ್ಮಪುತ್ರ), ತಱಿಸಲ್ (= ಪರಿಚ್ಛೇದಿಸು),
ನೀರ್ವೆಣ್ (= ಜಲದೇವತೆ), ಮುಪ್ಪೊಟಿಲ್ (= ತ್ರಿಪುರ),
ಗುಂಡುಸೂಜಿ, ಕಾಲುಚೀಲ, ಕಲ್ಲಿದ್ದಲು, ಒತ್ತುಕಾಗದ,
ಮುನ್ನುಡಿ ಇತ್ಯಾದಿ.

೩. ಭ್ರಾಂತಿಯಿಂದ ಕೆಲವು ವೇಳೆ ಹೊಸ ಧಾತುಗಳು ಹುಟ್ಟುತ್ತವೆ—

ಉದಾ : ಪಸಿದು, ಕುಸಿದು—ಈ ಸಾಮ್ಯದಿಂದ ನುಸುಳ್ದು > ನುಸುದು > ನುಸಿದು (ಧಾತು—ನುಸಿ). ಧಾತು ಹೊದಿ, ಒದಿ—ಈ ಸಾಮ್ಯದಿಂದ ಪೊದೆದು > ಹೊದೆದು > ಹೊದ್ದು ; ಒದೆದು > ಒದ್ದು. ಕಳ್ದು > ದ್ದು > (ಧಾತು—ಕದಿ).

**ದೇಶ್ಯಶಬ್ದಗಳು—ಅರ್ಥವ್ಯತ್ಯಾಸ :** ದೇಶ್ಯಶಬ್ದಗಳು ಮೇಲೆ ಹೇಳಿದಂತೆ ಬೆಳೆಯುವುದಲ್ಲದೆ ಕೆಲವುವೇಳೆ ಶಬ್ದಗಳ ಅರ್ಥವು ಕಾಲಕ್ರಮದಲ್ಲಿ ಹೆಚ್ಚುಕಡಮೆಯಾಗುತ್ತದೆ. ಹೀಗಾಗುವುದಕ್ಕೆ ಕಾರಣವೇನೆಂಬುದನ್ನು ನಿರ್ಧರಿಸುವುದು ಕಷ್ಟ. ಅರ್ಥವ್ಯತ್ಯಾಸವು ಮುಖ್ಯವಾಗಿ ಮೂರು ಬಗೆಗಳಲ್ಲಿ ಆಗುತ್ತದೆ. ಆ ಬಗೆಗಳು ಯಾವುವೆಂದರೆ :

## 1. ಅರ್ಥದ ವ್ಯಾಪ್ತಿಯು ಸಂಕುಚಿತವಾಗುವುದು

ಉದಾ : ೧. ಒಡವೆ. ಈ ಮಾತು ಒಡೆ (=ಪಡೆದಿರು) ಎಂಬ ಧಾತುವಿನಿಂದ ಬಂದಿದೆ. (ಒಡೆಯ ಎಂಬಲ್ಲಿ ಈ ಅರ್ಥವಿದೆ). ಆದುದರಿಂದ ಈ ಮಾತಿಗೆ ಒಬ್ಬ ಮನುಷ್ಯನಿಗೆ ಸೇರಿದ ಪದಾರ್ಥಗಳು ಅಥವಾ "ಆಸ್ತಿ" ಎಂಬ ಅರ್ಥವಿರಬೇಕು. ಈಗ "ಆಭರಣ" ಎಂಬ ಅರ್ಥದಲ್ಲಿ ಈ ಶಬ್ದವು ಪ್ರಯೋಗವಾಗುತ್ತದೆ. ಕೆಲವು ರೂಢಿ ಪ್ರಯೋಗಗಳಲ್ಲಿ ಮಾತ್ರ ಹಿಂದಿನ ಅರ್ಥವು ನಿಂತಿರುತ್ತದೆ—

ಉದಾ : ಒಬ್ಬರ ಒಡವೆಗೆ ಆಸೆಪಡಬಾರದು.

೨. ನುಡಿ = ಮಾತನಾಡು. ಈಗ ಅವಲಕ್ಷಣದ ಮಾತು ಎಂಬ ಅರ್ಥ ಬಂದಿದೆ. ಹಾಗೆಯೇ ಹಾಡಿನ ಒಂದು ಭಾಗಕ್ಕೆ ಮಾತ್ರ ನುಡಿ ಎಂಬ ಹೆಸರು ಬಂದಿದೆ.

೩. ಅಣಕ=ಈ ಶಬ್ದದ ಮೂಲಾರ್ಥವು ಕಾಟ ಎಂದು ; ಈ ಶಬ್ದದಿಂದಲೇ ಹುಟ್ಟಿರುವ ಅಣಕಿಸು ಎಂಬ ಪದಕ್ಕೆ ಈಗ ಸಂಕುಚಿತವಾದ ಅರ್ಥವಿದೆ.

೪. ಕುರುಬ ಎಂದರೆ ಬೆಟ್ಟದಲ್ಲಿ ವಾಸಮಾಡುವವನು ಎಂದು ಮೂಲಾರ್ಥ : ಈಗ ಒಂದು ಜಾತಿಯವನಿಗೆ ಮಾತ್ರ ಆ ಹೆಸರು ಸಲ್ಲುತ್ತದೆ.

೫. ಆಳ್ ಎಂಬ ಶಬ್ದದ ಅರ್ಥ ಮನುಷ್ಯ ಎಂಬುದಾಗಿ. ಈಗ ಸೇವಕ ಎಂದು ಅರ್ಥವಾಗುತ್ತದೆ.

೬. ಪೊನ್—ಈ ಶಬ್ದದ ಮೂಲಾರ್ಥವು "ಲೋಹ" ಎಂದು.

ಉದಾ : ಕಬ್ಬುನ (ಕರ್+ಪೊನ್=ಕರಿಯ ಲೋಹ) ಚೆಂಬೊನ್ (ಕೆಂಪನೆಯ ಲೋಹ).

ಇದಕ್ಕೆ ನಾಣ್ಯವಿಶೇಷವೆಂದೂ ಚಿನ್ನವೆಂದೂ ಅರ್ಥವಿದೆ.

೭. ಹೀಗೆಯೇ ಕಂಪು, ಹೆಮ್ಮೆ, ಅಮ್ಮಂದಿರು, ಮುದ್ದು.

## 2. ವಸ್ತುವಿನ ಹೆಸರು ಭಾವಕ್ಕೆ ವ್ಯಾಪಿಸುವುದು

ಉದಾ : ೧. ತಲೆ=ದೇಹದ ಒಂದು ಅಂಗ; ಜನಸಂತತಿಯ ಕಾಲವನ್ನೂ, ಮುಖ್ಯತ್ವವನ್ನೂ ಸೂಚಿಸುತ್ತದೆ.

೨. ಕುದಿ=ನೀರು ಕುದಿಯುವುದು; ಮನಸ್ಸಿನಲ್ಲಿ ವ್ಯಥೆಪಡು ಎಂತಲೂ ಅರ್ಥವಾಗುತ್ತದೆ.

೩. ಕಜ಼್=ಕಪ್ಪು; ಪಾಪ ಎಂದೂ ಅರ್ಥವಾಗುತ್ತದೆ.

೪. ಕಟ್ಟು=ಬಂಧನ; ನಿಯಮ, ಕಾನೂನು ಎಂದೂ ಅರ್ಥವಾಗುತ್ತದೆ.

೫. ಒಕ್ಕಟ್ಟು—ಮೂಲಾರ್ಥ ಒಂದು ಕಟ್ಟು (ಒರ್+ಕಟ್ಟು). ಈಗ ಐಕಮತ್ಯವೆಂಬ ಅರ್ಥ ಬಂದಿದೆ.

೬. ಮಂಕು—ಮೂಲಾರ್ಥ ಕಾಂತಿಹೀನವಾಗಿರುವುದು. ಈಗ ಬುದ್ಧಿ ಕಡಮೆಯಾಗಿರುವುದು ಎಂಬ ಅರ್ಥ ಬಂದಿದೆ.

## 3. ಒಂದು ಶಬ್ದವು ಅದರ ಮೂಲಾರ್ಥಕ್ಕೆ ಸಂಬಂಧಿಸಿದ ಮತ್ತೊಂದು ಅರ್ಥದಲ್ಲಿ ಪ್ರಯೋಗವಾಗುವುದು

ಉದಾ: ೧. ಮೆಟ್ಟು—ಮೂಲಾರ್ಥ—ತುಳಿ, ಮೆಟ್ಟುವುದಕ್ಕೆ ಸಾಧನವಾದ ಪಾದರಕ್ಷೆಗೂ ಈ ಹೆಸರು ಬಂದಿದೆ.

೨. ಕೆರೆ—(ಸೆರೆ ಎಂಬುದು ಇದರ ಮತ್ತೊಂದು ರೂಪ) ಮೂಲಾರ್ಥ ಅಡ್ಡಿ. ಪ್ರತಿಬಂಧಕ; ಅದರಿಂದ ಏರಿ. ಉದಾ : ಕೆರೆ ಕಟ್ಟಿಸು; ಕೆರೆ ಒಡೆಯಿಸು. ಆಮೇಲೆ ನೀರಿನ ಭಾಗಕ್ಕೇ ಅನ್ವಯಿಸುತ್ತದೆ.

೩. ಮರ—ಇದರ ಮೂಲಾರ್ಥ ಗಿಡ. ಈಗ ಪದಾರ್ಥವಿಶೇಷ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತದೆ—ಮರದ ಬಾಚಣಿಗೆ.

೪. ಮುಡಿ—ಮೂಲಾರ್ಥ, ಶಿಖರ (ಆನೆಮುಡಿ). ಬಳಿಕ, ತಲೆಯಕೂದಲು, ಹೂವನ್ನು ಮುಡಿಯುವುದು. ಕಿರೀಟ ಎಂಬ ಅರ್ಥವೂ ಉಂಟು. (ವೈರಮುಡಿ).

೫. ಗಾಳಿ=ವಾಯು, ಪಿಶಾಚಿ.

**ಅನ್ಯದೇಶ್ಯಗಳು :** ಕನ್ನಡ ಭಾಷೆಗೆ ಸೇರಿರುವ ಅನ್ಯದೇಶ್ಯಗಳಲ್ಲಿ ಮುಖ್ಯವಾದುವು ಸಂಸ್ಕೃತ ಪ್ರಾಕೃತ ಶಬ್ದಗಳು, ಹಿಂದೂಸ್ಥಾನಿ ಶಬ್ದಗಳು, ಮತ್ತು ಇಂಗ್ಲಿಷ್ ಪೋರ್ಚುಗೀಸ್ ಶಬ್ದಗಳು. ಇವು ಬೇರೆ ಬೇರೆ ಕಾಲಗಳಲ್ಲಿ ಆ ಭಾಷೆಯನ್ನಾಡುವ ಜನರೊಂದಿಗೆ ಕನ್ನಡಿಗರಿಗುಂಟಾದ ಸಂಸರ್ಗದಿಂದ ಬಂದವು. ಕನ್ನಡಿಗರಿಗೆ ಅತ್ಯಂತ ಪ್ರಾಚೀನ ಕಾಲದಲ್ಲೇ ಆರ್ಯರ, ಸುಮಾರು ೧೪ನೆಯ ಶತಮಾನದಿಂದ ಮಹಮ್ಮದೀಯರ, ಈಚೆಗೆ ಪಾಶ್ಚಾತ್ಯರ ಸಂಸರ್ಗವುಂಟಾಯಿತು. ಆಯಾ ಸಂಸರ್ಗದ ರೀತಿಗಾಢತೆಗಳಿಗನುಸಾರವಾಗಿ ಅನ್ಯಭಾಷಾಶಬ್ದಗಳು ಕನ್ನಡಕ್ಕೆ ಸೇರಿವೆ.

**ಆರ್ಯರೊಡನೆ ಕನ್ನಡಿಗರೊಡನೆ ಆದ ಸಂಸರ್ಗ** :—ಕನ್ನಡ ಜನರಿಗೆ ಮೊದಲು ಸಂಸರ್ಗವಾದುದು ಆರ್ಯರೊಂದಿಗೆ. ಅವರು ಬಹುಪ್ರಾಚೀನಕಾಲ ದಲ್ಲಿಯೇ ದಕ್ಷಿಣಕ್ಕೆ ಬಂದು ಇಲ್ಲಿ ಆರ್ಯನಾಗರಿಕತೆಯನ್ನು ಪ್ರಸಾರಮಾಡಿದರು, ವೇದಮತಾವಲಂಬಿಗಳೂ ಜೈನರೂ ಬೌದ್ಧರೂ ಈ ದೇಶಕ್ಕೆ ಬಂದು ತಮ್ಮ ತಮ್ಮ ಮತಗಳನ್ನು ಕನ್ನಡ ಜನರಿಗೆ ಬೋಧಿಸಿದರು. ನಮ್ಮ ದೇಶದಲ್ಲಿ ಮತಧರ್ಮಕ್ಕೂ ಸಮಾಜವ್ಯವಸ್ಥೆಗೂ ಸಂಬಂಧವಿರುವುದರಿಂದ ಆರ್ಯರ ಸಾಮಾಜಿಕ ವ್ಯವಸ್ಥೆಯೂ ಇಲ್ಲಿ ನೆಲೆಸಿರುತ್ತದೆ. ರಾಜಕೀಯ ದೃಷ್ಟಿಯಿಂದಲೂ ಆರ್ಯರ ಪ್ರಭಾವವು ಕರ್ಣಾಟಕದ ಮೇಲೆ ಬಿದ್ದಿತ್ತು. ಅಶೋಕಮೌರ್ಯನ ಕಾಲದಲ್ಲಿ ಕರ್ಣಾಟಕದ ಕೆಲವು ಪ್ರಾಂತಗಳು ಆತನ ಚಕ್ರಾಧಿಪತ್ಯಕ್ಕೆ ಒಳಪಟ್ಟಿದ್ದಿರಬಹುದೆಂದು ಈ ದೇಶದಲ್ಲಿರುವ ಆತನ ಶಾಸನಗಳಿಂದ ಊಹಿಸಬಹುದಾಗಿದೆ. ಕೆಲವು ಶತಮಾನಗಳವರೆಗೂ ಪ್ರಾಕೃತವು ಈ ದೇಶದಲ್ಲಿ ರಾಜಭಾಷೆಯಾಗಿದ್ದಂತೆ ಕಾಣುತ್ತದೆ. ಈ ದೇಶದಲ್ಲಿ ದೊರೆಯುವ ಪ್ರಾಚೀನ ಪ್ರಾಕೃತಶಾಸನಗಳೇ ಇದಕ್ಕೆ ಸಾಕ್ಷಿಗಳಾಗಿವೆ. ಪ್ರಾಕೃತ ಭಾಷೆಗಳಲ್ಲೊಂದಾದ ಮರಾಠಿಯನ್ನು ಮಾತನಾಡುವ ಮಹಾರಾಷ್ಟ್ರರ ಸಂಸರ್ಗವು ಕನ್ನಡಿಗರಿಗೆ ಮೊದಲಿಂದಲೂ ಇತ್ತು. ಈ ಮಹಾರಾಷ್ಟ್ರರು ಕಾಲಕ್ರಮವಾಗಿ ಕರ್ಣಾಟಕದ ಕೆಲವು ಪ್ರಾಂತಗಳನ್ನು ಆವರಿಸಿದರು. ಹಿಂದೆ ಕರ್ಣಾಟಕದ ಭಾಗ ವಾಗಿದ್ದ ಕೆಲವು ಪ್ರಾಂತಗಳು ಈಗ ಮಹಾರಾಷ್ಟ್ರವಾಗಿ ಪರಿಣಮಿಸಿರುವುದೇ ಇದಕ್ಕೆ ದೃಷ್ಟಾಂತವಾಗಿದೆ. ಹೀಗೆ ಸಂಸ್ಕೃತ ಪ್ರಾಕೃತಗಳ ಗಾಢವಾದ ಸಂಸರ್ಗವು ಬಹು ಪ್ರಾಚೀನಕಾಲದಿಂದಲೂ ಕನ್ನಡಕ್ಕೆ ಆಗಿರುವುದರಿಂದ ಧರ್ಮ, ನೀತಿ, ಮತತತ್ತ್ವ, ಶಾಸ್ತ್ರ, ಸಮಾಜ, ಸಾಹಿತ್ಯ, ರಾಜ್ಯ, ಈ ವಿಷಯಗಳಿಗೆ ಸಂಬಂಧಿಸಿದ ಅನೇಕಾನೇಕ ಸಂಸ್ಕೃತ ಪ್ರಾಕೃತ ಶಬ್ದಗಳು ಕನ್ನಡಕ್ಕೆ ಸೇರಿಹೋಗಿವೆ.

**ಸಂಸ್ಕೃತ-ಪ್ರಾಕೃತಶಬ್ದಗಳು** : ಗ್ರಾಂಥಿಕ ಭಾಷೆಯಲ್ಲಿ ಅನೇಕ ಸಂಸ್ಕೃತ ಶಬ್ದಗಳು ಸೇರಿವೆ. ಮೊದಲು ಮೊದಲು ಗ್ರಂಥಗಳನ್ನು ಬರೆದವರು ಮುಖ್ಯವಾಗಿ ಸಂಸ್ಕೃತದಲ್ಲಿ ಪಂಡಿತರಾಗಿದ್ದುದರಿಂದಲೂ ಆ ಕಾಲದಲ್ಲಿ ಸಂಸ್ಕೃತಕ್ಕೆ ಕನ್ನಡಕ್ಕಿಂತಲೂ ನೂರರಷ್ಟು ಹೆಚ್ಚಾಗಿ ಗೌರವವು ಇದ್ದುದರಿಂದಲೂ ಪಾಂಡಿತ್ಯಪ್ರದರ್ಶನಕ್ಕಾಗಿಯೂ ಕೆಲವು ವೇಳೆ ಪದ್ಯರಚನೆಯ ಆವಶ್ಯಕತೆಯಿಂದಲೂ ಮೂಟೆಗಟ್ಟಳೆ ಸಂಸ್ಕೃತ ಶಬ್ದ ಗಳನ್ನು ಕನ್ನಡ ಗ್ರಂಥದಲ್ಲಿ ತಂದು ಸುರಿದಿದ್ದಾರೆ. ಕನ್ನಡ ಜನರು ಆಡುವ ಭಾಷೆ ಯಲ್ಲಿ ಸಂಸ್ಕೃತ ಮಾತುಗಳು ಸೇರದೇ ಹೋಗಿಲ್ಲ; ಆದರೆ ಅಷ್ಟಿಲ್ಲ. ಜನರು ತಮಗೆ ಆರ್ಯರಿಂದ ತಿಳಿದುಬಂದ ಹೊಸ ವಸ್ತುಗಳು ಹೊಸಭಾವಗಳು ಮತ್ತು ಹೊಸ ಅಭಿಪ್ರಾಯಗಳು ಇವುಗಳಿಗೆ ಸಂಬಂಧಿಸಿದ ಅತ್ಯಾವಶ್ಯಕವಾದ ಕೆಲಕೆಲವು ಮಾತು ಗಳನ್ನು ಆರ್ಯರಿಂದ ಸಂಗ್ರಹಿಸಿದರು; ಆದರೆ ಅವರು ಹಾಗೆ ಸಂಗ್ರಹಿಸಿದುದು ಗ್ರಂಥಗಳಿಂದಲ್ಲ; ಆರ್ಯರು ಮಾತನಾಡುತ್ತಿದ್ದ ಪ್ರಾಕೃತಭಾಷೆಯಿಂದ. ಹಳಗನ್ನಡ ದಲ್ಲಿ ಕಂಡುಬರುವ ತದ್ಭವಗಳು ಸಂಸ್ಕೃತ ನಾಟಕದಲ್ಲಿಯೂ ಪ್ರಾಕೃತ ವ್ಯಾಕರಣ

ಗಳಲ್ಲಿಯೂ ಕಂಡುಬರುವ ಪ್ರಾಕೃತ ಶಬ್ದಗಳನ್ನು ಹೋಲುತ್ತವೆ. ಕೆಲವು ಕಾಲಾನಂತರ ಜನರು ಅವನ್ನು ಅನ್ಯಭಾಷಾ ಶಬ್ದಗಳೆಂದು ಭಾವಿಸುವುದನ್ನೇ ಬಿಟ್ಟರು. ವ್ಯಾಕರಣಗಳಲ್ಲಿ ತದ್ಭವಗಳೆಂದು ಕರೆಯಲ್ಪಡುವ ಶಬ್ದಗಳು ಸಂಸ್ಕೃತಜನ್ಯಗಳಾದರೂ ಅವು ಅಚ್ಚಗನ್ನಡವೆಂದೇ ಪರಿಗಣಿತವಾಗಿವೆ. ಅಚ್ಚಗನ್ನಡದಲ್ಲಿಯೇ ಕಬ್ಬಿಗರ ಕಾವವನ್ನು ಬರೆದ ಆಂಡಯ್ಯನು ತದ್ಭವಗಳನ್ನು ಧಾರಾಳವಾಗಿ ಪ್ರಯೋಗಿಸಿದ್ದಾನೆ.

ಆರಂಬ, ನೊಗ, ಬಸವ, ಗಂಟು, ಬೀದಿ, ಗಾಜು, ಜೋಗಿ. ಬೈರಾಗಿ, ಬಂಜೆ, ಜೂಜು, ಬತ್ತಿ, ಬೆತ್ತ, ಹಗ್ಗ, ಸಂಜೆ, ನಿದ್ದೆ, ಆಣೆ, ಸೊನ್ನೆ, ದೆಸೆ, ಅಜ್ಜ, ಸೊಸೆ, ಗಣಿ, ಅಚ್ಚು-ಮುಂತಾದ ಎಷ್ಟೋ ಶಬ್ದಗಳು ಸ್ವರೂಪದಲ್ಲಿ ಅಚ್ಚಗನ್ನಡವಲ್ಲವೆಂದು ತೋರುವ ಹಾಗೆ ಇಲ್ಲ.

**ನೀರ್, ಮೀನ್ ಮೊದಲಾದ ಶಬ್ದಗಳು—ಡಾಕ್ಟರ್ ಕಾಲ್ಡ್ವೆಲ್ ಸಾಹೇಬರ ಅಭಿಪ್ರಾಯ**—ನೀರ್, ಮೀನ್ ಈ ಶಬ್ದಗಳು ನೀರ, ಮೀನ ಎಂಬ ಸಂಸ್ಕೃತ ಶಬ್ದಗಳಿಂದ ಹುಟ್ಟಿದ ತದ್ಭವಗಳೆಂದು ವ್ಯಾಕರಣಗಳಲ್ಲಿ ಹೇಳಿದೆ. ಡಾಕ್ಟರ್ ಕಾಲ್ಡ್ವೆಲ್ ಸಾಹೇಬರು ಇವು ದೇಶ್ಯ (ದ್ರಾವಿಡ) ಶಬ್ದಗಳೆಂದೂ ಸಂಸ್ಕೃತದವರು ಈ ಶಬ್ದಗಳನ್ನು ದ್ರಾವಿಡಭಾಷೆಯಿಂದ ಸೇರಿಸಿಕೊಂಡರೆಂದೂ ಹೇಳುತ್ತಾರೆ. ಉದಾ: ಕೋಟೆ (ಕೋಂಟೆ-ಇದನ್ನು ತತ್ಸಮವೆಂದು ಕೇಶಿರಾಜನು ಹೇಳಿರುತ್ತಾನೆ.) ಮಲಯ (ದ್ರಾವಿಡದ ಮಲೆ=ಬೆಟ್ಟ ಎಂಬುದರಿಂದ ಹುಟ್ಟಿದುದು.) ಇಂಥ ಅನೇಕ ಶಬ್ದಗಳು ಡಾಕ್ಟರ್ ಕಾಲ್ಡ್ವೆಲ್ ಸಾಹೇಬರ ಪಟ್ಟಿಯಲ್ಲಿ ಸೇರಿವೆ. ತಮ್ಮ ಸಿದ್ಧಾಂತಕ್ಕೆ ಅವರು ಕೆಲವು ಕಾರಣಗಳನ್ನು ಕೊಟ್ಟಿದ್ದಾರೆ. ಅವುಗಳಲ್ಲಿ ಮುಖ್ಯವಾದ ಒಂದೆರಡು ಏನೆಂದರೆ: (೧) ಈ ಶಬ್ದಗಳು ಎಲ್ಲಾ ದ್ರಾವಿಡ ಭಾಷೆಗಳಲ್ಲಿಯೂ ಪ್ರಯೋಗದಲ್ಲಿವೆ. ಇವು ಇಲ್ಲದಿದ್ದರೆ ದಿನಚರಿಯ ವ್ಯವಹಾರವು ಸಾಗುವಂತಿಲ್ಲ. ಏಕೆಂದರೆ ಇವಕ್ಕೆ ಬೇರೆ ಮಾತುಗಳೇ ಇಲ್ಲ. ಸಂಸ್ಕೃತದಲ್ಲಿ ಹೀಗಿಲ್ಲ. ಈ ಶಬ್ದಗಳು ಪ್ರಯೋಗವಾಗುವುದು ಕ್ವಚಿತ್ತಾಗಿ. ಅದೂ ಸಾಧಾರಣವಾಗಿ ಸಮಾಸಪದಗಳಲ್ಲಿ ಮಾತ್ರ. (೨) ದ್ರಾವಿಡ ಭಾಷೆಗಳಲ್ಲಿ ಈ ಶಬ್ದಗಳ ಮೂಲರೂಪಗಳಿಂದ ಅನೇಕ ಶಬ್ದಗಳು ಹುಟ್ಟಿವೆ. ಉದಾ: ಮಿನ್ ಧಾತುವಿನಿಂದ ಮಿನುಗು, ಮಿಂಚು, ಮೀನ್ (ನಕ್ಷತ್ರ.) ಸಂಸ್ಕೃತದಲ್ಲಿ ಹೀಗಿಲ್ಲ. (೩) ದ್ರಾವಿಡ ಭಾಷೆಗಳಲ್ಲಿ ಈ ಧಾತುಗಳಿಗೆ ಸಮಂಜಸವಾದ ಅರ್ಥವಿದೆ. ಸಂಸ್ಕೃತದಲ್ಲಿಲ್ಲ.

**ಸಂಸ್ಕೃತ ಶಬ್ದಗಳು**—ಸಂಸ್ಕೃತದ ಪರಿಚಯವು ಕನ್ನಡಿಗರಿಗೆ ಹೆಚ್ಚಾಗಲು ಅವರು ಪೂರ್ವದಲ್ಲಿ ಉಪಯೋಗಿಸುತ್ತಿದ್ದ ಕೆಲವು ತದ್ಭವಗಳನ್ನು ಬಿಟ್ಟು ಸಂಸ್ಕೃತ ಶಬ್ದಗಳನ್ನು ಉಪಯೋಗಿಸಲು ಆರಂಭ ಮಾಡಿದಂತೆ ತೋರುತ್ತದೆ. ಉದಾ: ಹಳಗನ್ನಡದಲ್ಲಿ ಮೊಗಂ, ಬಾಸೆ, ಜಸಂ ಎಂಬಿವು ರೂಢಿಯಲ್ಲಿದ್ದುವು. ಈಗ ಅವಕ್ಕೆ ಬದಲಾಗಿ ಮುಖ, ಭಾಷೆ, ಯಶಸ್ಸು ಈ ಸಂಸ್ಕೃತ ಶಬ್ದಗಳನ್ನೇ ಜನರು ಉಪ

ಯೋಗಿಸುತ್ತಾರೆ. ಹಿಂದೆ ಇದ್ದಷ್ಟು ತದ್ಭವಗಳು ಈಗ ಬಳಕೆಯಲ್ಲಿಲ್ಲ. ಮಹಾರಾಷ್ಟ್ರ ಭಾಷೆಯ ಸಂಸರ್ಗದಿಂದ ಕೇಶಿರಾಜನ ಕಾಲಕ್ಕೇ ಕೆಲವು ಮಹಾರಾಷ್ಟ್ರ ಶಬ್ದಗಳು ಕನ್ನಡಕ್ಕೆ ಸೇರಿದ್ದವು. ಅವುಗಳನ್ನು ಕೇಶಿರಾಜನು ಮಹಾಪ್ರಾಣಾಕ್ಷರ ಗಳಿಂದ ಕೂಡಿದ ಕನ್ನಡ ಶಬ್ದಗಳಲ್ಲಿ ಸೇರಿಸಿದ್ದಾನೆ. ಅವುಗಳಲ್ಲಿ ಈಗ ವಿಶೇಷ ಪ್ರಚಾರದಲ್ಲಿರುವ ಶಬ್ದಗಳು ತೆತ್ತೀಸ, ಬತ್ತೀಸ, ಚಪ್ಪನ್ನ [ತೆತ್ತೀಸ ಕೋಟಿ ದೇವತೆ ಗಳು, ಬತ್ತೀಸ ಪುತ್ಥಳಿ ಕಥೆಗಳು, ಚಪ್ಪನ್ನ (ಐವತ್ತಾರು) ದೇಶಗಳು]. ಕನ್ನಡದಲ್ಲಿ ಬಳಕೆಗೆ ಬಂದಿರುವ ಸಂಸ್ಕೃತ ಶಬ್ದಗಳಲ್ಲಿ ಕೆಲವು ಸಂಸ್ಕೃತದಲ್ಲಿಲ್ಲದ ಬೇರೊಂದು ಅರ್ಥದಲ್ಲಿ ಪ್ರಯೋಗವಾಗುತ್ತವೆ. ಉದಾ: ವಿಶ್ವಾಸ (ಸಂ. ನಂಬಿಕೆ, ಕ. ಪ್ರೀತಿ), ವಿಪರೀತ (ಸಂ. ವ್ಯತ್ಯಾಸ, ಕ. ಬಹಳ ಹೆಚ್ಚು), ಸಮಾಚಾರ (ಸಂ. ನಡೆವಳಿ, ಕ. ಸುದ್ದಿ) ಶಿಕ್ಷೆ (ಸಂ. ಕಲಿಸುವುದು, ಕ. ದಂಡನೆ) ಇತ್ಯಾದಿ. ಧಾರ್ವಾಡ ಪ್ರಾಂತದಲ್ಲಿ, ಲೋಭ (ಸಂ. ಆಶೆ, ಕ. ಪ್ರೀತಿ), ಆಗ್ರಹ (ಸಂ. ಹಠ, ಕ. ಬಲಾತ್ಕಾರ) ಇತ್ಯಾದಿ.

ಮಹಮ್ಮದೀಯರು ಕನ್ನಡದೇಶಕ್ಕೆ ಬಂದು ಸೇರಿದಂದಿನಿಂದ ಎಂದರೆ ಸುಮಾರು ೧೪ನೆಯ ಶತಮಾನದಿಂದ ಹಿಂದುಸ್ಥಾನಿ ಶಬ್ದಗಳು ಕನ್ನಡಕ್ಕೆ ಸೇರಲು ಆರಂಭವಾಯಿತು. ಕೆಲವು ಕಾಲ ಈ ದೇಶದ ಹಲವು ಪ್ರಾಂತಗಳು ಮಹಮ್ಮದೀಯ ರಾಜರ ಆಡಳಿತಕ್ಕೆ ಒಳಪಟ್ಟಿದ್ದವು. ಈಗಲೂ ಹೈದರಾಬಾದಿನಲ್ಲಿರುವ ಕನ್ನಡ ಪ್ರಾಂತವು ಆ ಆಡಳಿತಕ್ಕೇ ಒಳಪಟ್ಟಿದೆ. ರಾಜರು ಮಹಮ್ಮದೀಯರಾಗಿರುವಾಗ ಅವರಾಡುವ ಭಾಷೆಯು ರಾಜಭಾಷೆಯಾಗಿರುವುದು ಸ್ವಾಭಾವಿಕವಾಗಿದೆ. ಈ ದೇಶದಲ್ಲಿ ಕೆಲವು ಕಾಲ ಪಾರ್ಸಿ ಭಾಷೆಯು ರಾಜಭಾಷೆಯಾಗಿತ್ತು. ಹೀಗಾಗಿ ಅನೇಕ ಪಾರ್ಸಿ ಆರಾಬಿ ಶಬ್ದಗಳು ಕನ್ನಡಕ್ಕೆ ಸೇರಿವೆ. ಹಿಂದೂಸ್ಥಾನಿಯ ಅನೇಕ ಶಬ್ದಗಳು ಸಂಸ್ಕೃತದಿಂದ ಬಂದುವು. ಆದುದರಿಂದ ಕೆಲವು "ತದ್ಭವ" ಶಬ್ದಗಳೂ ಈ ಕಾಲದಲ್ಲಿ ಕನ್ನಡಕ್ಕೆ ಸೇರಿದುವು. ಇವು ಮುಖ್ಯವಾಗಿ ರಾಜ್ಯ ವ್ಯವಸ್ಥೆಗೆ ಸಂಬಂಧಿಸಿದುವು. ಇತರ ಶಬ್ದಗಳೂ ಸೇರಿವೆ. ಉದಾ: ಕಚೇರಿ, ಕುಸ್ತಿ, ಗುಮಾಸ್ತೆ, ಚಲಾವಣೆ, ಜಮಾನ, ಜವಾಬು, ಜಾಮೀನು, ದರ್ಬಾರು, ಪಲ್ಲಕ್ಕಿ, ಬಾಕಿ, ಮಂಜೂರು, ಮುನಷಿ, ರಸ್ತೆ, ರೈತ, ಲಗಾಮು, ಲಾಳ, ಸವಾರ, ಸರಕಾರ, ಸಿಫಾರಸು, ಸಿಪಾಯಿ.

ಆಧುನಿಕ ಕಾಲದಲ್ಲಿ ಇಂಗ್ಲಿಷ್ ಶಬ್ದಗಳು ಕನ್ನಡಕ್ಕೆ ಸೇರಿರುತ್ತವೆ. ಇವು ಸಾಮಾನ್ಯವಾಗಿ ರಾಜ್ಯಭಾರ, ನ್ಯಾಯ, ಸಂಘ ಮುಂತಾದುವಕ್ಕೆ ಸಂಬಂಧ ಪಟ್ಟುವು; ಉದಾ: ಪೋಲೀಸು, ಕೋರ್ಟು, ಗೆಜೆಟ್ಟು, ಬ್ಯಾಂಕು, ಲಾಯರು; ಅಥವಾ ಹೊಸ ಹೊಸ ವ್ಯಾಪಾರ ಪದಾರ್ಥಗಳು, ಯಂತ್ರಗಳು, ಪ್ರಯಾಣ ಸೌಕರ್ಯಗಳು, ಕುಶಲವಿದ್ಯೆ ಮೊದಲಾದುವಕ್ಕೆ ಸಂಬಂಧಿಸಿದುವು. ಉದಾ: ಕಾಫಿ, ಟೀ, ಹೋಟಲು, ಸಾಬೂನು, ಗಿಲೀಟು, ರೈಲು, ಮೋಟಾರು, ಟಿಕೀಟು, ಕಾರ್ಡು, ಚಿಮ್ನಿ ಇತ್ಯಾದಿ.

ವಿ. ನರಸಿಂಹ ...
ಶೃಂಗೇರಿ ಉಪ ನಗರ,



ತಮಿಳು, ತೆಲುಗು, ಮಲೆಯಾಳ ಭಾಷೆಗಳ ಸಂಸರ್ಗವು ಕನ್ನಡಕ್ಕಿರುವುದರಿಂದ ಈ ಭಾಷೆಗಳಿಂದಲೂ ಕನ್ನಡಕ್ಕೆ ಕೆಲವು ಮಾತುಗಳು ಸೇರಿರಬೇಕು. ಆದರೆ ಇವೆಲ್ಲವೂ ಒಂದೇ ಭಾಷಾವರ್ಗಕ್ಕೆ ಸೇರಿದುವಾದುದರಿಂದ ಅಂಥ ಮಾತುಗಳು ಯಾವುವೆಂದು ನಿರ್ಧರಿಸುವುದು ಕಷ್ಟ. ಅರಸು, ಹಲ್ಲಂಡೆ, ಹೆಮ್ಮಾಡಿ ಮುಂತಾದವು ತಮಿಳಿನಿಂದ ಬಂದಿರಬಹುದು.

**ಶಬ್ದಗಳ ಅಳಿವು—1. ಅನ್ಯಭಾಷಾ ಶಬ್ದಗಳ ಪ್ರಾಬಲ್ಯ :** ಸಂಸ್ಕೃತ, ಪಾರ್ಸಿ, ಇಂಗ್ಲಿಷ್ ಮೊದಲಾದ ಪರಭಾಷೆಗಳ ಶಬ್ದಗಳು ಕನ್ನಡಕ್ಕೆ ಸೇರಿ ಭಾಷೆಯ ಶಬ್ದಕೋಶವು ಬೆಳೆದಿರುವುದೆಂಬುದನ್ನು ಮೇಲೆ ವಿವರಿಸಿವೆ. ಹಿಂದೆ ಪ್ರಯೋಗದಲ್ಲಿದ್ದ ಎಷ್ಟೋ ಕನ್ನಡ ಶಬ್ದಗಳು ಈಗ ಬಳಕೆಯಲ್ಲಿಲ್ಲದಂತಾಗಿದೆ. ಹೀಗಾಗುವುದಕ್ಕೆ ಇರುವ ಕಾರಣಗಳಲ್ಲಿ ಅನ್ಯಭಾಷಾ ಶಬ್ದಗಳ ಪ್ರಾಬಲ್ಯವೇ ಒಂದು ಮುಖ್ಯ ಕಾರಣ. ಸಂಸ್ಕೃತದ ಪ್ರಾಬಲ್ಯದ ಪರಿಣಾಮವಾಗಿ ಹಿಂದೆ ಪ್ರಯೋಗದಲ್ಲಿದ್ದ ಅನೇಕ ಶಬ್ದಗಳು ಈಗ ಪ್ರಯೋಗದಲ್ಲಿಲ್ಲದಂತಾಗಿವೆ ಎಂಬುದು ಹಿಂದೆಯೇ ನಿರೂಪಿತವಾಗಿದೆ. ಹಾಗೆಯೇ ಅನೇಕ ಕನ್ನಡ ಶಬ್ದಗಳು ಕಾಲಕ್ರಮದಲ್ಲಿ ಮೂಲೆಗೆ ಬಿದ್ದುಹೋಗಿವೆ. ಸಾಮಾನ್ಯ ವ್ಯವಹಾರಕ್ಕೆ ಆವಶ್ಯಕವಾದ ಆಕಾಶ, ಚಂದ್ರ, ನಕ್ಷತ್ರ, ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ, ಸ್ನಾನ, ಮನುಷ್ಯ ಮೊದಲಾದ ಶಬ್ದಗಳೆಲ್ಲವೂ ಸಂಸ್ಕೃತ ಶಬ್ದಗಳೇ ಆಗಿ ಪರಿಣಮಿಸಿರುವುದೇ ಇದಕ್ಕೆ ನಿದರ್ಶನವಾಗಿದೆ. ಇದೇ ಅರ್ಥವನ್ನು ಕೊಡುವ ಬಾನ್, ತಿಂಗಳ್, ಅರಿಲ್ ಅಥವಾ ಮೀ, ಮೂಡಲ್, ಪಡುವಲ್, ಬಡಗಲ್, ತೆಂಕಲ್, ಮೀಹ, ಆಳ್ ಮೊದಲಾದ ದೇಶ್ಯಶಬ್ದಗಳಲ್ಲಿ ಕೆಲವು ಕನ್ನಡಿಗರಿಗೆ ಈ ಕಾಲದಲ್ಲಿ ಅರ್ಥವಾಗುವುದು ಕೂಡ ಕಷ್ಟವಾಗಿ ಪರಿಣಮಿಸಿದೆ. ಇಂತಹ ಪುರಾತನ ಶಬ್ದಗಳು ಗ್ರಾಮಾಂತರಗಳಲ್ಲಿ ಅವಿತುಕೊಂಡಿರುವುದುಂಟು.

**2. ಇತರ ಕಾರಣಗಳು :** ಹಳೆಯ ಮಾತುಗಳು ನಿಂತುಹೋಗಲು ಮತ್ತೆ ಕೆಲವು ಕಾರಣಗಳನ್ನು ಹೇಳಬಹುದು : ೧. ಹಿಂದೆ ಒಂದೇ ಶಬ್ದಕ್ಕೆ ಅನೇಕ ರೂಪಗಳಿದ್ದರೆ ಈಗ ಅವುಗಳಲ್ಲಿ ಯಾವುದಾದರೂ ಒಂದು ಮಾತ್ರ ಉಳಿಯುತ್ತದೆ. ಉದಾ : ಹಳಗನ್ನಡದಲ್ಲಿ ಆಮೇಲೆ ಎಂಬ ಅರ್ಥದಲ್ಲಿ ಬೞಿಕಂ, ಬೞಿಕ್ಕಂ, ಬೞಿಕೆ, ಬೞಿಕ್ಕೆ, ಬೞಿಯಂ ಎಂಬ ಇಷ್ಟು ಶಬ್ದಗಳು ಇದ್ದುವು. ಈಗ ಬಳಿಕ ಎಂಬುದೊಂದು ಮಾತ್ರ ಉಳಿದಿದೆ ೨. ಹಿಂದೆ ಒಂದೇ ಅರ್ಥವನ್ನು ಕೊಡುವ ಅನೇಕ ಮಾತುಗಳಿದ್ದರೆ ಈಗ ಅವುಗಳಲ್ಲಿ ಒಂದು ಮಾತ್ರ ಉಳಿದಿರುತ್ತದೆ. ಹಳಗನ್ನಡದಲ್ಲಿದ್ದ ಮೇಣ್, ಮತ್ತಂ, ಮತ್ತು—ಇವಕ್ಕೆ ಈಗ ಮತ್ತು ಎಂಬುದು ಮಾತ್ರ ಉಳಿದಿರುತ್ತದೆ. ಉಸಿರ್, ಒರೆ, ನುಡಿ, ಪೇೞ್—ಇವಕ್ಕೆ ಈಗ ಹೇಳು ಎಂಬುದೊಂದೇ ರೂಢಿಯಲ್ಲಿದೆ. ೩. ಯಾವ ಕಾರಣದಿಂದಲಾದರೂ ಹಿಂದೆ ಇದ್ದ

ಒಂದು ಮಾತಿಗೆ ಬದಲಾಗಿ ಮತ್ತೊಂದು ಮಾತು ರೂಢಿಗೆ ಬಂದರೆ ಹಿಂದಿನ ಮಾತು ನಿಂತುಹೋಗುತ್ತದೆ. ಉದಾ: ಅಮ್ಮ. ಹಳಗನ್ನಡದಲ್ಲಿ ಈ ಮಾತು ತಂದೆ ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತಿತ್ತು. ಉದಾ: "ತಾನಕ್ಕೆ ತಮ್ಮಮ್ಮ ನಕ್ಕಿಸಲಂಬಂ ತಿರುವಾಯ್ಗೆ ತಂದಜೀವರೇ." ಹಿಂದಣ ಕಾಲದಲ್ಲಿ ಗಂಡಸರ ಹೆಸರುಗಳ ಅಂತ್ಯದಲ್ಲಿ ಅಮ್ಮ ಎಂದು ಇರುವುದು ಕಂಡುಬರುತ್ತದೆ. ಉದಾ: ಮಲ್ಲಿತಮ್ಮ, ಅಣ್ಣಮ ಈಗ ಈ ಅರ್ಥದಲ್ಲಿ ಅಪ್ಪ ಎಂಬ ಮಾತು ರೂಢಿಗೆ ಬಂದಿದೆ. ಅಮ್ಮ ಎಂಬುದಕ್ಕೆ ತಾಯಿ ಎಂಬ ಅರ್ಥ ಬಂದಿದೆ. ಹಿಂದೆ ಇದ್ದ ಅಬ್ಬೆ ಎಂಬ ಮಾತು ಈಗ ರೂಢಿಯಲ್ಲಿಲ್ಲ. ಅವ್ವೆ, ಅವ್ವ—ಎಂಬುವು ಗ್ರಾಮ್ಯವಾಗಿ ಗಣಿಸಲ್ಪಡುತ್ತವೆ.

## ೭. ನಾಮಪದಗಳು

### 1. ಲಿಂಗ-ವಚನ

ನಾಮಪದಗಳಲ್ಲಿ ಲಿಂಗ ವಚನ ವಿಭಕ್ತಿ ಇವು ಮೂರನ್ನು ವಿವಕ್ಷೆಮಾಡುತ್ತೇವೆ. ಇವುಗಳಲ್ಲಿ ಲಿಂಗ ವಚನಗಳನ್ನು ಒಳಕೊಂಡಿರುವ ಪ್ರಕೃತಿಯ ಮೇಲೆ ವಿಭಕ್ತಿ ಸೇರುವುದರಿಂದ ಮೊದಲು ಲಿಂಗ ವಚನ ಸ್ವರೂಪವನ್ನು ತಿಳಿಸಬೇಕಾಗಿದೆ.

ಕನ್ನಡದಲ್ಲಿ ವಚನವನ್ನು ಸೂಚಿಸುವ ಪ್ರತ್ಯಯಗಳೇ ಲಿಂಗವನ್ನೂ ಸೂಚಿಸುವುದರಿಂದ ಈ ಪ್ರಕರಣದಲ್ಲಿ ಲಿಂಗವಚನಗಳೆರಡನ್ನೂ ಸೇರಿಸಿದೆ.

ಏಕವಚನ, ಬಹುವಚನಗಳಲ್ಲದೆ ದ್ವಿವಚನವೂ ಕನ್ನಡದಲ್ಲಿ ಉಂಟು ಎಂದು ವ್ಯಾಕರಣಗಳಲ್ಲಿ ಹೇಳಿದೆ. ದ್ವಿವಚನವನ್ನು ಸೂಚಿಸುವ ಪ್ರತ್ಯೇಕವಾದ ಪ್ರತ್ಯಯವಾವುದೂ ಇಲ್ಲದೆ ಇರುವುದರಿಂದ ಕನ್ನಡದಲ್ಲಿರುವುದು ಏಕವಚನ ಬಹುವಚನಗಳೆರಡೇ ಎಂದೂ, ಸಂಸ್ಕೃತ ವ್ಯಾಕರಣಗಳನ್ನು ಅನುಸರಿಸಿ ಕನ್ನಡದಲ್ಲಿ ವ್ಯಾಕರಣಗಳು ರಚಿತವಾಗಿರುವುದರಿಂದ ದ್ವಿವಚನವನ್ನು ಕ್ಲೇಶದಿಂದ ಕಂಡುಹಿಡಿದರೆಂದೂ ಹೇಳಬಹುದು. ಉತ್ತಮ ಪುರುಷ ಸರ್ವನಾಮಕ್ಕೆ, ಎದುರಿಗಿರುವವರನ್ನು ಸೇರಿಸಿಕೊಳ್ಳುವ ಮತ್ತು ಸೇರಿಸಿಕೊಳ್ಳದ ಎರಡು ಬಹುವಚನಗಳಿರುವುದೆಂದು ದ್ರಾವಿಡ ಭಾಷಾತತ್ತ್ವಜ್ಞರು ಅಭಿಪ್ರಾಯಪಡುತ್ತಾರೆ. ಕನ್ನಡದಲ್ಲಿ ಆ ತೆರದ ಪ್ರಯೋಗವಿಲ್ಲವಾದುದರಿಂದ ಅದನ್ನು ಕುರಿತ ಸಮಾಲೋಚನೆಯು ಇಲ್ಲಿ ಅಪ್ರಕೃತವಾಗಿರುತ್ತದೆ.

ಕನ್ನಡಶಬ್ದಗಳಿಗೆ ಹತ್ತುವ ಬಹುವಚನ ಪ್ರತ್ಯಯಗಳಲ್ಲಿ ಎರಡು ಸ್ಪಷ್ಟವಾದ ಜಾತಿಯವುಗಳಿವೆ. ಒಂದು ಜಾತಿಯವು ಪುಂಸ್ತ್ರೀಲಿಂಗ ಶಬ್ದಗಳಿಗೆ ಹತ್ತುತ್ತವೆ; ಮತ್ತೊಂದು ಜಾತಿಯವು ನಪುಂಸಕಶಬ್ದಗಳಿಗೆ ಹತ್ತುತ್ತವೆ. ಪುಂಸ್ತ್ರೀಲಿಂಗಗಳೆರಡಕ್ಕೂ ಒಂದೇ ಜಾತಿಯ ಪ್ರತ್ಯಯವು ಹತ್ತುತ್ತದೆಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವಾಗಿರುತ್ತದೆ. ಇದರಿಂದ ಪುಲ್ಲಿಂಗ ಸ್ತ್ರೀಲಿಂಗ ಶಬ್ದಗಳೆರಡೂ ಒಂದೇ ಜಾತಿಗೆ ಸೇರಿದುವೆಂದು ಸೂಚಿತವಾಗುತ್ತದೆ. ಕನ್ನಡ ವ್ಯಾಕರಣಗಳಲ್ಲಿ ಈ ವಿಷಯವು ನಿರೂಪಿತವಾಗಿಲ್ಲ. ಹೀಗೆ ಬಹುವಚನ ಪ್ರತ್ಯಯಗಳಿಗೂ ಲಿಂಗಕ್ಕೂ ಅತ್ಯಂತ ಸಂಬಂಧವಿರುವುದರಿಂದ ವಚನಗಳ ವಿಷಯವಾಗಿ ವಿಚಾರಮಾಡುವುದಕ್ಕೆ ಪೂರ್ವಭಾವಿಯಾಗಿ ಲಿಂಗದ ವಿಷಯವನ್ನು ತಿಳಿಯುವುದು ಅತ್ಯಾವಶ್ಯಕ.

ಕನ್ನಡದಲ್ಲಿ ಲಿಂಗವು ಒಂಬತ್ತು ತೆರನೆಂದೂ ಆದರೆ ಮೂರು ಮಾತ್ರ ಪ್ರಸಿದ್ಧವಾದುವೆಂದೂ ಮಿಕ್ಕವು ಕ್ವಚಿತ್‌ಪ್ರಯೋಗಗಳೆಂದೂ ಕನ್ನಡವ್ಯಾಕರಣಗಳಲ್ಲಿ ಹೇಳಿದೆ. ಆ ಪ್ರಸಿದ್ಧವಾದ ಮೂರು ಲಿಂಗಗಳು ಪುಂಸ್ತ್ರೀನಪುಂಸಕಗಳು. ಕನ್ನಡ ಶಬ್ದದ ಲಿಂಗವಾವುದೆಂಬುದನ್ನು ಅರ್ಥದಿಂದ ನಿರ್ಧರಿಸಬೇಕು. ಪುರುಷರನ್ನು

ಹೇಳುವ ಶಬ್ದಗಳು ಪುಲ್ಲಿಂಗದವು: ಸ್ತ್ರೀಯರನ್ನು ಹೇಳತಕ್ಕವು ಸ್ತ್ರೀಲಿಂಗದವು; ಮಿಕ್ಕವು ನಪುಂಸಕಲಿಂಗದವು. ಈ ವಿಧವಾದ ವಿಭಾಗವು ಕನ್ನಡವೇ ಮೊದಲಾದ ದ್ರಾವಿಡಭಾಷೆಗಳಿಗೆ ಸಹಜವಾದುದಲ್ಲವೆಂದೂ ಸಂಸ್ಕೃತವ್ಯಾಕರಣಗಳ ಅನುಕರಣ ದಿಂದ ಬಂದುದೆಂದೂ ಹೇಳುವುದಕ್ಕೆ ಆಧಾರವಿದೆ. ಪುಲ್ಲಿಂಗ ಸ್ತ್ರೀಲಿಂಗ ಶಬ್ದ ಗಳೆರಡೂ ಒಂದು ಜಾತಿಯವೆಂದೂ ಮಿಕ್ಕವೆಲ್ಲವೂ ಮತ್ತೊಂದು ಜಾತಿಯವೆಂದೂ ದ್ರಾವಿಡರು ಶಬ್ದಗಳನ್ನು ಎರಡು ಪಂಗಡಗಳಾಗಿ ವಿಭಾಗಿಸಿದರು. ತೆಲುಗಿನಲ್ಲಿ ಮೊದಲನೆಯ ಜಾತಿಯ ಶಬ್ದಗಳಿಗೆ ಮಹತ್ ಶಬ್ದಗಳೆಂದೂ ಎರಡನೆಯ ಜಾತಿ ಯವಕ್ಕೆ ಅಮಹತ್ ಶಬ್ದಗಳೆಂದೂ ತಮಿಳಿನಲ್ಲಿ ಉಯರ್‌ತಿಣೈ ಅಱ್ಱಿಣೈ ಎಂದೂ ಹೆಸರು ಇದೆ.* ಕನ್ನಡದಲ್ಲಿ ಇವನ್ನು ಮೇಲುಜಾತಿ, ಕೀಳುಜಾತಿ ಎಂದೂ ಕರೆಯ ಬಹುದು. ಲಿಂಗನಿರ್ಣಯಮಾಡುವಾಗ ದ್ರಾವಿಡರು ಒಂದು ಶಬ್ದದಿಂದ ಸೂಚಿತ ವಾದ ವಸ್ತುವು ಸಜೀವವೇ ನಿರ್ಜೀವವೇ, ಗಂಡೇ ಹೆಣ್ಣೇ ಎಂಬ ವ್ಯತ್ಯಾಸಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡದೆ ಬುದ್ಧಿಶಕ್ತಿಯುಳ್ಳದ್ದೇ ಎಂಬ ಭೇದಕ್ಕೇ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಂತೆ ತೋರುತ್ತದೆ. ಪ್ರಾಣಿಗಳಲ್ಲಿಯೂ ಮಕ್ಕಳಲ್ಲಿಯೂ ಗಂಡು ಹೆಣ್ಣು ಭೇದವಿದ್ದೇ ಇರುತ್ತದೆ. ಆದರೂ ಅವುಗಳನ್ನು ತಿಳಿಸುವ ಶಬ್ದಗಳು ನಿರ್ಜೀವ ವಸ್ತುಗಳನ್ನು ತಿಳಿಸುವ ವಸ್ತುಗಳ ಜತೆಗೆ ಸೇರಿ ನಪುಂಸಕಗಳೆಂದು ಭಾವಿಸಲ್ಪಟ್ಟವೆ. ಬುದ್ಧಿಶಕ್ತಿಯುಳ್ಳ ವಸ್ತುಗಳನ್ನು ತಿಳಿಸುವ ಶಬ್ದಗಳೇ ಮಹತ್ ಶಬ್ದಗಳು. ಇವುಗಳಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಭೇದವುಂಟು; ಈ ಭೇದವು ಏಕ ವಚನದಲ್ಲಿ ಬೇರೆಬೇರೆ ಪ್ರತ್ಯಯಗಳಿಂದ ಸೂಚಿಸಲ್ಪಡುತ್ತದೆ. ಅಮಹತ್ ಶಬ್ದ ಗಳಿಗೆ ಆ ಭೇದವಿಲ್ಲ. ಆ ಭೇದವನ್ನು ತಿಳಿಸಬೇಕಾದರೆ ಆ ಅರ್ಥವನ್ನು ಕೊಡುವ ಗಂಡು ಹೆಣ್ಣು ಎಂಬ ಶಬ್ದಗಳನ್ನು ಅಮಹತ್ ಶಬ್ದಗಳ ಹಿಂದೆ ಸೇರಿಸಬೇಕು. ಉದಾ: ಗಂಡುಮಗು, ಹೆಣ್ಣುಮಗು, ಗಂಡುಗಿಳಿ, ಹೆಣ್ಣುಗಿಳಿ ಇತ್ಯಾದಿ. ಹೀಗೆ ಪುಂಸ್ತ್ರೀ ಭೇದವು ಸೂಚಿತವಾದರೂ ಆ ಶಬ್ದಗಳು ನಪುಂಸಕಗಳಾಗಿಯೇ ಉಳಿಯು ತ್ತವೆ. ಅವುಗಳಿಗೆ ಸೇರುವ ಬಹುವಚನ ಪ್ರತ್ಯಯವೂ, ಅವುಗಳಿಗೆ ಬದಲಾಗಿ ಬರುವ ಸರ್ವನಾಮಗಳೂ ಅವುಗಳ ಕ್ರಿಯೆಯನ್ನು ಸೂಚಿಸುವ ಕ್ರಿಯಾಪದಗಳೂ ನಪುಂಸಕ ಲಿಂಗದವುಗಳೇ ಆಗಿರುತ್ತವೆ. ಉದಾ: ಗಂಡುಮಗು—ಹೆಣ್ಣುಮಗು —ಹುಟ್ಟಿತು.

ಮಹತ್ ಶಬ್ದಗಳಲ್ಲಿ ಏಕವಚನದಲ್ಲಿ ಪುಂಸ್ತ್ರೀಲಿಂಗಭೇದಗಳನ್ನು ಬೇರೆಬೇರೆ ಪ್ರತ್ಯಯಗಳು ವಿವಕ್ಷೆಮಾಡುತ್ತವೆ. ಬಹುವಚನದಲ್ಲಿ ಈ ವಿವಕ್ಷೆ ಪ್ರತ್ಯಯಗಳಿಂದ

---

* ದ್ರಾವಿಡಭಾಷಾತತ್ವಜ್ಞರು ಇವುಗಳನ್ನು Rational Gender Irrational Gender ಎಂದು ಕರೆದಿದ್ದಾರೆ.

ತೋರುವುದಿಲ್ಲ. ಅನ್†ಎಂಬುದು ಪುಲ್ಲಿಂಗ ಶಬ್ದಗಳಿಗೆ, ಅಳ್†ಎಂಬುದು ಸ್ತ್ರೀಲಿಂಗ ಶಬ್ದಗಳಿಗೆ, ಏಕವಚನದಲ್ಲಿಯೂ, ಅರ್ ಇರ್ ದಿರ್ ವಿರ್ ಎಂಬಿವುಗಳಲ್ಲಿ ಒಂದು ಪುಂಸ್ತ್ರೀಲಿಂಗ ಶಬ್ದಗಳಿಗೆ ಬಹುವಚನದಲ್ಲಿಯೂ ಹತ್ತುತ್ತವೆ. ನಪುಂಸಕಶಬ್ದಗಳು ಏಕವಚನದಲ್ಲಿ ಪ್ರಕೃತಿರೂಪದಲ್ಲಿಯೂ, (ಅ) ಮ್ ಎಂಬುದು ಕೊನೆಯಲ್ಲಿ ಉಳ್ಳುವಾಗಿಯೂ ಇರುತ್ತವೆ; ಇವಕ್ಕೆ ಬಹುವಚನದಲ್ಲಿ ಗಳ್ ಎಂಬುದು ಹತ್ತುತ್ತದೆ. ಉದಾ :—ಕುಱಿ, ಕಱು, ಆನೆ, ಮರವ್ಮ್; ಕುಱಿಗಳ್, ಕಱುಗಳ್, ಆನೆಗಳ್, ಮರಂಗಳ್. ಹೀಗೆ ಏಕವಚನ ಬಹುವಚನ ಪ್ರತ್ಯಯಗಳಿಂದ ಲಿಂಗವೂ ವಚನವೂ ಜೊತೆಜೊತೆಗೇ ಸೂಚಿತವಾಗುತ್ತವೆ. ಎಂದರೆ ಈ ಪ್ರತ್ಯಯಗಳಿಂದ ಒಂದು ಅಥವಾ ಒಂದಕ್ಕಿಂತಲೂ ಹೆಚ್ಚು ವಸ್ತುಗಳು ನಿರೂಪಿತವಾಗಿವೆಯೆಂಬುದು ಮಾತ್ರವೇ ಅಲ್ಲದೆ ಆ ವಸ್ತುವಿಗೆ ಅಥವಾ ವಸ್ತುಗಳಿಗೆ ಬುದ್ಧಿಶಕ್ತಿ ಇರುವುದೇ ಇಲ್ಲವೇ ಎಂಬುದೂ ಗೊತ್ತಾಗುತ್ತದೆ.

ಉದಾಹರಣೆ

1. ಮೇಲುಜಾತಿ—ಏಕವಚನ. ಲಿಂಗವಿವಕ್ಷೆಉಂಟು.

ಗಂಡು—ಅವನ್ ಬಂದನ್ ಎಂಬಂತೆ.

ಹೆಣ್ಣು—ಅವಳ್ ಬಂದಳ್ ಎಂಬಂತೆ.

ಬಹುವಚನ. ಲಿಂಗವಿವಕ್ಷೆ ಇಲ್ಲ.

ಅವರ್ ಬಂದರ್ ಎಂಬಂತೆ.

2. ಕೀಳುಜಾತಿ—ಲಿಂಗವಿವಕ್ಷೆ ಇಲ್ಲ.

ಏಕವಚನ—ಅದು ಬಂದುದು ಎಂಬಂತೆ.

ಬಹುವಚನ—ಅವು ಬಂದವು ಎಂಬಂತೆ.

ಅಮಹತ್ ಶಬ್ದಗಳ ವಚನವು ಸಾಮಾನ್ಯವಾಗಿ ಅನಿರ್ಧಾರಿತವಾದದ್ದು. ಆನೆ ಎಂದರೆ ಒಂದು ಆನೆಯೆಂದಾದರೂ ಅರ್ಥವಾಗಬಹುದು, ಅನೇಕ ಆನೆಗಳೆಂದಾದರೂ ಅರ್ಥವಾಗಬಹುದು. ಆ ಶಬ್ದಗಳು ಏಕವಚನದಲ್ಲಿ ಪ್ರಯೋಗವಾಗಿವೆಯೋ ಅಥವಾ ಬಹುವಚನದಲ್ಲಿ ಪ್ರಯೋಗವಾಗಿವೆಯೋ ಎಂಬುದನ್ನು ಸಂದರ್ಭವನ್ನರಿತು ನಿಶ್ಚಯಿಸಬೇಕು. ಆನೆ ಬಂದುದು ಎಂಬಲ್ಲಿ ಒಂದೇ ಆನೆ

---

† ಪುಲ್ಲಿಂಗ ಸ್ತ್ರೀಲಿಂಗ ಸೂಚಕಗಳಾದ ಅನ್, ಅಳ್ ಎಂಬಿವು ಗಂಡು ಹೆಣ್ಣು ಎಂಬ ಅರ್ಥ ಕೊಡುವ ಶಬ್ದಗಳಾಗಿದ್ದು ಕಾಲಕ್ರಮದಲ್ಲಿ ಪ್ರತ್ಯಯಗಳಾಗಿ ಪರಿಣಮಿಸಿವೆ ಎಂದು ದ್ರಾವಿಡಭಾಷಾತತ್ತ್ವಜ್ಞರು ಹೇಳುತ್ತಾರೆ. ಅವನ್, ಇವನ್, *ಎವನ್, (=ಏವನ್, ಆವನ್) ಅವಳ್, ಇವಳ್, *ಎವಳ್, (ಏವಳ್ ಆವಳ್) ಈ ಶಬ್ದಗಳನ್ನು ವಿಮರ್ಶಿಸಿ.

ಎಂದರ್ಥ. ಆನೆ ಬಂದುವು ಎಂಬಲ್ಲಿ ಅನೇಕ ಆನೆಗಳು ಎಂದರ್ಥ. ನಪುಂಸಕ ಶಬ್ದಗಳಿಗೆ ಬಹುವಚನಪ್ರತ್ಯಯವನ್ನು ಹತ್ತಿಸುವ ರೂಢಿಯೂ ಉಂಟು. ಆದರೆ ಜನರಾಡುವ ಮಾತಿನಲ್ಲಿ ಹಾಗೆ ಮಾಡುವುದು ಅಪೂರ್ವ. ಜಾತ್ಯೇಕವಚನ ಎಂದು ವ್ಯಾಕಣಗಳಲ್ಲಿ ಹೇಳಿರುವ ಪ್ರಯೋಗವು ನಪುಂಸಕ ಶಬ್ದಗಳಿಗೆ ಸಹಜವಾದದ್ದೆಂದು ಹೇಳಬಹುದು.

ಗಳ್ ಎಂಬುದೇ ಬಹುವಚನಪ್ರತ್ಯಯವೆಂದೂ ಅರ್ ಮೊದಲಾದ ಪ್ರತ್ಯಯಗಳು ಪುಂಸ್ತ್ರೀಲಿಂಗಗಳಲ್ಲಿ ಅದಕ್ಕೆ ಆದೇಶವಾಗಿ ಬರುವುವೆಂದೂ ವ್ಯಾಕರಣಗಳಲ್ಲಿ ಹೇಳಿದೆ. ಗಳ್ ಪ್ರತ್ಯಯವು ಪುಂಸ್ತ್ರೀಲಿಂಗಶಬ್ದಗಳಿಗೂ ಸೇರುತ್ತಿದ್ದುದೇ ಇದಕ್ಕೆ ಕಾರಣವೆಂದು ತೋರುತ್ತದೆ. ಹಳಗನ್ನಡದಲ್ಲಿ ಅಣ್ಣಂಗಳ್, ಅಕ್ಕಂಗಳ್, ಈತಂಗಳ್ ಮೊದಲಾದ ಪ್ರಯೋಗಗಳು ಕಂಡುಬರುತ್ತವೆ. ನಡುಗನ್ನಡದಲ್ಲಿಯೂ ಅಣ್ಣಗಳು, ಈತಗಳು ಮೊದಲಾದ ಪ್ರಯೋಗಗಳು ದೊರೆಯುತ್ತವೆ. ಹೊಸಗನ್ನಡದಲ್ಲಿ ಈ ತೆರದ ಪ್ರಯೋಗಗಳಿಲ್ಲವೆಂದೇ ಹೇಳಬೇಕು. ಗುರುಗಳು, ತಾಯಿ ತಂದೆಗಳು ಮೊದಲಾದ ಕೆಲವೆಡೆಗಳಲ್ಲಿ ಮಾತ್ರ ಕಂಡುಬರುತ್ತವೆ.

ಬಹುವಚನವು ಗೌರವಾರ್ಥದಲ್ಲಿ ಬರುವುದುಂಟು. ಉದಾ: ದೇವರು, ತಂದೆಯವರು, ಜಡ್ಜಿಯವರು. ಒಂದೊಂದು ವೇಳೆ ಎರಡು ಬಹುವಚನ ಪ್ರತ್ಯಯಗಳು ಸೇರುವುದುಂಟು. ಉದಾ: ಮಹಾರಾಜರವರು, ಸ್ವಾಮಿಗಳವರು.

## 2. ವಿಭಕ್ತಿ

**ಪ್ರಾಚೀನ ಅಧುನಿಕ ಮತಗಳು:** ಕನ್ನಡದಲ್ಲಿ ನಾಮಪದಗಳಿಗೆ ಎಂಟು ವಿಭಕ್ತಿಗಳಿರುವುವೆಂದೂ ಪ್ರತಿಯೊಂದು ವಿಭಕ್ತಿಗೂ ಪ್ರತ್ಯೇಕವಾದ ವಿಭಕ್ತಿಪ್ರತ್ಯಯವಿರುವುದೆಂದೂ ಪ್ರಾಚೀನ ವ್ಯಾಕರಣಗಳು ತಿಳಿಸುತ್ತವೆ. ಈ ಮತವನ್ನು ಆಧುನಿಕ ಪಂಡಿತರು ಸಂಪೂರ್ಣವಾಗಿ ಒಪ್ಪುವುದಿಲ್ಲ. ಅವರ ಅಭಿಪ್ರಾಯದ ಪ್ರಕಾರ, (೧) ಪಂಚಮೀವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲ; (೨) ಪ್ರಥಮಾ ವಿಭಕ್ತಿಗೆ ಪ್ರತ್ಯೇಕವಾದ ವಿಭಕ್ತಿಪ್ರತ್ಯಯವಾ[illegible]ೂ ಇಲ್ಲ, ಪ್ರಕೃತಿಯೇ ಪ್ರಥಮಾವಿಭಕ್ತ್ಯರ್ಥದಲ್ಲಿ ಪ್ರಯೋಗವಾಗುತ್ತದೆ. ಪ್ರಥಮಾ ವಿಭಕ್ತಿಯೆಂದು ಕರಸಿಕೊಳ್ಳುವ ಪ್ರಕೃತಿಯ ಮೇಲೆಯೇ ಮಿಕ್ಕ ವಿಭಕ್ತಿಪ್ರತ್ಯಯಗಳು ಹತ್ತುತ್ತವೆ. ಈ ಅಭಿಪ್ರಾಯಕ್ಕೆ ಕಾರಣವನ್ನೂ ಅದನ್ನು ಸಮರ್ಥಿಸುವುದಕ್ಕೆ ಇರುವ ಸಾಧನಗಳನ್ನೂ ಕೆಳಗೆ ವಿವರಿಸಿದೆ.

**(1) ಪಂಚಮೀವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲ:** ಪಂಚಮೀ ವಿಭಕ್ತಿಯ ಪ್ರಯೋಗವು ಜನರು ಮಾತನಾಡುವ ಭಾಷೆಯಲ್ಲಿ ಇಲ್ಲವೇ ಇಲ್ಲ; ಪಂಚಮ್ಯರ್ಥದಲ್ಲಿ ತೃತೀಯೆಯನ್ನೇ ಪ್ರಯೋಗಿಸುತ್ತಾರೆ. ಗ್ರಂಥಗಳಲ್ಲಿಯೂ ಪಂಚಮಿಯ ಪ್ರಯೋಗವು ವಿಶೇಷವಾಗಿಲ್ಲ; ಅನೇಕವೇಳೆ ಪಂಚಮ್ಯರ್ಥದಲ್ಲಿ

ತೃತೀಯೆಯೇ ಪ್ರಯೋಗವಾಗುತ್ತದೆ. ಇದೂ ಅಲ್ಲದೆ ಪಂಚಮೀವಿಭಕ್ತಿಗೆ ಸ್ವತಂತ್ರವಾದ ವಿಭಕ್ತಿಪ್ರತ್ಯಯವಿಲ್ಲ. ಹೊಸಗನ್ನಡದಲ್ಲಿ ದೆಸೆ, ಕಡೆ ಎಂಬ ಶಬ್ದಗಳಿಗೂ ಹಳಗನ್ನಡದಲ್ಲಿ ಅದೇ ಅರ್ಥವುಳ್ಳ ಅತ್ತ ಎಂಬ ಶಬ್ದಕ್ಕೂ ತೃತೀಯಾವಿಭಕ್ತಿಪ್ರತ್ಯಯಗಳು ಸೇರಿ ಪಂಚಮೀವಿಭಕ್ತಿಯ ಅರ್ಥವಾಗುತ್ತದೆ. ಉದಾ: ಹುಲಿಯ+ದೆಸೆ+ಇಂದ, ಹುಲಿಯ+ಕಡೆ+ಇಂದ, ಪುಲಿಯ+ಅತ್ತ+ಅಣ್+ಇಂ. ಇದರಿಂದ ಪಂಚಮೀವಿಭಕ್ತಿ ಕನ್ನಡದಲ್ಲಿ ಸಹಜವಾಗಿ ಇಲ್ಲವೆಂದು ಗೊತ್ತಾಗುತ್ತದೆ. ಸಂಸ್ಕೃತವ್ಯಾಕರಣಗಳ ಮಾರ್ಗವನ್ನು ಅನುಸರಿಸಿ ಕನ್ನಡ ವ್ಯಾಕರಣಗಳು ರಚಿತವಾದುದರಿಂದ ಕನ್ನಡದಲ್ಲಿ ಒಂದು ಪಂಚಮೀವಿಭಕ್ತಿಯನ್ನು ಕಲ್ಪಿಸಬೇಕಾದ ನಿರ್ಬಂಧವುಂಟಾಯಿತು.

(2) **ಪ್ರಥಮಾವಿಭಕ್ತಿಗೆ ಪ್ರತ್ಯೇಕವಾದ ವಿಭಕ್ತಿಪ್ರತ್ಯಯವಾವುದೂ ಇಲ್ಲ; ಪ್ರಕೃತಿಯೇ ಪ್ರಥಮವಿಭಕ್ತ್ಯರ್ಥದಲ್ಲಿ ಪ್ರಯೋಗವಾಗುತ್ತದೆ.** ಮ್ ಎಂಬುದು ಪ್ರಥಮಾವಿಭಕ್ತಿಪ್ರತ್ಯಯವೆಂದು ಹಳಗನ್ನಡ ವ್ಯಾಕರಣಗಳಲ್ಲಿ ಹೇಳಿದೆ. ಈ ಪ್ರತ್ಯಯವು ಸೇರುವುದು ಅಕಾರಾಂತ ಶಬ್ದಗಳಿಗೆ, ಅದೂ ಏಕವಚನದಲ್ಲಿ ಮಾತ್ರ. ಮಿಕ್ಕ ಕಡೆಗಳಲ್ಲಿ ಅದು ಲೋಪವಾಗುವುದೆಂದು ಆ ವ್ಯಾಕರಣಗಳಲ್ಲಿ ಹೇಳಿದೆ. ಪ್ರತ್ಯಯವು ಸೇರದೆಯೇ ವಿಭಕ್ತಿ ಸೂಚಿತವಾಗಕೂಡದು ಎಂಬ ನಿಯಮವನ್ನು ಇಟ್ಟುಕೊಳ್ಳುವುದಾದರೆ ಹಾಗೆಯೇ ಹೇಳಬೇಕಾಗುತ್ತದೆ. ಆದರೆ ಇದು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ ಅಕಾರಾಂತವಲ್ಲದ ಶಬ್ದಗಳಿಗೆ ಏಕವಚನ ಬಹುವಚನಗಳೆರಡರಲ್ಲಿಯೂ ಅಕಾರಾಂತ ಶಬ್ದಗಳಿಗೆ ಬಹುವಚನದಲ್ಲಿಯೂ ಮ್ ಪ್ರತ್ಯಯವು ಮೊದಲು ಸೇರುವುದೇಕೆ, ಆಮೇಲೆ ಲೋಪವಾಗುವುದೇಕೆ? ಇದಕ್ಕೆ ಸಮರ್ಪಕವಾದ ಉತ್ತರವಾವುದೂ ವ್ಯಾಕರಣಗಳಲ್ಲಿ ಸಿಕ್ಕುವುದಿಲ್ಲ. ಆದಕಾರಣ ಕನ್ನಡದಲ್ಲಿ ಸಾಮಾನ್ಯವಾಗಿ ಪ್ರಕೃತಿಯೇ ಪ್ರಥಮಾವಿಭಕ್ತ್ಯರ್ಥದಲ್ಲಿ ಪ್ರಯೋಗವಾಗುವುದೆಂದೂ ಅಕಾರಾಂತಗಳಿಗೆ ಏಕವಚನದಲ್ಲಿ ಮ್ ಎಂಬ ಪ್ರತ್ಯಯ ಸೇರುವುದೆಂದೂ ಹೇಳಬೇಕಾಗುತ್ತದೆ.

**ಅಕಾರಾಂತ ಶಬ್ದಗಳಿಗೆ ಮ್, ನ್ ಎಂಬ ಪ್ರತ್ಯಯಗಳು ಸೇರುತ್ತವೆ.** ಅಷ್ಟೇ ಅಲ್ಲ. ಮ್ ಎಂಬುದು ಎಲ್ಲ ಅಕಾರಾಂತ ಶಬ್ದಗಳಿಗೂ ಹತ್ತುವುದಿಲ್ಲ. ಸಂಸ್ಕೃತ ಅಕಾರಾಂತ ನಪುಂಸಕ ಶಬ್ದಗಳೆಲ್ಲಕ್ಕೂ ಕನ್ನಡದ ಅಕಾರಾಂತ ನಪುಂಸಕ ಶಬ್ದಗಳಲ್ಲಿ ಬಹುಭಾಗಕ್ಕೂ ಮ್ ಪ್ರತ್ಯಯವು ಸೇರುವುದು ನಿಜ. ಆದರೆ ಕೊಳ ಮೊದಲಾದ ಕೆಲವು ಕನ್ನಡ ಅಕಾರಾಂತ ನಪುಂಸಕ ಶಬ್ದಗಳಿಗೂ ಎಲ್ಲ ಪುಲ್ಲಿಂಗ ಅಕಾರಾಂತಗಳಿಗೂ ಅಕ್ಕ ಮೊದಲಾದ ಸ್ತ್ರೀಲಿಂಗ ನಾಮವಾಚಕಗಳಿಗೂ ಸೇರುವ ಪ್ರತ್ಯಯವು ಮ್ ಅಲ್ಲ, ನ್ ಎಂಬುದು. ಹಳಗನ್ನಡ ವ್ಯಾಕರಣಗಳಲ್ಲಿ ಮ್ ಎಂಬುದಕ್ಕೆ ಅಕಾರಾಂತಶಬ್ದಗಳ ಏಕವಚನದಲ್ಲಿ ಅನುಸ್ವಾರವು ಆದೇಶವಾಗುವುದೆಂದೂ ಸ್ವರಪರವಾದಾಗ ಈ ಅನುಸ್ವಾರಕ್ಕೆ ನಕಾರ ಮಕಾರಗಳು ಆಗುವುವೆಂದೂ

ಹೇಳಿದೆ. ನಕಾರವಾಗುತ್ತದೆಂಬುದು ಸಮಂಜಸವಾಗಿಲ್ಲ. ಏಕೆಂದರೆ ರಾಮ ಶಬ್ದಕ್ಕೆ ಮ್ ಪ್ರತ್ಯಯ ಸೇರಿದರೆ ರಾಮಮ್ ಎಂದಾಗುತ್ತದೆ ಇದನ್ನು ರಾಮಂ ಎಂದು ಬರೆಯಬಹುದು. ಉಚ್ಚರಿಸುವುದು ಹೇಗೆ? ರಾಮಮ್ ಎಂದೇ ಅಲ್ಲವೇ? ಅದಕ್ಕೆ ಅಂ ಎಂಬ ಅಕಾರಾದಿ ಪ್ರತ್ಯಯವು ಪರವಾದಾಗ ಸ್ವಾಭಾವಿಕವಾಗಿ ರಾಮಮಂ ಎಂದಾಗುತ್ತದೆಯೇ ಹೊರತು ರಾಮನಂ ಎಂದು ಹೇಗಾಗಬೇಕು? ಅಲ್ಲದೆ ಹಳಗನ್ನಡದ ವ್ಯಂಜನಾಂತಗಳು ಹೊಸಗನ್ನಡದಲ್ಲಿ ಉಕಾರಾಂತವಾಗುತ್ತದೆ. ಇದರಂತೆ ರಾಮಂ ಎಂಬುದು ರಾಮಮು ಎಂದಾಗದೆ ರಾಮನು ಎಂದು ಏಕೆ ಆಗುತ್ತವೆ? ನಿಜಸ್ಥಿತಿಯೇನೆಂದರೆ, ಅದು ಮ್ ಅಲ್ಲ, ನ್ ಎಂಬುದು ಇದು ಕೇವಲ ಅನುಮಾನದಿಂದ ಸಿದ್ಧವಾದುದಲ್ಲ. ಪ್ರಾಚೀನ ಶಾಸನಗಳಲ್ಲಿ 'ಕಲಿಯುಗ ವಿಪರೀತನ್' 'ಮುನಿಪ್ರವರನ್' ಇತ್ಯಾದಿ ನಾಂತ ರೂಪಗಳು ದೊರೆಯುತ್ತವೆ. ಅಲ್ಲದೆ ತಮಿಳಿನಲ್ಲಿ ರಾಮ ಕೃಷ್ಣ ಮೊದಲಾದ ಅಕಾರಾಂತ ಪುಲ್ಲಿಂಗ ಶಬ್ದಗಳನ್ನು ರಾಮನ್ ಕೃಷ್ಣನ್ ಎಂದು ಉಚ್ಚರಿಸುವುದೂ ಬರೆಯುವುದೂ ರೂಢಿಯಲ್ಲಿದೆ. ಆದಕಾರಣ ಅಕಾರಾಂತ ಶಬ್ದಗಳಿಗೆ ಮ್, ನ್ ಎಂಬ ಎರಡು ಪ್ರತ್ಯಯಗಳು ಸೇರುತ್ತವೆಂದು ಹೇಳಬೇಕಾಗುತ್ತದೆ[1]; ಆದರೆ ಇವು ವಿಭಕ್ತಿಪ್ರತ್ಯಯಗಳೇ ಅಹುದು ಎಂದು ಹೇಳುವುದು ಹೇಗೆ?

**ಮ್, ನ್—ಇವು ವಿಭಕ್ತಿಪ್ರತ್ಯಯಗಳಲ್ಲ.** ಮ್, ನ್ ಎಂಬಿವು ವಿಭಕ್ತಿ ಪ್ರತ್ಯಯಗಳಲ್ಲವೆಂಬುದಕ್ಕೆ ಆಧಾರವಿದೆ:—(೧) ಮ್ ಪ್ರತ್ಯಯವು ಪುಲ್ಲಿಂಗ ಸ್ತ್ರೀ ಲಿಂಗ ಶಬ್ದಗಳಿಗೆ ಹತ್ತುವುದಿಲ್ಲ; ನ್ ಪ್ರತ್ಯಯವು ನಪುಂಸಕ ಶಬ್ದಗಳಲ್ಲಿ ಅನೇಕಕ್ಕೆ ಹತ್ತುವುದಿಲ್ಲ. ಹೀಗೆ ಲಿಂಗಭೇದದಿಂದ ಪ್ರಥಮಾವಿಭಕ್ತಿಪ್ರತ್ಯವು ಬೇರೆಯಾಗುತ್ತದೆ. ಮಿಕ್ಕ ವಿಭಕ್ತಿಪ್ರತ್ಯಯಗಳೆಲ್ಲವೂ ಲಿಂಗಭೇದವಿಲ್ಲದೆ ಶಬ್ದಗಳಿಗೆ ಸೇರುತ್ತವೆ. ಪ್ರಥಮಾವಿಭಕ್ತಿ ಮಾತ್ರ ಈ ಲಕ್ಷಣಕ್ಕೆ ವಿರುದ್ಧವಾದುದೆಂದು ಹೇಳಬೇಕಾಗುತ್ತದೆ. ಹೀಗಾಗುವುದಕ್ಕೆ ಸಮಂಜಸವಾದ ಕಾರಣವಾವುದೂ ತೋರಿಬರುವುದಿಲ್ಲ. (೨) ಅಲ್ಲದೆ ಅಕಾರಾಂತ ಶಬ್ದಗಳಿಗೆ ಬಹುವಚನಗಳಲ್ಲಿ ಗಳ್ ಪ್ರತ್ಯಯವು ಸೇರುವಾಗ ಅದು ಮ್ ನ್ ಎಂಬ ಪ್ರತ್ಯಯಗ[illegible] ಮುಂದೆ ಸೇರುತ್ತದೆ. ಅಣ್ಣಂಗಳ್ ಮರಂಗಳ್ ಮುಂತಾದ ಪ್ರಯೋಗದಲ್ಲಿ ಅನುಸ್ವಾರವು ಆಗಮವಾಗಿವೆಯೆಂದು ಹೇಳಿದೆ. (೩) ಅಕಾರಾಂತ ಪುಲ್ಲಿಂಗ ಶಬ್ದಗಳಿಗೆ ದ್ವಿತಿಯಾದಿ ತೃತಿಯಾದಿ ವಿಭಕ್ತಿಪ್ರತ್ಯಯಗಳು ಪರವಾದಾಗಲೂ ನಕಾರವು ಉಳಿದಿರುತ್ತದೆ. ಇದೂ ಆಗಮವೆಂದು

---

[1] ಮೊದಲು ಅಕಾರಂತ ಪುಲ್ಲಿಂಗಗಳು ನಾಂತವಾಗಿದ್ದುವೆಂಬುದರಲ್ಲಿ ಯಾವ ಸಂದೇಹವೂ ಕಾಣುವುದಿಲ್ಲ. ಆದರೆ ಈ ಕಡೆಯ ನಕಾರವನ್ನು ಬಿಂದುವಾಗಿ ಬರೆಯುತ್ತ ಬಂದು ನಕಾರೋಚ್ಚಾರಣೆ ನಿಂತುಹೋದಮೇಲೆ ಇದು ಮಕಾರವೆಂದು ಭ್ರಮಿಸಿರಬಹುದೇ, ಅಥವಾ ಹಳಗನ್ನಡದ ಕಾಲದಲ್ಲಿ ನಕಾರವು ಮಕಾರವಾಗಿ ಪರಿಣಾಮಹೊಂದಿತೇ ವಿಚಾರಮಾಡತಕ್ಕದ್ದಾಗಿದೆ. ಹೊಸಗನ್ನಡವನ್ನು ನೋಡಿದರೆ, ಮೊದಲ ಊಹೆಯೇ ಸರಿಯೆಂದು ತೋರುತ್ತದೆ.

ವ್ಯಾಕರಣಗಳಲ್ಲಿ ಹೇಳಿದೆ. ನಪುಂಸಕಲಿಂಗ ಶಬ್ದಕ್ಕೆ ದ್ವಿತೀಯಾವಿಭಕ್ತಿಯ ಅಂ ಪರವಾದಾಗ ಮಕಾರವಾಗುತ್ತದೆ (ಮರಮ್+ಅಂ=ಮರಮಂ); ತೃತೀಯಾದಿ ವಿಭಕ್ತಿಗಳು ಪರವಾದಾಗ ದಕಾರಾಗಮವಾಗುತ್ತದೆ. (ಮರ+ದ್+ಇಂ= ಮರದಿಂ ಇತ್ಯಾದಿ) ಎಂದು ವ್ಯಾಕರಣಗಳಲ್ಲಿ ಹೇಳಿದೆ. ಪುಲ್ಲಿಂಗ ಶಬ್ದಗಳಿಗೆ ಸ್ವರಾದಿ ವಿಭಕ್ತಿಪರವಾದರೆ ನಕಾರಾಗಮವೇಕೆ? ನಪುಂಸಕಲಿಂಗದವುಗಳಿಗೆ ಪರವಾದರೆ ಮಕಾರ ಅಥವಾ ದಕಾರದ ಆಗಮವೇಕೆ? ವ್ಯಾಕರಣಗಳಲ್ಲಿ ಇದಕ್ಕೆ ಸಮರ್ಪಕವಾದ ಉತ್ತರವಿಲ್ಲ. ಇದನ್ನೆಲ್ಲ ನೋಡಿದರೆ ಮ್, ನ್ ಎಂಬಿವು ವಿಭಕ್ತಿ ಪ್ರತ್ಯಯಗಳೇ ಅಲ್ಲವೆಂದು ಗೊತ್ತಾಗುತ್ತದೆ.

**ಅವು ಲಿಂಗವನ್ನು ಸೂಚಿಸುವಂತೆ ತೋರುತ್ತದೆ.** ಮ್, ನ್ ಎಂಬಿವು ವಿಭಕ್ತಿಪ್ರತ್ಯಯಗಳಲ್ಲದಿದ್ದರೆ ಮತ್ತೇನು? ಇವು ಏನೆಂಬುದನ್ನು ಊಹಿಸುವುದಕ್ಕೆ ಕೆಲವು ಸಾಧನಗಳಿವೆ:—(೧) ಅಕಾರಾಂತ ಪುಲ್ಲಿಂಗ ಶಬ್ದಗಳಿಗೆ ಏಕವಚನದಲ್ಲಿ ನ್ ಸೇರುತ್ತದಷ್ಟೆ? ಅವಕ್ಕೆ ಬಹುವಚನದಲ್ಲಿ ಸಾಮಾನ್ಯವಾಗಿ ರ್ ಪ್ರತ್ಯಯವು (ಅರ್, ದಿರ್, ವಿರ್ ಇತ್ಯಾದಿ) ಸೇರುತ್ತದೆ. ಗಳ್ ಪ್ರತ್ಯಯವು ಸೇರುವುದು ಹಳಗನ್ನಡದಲ್ಲಿ ಅಪೂರ್ವ. ಹೊಸಗನ್ನಡದಲ್ಲಿ ಇಲ್ಲವೇ ಇಲ್ಲ. (ಅ)ನ್, (ಅ)ರ್ ಎಂಬೀ ಪ್ರತ್ಯಯಗಳು ಅವನ್ ಇವನ್, ಅವರ್, ಇವರ್, ಈ ಮೊದಲಾದ ಸರ್ವನಾಮಗಳಲ್ಲಿಯೂ; ಒರ್ವನ್, ಇರ್ವರ್, ಮೊದಲಾದ ಸಂಖ್ಯಾವಾಚಕ ಗಳಲ್ಲಿಯೂ; ನಲ್ಲನ್, ನಲ್ಲರ್ ಮೊದಲಾದ ಗುಣವಾಚಕಗಳಲ್ಲಿಯೂ, ಮಾಡುವನ್, ಬೇಡುವನ್, ಮಾಡುವರ್, ಬೇಡುವರ್ ಮೊದಲಾದ ಕೃದಂತಗಳಲ್ಲಿಯೂ; ಮಾಡಿದಪನ್, ಕೊಲ್ವನ್, ಮಾಡಿದಪರ್, ಕೊಲ್ವರ್ ಮೊದಲಾದ ಕ್ರಿಯಾಪದ ಗಳಲ್ಲಿಯೂ ಕಂಡುಬರುತ್ತವೆ. ಅಲ್ಲಿ ಪುಲ್ಲಿಂಗವನ್ನು ಸೂಚಿಸುತ್ತವೆ. ಇಲ್ಲಿಯೂ ನ್, ರ್ ಅಥವಾ ಅನ್, ಅರ್ ಎಂಬಿವು ಪುಲ್ಲಿಂಗವನ್ನು ಸೂಚಿಸುತ್ತವೆಂದು ಇಟ್ಟು ಕೊಳ್ಳುವುದು ಅನುಚಿತವಾಗಲಾರದು. ಮರ, ಕೊಳ ಮೊದಲಾದ ಕೆಲವು ನಪುಂಸಕಲಿಂಗಶಬ್ದಗಳಿಗೂ ಏಕವಚನದಲ್ಲಿ ನ್ ಸೇರುವುದಲ್ಲ ಎಂದರೆ, ಇವುಗಳಿಗೆ ಬಹುವಚನದಲ್ಲಿ ಅರ್ ಅಥವಾ ರ್ ಪ್ರತ್ಯಯವು ಸೇರುವುದಿಲ್ಲ. ನ್ ಅಥವಾ ಅನ್ ಎಂಬುದು ಪುಲ್ಲಿಂಗವನ್ನು ಸೂಚಿಸುವುದಾದರೆ ಮ್ ಅಥವಾ ಅಮ್ ಎಂಬುದು ನಪುಂಸಕವನ್ನು ಸೂಚಿಸಬೇಕಾಗುತ್ತದೆ. ಅಮ್ ಎಂಬುದು ಅದು ಎಂಬ ಅರ್ಥ ವನ್ನು ಸೂಚಿಸುವ ನಪುಂಸಕಲಿಂಗ ಸರ್ವನಾಮವೆಂದು ಡಾ|| ಗುಂಡರ್ಟ್ ಸಾಹೇಬರು ಅಭಿಪ್ರಾಯಪಡುತ್ತಾರೆ. ಡಾ|| ಕಾಲ್ಡ್ವೆಲ್ ಅವರು ಆ ಅಭಿಪ್ರಾಯ ವನ್ನು ಅನುಮೋದಿಸುತ್ತಾರೆ. ಅಮ್ ಎಂಬುದು ನಪುಂಸಕಲಿಂಗವನ್ನು ಸೂಚಿಸು ತ್ತದೆ ಎಂಬುದಕ್ಕೆ ಅಕಾರಾಂತ ನಪುಂಸಕಗಳಿಗೆ ತೃತೀಯಾದಿ ವಿಭಕ್ತಿಗಳು ಸೇರು ವಾಗ ಆಗಮವಾಗುವ ತ್, ದ್, ಱ್ ಎಂಬಿವು ಸಾಧಕವಾಗುತ್ತವೆ. ಏಕೆಂದರೆ ಇವೆಲ್ಲವೂ ನಪುಂಸಕಲಿಂಗವನ್ನು ಸೂಚಿಸುವ ಪ್ರತ್ಯಯಗಳು. ಆದುದರಿಂದ

ಮರಮ್, ಕೊಳಮ್, ನೆಲಮ್, ತೆಜಮ್ ಮುಂತಾದುವೇ ಮೂಲರೂಪಗಳೆಂದೂ, ಮರನ್, ಕೊಳನ್, ನೆಲನ್, ತೆಜನ್ ಮುಂತಾದುವು ವಿಕಲ್ಪರೂಪಗಳೆಂದೂ ಭಾವಿಸಬೇಕು.

**ವಿಭಕ್ತಿಪ್ರತ್ಯಯಗಳು ಸ್ವತಂತ್ರ ಶಬ್ದಗಳೆ?** ವಿಭಕ್ತಿಪ್ರತ್ಯಯಗಳು ಒಂದಾನೊಂದು ಕಾಲದಲ್ಲಿ ಸ್ವತಂತ್ರ ಶಬ್ದಗಳಾಗಿದ್ದಿರಬೇಕೆಂದೂ ಕಾಲಕ್ರಮದಲ್ಲಿ ಅವು ಪ್ರತ್ಯಯಗಳಾಗಿ ಪರಿಣಮಿಸಿರಬೇಕೆಂದೂ ಡಾ|| ಕಾಲ್ಡ್ವೆಲ್ ಸಾಹೇಬರೇ ಮೊದಲಾದ ಪಾಶ್ಚಾತ್ಯಪಂಡಿತರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯವನ್ನು ವ್ಯಕ್ತಗೊಳಿಸಲು ಸಪ್ತಮೀವಿಭಕ್ತಿಪ್ರತ್ಯಯಗಳನ್ನು ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಉಳ್, ಒಳ್, ಒಳು, ಒಳಗೆ; ಅಲ್, ಅಲು, ಅಲಿ, ಅಲ್ಲಿ, ಎಂಬೀ ರೂಪಗಳು ಸಪ್ತಮೀವಿಭಕ್ತಿ ಪ್ರತ್ಯಯಗಳಾಗಿ ಕಂಡುಬರುತ್ತವೆ. ಈ ರೂಪಗಳೆಲ್ಲವೂ ಉಳ್, ಅಲ್ ಎಂಬೆರಡರಿಂದ ಹುಟ್ಟಿದವು. ಒಂದು ಕಾಲದಲ್ಲಿ ಉಳ್ ಎಂಬುದಕ್ಕೆ 'ಒಳಭಾಗ', ಅಲ್ ಎಂಬುದಕ್ಕೆ 'ಸ್ಥಳ' ಎಂಬ ಅರ್ಥಗಳಿದ್ದು ಅವು ಸ್ವತಂತ್ರಶಬ್ದಗಳಾಗಿರಬೇಕು. ಅವನು ಒಳಗೆ ಇಲ್ಲ; ಅವನು ಅಲ್ಲಿ ಇಲ್ಲ, ಇತ್ಯಾದಿ ಪ್ರಯೋಗಗಳು, ಉಳ್, ಅಲ್ ಮೊದಲಾದುವು ಸ್ವತಂತ್ರಶಬ್ದಗಳೆಂಬುದಕ್ಕೆ ನಿದರ್ಶನಗಳಾಗಿವೆ. ಹೀಗೆ ಸಪ್ತಮೀವಿಭಕ್ತಿಪ್ರತ್ಯಯವು ಸ್ವತಂತ್ರ ಶಬ್ದವಾಗಿದ್ದುದೆಂಬುದನ್ನು ಸಾಧಿಸಬಹುದು. ಷಷ್ಠೀವಿಭಕ್ತಿಪ್ರತ್ಯಯವಾದ ಅ ಎಂಬುದು ಅದು ಎಂಬುದರಿಂದ ಹುಟ್ಟಿದ್ದು ಎಂದು ಹೇಳಬಹುದು. ಹೀಗೆಯೇ ಮಿಕ್ಕ ಪ್ರತ್ಯಯಗಳೂ ಸ್ವತಂತ್ರ ಶಬ್ದಗಳಾಗಿದ್ದುವೆಂದು ತೋರಿಸುವುದು ಇಷ್ಟು ಸುಲಭವಲ್ಲ. ಅವು ಸ್ವತಂತ್ರಶಬ್ದಗಳಾಗಿದ್ದುದರ ಗುರುತುಗಳು ಈಗ ದೊರೆಯುವುದಿಲ್ಲ. ಆದರೂ ಅವು ಒಂದು ಕಾಲದಲ್ಲಿ ಸ್ವತಂತ್ರ ಶಬ್ದಗಳಾಗಿದ್ದಿರಬೇಕೆಂದು ಆಧುನಿಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ವಿಭಕ್ತಿಪ್ರತ್ಯಯಗಳ ಚರಿತ್ರೆ :** ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ವಿಭಕ್ತಿ ಪ್ರತ್ಯಯಗಳಲ್ಲಿ :—(೧) ಕೆಲವು ಈಗಲೂ ಹಿಂದೆ ಇದ್ದ ರೂಪದಲ್ಲಿಯೇ ಪ್ರಯೋಗವಾಗುತ್ತವೆ. ಉದಾ :—ಚ. ವಿ. ಪ್ರತ್ಯಯ ಕೆ, ಗೆ. (೨) ಕೆಲವು ಈಗ ಸ್ವಲ್ಪ ಮಟ್ಟಿಗೆ ರೂಪವ್ಯತ್ಯಾಸವನ್ನು ಹೊಂದಿ ಪ್ರಯೋಗವಾಗುತ್ತವೆ. ಈ ವ್ಯತ್ಯಾಸವು ಮುಖ್ಯವಾಗಿ ಉಚ್ಚಾರಣೆಗೆ ಸಂಬಂಧಿಸಿದುದು—ಅಂತ್ಯವ್ಯಂಜನವು ಸ್ವರವನ್ನು ಹೊಂದುವುದು ಅಥವಾ ಲೋಪವಾಗುವುದು. ಉದಾ :—ದ್ವಿ.ವಿ. ಪ್ರತ್ಯಯ ಅನ್ > ಅನು, ಅನ್ನು ಅಥವಾ ಅ. (೩) ಕೆಲವು ಈಗ ಪ್ರಯೋಗದಲ್ಲಿಲ್ಲ; ಎಂದರೆ ಅಳಿದುಹೋಗಿವೆ. ಎರಡು ಮೂರು ಪ್ರತ್ಯಯಗಳು ಒಂದೇ ವಿಭಕ್ತಿಗೆ ಇದ್ದರೆ ಅವುಗಳಲ್ಲಿ ಯಾವುದಾದರೂ ಒಂದು ಉಳಿದು ಮಿಕ್ಕವು ಅಳಿದು ಹೋಗುತ್ತವೆ. ಉದಾ :—ತೃ.ವಿ. ಪ್ರತ್ಯಯ ಇಂ, ಇಂದಂ, ಇಂದೆ > ಇಂದ. ಪ್ರತಿಯೊಂದು ವಿಭಕ್ತಿಯ ಪ್ರತ್ಯಯಗಳೂ ಕಾಲಕ್ರಮದಲ್ಲಿ ಹೇಗೆ ವ್ಯತ್ಯಾಸಹೊಂದಿವೆ ಎಂಬುದು ಕೆಳಗೆ ವಿಸ್ತಾರವಾಗಿ ನಿರೂಪಿತವಾಗಿದೆ.

## —ಪ್ರಥಮಾವಿಭಕ್ತಿ—

**ಪ್ರಕೃತಿ ಪ್ರಯೋಗ :** ಕನ್ನಡದಲ್ಲಿ ಪ್ರ. ವಿ. ಗೆ ಪ್ರತ್ಯಯವಾವುದೂ ಇಲ್ಲ ; ಏಕವಚನದಲ್ಲಿ ಪ್ರಕೃತಿಯೂ ಬಹುವಚನದಲ್ಲಿ ಬಹುವಚನಪ್ರತ್ಯಯದಿಂದ ಕೂಡಿದ ಪ್ರಕೃತಿಯೂ ಪ್ರ.ವಿ.ಯ ಅರ್ಥವನ್ನು ಸೂಚಿಸುತ್ತವೆ. ಏಕವಚನದಲ್ಲಿ ನ್, ಮ್ ಎಂಬಿವು ಕೆಲವು ಶಬ್ದಗಳ ಕೊನೆಯಲ್ಲಿರುತ್ತವೆ ; (ಇವನ್ನು ಬಿಂದುವಾಗಿ ಬರೆಯುವುದು ಬರವಣಿಗೆಯ ವಿಷಯ) ಇವು ವಿಭಕ್ತಿಪ್ರತ್ಯಯಗಳಲ್ಲ ಎಂಬುದನ್ನು ಹಿಂದೆಯೇ ಸಕಾರಣವಾಗಿ ವಿವರಿಸಿದೆ.[1] ಈ ಬಗೆಯ ಶಬ್ದಗಳನ್ನು ಬಿಂದುವಿಲ್ಲದೆಯೇ ಪ್ರಯೋಗಿಸುವುದು ತಪ್ಪೆಂದು ಹಳಗನ್ನಡ ವ್ಯಾಕರಣಗಳಲ್ಲಿ ಹೇಳಿದೆ. ಆ ವಿಧವಾದ ಪ್ರಯೋಗವು ಹಳಗನ್ನಡ ಗ್ರಂಥಗಳಲ್ಲಿ ಕಂಡುಬರುವುದು ಅಪೂರ್ವ. ಆದರೆ ಆ ಕಾಲದಲ್ಲಿ ಅಂಥ ಪ್ರಯೋಗವು ಜನರಾಡುವ ಮಾತಿನಲ್ಲಿ ಬಳಕೆಗೆ ಬಂದಿತ್ತೆಂದು ತೋರುತ್ತದೆ. ಏಕೆಂದರೆ ಆ ಪ್ರಯೋಗವು ಹಳಗನ್ನಡ ಗ್ರಂಥಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ನಡುಗನ್ನಡದಲ್ಲಿ ಇನ್ನೂ ಹೆಚ್ಚಾಗಿ ಕಂಡುಬರುತ್ತದೆ ; ಹೊಸಗನ್ನಡದ ಮಾತನಾಡುವ ಭಾಷೆಯಲ್ಲಿ ವಿಶೇಷವಾಗಿ ಬಳಕೆಯಲ್ಲಿದೆ.

ನಡುಗನ್ನಡದಲ್ಲಿಯೂ ನ್, ಮ್ ಕೂಡಿದ ಪ್ರಕೃತಿಗಳುಂಟು. ಅಲ್ಲದೆ ಅವಕ್ಕೆ ಉಕಾರ ಸೇರಿ ನು ವು ಎಂಬ ರೂಪಗಳು ಬಳಕೆಗೆ ಬರುತ್ತವೆ. ಮ್ ಎಂಬುದಕ್ಕೆ ಉಕಾರವು ಸೇರುವಾಗ ಮಕಾರಕ್ಕೆ ವಕಾರಾದೇಶವೂ ಆಗುತ್ತದೆ. ವೃಕ್ಷಂ ಎಂಬ ಹಳಗನ್ನಡದ ಪದವು ವೃಕ್ಷವು ಎಂದು ನಡುಗನ್ನಡದಲ್ಲಿ ಕಾಣುತ್ತದೆಯೇ ಹೊರತು ವೃಕ್ಷಮು ಎಂದು ಎಲ್ಲಿಯೂ ಕಂಡುಬರುವುದಿಲ್ಲ.

ನಡುಗನ್ನಡದಲ್ಲಿ ಉಕಾರ ಸೇರಿದ ರೂಪಗಳಲ್ಲದೆ, ಹಳಗನ್ನಡದ ಅನುನಾಸಿಕ ವ್ಯಂಜನವು ಲೋಪವಾದ ರೂಪಗಳೂ ಹೊಸಗನ್ನಡದಲ್ಲಿ ರೂಢಿಯಾಗಿವೆ. ನೆಲನು ಮುಂತಾದ ವಿಕಲ್ಪ ರೂಪಗಳಿಲ್ಲ. ಹಳಗನ್ನಡ, ನಡುಗನ್ನಡಗಳಲ್ಲಿ ಇಲ್ಲದೆ ಇದ್ದ ಒಂದು ವಿಶೇಷ ಪ್ರಯೋಗವು—ಅಕಾರಾಂತಗಳಲ್ಲದ ಶಬ್ದಗಳಿಗೂ ಉ ಪ್ರತ್ಯಯವನ್ನು ಸೇರಿಸುವುದು—ಹೊಸಗನ್ನಡದಲ್ಲಿ ಗ್ರಾಂಥಿಕಭಾಷೆಯಲ್ಲಿ ಮಾತ್ರ ಕಂಡುಬರುತ್ತದೆ. ಇದಕ್ಕೆ ಉ ಎಂಬುದು ಪ್ರ.ವಿ. ಪ್ರತ್ಯಯವೆಂಬ ಭ್ರಮೆಯೇ ಕಾರಣ. ಹಳಗನ್ನಡದಲ್ಲಿನ ವ್ಯಂಜನಾಂತಗಳೆಲ್ಲವೂ ಸ್ವರಾಂತಗಳಾಗುವುದರಿಂದ, ಅದರಲ್ಲಿಯೂ ಮುಖ್ಯವಾಗಿ ಉಕಾರಾಂತಗಳಾಗುವುದರಿಂದ, ಉ ಎಂಬುದನ್ನು ಪ್ರ.ವಿ. ಪ್ರತ್ಯಯವೆಂದು ಭಾವಿಸುವುದು ತಪ್ಪು.

---

[1] ಅಕ್ಕನ್, ಅಣ್ಣನ್, ನೆಲನ್, ನೆಲಮ್, ಆಟಮ್ ಮುಂತಾದ ಶಬ್ದಗಳಲ್ಲಿ ನ್, ಮ್ ಎಂಬಿವು ಪ್ರಕೃತಿಗೇ ಸೇರಿದುವೇ ಅಥವಾ ಅಕಾರಾಂತ ಪ್ರಕೃತಿಯ ಮೇಲೆ ಹತ್ತಿದ ವಿಭಕ್ತಿ ಪ್ರತ್ಯಯಗಳೇ ಎಂಬ ವಿಷಯವನ್ನು ವಿಚಾರಮಾಡಿ ವಾಚಕರು ನಿಶ್ಚಯಿಸಿಕೊಳ್ಳಬೇಕು.

## —ದ್ವಿತೀಯಾವಿಭಕ್ತಿ—

ಹಳಗನ್ನಡ—ಅಂ, ಆಂ; ನಡುಗನ್ನಡ—ಅಂ, ಅನು; ಹೊಸಗನ್ನಡ—ಅನ್ನು ಅನ್ನ.

ದ್ವಿ. ವಿ. ಪ್ರತ್ಯಯವು ಅವ್ ಎಂದು ಹಳಗನ್ನಡ ವ್ಯಾಕರಣಗಳಲ್ಲಿ ಹೇಳಿದೆ; ಆದರೆ ಅದು ಅನ್ ಎಂದು ತೋರುತ್ತದೆ.[1] ಏಕೆಂದರೆ:—(೧) ಅದಕ್ಕೆ ಸ್ವರಪರವಾದಾಗ ಅದು ನಕಾರವಾಗುತ್ತದೆ. (೨) ಅದು ಮಕಾರವಾಗಿ ಮತ್ತಾವ ದ್ರಾವಿಡ ಭಾಷೆಯಲ್ಲಿಯೂ ಪ್ರಯೋಗವಾಗುವುದಿಲ್ಲ. ನಕಾರವಾಗಿಯೇ ಪ್ರಯೋಗವಾಗುತ್ತದೆ. (೩) ಪ್ರಾಚೀನ ಶಾಸನಗಳಲ್ಲಿ ಅನ್, ಆನ್ ಎಂಬ ನಾಂತ ಪ್ರಯೋಗವು ದೊರಕುತ್ತದೆ. ಉದಾ:—ಸಿಂಘಮುನ್, ಪೀಠಮಾನ್ ಇತ್ಯಾದಿ.

ಆನ್ ಎಂಬ ಪ್ರತ್ಯಯವು ಪೂರ್ವದ ಹಳಗನ್ನಡದಲ್ಲಿ ಕಂಡುಬರುವಷ್ಟು ಹಳಗನ್ನಡದಲ್ಲಿ ಕಂಡುಬರುವುದಿಲ್ಲ. ಹಳಗನ್ನಡದಲ್ಲಿ ಅನ್ ಎಂಬುದೇ ವಿಶೇಷವಾಗಿ ಪ್ರಯೋಗವಾಗುವ ಪ್ರತ್ಯಯ. ನಡುಗನ್ನಡದಲ್ಲಿ ಅನ್ ಎಂಬುದು ಅಲ್ಲದೆ ಉಕಾರ ಸೇರಿ ಅನು ಎಂಬುದೂ ಕಂಡುಬರುತ್ತದೆ. ಹೊಸಗನ್ನಡದಲ್ಲಿ ಗ್ರಾಂಥಿಕ ಭಾಷೆಯಲ್ಲಿ ಅನ್ನು ಎಂಬುದೂ ಮಾತನಾಡುವ ಭಾಷೆಯಲ್ಲಿ ಅನ್ನ ಎಂಬುದೂ ಕಂಡುಬರುತ್ತದೆ. ಉದಾ:—ಹಳಗನ್ನಡ—ರಾಮುನಂ. ನಡುಗನ್ನಡ—ರಾಮುನಂ, ರಾಮುನನು; ಹೊಸಗನ್ನಡ—ರಾಮುನನ್ನು, ರಾಮುನನ್ನ.

ನಡುಗನ್ನಡ, ಹೊಸಗನ್ನಡಗಳಲ್ಲಿ ಅನ್ ಪ್ರತ್ಯಯದ ಅಂತ್ಯವ್ಯಂಜನವು ಲೋಪವಾಗುವುದೂ ಉಂಟು. ಈ ತೆರದ ಪ್ರಯೋಗವು ಹಳಗನ್ನಡ ಕಾಲದಲ್ಲಿಯೂ ಸ್ವಲ್ಪಮಟ್ಟಿಗೆ ಇತ್ತೆಂದು ಊಹಿಸಬಹುದು. ಕೇಶಿರಾಜನು "ನೀನೆನ್ನ ಕೊಂದಯ್" ಎಂಬ ಪ್ರಯೋಗವು ಉಂಟೆಂದು ತಿಳಿಸಿ, ಎನ್ನ ಎಂಬುದು ಷಷ್ಠೀ ವಿಭಕ್ತಿಯೆಂದೂ ಅದು ದ್ವಿತೀಯಾರ್ಥದಲ್ಲಿ ಪ್ರಯೋಗವಾಗುವುದೆಂದೂ ಹೇಳುತ್ತಾನೆ. ವಿಭಕ್ತಿ ಪಲ್ಲಟವಾಗುವುದುಂಟು; ಆದರೆ ಈ ಸಂದರ್ಭದಲ್ಲಿ ಎನ್ನ ಎಂಬುದು ಅಂತ್ಯವ್ಯಂಜನ ಲೋಪವಾದ ದ್ವಿತೀಯೆಯೆಂದು ಹೇಳುವುದು ಸಮಂಜಸವೆಂದು ನಡುಗನ್ನಡ, ಹೊಸಗನ್ನಡಗಳ ಪ್ರಯೋಗಗಳಿಂದ ತಿಳಿದುಬರುತ್ತದೆ. ಉದಾ:—ನನಗೆ ಕೊಡುವ ಹಣಾ (ಹಣವ) ತಾ. ಹಣವಂ> ಹಣವ> (ಹಣ ಅ)> ಹಣಾ> ಹಣ. ಜನರಾಡುವ ಮಾತಿನಲ್ಲಿ ಈ ಬಗೆಯ ದ್ವಿತೀಯಾರ್ಥವನ್ನು ಕೊಡುವ ಶಬ್ದಗಳ ಅಂತ್ಯದಲ್ಲಿ ದೀರ್ಘಸ್ವರವು ಕೇಳಿಬರುತ್ತದೆ. ಉದಾ:—ಹಣಾ ತಾ; ಕುರೀ (=ಕುರಿಯ) ಕಾಯಿ. ಕರೂ (=ಕರುವ) ಬಿಡು. ಮನೇ (=ಮನೆಯ) ಕಟ್ಟು.

---

[1] ಪ್ರ. ವಿ. ಯಂತೆ ಇಲ್ಲಿಯೂ ಬಿಂದುವನ್ನು ಬರೆಯುವುದರಿಂದ ಮಕಾರಭ್ರಮೆ ಹುಟ್ಟಿರಬಹುದು.

—ತೃತೀಯಾವಿಭಕ್ತಿ—

ಹಳಗನ್ನಡ—ಇಂ, ಇಂದಂ, ಇಂದೆ, ಎ.[1] ನಡುಗನ್ನಡ—ಇಂ, ಇಂದಂ, ಇಂದೆ, ಇ, ಇಂದ. ಹೊಸಗನ್ನಡ—ಇಂದ.

ತೃತೀಯಾವಿಭಕ್ತಿಪ್ರತ್ಯಯವು ಇಮ್ ಎಂದು ಹಳಗನ್ನಡ ವ್ಯಾಕರಣದಲ್ಲಿ ಹೇಳಿದೆ. ಈ ಪ್ರತ್ಯಯಕ್ಕೆ ಸ್ವರ ಪರವಾದಾಗ ನಕಾರವಾಗುವುದರಿಂದಲೂ ಪ್ರಾಚೀನ ಶಾಸನಗಳಲ್ಲಿ ಇನ್ ಎಂಬ ರೂಪವು ದೊರೆಯುವುದರಿಂದಲೂ ಇದನ್ನು ಇನ್ ಎಂದು ಇಟ್ಟುಕೊಳ್ಳುವುದೇ ಯುಕ್ತ.[2]

ಹಳಗನ್ನಡಕ್ಕೂ, ನಡುಗನ್ನಡಕ್ಕೂ ಇರುವ ವ್ಯತ್ಯಾಸಗಳೆರಡು :—(೧) ಎ ಎಂಬುದು ಇ ಆಗಿರುವುದು ; (೨) ಇಂದಂ ಎಂಬುದರ ಅಂತ್ಯಾಕ್ಷರವು ಲೋಪವಾಗಿ ಇಂದ ಎಂದಾಗಿರುವುದು. ಹೊಸಗನ್ನಡದಲ್ಲಿ ಇಂದ ಎಂಬ ಪ್ರತ್ಯಯವು ಮಾತ್ರ ಉಳಿದಿದೆ.

—ಚತುರ್ಥೀವಿಭಕ್ತಿ—

ಕೆ, ಗೆ, ಅಥವಾ (ಇ) ಗೆ.

ಈ ಪ್ರತ್ಯಯಗಳಲ್ಲಿ ಯಾವ ವ್ಯತ್ಯಾಸವೂ ಆಗಿಲ್ಲ. ಇಗೆ ಎಂಬಲ್ಲಿ ಇಕಾರಾಗಮವು ಬಂದಿದೆ.

—ಷಷ್ಠೀವಿಭಕ್ತಿ—

ಹಳಗನ್ನಡ—ಅ, ಆ ; ನಡುಗನ್ನಡ—ಅ ; ಹೊಸಗನ್ನಡ—ಅ.

ಹಳಗನ್ನಡದಲ್ಲಿ ಅ ಎಂಬ ಪ್ರಯೋಗವೇ ವಿಶೇಷವಾಗಿ ಪ್ರಯೋಗದಲ್ಲಿರುತ್ತದೆ. ನಡುಗನ್ನಡ ಹೊಸಗನ್ನಡಗಳಲ್ಲಿ ಪ್ರಯೋಗದಲ್ಲಿರುವ ಪ್ರತ್ಯಯವು ಅದೊಂದೇ. ಆ ಎಂಬ ಪ್ರತ್ಯಯವು, ಹಳಗನ್ನಡದಲ್ಲಿ ಕ್ವಚಿತ್ತಾಗಿ, ಮುಖ್ಯವಾಗಿ ಪದ್ಯಗಳಲ್ಲಿ ಪದಾಂತಗಳಲ್ಲಿ ಬಂದಾಗ, ಪ್ರಯೋಗವಾಗುತ್ತದೆ. ಪೂರ್ವದ ಹಳಗನ್ನಡದಲ್ಲಿ ಆದು ಹೆಚ್ಚು ರೂಢಿಯಲ್ಲಿತ್ತೆಂದು ಪ್ರಾಚೀನ ಶಾಸನಗಳಿಂದ ತೋರಿಬರುತ್ತದೆ. ಕೆಲವು ವೇಳೆ ಷಷ್ಠ್ಯರ್ಥದಲ್ಲಿ ಅದು, ಅತ್ತು, ಅತು ಎಂಬುವು ಸೇರುತ್ತವೆ. ಉದಾ: ನಿನ್ನದು, ನಿನತ್ತು, ನಿನತು. ಅ ಎಂಬುದು ಅದು ಎಂಬುದರ ಸವೆದ ರೂಪವೆಂದು ಕಾಣುತ್ತದೆ.

—ಸಪ್ತಮೀವಿಭಕ್ತಿ—

ಹಳಗನ್ನಡ—ಒಳ್, ಒಳಗೆ, ಅಲ್ಲಿ ; ನಡುಗನ್ನಡ—ಒಳ್, ಒಳು, ಒಳಗೆ ; ಅಲು, ಅಲಿ, ಅಲ್ಲಿ ; ಹೊಸಗನ್ನಡ—ಒಳಗೆ, ಅಲ್ಲಿ.

---

[1] ಇದು ವ್ಯಾಕರಣಗಳಲ್ಲಿ ತೃತೀಯಾವಿಭಕ್ತಿ ಪ್ರತ್ಯಯವೆಂದು ಹೇಳಿದ್ದರೂ ಸಪ್ತಮೀ ವಿಭಕ್ತಿ ಪ್ರತ್ಯಯವೆಂದು ತೋರುವುದು. ಒಳಗು + ಎ = ಒಳಗೆ ಎಂಬುದರೊಡನೆ ಹೋಲಿಸಿ.

[2] ಇದೂ ಬಿಂದುವಿನ ಕೆಲಸವೇ.

ಪೂರ್ವದ ಹಳಗನ್ನಡದಲ್ಲಿ ಉಳ್, ಅಲ್ ಎಂಬ ಪ್ರತ್ಯಯಗಳು ದೊರೆಯುತ್ತವೆ. ಕೇಶಿರಾಜನ ಕಾಲಕ್ಕೆ ಇವು ಒಳ್, ಅಲ್ಲಿ ಎಂಬ ರೂಪಗಳನ್ನು ತಾಳಿದ್ದುವು. ಒಳು, ಅಲು ಎಂಬ ರೂಪಗಳು ಸ್ವಲ್ಪಮಟ್ಟಿಗೆ ಪ್ರಯೋಗಕ್ಕೆ ಬರುತ್ತಿದ್ದುವು ಎಂದು ಶಾಸನಗಳಿಂದ ತಿಳಿಯಬರುತ್ತದೆ. ಕೇಶಿರಾಜನು ಅವುಗಳನ್ನು ಒಪ್ಪಿದಂತೆ ತೋರುವುದಿಲ್ಲ. ಅಲಿ ಎಂಬ ರೂಪವು ನಡುಗನ್ನಡದಲ್ಲಿ ಮಾತ್ರ ಕಂಡುಬರುತ್ತದೆ. ಹೊಸಗನ್ನಡದಲ್ಲಿ ಮಾತನಾಡುವ ಭಾಷೆಯಲ್ಲಿ ಈಗಲೂ ಇದೆ. ಉದಾ: ಅವನು ಮನೆಯಲ್ಲಿಲ್ಲ (ಉಚ್ಚಾರಣೆ—ಮನೇಲಿ). ಹೊಸಗನ್ನಡದಲ್ಲಿ ಅಲ್ಲಿ ಎಂಬುದೂ ಒಳಗೆ ಎಂಬುದೂ ಪ್ರಯೋಗದಲ್ಲಿವೆ.

ಅದು, ಇದು ಎಂಬ ಶಬ್ದಗಳ ಬಹುವಚನಗಳಿಗೆ ವಿಭಕ್ತಿಪ್ರತ್ಯಯಗಳು ಸೇರುವಾಗ ಹಳಗನ್ನಡದ ಅಱ್ ಆಗಮಕ್ಕೆ ಪ್ರತಿಯಾಗಿ ಹೊಸಗನ್ನಡದಲ್ಲಿ ಗಳ್ ಆಗಮ ಬರುತ್ತದೆ. ಉದಾ: ಹಳಗನ್ನಡ—ಅವಱಿನ್, ಅವಱ್ಕೆ, ಅವಱ, ಅವಱೊಳ್.[1] ಹೊಸಗನ್ನಡ—ಅವುಗಳಿಂದ, (ಅವಕ್ಕೆ,) ಅವುಗಳಿಗೆ, ಅವುಗಳ, ಅವುಗಳಲ್ಲಿ, ಒಳಗಣ, ಹೊರಗಣ, ಹಿಂದಣ, ಮುಂದಣ ಮೊದಲಾದ ರೂಪಗಳು ಒಳಗಿನ, ಹೊರಗಿನ, ಹಿಂದಿನ, ಮುಂದಿನ ಮುಂತಾದ ರೂಪಾಂತರಗಳನ್ನು ಹೊಂದಿವೆ.

ಪಂಚಮೀವಿಭಕ್ತಿಯ ವಿಷಯವು ಈ ಪ್ರಕರಣದ ಆದಿಭಾಗದಲ್ಲಿಯೇ ನಿರೂಪಿತವಾಗಿದೆ. ಸಂಬೋಧನಾವಿಭಕ್ತಿಪ್ರತ್ಯಯಗಳು ಹಿಂದೆ ಇದ್ದಂತೆಯೇ ಈಗಲೂ ಇವೆ.

---

[1] ಅವಱಿನ್ ಇವಱಿನ್ ಮುಂತಾದುವು ನಡುಗನ್ನಡದಲ್ಲಿ ಅವರಿಂದ ಇವರಿಂದ ಮುಂತಾದುವಾಗಿ, ಪುಂಸ್ತ್ರೀಲಿಂಗ ನಪುಂಸಕಲಿಂಗ ಭೇದವು ವ್ಯಕ್ತವಾಗದೆ ಇದ್ದುದರಿಂದ ಹೊಸಗನ್ನಡದಲ್ಲಿ ಅವುಗಳಿಂದ ಇವುಗಳಿಂದ ಮುಂತಾದ ಪ್ರಯೋಗಗಳು ಬಂದಂತೆ ತೋರುತ್ತದೆ.

## ೮. ಸರ್ವನಾಮಗಳು

**ಸರ್ವನಾಮ ಶಬ್ದಗಳ ಚರಿತ್ರೆ:** ಒಂದು ಭಾಷೆಯ ಸರ್ವನಾಮಗಳು ವಿಶೇಷ ಬಳಕೆಯಲ್ಲಿರುವುದರಿಂದ ಸಾಮಾನ್ಯವಾಗಿ ಸ್ಥಿರವಾಗಿರುವುವು. ಅನ್ಯಭಾಷೆಗಳಿಂದ ಈ ಬಗೆಯ ಶಬ್ದಗಳನ್ನು ಸೇರಿಸಿಕೊಳ್ಳುವುದು ಅಪೂರ್ವ. ಆದರೆ ಉಚ್ಚಾರಣೆಯ ವಿಧಿಗಳನ್ನನುಸರಿಸಿ ಶಬ್ದಗಳು ರೂಪಾಂತರವನ್ನು ಹೊಂದಬಹುದು. ಕನ್ನಡದ ಸ್ವರನಾಮಗಳಲ್ಲಿ ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ಕೆಲವು ಈಗಲೂ ಪ್ರಯೋಗದಲ್ಲಿವೆ; ಕೆಲವು ರೂಪ ವ್ಯತ್ಯಾಸವನ್ನು ಹೊಂದಿ ಪ್ರಯೋಗದಲ್ಲಿವೆ. ಮತ್ತೆ ಕೆಲವು ಈಗ ಬಳಕೆಯಲ್ಲಿಲ್ಲ.

**ಉತ್ತಮಪುರುಷ ಸರ್ವನಾಮಗಳು :** ಹಳಗನ್ನಡದಲ್ಲಿ ಉತ್ತಮಪುರುಷ ಸರ್ವನಾಮಗಳಿಗೆ ಆನ್, ಆಮ್; ನಾನ್, ನಾಮ್ ಎಂಬ ಎರಡೆರಡು ರೂಪಗಳುಂಟು. ಅವುಗಳಲ್ಲಿ ಆನ್, ಆಮ್ ಎಂಬುವೇ ಹಳಗನ್ನಡದಲ್ಲಿ ವಿಶೇಷವಾಗಿ ರೂಢಿಯಲ್ಲಿದ್ದುವು. ನಡುಗನ್ನಡದಲ್ಲಿ ನಾನ್, ನಾಮ್ ಎಂಬುವೇ ಹೆಚ್ಚಾಗಿ ರೂಢಿಯಾಗಿದ್ದುವಲ್ಲದೆ ಈ ಶಬ್ದಗಳ ಕೊನೆಗೆ ಉಕಾರ ಸೇರಿ. ನಾನು, ನಾವು ಎಂಬ ರೂಪವನ್ನು ಪಡೆಯುತ್ತಿದ್ದುವು. ಕೆಲವು ವೇಳೆ ನಾನ್ ಎಂಬುದರ ಅಂತ್ಯ ನಕಾರವು ಲೋಪವಾಗಿ ನಾ ಎಂಬುದು ಪ್ರಯೋಗವಾಗುತ್ತಿತ್ತು. ಹೊಸಗನ್ನಡದಲ್ಲಿ ನಾ, ನಾನು, ನಾವು ಎಂಬಿವು ಮಾತ್ರ ಪ್ರಯೋಗದಲ್ಲಿವೆ.

**ಮಧ್ಯಮಪುರುಷ ಸರ್ವನಾಮಗಳು :** ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ನೀನ್, ನೀವ್ ಎಂಬುವು ಅಂತ್ಯ ಉಕಾರವನ್ನು ಹೊಂದಿ ನೀನು, ನೀವು ಎಂಬ ರೂಪಗಳಲ್ಲಿ ಈಗ ಪ್ರಯೋಗದಲ್ಲಿವೆ. ನೀನ್ ಎಂಬುದರ ಅಂತ್ಯವ್ಯಂಜನಕ್ಕೆ ಲೋಪವಾಗಿ, ನೀ ಎಂಬ ಪ್ರಯೋಗವೂ ಉಂಟು.

**ಪ್ರಥಮಪುರುಷ ಸರ್ವನಾಮಗಳು :** ಇದರಂತೆಯೇ ತಾನ್, ತಾಮ್, ಎಂಬುವು ತಾ, ತಾನು, ತಾವು ಎಂಬ ರೂಪಗಳನ್ನು ಪಡೆದಿವೆ.

ಸ್ಥಾನನಿರ್ದೇಶಿಗಳಾದ ಅ, ಇ, ಉ ಎಂಬ ಸ್ವರಗಳಿಗೆ ಪುಂಸ್ತ್ರೀನಪುಂಸಕಲಿಂಗ ಪ್ರತ್ಯಯಗಳು ಸೇರಿ ಪ್ರಥಮಪುರುಷ ಸರ್ವನಾಮಗಳಾಗುವುವೆಂದು ಕೆಲವರು ಹೇಳುತ್ತಾರೆ.

ಉದಾಹರಣೆ :—

| | ಅ | ಇ | ಉ |
|---|---|---|---|
| ಪುಲ್ಲಿಂಗ. | ಅರ್ವ, ಆತನ್. | ಇವನ್, ಈತನ್. | ಉರ್ವ, ಊರ್ತ.[1] |
| ಸ್ತ್ರೀಲಿಂಗ. | ಅವಳ್, ಆಕೆ. | ಇವಳ್, ಈಕೆ. | ಉವಳ್, ಊಕೆ.[1] |
| ನಪುಂಸಕಲಿಂಗ. | ಅದು. | ಇದು | ಉದು.[1] |

[1] ಉದು, ಉವು ಎಂಬುವು ಸ್ವತಂತ್ರ ಸರ್ವನಾಮಗಳೋ ಅಥವಾ ಅದು, ಅವು ಎಂಬುವುಗಳ ರೂಪಾಂತರಗಳೋ ಹೇಳುವುದು ಕಷ್ಟ. ಬರ್ಪ್ಪುದು–ಬರ್ಪೊ.ದು-ಬರ್ಪುದು

ಇವುಗಳಲ್ಲಿ ಉಕಾರಾದಿಯಾದ ಶಬ್ದಗಳು ಹಳಗನ್ನಡದಲ್ಲಿಯೂ ವಿಶೇಷವಾಗಿ ಪ್ರಯೋಗವಾಗುತ್ತಿರಲಿಲ್ಲ. ಪ್ರಥಮಪುರುಷ ಕ್ರಿಯಾಪದಗಳ ಪ್ರತ್ಯಯವಾಗಿ ಹೆಚ್ಚಾಗಿ ಕಾಣುತ್ತವೆ. ಉದಾ : ಅಪ್ಪುದು, ಬರ್ಪುದು, ಮಾಡುವುದು, ಕುಡುವುದು. ಉದು ಎಂಬುದು ಈಗ ಆಹುದು, ಬಹುದು (ನಡುಗನ್ನಡ ತಹುದು) ಎಂಬ ಶಬ್ದ ಗಳಲ್ಲಿ ಉಳಿದಿದೆ. ಪುಲ್ಲಿಂಗದ ಅವನ್, ಇವನ್, ಆತನ್, ಈತಂ ಎಂಬಿವೂ ಸ್ತ್ರೀಲಿಂಗದ ಅವಳ್, ಇವಳ್ ಎಂಬಿವೂ ಉಕಾರವನ್ನು ಹೊಂದಿ, ಅವನು ಇವನು ಇತ್ಯಾದಿ ರೂಪಗಳಲ್ಲಿ ಪ್ರಯೋಗದಲ್ಲಿವೆ. ಪುಲ್ಲಿಂಗ ಶಬ್ದಗಳ ಅಂತ್ಯ ವ್ಯಂಜನಕ್ಕೆ ಲೋಪವಾಗಿ ಅವ, ಇವ, ಆತ, ಈತ ಎಂಬ ರೂಪಗಳು ನಡುಗನ್ನಡದಲ್ಲಿ ಪ್ರಯೋಗ ದಲ್ಲಿದ್ದುವು. ಈಗಲೂ ಇವೆ. ಆಕೆ, ಈಕೆ, ಅದು ಇದು ಎಂಬಿವು ಹಿಂದೆ ಇದ್ದ ರೂಪದಲ್ಲಿಯೇ ಇವೆ.

**ಪ್ರಶ್ನಾರ್ಥಕ ಸರ್ವನಾಮಗಳು** : ಹಳಗನ್ನಡದಲ್ಲಿದ್ದ ಪ್ರಶ್ನಾರ್ಥಕ ಸರ್ವ ನಾಮಗಳೇ ಈಗಲೂ ರೂಢಿಯಲ್ಲಿವೆ. ಅವುಗಳಲ್ಲಿ ವ್ಯಂಜನಾಂತವಾದವುಗಳಿಗೆ ಉಕಾರವು ಸೇರುವುದು ಮಾತ್ರವೇ ಅಲ್ಲದೆ ಅವುಗಳ ಆದಿಯಲ್ಲಿ ಯಕಾರವು ಸೇರು ತ್ತದೆ. ಉದಾ : ಹಳಗನ್ನಡ : ಆವನ್, ಆವಳ್, ಆರ್ ; ಹೊಸಗನ್ನಡ : ಯಾವನು ಯಾವಳು, ಯಾರು. ಹಳಗನ್ನಡ : ಆವುದು, ಆವುವು, ಏನ್, ಏಕೆ ; ಹೊಸ ಗನ್ನಡ : ಯಾವುದು, ಯಾವುವು, ಏನು ("ಯೇನು"), ಯಾಕೆ. ಇಲ್ಲಿ ಯಕಾರಕ್ಕೆ ಕಾರಣವೇನು ? ಈ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಒಂದು ಮತದವರು ಹಳಗನ್ನಡದ "ಆ" "ಏ" ಗೆ ಬದಲಾಗಿ ಬಂದುದೆಂದು ಹೇಳುತ್ತಾರೆ. ಅದು, ಇದು, ಉದು ಮೊದಲಾದುವು ಹೇಗೆ ಅ, ಇ, ಉ ಎಂಬುವುಗಳಿಂದ ಹುಟ್ಟಿದುವೋ ಹಾಗೆಯೇ ಪ್ರಶ್ನಾರ್ಥಕ ಸರ್ವನಾಮಗಳು ಎ ಎಂಬುದರಿಂದ ಹುಟ್ಟಿದುವೆಂದು ಊಹಿಸುತ್ತಾರೆ. ಎದು[2], ಎವನ್, ಏವನ್, ಏವರ್, ಎವುದು, ಏವುವು— ಅವನೇವಂ, ಅದೇವುದು ಎಂಬಲ್ಲಿ ಕಂಡುಬರುವ ಏರ್ವ ಮೊದಲಾದುವು ಆರ್ವ ಮೊದಲಾದುವುಗಳ ಪೂರ್ವಸ್ವರೂಪವೆಂದೂ ಇವನ್ನು ಕೆಲವರು ಕ್ರಿಯಾಪದಗಳೆಂದು

---

ಎಂದಾಗಿರಬಹುದು. ಉದು, ಉವು, ತಮಿಳಿನಲ್ಲಿ ಉಂಟು, ತೆಲುಗಿನಲ್ಲಿಲ್ಲ. ಆದರೆ ಕೇಶಿರಾಜನ ಉದಾಹರಣೆಗಳನ್ನು ನೋಡಿದರೆ ಸ್ವತಂತ್ರವಾಗಿ ಇದ್ದುವೆಂದು ಹೇಳಬೇಕಾಗುತ್ತದೆ.—'ಆತಂ ದುರ್ಯೋಧನನೀತಂ ರವಿಜಾತನೂತನಶ್ವತ್ಥಾಮಂ.' 'ಆಬನವೀಬನವೂಬನನೆನ್ನದೆ ತೊಡಲ್ದು ಪೂಗೊಯ್ದುರವರ್.'

ಹೊಸಗನ್ನಡದಲ್ಲಿ ಕ್ರಿಯಾಪದಗಳಲ್ಲಿ ಉದು, ಉವು ಎಂಬುವು ಅದು ಅವು ಎಂದೇ ಸಾಮಾನ್ಯವಾಗಿ ಪ್ರಯೋಗವಾಗುತ್ತವೆ. ನಿಷೇಧರೂಪಗಳಲ್ಲಿಯೂ ಉದು, ಉವು ಇವಕ್ಕೆ ಬದಲಾಗಿ ಅದು, ಅವು ಎಂಬಿವೇ ಮೊದಲಿಂದಲೂ ಪ್ರಯೋಗದಲ್ಲಿವೆ.

[2] ಎದು ಎಂಬುದಕ್ಕೆ ಏತಜ್, ಏತಜಿನ್ ಮುಂತಾದ ಶಬ್ದಗಳನ್ನೂ ಹೊಸಗನ್ನಡ ಎದುವರೆಗೆ ಎಂಬುದನ್ನೂ ನೋಡಿ.

ಭ್ರಮಿಸಿರುವರೆಂದೂ ಅವರ ಊಹೆ. ತೆಲುಗಿನಲ್ಲಿ ಏತನ್, ಏಕೆ ಎಂಬ ರೂಪಗಳಿವೆ.[3] ಏವನ್ = ಆವನ್ ; ಏವುದು = ಆವುದು ; ಏವರ್ = ಆವರ್ = ಆರ್. ಇಲ್ಲಿ ಏ ಎಂಬುದು ಎಕಾರ ಅಕಾರಗಳಿಗೆ ಮಧ್ಯವರ್ತಿಯಾದ ಒಂದು ಸ್ವರವಾಗಿ ಉಚ್ಚಾರ ವಾಗುತ್ತಿತ್ತೆಂದು ಹೇಳಬೇಕು. (ಹೊಸಗನ್ನಡದ ಮಾತನಾಡುವ ಭಾಷೆಯಲ್ಲಿ ಹೇಗೆ, ಬೇಗ, ಬೇಡ ಮೊದಲಾದ ಶಬ್ದಗಳ ಉಚ್ಚಾರಣೆಯಲ್ಲಿ ಆ ಮಧ್ಯವರ್ತಿ ಸ್ವರವು ಕೇಳ ಬರುತ್ತದೆ.) ಅದು ಬರವಣಿಗೆಯಲ್ಲಿ ಆ ಎಂಬ ರೂಪವನ್ನು ಹೊಂದಿತೆಂದೂ ಮಾತಿನಲ್ಲಿ ಯಾ ಎಂಬ ರೂಪವನ್ನು ಹೊಂದಿತೆಂದೂ ಮಾತಿನಭಾಷೆಯಲ್ಲಿದ್ದ ರೂಪವೇ ಈಗ ಬರವಣಿಗೆಗೂ ಬಂದಿದೆಯೆಂದು ಹೇಳಬೇಕಾಗುತ್ತದೆ. ಡಾ|| ಕಾಲ್ಡ್ವೆಲ್ ಸಾಹೇಬರು ಆನ್, ಆರ್ವ, ಆವುದು, ಏವುದು, ಮೊದಲಾದ ಶಬ್ದಗಳಲ್ಲಿ ಮೊದಲು ಯಕಾರವೇ ಇದ್ದಿತೆಂದೂ ಏ, ಆ ಎಂಬುವು ಅದರಿಂದ ಹುಟ್ಟಿದುವೆಂದೂ ಹೇಳುತ್ತಾರೆ.

**ಸಂಬಂಧಾರ್ಥಕ ಸರ್ವನಾಮಗಳು :** ಕನ್ನಡದಲ್ಲಿ ಸಂಬಂಧಾರ್ಥಕ ಸರ್ವ ನಾಮಗಳಿಲ್ಲ. ಸಂಬಂಧಾರ್ಥವು ಎರಡು ಸರ್ವನಾಮಗಳು ಸೇರುವುದರಿಂದ ಸೂಚಿತ ವಾಗುತ್ತದೆ. ಉದಾ : ಆವನಧಿಕಪುಣ್ಯನವನೇ ಸೇವ್ಯಂ. ಇಲ್ಲಿ ಮೊದಲು ಪ್ರಶ್ನಾರ್ಥಕ ಸರ್ವನಾಮವಾದ ಆರ್ವ ಎಂಬುದೂ ಆಮೇಲೆ ಆರ್ವ ಎಂಬ ಸರ್ವನಾಮವೂ ಒಂದು ಸಂಬಂಧಾರ್ಥವನ್ನು ಸೂಚಿಸಿರುತ್ತವೆ.

**ಸರ್ವನಾಮಗಳ ಮೂಲರೂಪಗಳು :** ದ್ವಿತೀಯೆ ಮೊದಲಾದ ವಿಭಕ್ತಿಗಳ ರೂಪಗಳನ್ನೂ ಕ್ರಿಯಾಪದಗಳನ್ನೂ ನೋಡಿದರೆ ಉತ್ತಮ, ಮಧ್ಯಮ, ಪ್ರಥಮ ಪುರುಷ ಸರ್ವನಾಮಗಳ ಮೂಲರೂಪಗಳು ಎನ್, ಎಮ್, (ನನ್, ನಮ್) ನಿನ್, ನಿಮ್, (ಇನ್, ಇಮ್, ಇರ್) ತನ್, ತಮ್ (ಅನ್, ಅಳ್, ಅರ್) ಎಂಬುದಾಗಿ ತೋರುತ್ತದೆ. ಪ್ರಥಮಾವಿಭಕ್ತಿ ರೂಪವು ವಿಭಕ್ತಿಪ್ರತ್ಯಯಗಳ ಹಿಡಿತಕ್ಕೆ ಸಿಕ್ಕದೆ ಇದ್ದುದರಿಂದ ದೀರ್ಘವೂ ರೂಪಾಂತರಗಳೂ ಸಂಭವಿಸಿದುವು.

---

[3] ಕನ್ನಡದಲ್ಲಿ ಆವಾತ, ಆವಾಕೆ, ಯಾವಾತ, ಯಾವಾಕೆ ಎಂದಿವೆ. ಆರ್, ಏನ್, ಎಂಬುವು ಏಕವಚನ, ಬಹುವಚನ ಎರಡೂ ಆಗಿವೆ.

## ೯. ಗುಣವಾಚಕ, ಸಂಖ್ಯಾವಾಚಕ

ಗುಣವಾಚಕವು ನಾಮಪದದಲ್ಲಿ ಅಂತರ್ಗತವಾದುದು. ಕೇಶಿರಾಜನು ನಾಮಪ್ರಕರಣದಲ್ಲಿಯೇ ಗುಣವಾಚಕ ಸಂಖ್ಯಾವಾಚಕ ಪರಿಮಾಣವಾಚಕಗಳನ್ನು ಸೇರಿಸಿರುತ್ತಾನೆ. ತುಕಾರ ದುಕಾರಾಂತಗಳಾದ ಕೆಲವು ಗುಣವಾಚಕಗಳನ್ನೂ, ಅವುಗಳ ಬಹುವಚನಗಳನ್ನೂ, ಪುಂಸ್ತ್ರೀಲಿಂಗ ಏಕವಚನ ಬಹುವಚನ ರೂಪಗಳನ್ನೂ ತಿಳಿಸಿರುತ್ತಾನೆ.

ತುಕಾರಾಂತ ದುಕಾರಾಂತ ಗುಣವಚನಗಳಿಗೆ ಒಂದೊಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದೆ:

| | ನಪುಂಸಕಲಿಂಗ | ಪುಲ್ಲಿಂಗ | ಸ್ತ್ರೀಲಿಂಗ |
|---|---|---|---|
| ಏ.ವ. | ಒಳ್ಳಿತು, ಇನಿದು; | ಒಳ್ಳಿದನ್, ಇನಿಯನ್; | ಒಳ್ಳಿದಳ್, ಇನಿಯಳ್. |
| ಬ.ವ. | ಒಳ್ಳಿದುವು, ಇನಿಯವು; | ಒಳ್ಳಿದರ್, ಇನಿಯರ್; | ಒಳ್ಳಿದರ್, ಇನಿಯರ್. |

ಈ ತುಕಾರಾಂತ ದುಕಾರಾಂತ ಗುಣವಾಚಕಗಳಿಗೆ ಆದಿಯಲ್ಲಿ ಒಳ್, ಇನ್ ಮೊದಲಾದ ಪ್ರಕೃತಿಗಳಿದ್ದು ಅವುಗಳಿಗೆ ತು, ದು, ಅನ್, ಅಳ್ ಮೊದಲಾದ ಪ್ರತ್ಯಯಗಳು ಸೇರಿರಬೇಕೆಂದು ಆಧುನಿಕ ಪಂಡಿತರು ಅಭಿಪ್ರಾಯಪಡುತ್ತಾರೆ. ಡಾ|| ಕಿಟ್ಟೆಲ್ ಅವರು ಒಳ್ಳಿತು ಮೊದಲಾದ ರೂಪಗಳು ಸಿದ್ಧಿಸುವ ಕ್ರಮವು ಹೀಗೆಂದು ಹೇಳಿರುತ್ತಾರೆ :—ಒಳ್ + ತು = ಒಳ್ತು[1] = ಒಳ್ಳಿತು, ಒಳ್ಳಿತ್ತು. (ಇಕಾರಾಗಮ, ದ್ವಿತ್ವ). ಒಳ್ಳಿತು + ಅನ್ = ಒಳ್ಳಿದನ್. ಒಳ್ಳಿತು + ಅಳ್ = ಒಳ್ಳಿದಳ್. (ದಕಾರಾದೇಶ.) ಇನಿಯನ್, ಇನಿಯಳ್ ಎಂಬಲ್ಲಿ ದಕಾರಕ್ಕೆ ಯಕಾರಾದೇಶ (ಹೊಸಗನ್ನಡದಲ್ಲಿ ಒಳ್ಳೆಯವನು, ಒಳ್ಳೆಯವಳು ಎಂಬಂತೆ ಯಕಾರಾದೇಶವೇ ಇದೆ). ತು, ದು, ಎಂಬುವು ನಪುಂಸಕಲಿಂಗ ಸೂಚಕ ಪ್ರತ್ಯಯಗಳು. ಅಳ್, ಅನ್ ಎಂಬುವು ಸ್ತ್ರೀಲಿಂಗ ಪುಲ್ಲಿಂಗ ಸೂಚಕ ಪ್ರತ್ಯಯಗಳು. ಕಮ್ಮಿತ್ತು, ಕೂರಿತು, ಕರಿದು, ಬಿಳಿದು, ಮೆಲ್ಲಿತು ಮೊದಲಾದ ಗುಣವಾಚಕಗಳಿಗೆ ಕಮ್, ಕೂರ್, ಕರ್, ಬೆಳ್, ಮೆಲ್ ಮೊದಲಾದ ಪ್ರಕೃತಿರೂಪಗಳಿದ್ದಿರಬೇಕೆಂಬುದಕ್ಕೆ ಸಾಧಕವಾದ ಕೆಲವು ಅಂಶಗಳುಂಟು. ಅವಾವುವೆಂದರೆ :—

(೧) ಇಂತಹ ಪ್ರಕೃತಿಗಳಿಂದ ಹುಟ್ಟಿದ ಭಾವನಾಮಗಳು :—ಕಮ್ಪು, ಕೂರ್ಪು, ಕರ್ಪು, ಬೆಳ್ಪು, ಮೆಲ್ಪು, ತಣ್ಪು.

(೨) ಗು, ಚು ಮೊದಲಾದುವು ಸೇರಿ ಆಗಿರುವ ಧಾತುಗಳು :—ಬೆಳಗು

---

[1] ಆರ್ತು, ಎತ್ತಣ್ಪು, ದೊರೆತು, ಮುಂತಾದ ರೂಪಗಳನ್ನು ನೋಡಿ.

ಕಡುಗು, ಕುಱುಕು, ಕುಱ್ಗು, ಕರ್ಗ್ಗು, ಪೆರ್ಚು; ನುಣ್ಚು. ಕೆಲವು ಇದ್ದ ರೂಪದಲ್ಲಿಯೇ ಧಾತುಗಳು :—ಬಲ್, ನಱು (=ನಾಱು), ಕೂರ್, ಬೆಯ್.

(೩) ಈ ಪ್ರಕೃತಿಗಳಿಗೆ ಅಗೆ, ಅನೆ ಎಂಬ ಪ್ರತ್ಯಯಗಳು ಸೇರಿ ಆಗುವ ಕ್ರಿಯಾ ವಿಶೇಷಣಗಳು :—ಕಮ್ಮನೆ, ಕರ್ರನೆ, ಬೆಳ್ಳಗೆ, ಮೆಲ್ಲಗೆ, ನುಣ್ಣನೆ, ತಣ್ಣನೆ.

(೪) ಸಮಾಸಪದಗಳಲ್ಲಿ ಕಂಡುಬರುವ ಪ್ರಕೃತಿಸ್ಥಿತಿ[1] :—ತಣ್ಣೆಲಲ್ (ತಣ್+ನೆಲಲ್), ಬೆಳ್ಗೊಡೆ (ಬೆಳ್+ಕೊಡೆ), ಮೆಲ್ನುಡಿ (ಮೆಲ್+ನುಡಿ), ಕರ್ಮುಗಿಲ್ (ಕರ್+ಮುಗಿಲ್). ಸ್ವರ ಪರವಾದಾಗ ದ್ವಿತ್ವ :—ಬೆಳ್ಳಲೆ, ಮೆಲ್ಲುಸಿರ್, ಕಿತ್ತೀಲಿ, ಕುತ್ತೆಸಟ್, ನಟ್ಟಿರುಳ್. ದೀರ್ಘ :—ಕಾರೊಡಲ್ ಪೇರಡವಿ (ಕರ್ರೊಡಲ್, ಪೆರ್ರಡವಿ ಎಂಬುದು ಶ್ರುತಿಕಷ್ಟವಾದುದರಿಂದ).

ಕೇಶಿರಾಜನು ಹೇಳಿರುವ ತುಕಾರಾಂತ ದುಕಾರಾಂತ ಗುಣವಾಚಕಗಳ ಪ್ರಯೋಗವು ಹೊಸಗನ್ನಡದಲ್ಲಿ ಬಹುಮಟ್ಟಿಗೆ ಕಡಮೆಯಾಗಿದೆ. ಕರಿದು, ಬಿಳಿದು ಕರಿಯದು, ಬಿಳಿಯದು, ಎಳದು, ಎಳೆಯದು, ಹಳದು, ಹಳೆಯದು, ಹೊಸದು ಮೊದಲಾದ ಕೆಲವು ಮಾತ್ರ ಹೊಸಗನ್ನಡದಲ್ಲಿ ರೂಢಿಯಲ್ಲಿ ಉಳಿದಿವೆ. ಒಳ್ಳಿತು, ಒಳ್ಳಿದುವು ಎಂಬುವು ಹೊಸಗನ್ನಡದಲ್ಲಿ ಒಳ್ಳೆಯದು, ಒಳ್ಳೆಯವು ಎಂಬುದಾಗಿ ಪ್ರಯೋಗವಾಗುತ್ತವೆ. ತೋರಿದುವು, ಮೆಲ್ಲಿದುವು ಮೊದಲಾದ ರೂಪಗಳು ಹೊಸಗನ್ನಡದಲ್ಲಿಲ್ಲ.

**ಉಳ್ಳ, ಇಲ್ಲದ.** ಹಳಗನ್ನಡದಲ್ಲಿ ಉಳ್ಳ ಇಲ್ಲದ ಎಂಬ ಶಬ್ದಗಳು ಸೇರಿ ನಾಮವಾಚಕಗಳು ಗುಣವಾಚಕಗಳಾಗುತ್ತವೆ. ಉದಾ : ಪೊನ್ನುಳ್ಳವನೆ ಕುಲೀನಂ, ಅಱಿವುಳ್ಳ ಮಾನಿಸರ್, ಓದಿಲ್ಲದ ಮಾನಿಸಂ, ದೊರೆಯಿಲ್ಲದ ಬಂಗಾರ. ಹೊಸ ಗನ್ನಡದಲ್ಲಿ ಈ ಬಗೆಯ ಪ್ರಯೋಗವೇ ರೂಢಿಯಾಗಿದೆ.

**ಅಪ್ಪ, ಆದ.** ಹಳಗನ್ನಡದಲ್ಲಿ ದೊಡ್ಡಿತು, ಮೆಲ್ಲಿತು ಮೊದಲಾದ ಗುಣ ವಚನಗಳಿಗೆ "ಅಪ್ಪ" ಎಂಬುದು ಸೇರಿ ಪ್ರಯೋಗವುಂಟು. ಉದಾ : ಮೆಲ್ಲಿದುವಪ್ಪ ಕಾಲತಳಮುಂ ಕಡುವೆಟ್ಟಿದುವಪ್ಪ ಹಸ್ತಮುಂ. ನಡುಗನ್ನಡದಲ್ಲಿ "ಅಪ್ಪ" ಎಂಬುದು "ಅಹ" ಎಂದಾಗುತ್ತದೆ. ಉದಾ : ಪಿರಿದಹ, ಮೆಲ್ಲಿದಹ. ಹೊಸಗನ್ನಡ ದಲ್ಲಿ "ಆದ" ಎಂಬುದು "ಅಪ್ಪ" "ಅಹ" ಎಂಬುವಕ್ಕೆ ಬದಲಾಗಿ ಪ್ರಯೋಗ ದಲ್ಲಿದೆ. ಹಳಗನ್ನಡದಲ್ಲಿಯೂ ಇದು ಪ್ರಯೋಗದಲ್ಲಿತ್ತು. ಉದಾ : ಹ್ರಸ್ವಮಾದ ಎ ಒ ಸಹಿತಂ.

ಗಮಕ ಸಮಾಸದಲ್ಲಿ ಗುಣವಚನಗಳ ಅಂತ್ಯಾಕ್ಷರಕ್ಕೆ ಲೋಪವಾಗಿ ಅಕಾರಾಗಮವಾಗುವುದೆಂದು ಕೇಶಿರಾಜನು ತಿಳಿಸಿರುತ್ತಾನೆ. ಉದಾ : ಅಸಿದು+

---

[1] ವ್ಯಾಕರಣಗಳಲ್ಲಿ ಈ ಪ್ರಕೃತಿರೂಪಗಳನ್ನು ಆದೇಶವೆಂದು ಹೇಳಿದ್ದಾರೆ. ತು ದುಕಾ ರಾಂತ ರೂಪಗಳನ್ನೇ ಪ್ರಕೃತಿಗಳೆಂದು ಭಾವಿಸುವುದಾದರೆ ಹೀಗೆ ಹೇಳಬೇಕಾಗುತ್ತದೆ.

ನಡು=ಅಸಿ+ಅ+ನಡು=ಅಸಿಯ[1] ನಡು. ಹೀಗೆ ಬಿಳಿದು, ನಿಡಿದು ಮೊದಲಾದವುಗಳಿಗೆ ಬಿಳಿಯ, ನಿಡಿಯ ಮೊದಲಾದ ರೂಪಗಳಾಗುತ್ತವೆ. ಇವು ಗುಣವಾಚಕಗಳ ಕೆಲಸವನ್ನೂ ಮಾಡುತ್ತವೆ. ನಡುಗನ್ನಡದಲ್ಲಿ ಅಕಾರಾಗಮವಿಲ್ಲದ ರೂಪಗಳು ದೊರೆಯುತ್ತವೆ. ಉದಾ: ಅಸಿನಡು, ನಿಡಿಗುರುಳ, ಪಸಿದೊವಲು. ಹೊಸಗನ್ನಡದಲ್ಲಿಯೂ ಈ ಎರಡು ಪ್ರಯೋಗಗಳೂ ಇವೆ. ಉದಾ: ಹಿರಿಯಮಗ, ಹಿರಿಮಗ.

ಗುಣವಚನದ ಕೆಲಸವನ್ನು ಮಾಡತಕ್ಕ ಅನಿತು, ಇನಿತು, ಎನಿತು (ಅನಿಸು, ಇನಿಸು, ಎನಿಸು) ಎಂಬ ಹಳಗನ್ನಡದ ಪರಿಮಾಣವಾಚಕಗಳು ಹೊಸಗನ್ನಡದಲ್ಲಿ ಪ್ರಯೋಗದಲ್ಲಿಲ್ಲ. ಅವುಗಳಿಗೆ ಬದಲಾಗಿ ನಡುಗನ್ನಡದಲ್ಲಿ ಆಸು, ಈಸು, ಏಸು ಎಂಬ ಶಬ್ದಗಳು ಕಂಡುಬರುತ್ತವೆ. ಅವೇ ಟು ಎಂಬ ಪ್ರತ್ಯಯವನ್ನು ಹೊಂದಿ ರೂಪಾಂತರವಾಗಿ ಅಷ್ಟು, ಇಷ್ಟು, ಎಷ್ಟು ಎಂಬ ರೂಪದಲ್ಲಿ ಹೊಸಗನ್ನಡದಲ್ಲಿ ರೂಢಿಯಲ್ಲಿವೆ.[2] ಓಸು, ಒಷ್ಟು ಎಂಬ ಗ್ರಾಮ್ಯಪ್ರಯೋಗಗಳುಂಟು. ಉದಾ: ಅವರು ಓಸಾಳು ಬಂದಿದ್ದರು ? ಒಷ್ಟನ್ನೂ ಕೊಟ್ಟುಬಿಡು.

**ಅನೆಯ.** ಹಳಗನ್ನಡದಲ್ಲಿ "ಅನೆಯ" ಪ್ರತ್ಯಯವು ಪರಿಮಾಣವಾಚಕಗಳಿಗೂ ಸಂಖ್ಯಾವಾಚಕಗಳಿಗೂ ಸೇರುತ್ತಿತ್ತು. ಉದಾ: ಅನಿತನೆಯಂ, ಒಂದನೆಯಂ. ಹೊಸಗನ್ನಡದಲ್ಲಿಯೂ ಆ ಪ್ರತ್ಯಯವು ರೂಢಿಯಲ್ಲಿದೆ. ಉದಾ: ಅಷ್ಟನೆಯವನು, ಒಂದನೆಯವನು. ಅಷ್ಟೇ ಅಲ್ಲ. ಹೊಸಗನ್ನಡದಲ್ಲಿ "ಅನೆಯ" ಪ್ರತ್ಯಯವು ಗುಣವಾಚಕಗಳಿಗೂ ಸೇರುತ್ತದೆ. ಉದಾ: ತೆಳ್ಳನೆಯ ತಗಡು, ಮೆತ್ತನೆಯ ಹಾಸಿಗೆ, ದಪ್ಪನೆಯ ಬಟ್ಟೆ.

ಕನ್ನಡದಲ್ಲಿ ಗುಣವಾಚಕಗಳಿಗೆ ತರತಮಭಾವವನ್ನು ತೋರಿಸುವ ಪ್ರತ್ಯಯಗಳಿಲ್ಲ. ಹಳಗನ್ನಡದಲ್ಲಿ ತೃತೀಯ ಅಥವಾ ಚತುರ್ಥಿಯ ಸಹಾಯದಿಂದ ಈ ಅರ್ಥವನ್ನು ಹೇಳುತ್ತಿದ್ದರು. ಉದಾ:—ಆತನಿಂದೀತಂ ಪಿರಿಯನ್ ; ಅದರ್ಕಿದು ಕಿಱಿದು. ಹೊಸಗನ್ನಡದಲ್ಲಿ ಎರಡು ವಿಭಕ್ತಿ ಪ್ರತ್ಯಯಗಳನ್ನೂ ಸೇರಿಸುತ್ತಾರೆ. ಉದಾ: ಅದಕ್ಕಿಂತ ಇದು ದೊಡ್ಡದು; ಅವನಿಗಿಂತ ಇವನು ಒಳ್ಳೆಯವನು. ಕರುಬರಿದ್ದೂರ್ಗಿಂತ ಕಾಡೊಳ್ಳಿತು. ಜೈಮಿನಿ ಭಾರತ, ೨೮-೩೭). ಷಷ್ಠಿ ಅಥವಾ ಸಪ್ತಮಿಯಿಂದ ತಮಭಾವವನ್ನು ಹೇಳಬಹುದು. ಉದಾ:—ದೇವರ ದೇವ; ವೀರರ ವೀರ; ರತ್ನಂಗಳೊಳ್ ಮಾಣಿಕ್ಯಮುತ್ತಮಂ; ಅವರಲ್ಲೆಲ್ಲಾ ಇವನೇ ದೊಡ್ಡವನು ; ಹಳಬರಲ್ಲಿ ಹಳಬ.

---

[1] ಬಿಳಿಯನ್, ಇನಿಯನ್, ಅಸಿಯನ್ ಎಂಬುವು ಅದಂತೆಯೇ ಬಿಳಿಯ, ಇನಿಯ, ಅಸಿಯ ಎಂಬುವೂ ಆಗಿವೆ. ಬಂದ, ನುಡಿದ, ನಡೆದ ಮುಂತಾದ ಕ್ರಿಯಾಪದಗಳಂತೆಯೇ ಅಸಿದ, ನಿಡಿದ, ಪಿರಿದ ಮುಂತಾದ ರೂಪಗಳು ಆದಿಯಲ್ಲಿದ್ದು ದಕಾರವು ಯಕಾರವಾಗಿದೆ ಎಂದೂ ಊಹಿಸಬಹುದಾಗಿದೆ.

[2] ಹಳಗನ್ನಡ ಅಂತುಟು, ಇಂತುಟು, ಎಂತುಟು.

ಸಂಖ್ಯಾವಾಚಕಗಳ ಮೂಲರೂಪಗಳು ಸಮಾಸಪದಗಳಲ್ಲಿ ಕಂಡು ಬರುತ್ತವೆ: ಒರ್, ಇರ್, ಮುಯ್ (?), ನಾಲ್, ಅಯ್, ಅಱ್, ಎೞ್, ಎಣ್, ಪತ್.† ಗುಣವಾಚಕಗಳ ರೀತಿಯಲ್ಲಿ ಇಲ್ಲಿಯೂ ಪ್ರಾಯಶಃ ತು, ದು, ಎಂಬುವು ಸೇರಿ, ಸಂಧಿ ವಿಕಾರಗಳಾಗಿ 'ಒಂದು' ಮುಂತಾದ ರೂಪಗಳು ಸಿದ್ಧಿಸುತ್ತವೆ. ಉದಾ: ಒರ್>ಒರ್ತು>ಒರ್ನ್ದು>ಒನ್ಱು (ತಮಿಳು), ಒಂದು. ಒಂಬತ್ತು ಎಂಬುದರ ವಿಷಯದಲ್ಲಿ ಡಾ|| ಕಾಲ್ಡ್ವೆಲ್ ಸಾಹೇಬರು ಹೇಳುವುದು: "ಇದರ ಮೂಲರೂಪವು ಕಳೆದುಹೋಗಿದೆ. ತೊನ್, ಪತ್, ಎಂಬ ಎರಡು ಶಬ್ದಗಳ ಸಮಾಸವಾಗಿರುವಂತೆ ತೋರುತ್ತದೆ. ತೊನ್ ಎಂಬ ಶಬ್ದವು ಕನ್ನಡದ ತೊಂಬತ್ತು, ತಮಿಳಿನ ತೊಣ್ಣೂರು (೯೦), (ತೆಲುಗು—ತೊಂಬದಿ), ತೊಳ್ಳಾಯಿರ (೯೦೦), (ತೆಲುಗು—ತೊಮ್ಮನೂಱು) ಎಂಬ ಶಬ್ದಗಳಲ್ಲಿ ಕಂಡುಬರುತ್ತದೆ. ಇದರ ಮೂಲರೂಪವು ತೊಳ್ ಆಗಿರಬೇಕು. (ಈ ಳಕಾರವು ಅನುನಾಸಿಕವಾಗಿರಬಹುದೆ? ಕೇಶಿರಾಜನು ಯ ವ ಲ ಗಳು ಅನುನಾಸಿಕವಾಗಿಯೂ ಇರುತ್ತವೆಯೆಂದು ಹೇಳಿರುತ್ತಾನೆ. ಕೊಲ್ ಎಂಬುದು ಕೊಂದಂ ಎಂಬ ರೂಪವನ್ನು ಹೊಂದುವಂತೆ ಕೊಳ್ ಎಂಬುದು ಕೊಂಡಂ ಎಂಬ ರೂಪವನ್ನು ಹೊಂದುತ್ತದೆ.) ತೊಳ್ ಎಂದರೆ ತೆಲುಗಿನಲ್ಲಿ ಮೊದಲಿನ, ಹಿಂದಿನ, ಎಂದು ಅರ್ಥವಾಗುತ್ತದೆ. ಉದಾ: ತೊಲಿವಾರ (ಮೊದಲನೆಯ ವಾರ), ತೊಲ್ ನಾಡು (ಹಿಂದಿನ ದಿನ), ತೊಂಭೈ (ಒಂಬತ್ತುಹತ್ತು). ಕನ್ನಡದಲ್ಲಿಯೂ ತಮಿಳಿನಲ್ಲಿಯೂ ತೊನ್ ಎಂಬುದು ಒನ್ ಎಂದು ರೂಪಾಂತರವನ್ನು ಹೊಂದಿರ ಬಹುದು." ಕೇಶಿರಾಜನು ಒಂಬತ್ತಕ್ಕೆ "ಪತ್ತು" ಪರವಾದರೆ ತೊಮ್ ಎಂಬಾದೇಶವೂ, "ನೂಱು," "ಸಾಸಿರಂ" ಪರವಾದರೆ "ಒಂಬಯ್" ಎಂಬಾದೇಶವೂ ಆಗುತ್ತದೆ ಎಂದು ಹೇಳುತ್ತಾನೆ.

ಹತ್ತರಿಂದ ನೂರರ ವರೆಗಿನ ಸಂಖ್ಯೆಗಳು ಕೂಡುವುದು ಅಥವಾ ಗುಣಿಸು ವುದರಿಂದ ಹುಟ್ಟುತ್ತವೆ. ಉದಾ: ಪತ್+ಒನ್ದು>ಪದಿನೊಂದು>ಪನ್ನೊಂದು; ಪತ್+ಎರಡು>ಪದಿನೆರಡು>ಪನ್ನೆರಡು; ಪತ್+ಮೂಱು>ಪದಿನ್ ಮೂಱು >ಪದಿಮೂಱು; ಇರ್+ಪತ್ತು>ಇರ್ಪತ್ತು>ಹೊಸಗನ್ನಡದ ಇಪ್ಪತ್ತು; ಮುಯ್ +ಪತ್>ಮುಪ್ಪತ್ತು>ಮೂವತ್ತು; ಎಣ್+ಪತ್>ಎಂಬತ್ತು;[1] ಇರ್+ಐದು >ಈರೈದು ಇತ್ಯಾದಿ. ನೂಱು ಎಂಬ ಶಬ್ದದ ಅರ್ಥ ನುಚ್ಚು, ನುರಿ ಎಂದು. ಆದಕಾರಣ ನೂಱು ಎಂದರೆ ದೊಡ್ಡಸಂಖ್ಯೆ ಎಂದು ಸೂಚಿತವಾಗುತ್ತದೆ. ನೂರ

---

† ಒರ್ವನ್, ಒರ್ಮೆ, ಇರ್ಮಡಿ, ಅಯ್ವರ್, ಅಯ್ಪಡಿ, ಪದಿಮೂಱು, ಪದಿಂಬರ್ ಮುಂತಾದ ಶಬ್ದಗಳನ್ನು ಹೋಲಿಸಿ.

[1] ಹೊಸಗನ್ನಡದಲ್ಲಿ ಎಂಭತ್ತು ಎಂದು ಉಚ್ಚರಿಸುತ್ತಾರೆ.

ರಿಂದ ಸಾವಿರದ ವರೆಗೂ ಸಂಖ್ಯೆಗಳು ಸಂಕಲನ ಅಥವಾ ಗುಣಾಕಾರದಿಂದ ಹುಟ್ಟುತ್ತವೆ. ಉದಾ: ಇರ್+ನೂರು>ಇನ್ನೂರು ಇತ್ಯಾದಿ. ದ್ರಾವಿಡ ಭಾಷೆಗಳಲ್ಲಿ ಎಣಿಕೆಯು ೯೯೯ರ ವರೆಗೆ ಹೋಗುತ್ತದೆ. "ಸಾವಿರ"ಕ್ಕೆ ದ್ರಾವಿಡ ಭಾಷೆಗಳಲ್ಲಿ ಪ್ರಾಯಶಃ ದೇಶ್ಯ ಶಬ್ದವಿಲ್ಲ.

ಸಂಖ್ಯಾವಾಚಕ ಶಬ್ದಗಳ ಮೂಲರೂಪಗಳು ಪ್ರತ್ಯಯಗಳನ್ನು ಹೊಂದಿ ಪುರುಷವಾಚಕಗಳಾಗುತ್ತವೆ. ಹಾಗೆ ಪ್ರತ್ಯಯಗಳು ಸೇರುವಾಗ ವಕಾರಾಗಮ ಬರುತ್ತದೆ. ಉದಾ: ಹಳಗನ್ನಡ ಒರ್ವನ್, ಒರ್ವಳ್, ಇರ್ವರ್>ಹೊಸಗನ್ನಡದಲ್ಲಿ ಒಬ್ಬನು, ಒಬ್ಬ, ಒಬ್ಬಳು, ಇಬ್ಬರು. ಹೀಗೆಯೇ ಮೂವರ್, ನಾಲ್ವರ್, ನೂರ್ವರ್, ಸಾಸಿರ್ವರ್. ಮೂರರಿಂದ ಮುಂದಿನ ಸಂಖ್ಯಾವಾಚಕಗಳ ಪುರುಷವಾಚಕ ರೂಪಗಳು ಹೊಸಗನ್ನಡದಲ್ಲಿ ಪ್ರಯೋಗದಲ್ಲಿಲ್ಲ. ಅವುಗಳಿಗೆ ಬದಲಾಗಿ ಜನ ಅಥವಾ ಮಂದಿ ಎಂಬ ಶಬ್ದವನ್ನು ಸಂಖ್ಯಾವಾಚಕಕ್ಕೆ ಸೇರಿಸುವುದು ರೂಢಿಯಲ್ಲಿದೆ. ಉದಾ: ನಾಲ್ಕು ಜನ, ಸಾವಿರ ಮಂದಿ.

ಮತ್ತೆ ಕೆಲವು ಸಂಖ್ಯಾವಾಚಕ ಪುರುಷವಾಚಕಗಳ ಹಳಗನ್ನಡದ ರೂಪಗಳಲ್ಲಿ ಕೆಲವು ಮಾತ್ರ ಹೊಸಗನ್ನಡದಲ್ಲಿ ರೂಢಿಯಲ್ಲಿವೆ.

| ಉದಾ: | ಹಳಗನ್ನಡ | ಹೊಸಗನ್ನಡ |
|---|---|---|
| | ಕೆಲವರ್, ಕೆಲಂಬರ್, ಕೆಲಬರ್, ಕೆಲರ್, ; | ಕೆಲವರು. |
| | ಪಲವರ್, ಪಲಂಬರ್, ಪಲಬರ್, ಪಲರ್ ; | ಹಲವರು.* |
| | ಎಲ್ಲರ್, ಎಲ್ಲವರ್ ; | ಎಲ್ಲರು (ಎಲ್ಲರೂ) |

"ಅನೆಯ" ಎಂಬ ಪ್ರತ್ಯಯವನ್ನು ಹೊಂದಿ ಸಂಖ್ಯಾವಾಚಕ ಶಬ್ದಗಳು ನಾಮಪದಗಳಿಗೆ ವಿಶೇಷಣಗಳಾಗುತ್ತವೆಯೆಂದು ಹಿಂದೆಯೇ ತಿಳಿಸಿದೆ. ಹಾಗೆಯೇ "ಮಡಿ" ಎಂಬ ಪ್ರತ್ಯಯವೂ ಪ್ರಯೋಗವಾಗುತ್ತದೆ. ಉದಾ: ಇಮ್ಮಡಿ, ಮುಮ್ಮಡಿ. ಹೊಸಗನ್ನಡದಲ್ಲಿ ಇವೆರಡೇ ಶಬ್ದಗಳು ರೂಢಿಯಲ್ಲಿರುವುವು. ಮಿಕ್ಕವುಗಳಿಗೆ "ಅನೆಯ" ಪ್ರತ್ಯಯವೇ ಸೇರುತ್ತದೆ. ಉದಾ: ನಾಲ್ಕನೆಯ, ಐದನೆಯ.

ಒರ್ಮೆ, ಇರ್ಮೆ, ಪಲರ್ಮೆ, ಸಾಸಿರ್ಮೆ—ಮುಂತಾದ ಕಾಲವಾಚಕ ಶಬ್ದಗಳಲ್ಲಿ ಮೊದಲನೆಯದು ಒಮ್ಮೆ ಎಂಬ ರೂಪದಲ್ಲಿ ಉಳಿದಿದೆ. ಮಿಕ್ಕುವಕ್ಕೆ ಬದಲಾಗಿ ಎರಡು ಸಾರಿ, (ಬಾರಿ, ಸಲ, ತಡವೆ, ವೇಳೆ) ಮುಂತಾದ ಪ್ರಯೋಗಗಳಿವೆ.

---

* ಅನೇಕರು ಎಂಬ ಸಂಸ್ಕೃತ ಶಬ್ದವು ಹಲವರು ಎಂಬ ಕನ್ನಡ ಶಬ್ದವನ್ನು ಮರೆಸುತ್ತಿದೆ.

# ೧೦. ಕ್ರಿಯಾಪದ

"ದ್ರಾವಿಡಭಾಷೆಗಳಲ್ಲಿ ನ್ಯಾಯವಾಗಿ ಕ್ರಿಯಾಪದವೇ ಇಲ್ಲ" ಎಂದು ಆಧುನಿಕ ಪಂಡಿತರು ಹೇಳುವುದುಂಟು. ಕ್ರಿಯಾರ್ಥವುಳ್ಳ ಧಾತುಗಳಿಲ್ಲವೆಂದು ಇದರ ತಾತ್ಪರ್ಯವಲ್ಲ. ಮತ್ತೇನೆಂದರೆ, ಧಾತುಗೆ ಹತ್ತುವ ಆಖ್ಯಾತಪ್ರತ್ಯಯಗಳೆಲ್ಲಾ ಸರ್ವನಾಮಗಳಾಗಿರುವುದರಿಂದಲೂ, ಈ ಪ್ರತ್ಯಯಗಳು ಧಾತುಗಳಿಗೆ ಮಾತ್ರವೇ ಅಲ್ಲದೆ ನಾಮಪದ ಗುಣವಚನ ಸರ್ವನಾಮ ಸಂಖ್ಯಾವಾಚಕಗಳಿಗೂ ಹತ್ತುವುದರಿಂದಲೂ, ಧಾತುಗಳು ಗುಣವಾಚಕ ರೂಪಕ್ಕೆ ತಿರುಗಿ, ಸರ್ವನಾಮವನ್ನು ಪಡೆದು ವಾಕ್ಯದಲ್ಲಿ ಎರಡು ನಾಮಪದಗಳಿಂದ ಕಾರ್ಯನಿರ್ವಾಹವಾಗುವಂತೆ ಮಾಡುತ್ತವೆಯೇ ಹೊರತು, ಕ್ರಿಯಾಪದವೆಂದು ರೂಢಿಯಾಗಿ ಹೇಳುತ್ತಿರುವುದು ನಿಜವಾಗಿ ಕ್ರಿಯಾಪದವಲ್ಲ, ಸರ್ವನಾಮದಿಂದ ಕೂಡಿದ ಗುಣವಾಚಕ—ಎಂಬುದು ಇದರ ಅಭಿಪ್ರಾಯ.

ಇದಕ್ಕೆ ನಿದರ್ಶನವಾಗಿ, ಹಳಗನ್ನಡದಲ್ಲಿ ಕೆಲವು ವಾಕ್ಯಗಳನ್ನು ತೆಗೆದುಕೊಳ್ಳೋಣ. ಆನೊರ್ವ್ವೆನ್, ಆನ್ ಪೆಜಿಸೆನ್, ಆನ್ ಕೇಶವನೆನ್, ನೀನ್ ಬೆಡಂಗನಯ್, ಅವನೊಳ್ಳಿದನ್, ಅವನ್ ಬಂದನ್, ಇವರ್ ನಲ್ಲರ್, ಇವರ್ ಒಳರ್, ರಾಮನ್ ಪಿರಿಯನ್, ರಾಮನ್ ಮಾಡನ್, ನೀನಾರ್ ? ಬಂದನಾರ್ ? ಮುಂತಾದ ವಾಕ್ಯಗಳಲ್ಲಿರುವ ಎರಡು ಅಂಗಗಳೂ ನಿಜಸ್ಥಿತಿಯಲ್ಲಿ ನಾಮಪದಗಳೇ ಆಗಿರುತ್ತವೆ. ಕ್ರಿಯಾಪದವೆನ್ನಿಸಿಕೊಳ್ಳುವುದೂ ನಾಮಪದವೇ. ಆದುದರಿಂದಲೇ ಕ್ರಿಯಾಪದಗಳಿಗೂ ವಿಭಕ್ತಿಗಳು ಸೇರಬಹುದು. ಉದಾ : ಪಿರಿದು, ಪಿರಿದಜಿನ್ ಎಂಬಂತೆಯೇ, ಮಾಡಿದುದು, ಮಾಡಿದುದಜಿನ್ ಎಂದೂ, ನಲ್ಲರ್, ನಲ್ಲರ್ಗೆ ಎಂಬಂತೆಯೇ ನಲಿದರ್, ನಲಿದರ್ಗೆ ಎಂದೂ ಹೇಳಬಹುದು. ವಿಚಾರ ಮಾಡಿದರೆ, ವಿಧಿರೂಪಗಳನ್ನು ಬಿಟ್ಟರೆ, ಮಿಕ್ಕ ಪೂರ್ಣ ಕ್ರಿಯೆಗಳೆಲ್ಲಾ ನಾಮಪದಗಳೇ ಆಗಿವೆ. ವಿಧಿರೂಪಗಳಲ್ಲಿ ಕೂಡ ಕೇವಲ ಧಾತುಪ್ರಯೋಗವನ್ನು ಬಿಟ್ಟರೆ, ಮಿಕ್ಕವೂ ಭಾವನಾಮವೋ, ಕೃದಂತವೋ ಆಗಿರುತ್ತವೆ.

## ವಿಧ್ಯರ್ಥಕ ಕ್ರಿಯೆ

**ಮಧ್ಯಮಪುರುಷ ಏಕವಚನ:** ಈ ಅರ್ಥದಲ್ಲಿ ಧಾತುವೇ ಪ್ರಯೋಗವಾಗುವುದು. ಧಾತುವಿಗೆ ಅ, ಎಂಬುದೂ ಸೇರುವುದುಂಟು. ಉದಾ : ಪಾಡ ಎಲೆ ತುಂಬಿ, ಬಗ್ಗಿಸು ಎಲೆ ಕೋಗಿಲೆ. ಬಾರ ಮರಾಳಿಕಾಗಮನೆ.[1]

---

[1] ಹೊಸಗನ್ನಡದಲ್ಲಿ ಹಳಗನ್ನಡದ ಅಕಾರಕ್ಕೆ ಬದಲಾಗಿ ಪುಂಸ್ತ್ರೀಲಿಂಗಗಳಲ್ಲಿ ಕ್ರಮವಾಗಿ ಒ, ಎ, ಕಾರಗಳನ್ನು ಧಾತುವಿಗೆ ಸೇರಿಸುವ ರೂಢಿ ಹೆಚ್ಚಾಗಿದೆ. ಉದಾ : ಬಾರೋ ಹೋಗೆ (ಬಾರೈ, ಬಾರೌ = ಬಾರಯ್ಯ, ಬಾರವ್ವ).

**ಮಧ್ಯಮಪುರುಷ ಬಹುವಚನ:** ಹಳಗನ್ನಡದಲ್ಲಿ ಧಾತುವಿಗೆ ಇಮ್ ಪ್ರತ್ಯಯ ಸೇರುವುದು. ಉದಾ: ಮಾಡಿಮ್. ನಡುಗನ್ನಡದಲ್ಲಿ ಈ ರೂಪವೂ ಅಲ್ಲದೆ ಇ, ಇರಿ ಎಂಬ ಪ್ರತ್ಯಯಗಳು ಸೇರಿದ ರೂಪಗಳೂ ಕಂಡುಬರುತ್ತವೆ. ಉದಾ: ನೋಡಿ, ನಡೆಯಿರಿ. ಹೊಸಗನ್ನಡದಲ್ಲಿ ಇ, ಇರಿ ಎಂಬ ಪ್ರತ್ಯಯಗಳು ಮಾತ್ರ ಸೇರುತ್ತವೆ. ಉದಾ: ಮಾಡಿ, ಹೇಳಿರಿ.

ಹಳಗನ್ನಡದ ಇಮ್ ಪ್ರತ್ಯಯವು ನಡುಗನ್ನಡ ಹೊಸಗನ್ನಡಗಳಲ್ಲಿ ಎರಡು ವಿಧವಾಗಿ ರೂಪಾಂತರವನ್ನು ಹೊಂದಿದೆ. (೧) ಅಂತ್ಯಾಕ್ಷರ (ಮ್) ಲೋಪವಾಗಿರುವುದು. (೨) ಅಂತ್ಯಾಕ್ಷರಕ್ಕೆ ರಿ ಆದೇಶವಾಗಿ ಬರುವುದು. ರಿ ಆದೇಶವು ಹೇಗೆ ಬಂತು? ಹಳಗನ್ನಡದ ಕುಡಿಂ, ಬನ್ನಿಂ, ತನ್ನಿಂ ಎಂಬಿವುಗಳನ್ನು ಅಂತ್ಯಾಕ್ಷರ ಲೋಪಮಾಡಿ ಕೊಡಿ, ಬನ್ನಿ, ತನ್ನಿ ಎಂದು ಹೇಳಿದಾಗ ಇವುಗಳ ಏಕವಚನರೂಪವು ಭಿನ್ನರೂಪವಾಗಿರುವುದರಿಂದ ಅರ್ಥಕ್ಕೆ ಬಾಧಕವುಂಟಾಗುವುದಿಲ್ಲ. ಆದರೆ ಪಿಡಿ, ನಡೆ ಮೊದಲಾದ ಇಕಾರಾಂತ ಎಕಾರಾಂತ ಧಾತುಗಳ ಬಹುವಚನರೂಪವಾದ ಪಿಡಿಯಿಂ, ನಡೆಯಿಂ ಎಂಬಿವುಗಳಲ್ಲಿಯ ಅಂತ್ಯಾಕ್ಷರವನ್ನು ಲೋಪಮಾಡಿ ಪಿಡಿಯಿ, ನಡೆಯಿ ಎಂದು ಹೇಳಿದಾಗ ಏಕವಚನದ ರೂಪಕ್ಕೂ ಬಹುವಚನದ ರೂಪಕ್ಕೂ ವ್ಯತ್ಯಾಸವು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಬಹುಶಃ ಈ ಕಾರಣದಿಂದ ಇವಕ್ಕೆ ಬಹುವಚನವನ್ನು ತಿಳಿಸುವ (ಇರ್) ಪ್ರತ್ಯಯವನ್ನೂ ವಿಧಿರೂಪವನ್ನು ತಿಳಿಸುವ (ಇ) ಪ್ರತ್ಯಯವನ್ನೂ ಜನರು ಸೇರಿಸಿರಬಹುದು. ಆಗ ಹಿಡಿ, ನಡೆ ಮೊದಲಾದುವಕ್ಕೆ ಹಿಡಿಯಿರಿ, ನಡೆಯಿರಿ ಎಂಬ ರೂಪಗಳು ಬರುತ್ತವೆ. ಇಕಾರಾಂತ ಎಕಾರಾಂತವಲ್ಲದ ಧಾತುಗಳಿಗೂ ಈ ಪ್ರತ್ಯಯವನ್ನು ಸೇರಿಸುವ ವಾಡಿಕೆ ಕಾಲಕ್ರಮದಲ್ಲಿ ಬಂದಿರಬಹುದು. ಉದಾ: ಹೇಳಿ, ಹೇಳಿರಿ; ಬನ್ನಿ, ಬನ್ನಿರಿ. ಕೆಲವು ಪ್ರಾಂತಗಳಲ್ಲಿ ಬರ್ರಿ, ತರ್ರಿ ಎಂಬುವೂ ಪ್ರಯೋಗದಲ್ಲಿವೆ.

**ಉತ್ತಮಪುರುಷ ಏಕವಚನ:** ಇದಕ್ಕೆ ಹಳಗನ್ನಡದಲ್ಲಿ ಪ್ರತ್ಯೇಕವಾದ ರೂಪವಿದ್ದಹಾಗೆ ಕಾಣುವುದಿಲ್ಲ. ಕೇಶಿರಾಜನು ಬಹುವಚನದಲ್ಲಿ ಸೇರುವ ಪ್ರತ್ಯಯವನ್ನು ಮಾತ್ರ ಹೇಳಿ ಏಕವಚನದ ಪ್ರಸ್ತಾಪವನ್ನೇ ಎತ್ತಿಲ್ಲ. ಈ ವಿಷಯದಲ್ಲಿ ನಿಟ್ಟೂರ ಸಂಜಯ್ಯನು ಹೀಗೆ ವ್ಯಾಖ್ಯಾನವನ್ನು ಬರೆದಿದ್ದಾನೆ: "ಉತ್ತಮಪುರುಷದೇಕವಚನಕ್ಕೆ ಪೇಟಲಿಲ್ಲಾಗಿ ಬಹುವಚನಕ್ಕೆ ಭವಿಷ್ಯಂತಿಗೆ ಬರ್ಪ ವಕಾರದ ಮೇಲೆ ಅಂ ಎಂಬುದು ಪತ್ತಿ ಆವೆಲ್ಲರ್ ಮಾಡುವೆಂ ಎಂದು ಆಯ್ತು. ಏಕವಚನಕ್ಕೆ ಹೇಗೆಂದೊಡೆ ಭವಿಷ್ಯಂತಿಯ ವಕಾರದಮೇಲೆ ಎನ್ ಎಂಬುದು ಪತ್ತಿದಂತೆ ಆ‍ರ್ ಮಾಡುವೆಂ ಎಂದಪ್ಪುದಾಗಿ ಪೇಟಲಿಲ್ಲೆಂದಱಿವುದು." ಭಟ್ಟಾಕಳಂಕನು ಧಾತುವಿನ ಪರದ ಎನ್ ಪ್ರತ್ಯಯಕ್ಕೂ ವೆ‍ೕ ಆದೇಶವಾಗಿ ಬರುವುದೆಂದು "ಏನೋರ್ವೇ" ಎಂಬ ಸೂತ್ರ (೪೭೧) ದಲ್ಲಿ ಹೇಳಿದ್ದಾನೆ. ಭಟ್ಟಾಕಳಂಕನ ಮತವನ್ನು ಒಪ್ಪುವ ಕಿಟ್ಟಲ್ ಅವರು ನಡುಗನ್ನಡದಲ್ಲಿ ವೆನ್, ವೆನು, ಲ್ಲಿ

ಎಂಬ ಪ್ರತ್ಯಯಗಳೂ ಹೊಸಗನ್ನಡದಲ್ಲಿ ವೆನು, ವೆ ಎಂಬ ಪ್ರತ್ಯಯಗಳೂ ಧಾತುಗೆ ಸೇರುತ್ತವೆಂದು ಹೇಳುತ್ತಾರೆ.

**ಉತ್ತಮ ಪುರುಷ ಬಹುವಚನ :** ಹಳಗನ್ನಡದಲ್ಲಿ ಧಾತುಗೆ ವಮ್ (ಅಥವಾ ಕೇಶಿರಾಜನ ಮತಾನುಸಾರವಾಗಿ ಅವ್) ಪ್ರತ್ಯಯವು ಸೇರುತ್ತದೆ. ಉದಾ : ಮಾಳ್ಪೆವಮ್, ಮಾಡುವವಮ್. ನಡುಗನ್ನಡದಲ್ಲಿ ಈ ರೂಪವು ಅಂತ್ಯಾಕ್ಷರ ಲೋಪವನ್ನು ಹೊಂದಿಯೂ ಹೊಂದದೆಯೂ ಪ್ರಯೋಗವಾಗುತ್ತದೆ. ಉದಾ : ಮಾಡುವಮ್, ಮಾಡುವ. ಹೊಸಗನ್ನಡದಲ್ಲಿ ಅಂತ್ಯಾಕ್ಷರ ಲೋಪವನ್ನು ಹೊಂದಿ ಪ್ರಯೋಗವಾಗುವುದು. ಉದಾ: ಮಾಡುವ. ಆದರೆ ಇದು ಪ್ರಾಂತಿಕಪ್ರಯೋಗವಾಗಿ ಪರಿಣಮಿಸಿದೆ. ಈಗ ಮಾಡೋಣ, ನಡೆಯೋಣ ಇತ್ಯಾದಿ ರೂಪಗಳು ಹೆಚ್ಚು ಪ್ರಯೋಗವಾಗುತ್ತವೆ. ವಮ್ ಎಂಬುದರ ಅಂತ್ಯಾಕ್ಷರವಾದ ಮಕಾರವೇ ಣಕಾರವಾಗಿ ಪರಿಣಮಿಸಿದೆಯೆಂದು ಕೆಲವರು ಹೇಳುತ್ತಾರೆ. ಆದಕಾರಣ ಮಾಡೋಣ ಮೊದಲಾದ ಶಬ್ದಗಳ ರೂಪಸಿದ್ಧಿ ಹೀಗಾಗುತ್ತದೆ: ಮಾಡುವಣ > ಮಾಡೂಣ ಅಥವಾ ಮಾಡೋಣ.[1]

ಉತ್ತಮಪುರುಷದ ಏಕವಚನ ಬಹುವಚನ ಕ್ರಿಯಾಪದಗಳೇ ವಿಧ್ಯರ್ಥದಲ್ಲೂ ಪ್ರಯೋಗವಾಗಿರುವಂತೆ ತೋರುತ್ತದೆ. ಉದಾ : ಮಾಳ್ಪೆನ್, ಮಾಳ್ಪೆವ್. ಮಾಳ್ಪೆವ್ ಎಂಬುದು ಮೊದಲು ಮಾಳ್ಪೆವ್ ಎಂಬುದರ ವಿಕಲ್ಪರೂಪವಾಗಿದ್ದು, ಆಮೇಲೆ ವಿಧ್ಯರ್ಥದಲ್ಲಿಯೇ ನೆಲಸಿರಬೇಕು.

**ಪ್ರಥಮಪುರುಷ ಏಕವಚನ ಬಹುವಚನ:** ಪ್ರಥಮ ಪುರುಷ ಏಕವಚನ ಬಹುವಚನಗಳೆರಡರಲ್ಲಿಯೂ ಎಲ್ಲಾ ಲಿಂಗಗಳಲ್ಲಿಯೂ ಒಂದೇ ಪ್ರತ್ಯಯವು ಸೇರುತ್ತದೆ. ಅದು ಯಾವುದೆಂದರೆ : ಕೆ, ಗೆ. ಉದಾ : ಪೋಕೆ, ಅಕ್ಕೆ, ಮಾಡುಗೆ.

ಹೊಸಗನ್ನಡದಲ್ಲಿ ವಿಶೇಷವಾಗಿ ರೂಢಿಯಲ್ಲಿರುವ ಪ್ರತ್ಯಯವು ಅಲಿ. ಉದಾ : ಅವನು ಮಾಡಲಿ. ಹಳಗನ್ನಡದ ಗ್ರಂಥಗಳಲ್ಲಿ ಈ ತೆರದ ಪ್ರಯೋಗವು ಅಪೂರ್ವ; ನಡುಗನ್ನಡದಲ್ಲಿ ಪ್ರಯೋಗ ಹೆಚ್ಚು. ಅಲಿ ಎಂಬುದಕ್ಕೆ ಮೂಲವಾಗಿ ಹಳಗನ್ನಡದಲ್ಲಿ ಅಲ್ ಎಂಬ ಪ್ರತ್ಯಯವಿದ್ದಿರಬಹುದೆ ? ತಮಿಳಿನಲ್ಲಿ ಈ ಪ್ರತ್ಯಯವು ಕಂಡುಬರುತ್ತದೆ.

ಹಳಗನ್ನಡದಲ್ಲಿ ಸಾಮಾನ್ಯವಾಗಿ ವಿಧ್ಯರ್ಥದಲ್ಲಿ ಮಾಳ್ಪುದು ಎಂಬಂತೆ, ಉದು ಪ್ರತ್ಯಯ ಸೇರಿದ ಭವಿಷ್ಯತ್ಕಾಲದ ಕಾರಕ ಕೃದಂತವು ಪ್ರಯೋಗದಲ್ಲಿದ್ದಿತು. ಆದರೆ ಹೊಸಗನ್ನಡದಲ್ಲಿ ಈ ರೂಪವು ಹೆಚ್ಚು ಬಳಕೆಯಲ್ಲಿಲ್ಲ. ಧಾತುಗೆ ಬೇಕು, ಬಹುದು, ತಕ್ಕದ್ದು ಎಂಬ ಶಬ್ದಗಳನ್ನು ಸೇರಿಸುವುದು ರೂಢಿಗೆ ಬಂದಿದೆ. ಉದಾ: ಮಾಡುವುದು, ಮಾಡಬೇಕು, ಮಾಡಬಹುದು, ಮಾಡತಕ್ಕದ್ದು.

---

[1] ಈ ರೂಪವನ್ನು ಭಾವನಾಮವಾಗಿ ಪ್ರಯೋಗಿಸುವುದೂ ಉಂಟು. ಉದಾ: ಮಾಡೋಣದರಿಂದ.

ಹಳಗನ್ನಡ ಗ್ರಂಥಗಳಲ್ಲಿ ಅಪೂರ್ವವಾಗಿ ಬರಲಿಮ್ ಎಂಬ ಪ್ರಯೋಗವು ಹೊಸಗನ್ನಡದ ಬರಲಿ ಎಂಬ ಅರ್ಥದಲ್ಲಿ ದೊರೆಯುತ್ತದೆ. ಈ ರೂಪವು ಬಳಕೆಗೆ ಬಂದ ಹಾಗೆಲ್ಲಾ ಪ್ರತಿಷೇಧಾರ್ಥದ ಬರಲ್, ಬರಲಿಮ್ ಮುಂತಾದ ಹಳಗನ್ನಡದಲ್ಲಿ ಕೂಡ ಅಷ್ಟು ಪ್ರಚಾರದಲ್ಲಿ ಕಾಣಿಸದ ರೂಪಗಳು ಅದೃಶ್ಯವಾಗುತ್ತ ಬಂದಿರಬೇಕು. ಪ್ರತಿಷೇಧಾರ್ಥವನ್ನು ಬೇರೆ ವಿಧದಲ್ಲಿ ತಿಳಿಸುವ ವಾಡಿಕೆ ಹುಟ್ಟಿರಬೇಕು. ಹೇಗೆಂದರೆ: ಮಾಡಬೇಡ, ಮಾಡಬಾರದು, ಮಾಡಕೂಡದು, ಮಾಡಲಾಗದು, ಮಾಡದೆ ಇರು, ಮಾಡತಕ್ಕದ್ದಲ್ಲ ಇತ್ಯಾದಿ.

## ನಿಷೇಧಕ್ರಿಯೆ

ಹಳಗನ್ನಡದಲ್ಲಿ ನಿಷೇಧಕ್ರಿಯೆಯು ಎರಡು ತರದಲ್ಲಿ ಆಗುತ್ತದೆ. (೧) ಧಾತುಗೆ ಅ ಅಥವಾ ಅದೆ ಪ್ರತ್ಯಯ ಸೇರುವುದರಿಂದ. (೨) ಕ್ರಿಯಾಪದಕ್ಕೆ ಅಲ್ಲಂ, ಇಲ್ಲ ಇತ್ಯಾದಿ ಪ್ರತ್ಯಯಗಳು ಸೇರುವುದರಿಂದ.

೧. ಧಾತುಗೆ ಯಾವ ವಿಶೇಷ ಪ್ರತ್ಯಯವೂ ಸೇರದೆ, ಎಂದರೆ ಆಖ್ಯಾತವಿಭಕ್ತಿ ಪ್ರತ್ಯಯಗಳು ಸೇರುವುದರಿಂದಲೇ, ನಿಷೇಧಕ್ರಿಯೆಯಾಗುವಂತೆ ಆಪಾತತಃ ತೋರುತ್ತದೆ. ಉದಾ: ಮಾಡು+ಎನ್ > ಮಾಡೆನ್, ನೋಡು+ಅಳ್ > ನೋಡಳ್ ಇತ್ಯಾದಿ. ಆದರೆ ಮಿಕ್ಕ ದ್ರಾವಿಡ ಭಾಷೆಗಳನ್ನು ನೋಡಿದರೆ ಧಾತುಗೆ ನಿಷೇಧಾರ್ಥದಲ್ಲಿ ಆ ಪ್ರತ್ಯಯ ಸೇರುತ್ತದೆಂಬುದು ಗೊತ್ತಾಗುತ್ತದೆಯೆಂದು ದ್ರಾವಿಡಭಾಷಾತತ್ತ್ವಜ್ಞರು ತಿಳಿಸುತ್ತಾರೆ. ಹಾಗೆ ಆ ಪ್ರತ್ಯಯ ಸೇರುವುದು ಕನ್ನಡದಲ್ಲಿಯೂ ನಿಷೇಧಕಾರಕಕೃದಂತಗಳಲ್ಲಿ ಕಂಡುಬರುತ್ತದೆ.[1] ಉದಾ: ಮಾಡು+ಅ+ದ > ಮಾಡದ, ಬಾರದ ಇತ್ಯಾದಿ. ಧಾತುಗಳಿಗೆ ಆಖ್ಯಾತ ವಿಭಕ್ತಿಗಳು ಸೇರುವಾಗಲೂ ನಿಷೇಧಾರ್ಥಕವಾದ ಅ ಪ್ರತ್ಯಯವು ಸೇರುತ್ತದೆಂದೇ ಇಟ್ಟುಕೊಳ್ಳಬೇಕು. ನೋಡು+ಅ+ಅನ್=ನೋಡಅನ್, ನೋಡನ್ ಅಥವಾ ನೋಡಾನ್; ಹಾಗೆಯೇ, ನೋಡು+ಅ+ಅದೆ=ನೋಡಅದೆ, ನೋಡದೆ ಅಥವಾ ನೋಡಾದೆ. ಇರ ಅದೆ ಎಂಬ ಪ್ರಯೋಗವು ಅಸಾಧುವಲ್ಲವೆಂದು ಕೇಶಿರಾಜನು ಹೇಳುವುದನ್ನೂ ಪೂರ್ವದ ಹಳಗನ್ನಡದಲ್ಲಿ ದೊರೆಯುವ "ವಿತ್ತಿದಲ್ಲಿ ವೆಳೆಯಾದೆ ಕೆಡುಗ" ಮುಂತಾದ ಪ್ರಯೋಗಗಳನ್ನೂ ನೋಡಿದರೆ ಹಾಗೆ ಊಹಿಸುವುದು ತಪ್ಪಲ್ಲವೆಂದು ತೋರುತ್ತದೆ. ಹೀಗೆ ಅ ಪ್ರತ್ಯಯವು ಸೇರಿ ನಿಷೇಧಕ್ರಿಯೆಯಾದಾಗ ಕಾಲವಿವಕ್ಷೆಯಿಲ್ಲ.

ಈ ತೆರದ ಪ್ರಯೋಗವು ಹಳಗನ್ನಡ ಕಾಲದಲ್ಲಿ ಇತ್ತು; ಈಗಲೂ ಇದೆ;

---

[1] ಅಜಿಂಪುಮೆ, ಅಟ್ಟುಮೆ, ತೀರಮೆ, ಪೊಲ್ಲಮೆ, ಇಲ್ಲಮೆ ಮುಂತಾದ ನಿಷೇಧಾರ್ಥಕ ಭಾವನಾಮಗಳನ್ನೂ, ನೂಂಕದು, ನೂಳದು, ತೆಕ್ಕದು ಮುಂತಾದ ಅವ್ಯಯಗಳನ್ನೂ ಹೋಲಿಸಿ.

ಆದರೆ ವಿಶೇಷವಾಗಿ ರೂಢಿಯಲ್ಲಿಲ್ಲ;[1] ಈಗ ಈ ಪ್ರಯೋಗವು ಕಂಡುಬರುವುದು ಬಹುಮಟ್ಟಿಗೆ ಗಾದೆಗಳಲ್ಲಿ. ಉದಾ : ತಾ ಕಳ್ಳ ಪರರ ನಂಬ. ಕಾಣೆ, ಕೇಳೆ.

೨. ಹಳಗನ್ನಡದಲ್ಲಿ ಇಲ್ಲಂ, ಇಲ್ಲ, ಅಲ್ಲಂ ಎಂಬಿವು ಕ್ರಿಯಾಪದಕ್ಕೆ ಸೇರುತ್ತವೆ. ಉದಾ: ನೋಡಿದನಿಲ್ಲಂ, ನೋಡಿದಳಿಲ್ಲ, ನೋಡಿದನಲ್ಲಂ. ಅಲ್ತು ಎಂಬುದೂ ಸೇರುತ್ತಿತ್ತು. ಉದಾ : ನೋಡಿದನಲ್ತು, ನೋಡಿದಳಲ್ತು, ನೋಡಿದುದಲ್ತು. ಭಾವನಾಮಕ್ಕೂ ಇಲ್ಲ ಎಂಬ ಪ್ರತ್ಯಯವು ಸೇರುತ್ತಿತ್ತು. ಉದಾ: ನೋಡಿದುದಿಲ್ಲ, ನೋಡಿತ್ತಿಲ್ಲ. ಹೊಸಗನ್ನಡದಲ್ಲಿಯೂ ಈ ತೆರೆದ ಪ್ರಯೋಗಗಳುಂಟು. ಆದರೆ ಅವು ಹೆಚ್ಚು ಬಳಕೆಯಲ್ಲಿಲ್ಲ. ಈಗ ವಿಶೇಷವಾಗಿ ರೂಢಿಯಲ್ಲಿರುವ ಪ್ರಯೋಗಗಳು ಎರಡು :—ಭೂತಕಾಲದ ಅರ್ಥದಲ್ಲಿ ಅಲ್ ಪ್ರತ್ಯಯ ಸೇರಿದ ಧಾತುಗೆ ಇಲ್ಲ ಎಂಬುದನ್ನು ಹತ್ತಿಸುವುದು. ಉದಾ : ನೋಡಲಿಲ್ಲ; ಮಾಡಲಿಲ್ಲ. ಭವಿಷ್ಯತ್ಕಾಲದ ಅರ್ಥದಲ್ಲಿ ಉದು ಪ್ರತ್ಯಯದಿಂದ ಕೂಡಿದ ಧಾತುಗೆ ಇಲ್ಲ ಎಂಬುದನ್ನು ಹತ್ತಿಸುವುದು. ಉದಾ : ನೋಡುವುದಿಲ್ಲ, ಮಾಡುವುದಿಲ್ಲ.

## ಕಾಲವಾಚಕ ಪ್ರತ್ಯಯಗಳು

ಕನ್ನಡದಲ್ಲಿ ಕ್ರಿಯಾಪದವು ಭೂತ, ಭವಿಷ್ಯತ್ತು, ವರ್ತಮಾನ ಎಂಬ ಮೂರು ಕಾಲಗಳನ್ನು ಸೂಚಿಸುವುದೆಂದು ಕನ್ನಡ ವ್ಯಾಕರಣಗಳಲ್ಲಿ ಹೇಳಿದೆ. ಆಧುನಿಕ ಪಂಡಿತರು ಕನ್ನಡದಲ್ಲಿ ಕ್ರಿಯಾಪದವು ಸೂಚಿಸುವುದು ಎರಡೇ ಕಾಲಗಳನ್ನೆಂದೂ, ಅವು (೧) ಭೂತಕಾಲ (೨) ಭವಿಷ್ಯದ್ವರ್ತಮಾನ ಕಾಲಗಳೆಂದೂ ಅಭಿಪ್ರಾಯ ಪಡುತ್ತಾರೆ. ಹಾಗೆ ಅಭಿಪ್ರಾಯಪಡುವುದಕ್ಕೆ ಕಾರಣಗಳಾವುವೆಂದರೆ :

೧. ವರ್ತಮಾನಕ್ರಿಯೆಯೆಂಬುದು ಭವಿಷ್ಯತ್ಕಾಲವನ್ನೂ ಸೂಚಿಸುತ್ತದೆ. ಹಳಗನ್ನಡ ಗ್ರಂಥಗಳಲ್ಲಿ ಇಂಥ ಪ್ರಯೋಗಗಳು ದೊರೆಯುತ್ತವೆ. ಉದಾ: ನಾಳೆ ಬಂದಪೆನ್. ಹೊಸಗನ್ನಡದಲ್ಲಿ ಈ ವಿಧವಾದ ಪ್ರಯೋಗವು ರೂಢಿಯಾಗಿದೆ. ಉದಾ : ಇನ್ನು ಎಂಟು ತಿಂಗಳಿಗೆ ಬರುತ್ತೇನೆ.

೨. ವರ್ತಮಾನಕಾಲವನ್ನು ಸೂಚಿಸುವ ಪ್ರತ್ಯಯಗಳು ಕೆಲವು ದ್ರಾವಿಡ ಭಾಷೆಗಳಲ್ಲಿಲ್ಲ. ಇರುವ ಭಾಷೆಗಳಲ್ಲಿ ಭಿನ್ನಭಿನ್ನವಾಗಿವೆ. ಭೂತ ಭವಿಷ್ಯತ್ಕಾಲಗಳನ್ನು ಸೂಚಿಸುವ ಪ್ರತ್ಯಯಗಳು ಎಲ್ಲ ದ್ರಾವಿಡಭಾಷೆಗಳಲ್ಲೂ ಇವೆ; ಅಲ್ಲದೆ ಸ್ವಲ್ಪ ಹೆಚ್ಚು ಕಡಮೆ ಒಂದೇ ಆಗಿವೆ.

೩. ಹಳಗನ್ನಡದ ವರ್ತಮಾನಪ್ರತ್ಯಯವಾದ ದಪ್ಪ ಅಥವಾ ದಪ ಎಂಬುದು ಎರಡು ಭಾಗಗಳನ್ನು ಒಳಕೊಂಡಿದೆ. ಅವುಗಳಲ್ಲಿ ದಪ್ಪ ಅಥವಾ ಅಪ ಎಂಬುದು

[1] ನಡೆಯಿಂ, ಹೇಳಿಂ ಮುಂತಾದ ನಿಷೇಧರೂಪಗಳು, ಹಳಗನ್ನಡದ ವಿಧಿರೂಪಗಳು ರೂಢಿಗೆ ಬಂದಮೇಲೆ ಅರ್ಥದಲ್ಲಿ ಸಂಶಯ ಹುಟ್ಟದುದರಿಂದ ಬಿಟ್ಟುಹೋಗುತ್ತ ಬಂದಿರಬೇಕು.

ಆಗು ಧಾತುವಿನ ಭವಿಷ್ಯದ್ರೂಪ. ಆದಕಾರಣ ದಪ್ಪ ಅಥವಾ ದಪ ಎಂಬುದು ಭವಿಷ್ಯತ್ ಕಾಲವನ್ನು ಸೂಚಿಸುವುದು ಸ್ವಾಭಾವಿಕವಾಗಿಯೇ ಇದೆ.

**ವರ್ತಮಾನಕಾಲ** : ಹಳಗನ್ನಡ ದಪ್ಪ ಅಥವಾ ದಪ ಎಂಬ ವರ್ತಮಾನ ಪ್ರತ್ಯಯವು ನಡುಗನ್ನಡದಲ್ಲಿ ದಹ ಎಂಬ ರೂಪವನ್ನು ಹೊಂದುತ್ತದೆ. ಹಳಗನ್ನಡದ ಪಕಾರವು ನಡುಗನ್ನಡದಲ್ಲಿ ಹಕಾರವಾಗುವುದರಿಂದ ಹೀಗಾಗುತ್ತದೆ. ಹೊಸಗನ್ನಡದಲ್ಲಿ ಈ ಪ್ರತ್ಯಯವು ಪ್ರಯೋಗದಲ್ಲಿಲ್ಲ; ಬೇರೊಂದು ಪ್ರತ್ಯಯವು ರೂಢಿಗೆ ಬಂದಿದೆ. ಇದಕ್ಕೆ ಕಾರಣವು ಹೀಗಿರಬಹುದು : ಹಳಗನ್ನಡದಲ್ಲಿ ದಪ ಪ್ರತ್ಯಯದಿಂದ ಕೂಡಿದ ಕ್ರಿಯೆಯು ಸಂಶಯವನ್ನು ಸೂಚಿಸುತ್ತಿದ್ದುದೂ ಉಂಟು, ಬಂದಪೆನ್ ಎಂದರೆ ಬಂದೇನು ಎಂದೂ ಅರ್ಥವಾಗುತ್ತಿತ್ತು. ಕಾಲಕ್ರಮದಲ್ಲಿ ಆ ಪ್ರತ್ಯಯವು ಬಹುಶಃ ಸಂಶಯಾರ್ಥದಲ್ಲಿಯೇ ಪ್ರಯೋಗವಾಗುವುದು ರೂಢಿಗೆ ಬಂದಂತೆ ಕಾಣುತ್ತದೆ. ಬಂದಪೆನ್ ಎಂಬುದು ಬಂದಹೆನ್ ಎಂದಾಗಿ ಬಂದಹೆನು>ಬಂದೇನು ಎಂಬ ರೂಪವನ್ನು ತಳೆಯಿತು. ಈಗ ಇದು ಸಂಶಯಾರ್ಥವನ್ನು ಮಾತ್ರ ಸೂಚಿಸುತ್ತದೆ. ಆದಕಾರಣ ವರ್ತಮಾನಕಾಲವನ್ನು ಸೂಚಿಸಲು ದಪ ಪ್ರತ್ಯಯಕ್ಕೆ ಬದಲಾಗಿ ಮತ್ತೊಂದು ಪ್ರತ್ಯಯವನ್ನು ಪ್ರಯೋಗಿಸಬೇಕಾದ ಆವಶ್ಯಕತೆಯುಂಟಾಯಿತು. ಇದಕ್ಕಾಗಿ ಹೊಸ ಪ್ರತ್ಯಯವೊಂದನ್ನು ನಿರ್ಮಾಣಮಾಡಬೇಕಾದ ಅಗತ್ಯವಿರಲಿಲ್ಲ. ಹಳಗನ್ನಡದಲ್ಲಿ ವರ್ತಮಾನ ಕೃದ್ವಾಚಿಯಾದಿ ಉತ ಅಥವಾ ಉತ್ತ ಎಂಬ ಪ್ರತ್ಯಯವು ಪ್ರಯೋಗವಾಗುತ್ತಿತ್ತು. ಅದನ್ನೇ ವರ್ತಮಾನಕ್ರಿಯೆಗೆ ಪ್ರತ್ಯಯವಾಗಿ ಉಪಯೋಗಿಸಿಕೊಂಡಂತೆ ಕಾಣುತ್ತದೆ.

**ಭೂತಕಾಲ** : ಭೂತಕಾಲದಲ್ಲಿ ಧಾತುಗೆ ದ ಪ್ರತ್ಯಯವು ಸೇರುತ್ತದೆ. ಹಾಗೆ ಸೇರಿದಾಗ ಧಾತುವಿಗೂ ಪ್ರತ್ಯಯಕ್ಕೂ ಕೆಲವು ವೇಳೆ ರೂಪದಲ್ಲಿ ವ್ಯತ್ಯಾಸವಾಗುತ್ತದೆ. ಆದರೂ ಸೇರತಕ್ಕ ಪ್ರತ್ಯಯವೇನೋ ದ ಎಂಬುದೊಂದೇ ಎಂದು ವ್ಯಾಕರಣಗಳಲ್ಲಿ ಹೇಳಿದೆ. ಡಾಕ್ಟರ್ ಕಾಲ್ಡ್ವೆಲ್ ಸಾಹೇಬರವರು ಮತ್ತೆರಡು ವಿಧಗಳಲ್ಲಿ ಭೂತಕಾಲವು ಸೂಚಿತವಾಗುತ್ತದೆಂದು ಹೇಳುತ್ತಾರೆ. (೧) ಧಾತುಗೆ ಇ ಎಂಬ ಪ್ರತ್ಯಯವು ಸೇರುವುದರಿಂದ (೨) ಕೆಲವು ಧಾತುಗಳ ಅಂತ್ಯ ವ್ಯಂಜನಗಳು ದ್ವಿತ್ವವನ್ನು ಹೊಂದುವುದರಿಂದ. ಈ ವಿಷಯವನ್ನು ಕುರಿತು ಇಲ್ಲಿ ಸ್ವಲ್ಪ ವಿಚಾರಮಾಡುವುದು ಆವಶ್ಯಕ.

**1. "ಇ" ಪ್ರತ್ಯಯದ ವಿಚಾರ** : ಉಕಾರಾಂತವಾದ ಕೆಲವು ಧಾತುಗಳಿಗೆ ದ ಪ್ರತ್ಯಯ ಪರವಾದಾಗ ಧಾತುವಿನ ಅಂತ್ಯ ಉಕಾರವು ಇಕಾರವಾಗುತ್ತದೆ. ಉದಾ : ಮಾಡು+ದ=ಮಾಡಿದ. ಈ ಸಂದರ್ಭದಲ್ಲಿ ಭೂತಕಾಲವನ್ನು ಸೂಚಿಸುವುದು "ಇ" ಪ್ರತ್ಯಯ. ಭೂತಕಾಲವನ್ನು ಸೂಚಿಸುವುದಕ್ಕೆ ದ ಪ್ರತ್ಯಯವು ಅಗತ್ಯವಲ್ಲ. ಈ ಜಾತಿಯ ಧಾತುಗಳಿಗೆ ಭೂತಕೃದ್ವಾಚಿಯಲ್ಲಿ ದು ಪ್ರತ್ಯಯ ಸೇರದೆ, ಇ ಕಾರ ಮಾತ್ರ ಸೇರುವುದು ಇದಕ್ಕೆ ನಿದರ್ಶನವಾಗಿದೆ. ಉದಾ :

ಮಾಡಿ, ನೋಡಿ ಇತ್ಯಾದಿ. ದು ಪ್ರತ್ಯಯದಿಂದ ಕೂಡಿದ ಮಾಡಿದು, ನೋಡಿದು ಇತ್ಯಾದಿ ರೂಪಗಳಿದ್ದುವೆಂಬುದಕ್ಕೆ ಹಳಗನ್ನಡದಲ್ಲಿ ಆಧಾರವಾವುದೂ ಇಲ್ಲದಿರುವುದರಿಂದ ಇಲ್ಲಿ ಇ ಎಂಬುದೇ ಭೂತಕಾಲವನ್ನು ಸೂಚಿಸುತ್ತದೆ. ಇದಲ್ಲದೆ, ಕೆಲವು ದ್ರಾವಿಡಭಾಷೆಗಳಲ್ಲಿ "ಇ" ಪ್ರತ್ಯಯವೊಂದೇ ಭೂತಕಾಲಾರ್ಥದಲ್ಲಿ ಪ್ರಯೋಗವಾಗುತ್ತದೆ. ಮತ್ತಾವ ಪ್ರತ್ಯಯವೂ ಸೇರುವುದಿಲ್ಲ. ಈ ಕಾರಣಗಳಿಂದ "ಇ" ಎಂಬುದೂ ಒಂದು ಭೂತಕಾಲಾರ್ಥಕ ಪ್ರತ್ಯಯವೆಂದು ಸಿದ್ಧಾಂತವಾಗುತ್ತದೆ.

ಡಾ. ಕಿಟ್ಟೆಲ್ ಸಾಹೇಬರು ಈ ಮತವನ್ನು ಒಪ್ಪುವುದಿಲ್ಲ. ಉಕಾರಾಂತವಾದ ಕೆಲವು ಧಾತುಗಳಿಗೆ ದ ಪ್ರತ್ಯಯ ಸೇರಿದಾಗ ಇ ಆಗಮವಾಗುತ್ತದೆ. ಆದರೆ ಅದು ಭೂತಕಾಲವನ್ನು ಸೂಚಿಸುವುದಿಲ್ಲ. ಹಾಗಿದ್ದರೆ ದ ಪ್ರತ್ಯಯವು ಅನಾವಶ್ಯಕವಾಗುತ್ತಿತ್ತು. ಹಳಗನ್ನಡದ ವ್ಯಂಜನಾಂತ ಧಾತುಗಳು ಹೊಸಗನ್ನಡದಲ್ಲಿ ಉಕಾರಾಂತಗಳಾಗುವುದರಿಂದ ಅವುಗಳಿಗೆ ದ ಪ್ರತ್ಯಯ ಸೇರಿದಾಗಲೂ ಇಕಾರವಾಗುತ್ತದೆ. ಉದಾ: ಹಳಗನ್ನಡ ಆಳ್ದ, ಹೊಸಗನ್ನಡ ಆಳಿದ. ಈ ಎರಡರಲ್ಲಿಯೂ ಇರುವ ದ ಪ್ರತ್ಯಯ ಒಂದೇ. ಅದು ಭೂತಕಾಲವನ್ನು ತೋರಿಸುತ್ತದೆ. ಇ ಎಂಬುದು ಉಚ್ಚಾರಣೆಗಾಗಿ ಬಂದಿರುವ ಆಗಮ. ಮಾಡು, ನೋಡು, ಮೊದಲಾದುವುಗಳ ಭೂತಕೃದ್ವಾಚಿಗಳು ಮಾಡಿ, ನೋಡಿ ಇತ್ಯಾದಿಯಾಗಿರುವುದು ನಿಜ. ಅವುಗಳಿಗೆ ಮಾಡಿದು, ನೋಡಿದು ಇತ್ಯಾದಿಯಾಗಿ ರೂಪಗಳಿದ್ದಿರಬಹುದೆಂದು ಊಹಿಸಲು ಆಧಾರಗಳಿಲ್ಲದೆ ಇಲ್ಲ. ನಡುಗನ್ನಡದಲ್ಲಿ ಆ ತೆರದ ಪ್ರಯೋಗಗಳು ಕಂಡುಬರುತ್ತವೆ. ಉದಾ: ಕೇಳಿದು ಶೌರಿಯಿಂತೆಂದ. ಕೇಳಿದು ಎಂಬುದು ಹಳಗನ್ನಡದ ಕೇಳ್ದು ಎಂಬುದರ ರೂಪಾಂತರ. ಇಲ್ಲಿ ಇಕಾರವಾಗಿರುವುದು ಉಚ್ಚಾರಣ ಸೌಲಭ್ಯಕ್ಕಾಗಿ. ಹೊಸಗನ್ನಡದಲ್ಲಿ ಕೇಳಿದು ಎಂಬ ಪ್ರಯೋಗವಿಲ್ಲ; ಕೇಳಿ ಎಂದು ಮಾತ್ರವೇ ಇದೆ. ಹಳಗನ್ನಡದ ಉಕಾರಾಂತ ಧಾತುಗಳು ಈ ರೀತಿಯ ರೂಪವನ್ನು ನಡುಗನ್ನಡದಲ್ಲಿ ಹೊಂದುವುದು ಕಂಡುಬರುತ್ತದೆ. ಉದಾ: ಮಾಡಿದು, ನೋಡಿದು. ಇವು ಒಂದಾನೊಂದು ಕಾಲದಲ್ಲಿ ಪ್ರಯೋಗದಲ್ಲಿದ್ದು ಬಳಕೆಯಲ್ಲಿ ಉಳಿದಿದ್ದ ರೂಪಗಳೆಂದು ತೋರುತ್ತದೆ. ಆದಕಾರಣ ದ ಎಂಬುದನ್ನೇ ಭೂತಕಾಲ ಪ್ರತ್ಯಯವೆಂದು ಇಟ್ಟುಕೊಳ್ಳಬೇಕು.

**2. ಅಂತ್ಯ ವ್ಯಂಜನಗಳು ದ್ವಿತ್ವವನ್ನು ಹೊಂದುವ ವಿಚಾರ**: ಡು, ಗು, ಬು, ಈ ಅಕ್ಷರಗಳು ಅಂತ್ಯದಲ್ಲಿರುವ ಮತ್ತು ಅವುಗಳ ಉಪಾಂತ್ಯಸ್ವರವು ಹ್ರಸ್ವವಾಗಿರುವ ಧಾತುಗಳು ದ್ವಿತ್ವವನ್ನು ಹೊಂದುವುದರಿಂದ ಭೂತಕಾಲವನ್ನು ಸೂಚಿಸುತ್ತವೆ. ಕನ್ನಡದಲ್ಲಿ ಬುಾಂತವಾದ ಧಾತುಗಳು ದ್ವಿತ್ವವನ್ನು ಪಡೆಯುವುದಿಲ್ಲವಾದ ಕಾರಣ ಆ ಧಾತುಗಳ ವಿಚಾರವನ್ನು ಇಲ್ಲಿ ಮಾಡುವುದಿಲ್ಲ. ಹಾಗೆ ದ್ವಿತ್ವವನ್ನು ಪಡೆಯುವಾಗ ಸರಳಗಳಿಗೆ ಪರುಷಗಳು ಆದೇಶವಾಗುತ್ತವೆ. ಉದಾ: ಕಿಡು>

ಕೆಟ್ಟ, ಪುಗು>ಪೊಕ್ಕ. ಹೀಗೆ ಭೂತಕಾಲವು ಸೂಚಿತವಾಗುವ ಕ್ರಿಯಾಪದಗಳ ಸಂಖ್ಯೆ ಅಲ್ಲವೆಂದೂ, ಅದು ಮುಖ್ಯವಾಗಿ ಕನ್ನಡ ತಮಿಳುಗಳಲ್ಲಿಯೂ ಸ್ವಲ್ಪ ಮಟ್ಟಿಗೆ ತೆಲುಗಿನಲ್ಲಿಯೂ ಕಂಡುಬರುತ್ತದೆಯೆಂದೂ ಡಾ. ಕಾಲ್ಡ್ವೆಲ್ ಸಾಹೇಬರು ಹೇಳುತ್ತಾರೆ.

ಮೇಲೆ ಹೇಳಿದ ಕೆಟ್ಟ, ಪೊಕ್ಕ ಮೊದಲಾದ ರೂಪಗಳು ಧಾತುಗೆ ದ ಅಥವಾ ತ ಸೇರಿದುದರಿಂದಲೇ ಆದುವೆಂದು ಪ್ರಾಚೀನ ಪಂಡಿತರೂ ಆಧುನಿಕ ವಿದ್ವಾಂಸರು ಕೆಲವರೂ ಅಭಿಪ್ರಾಯಪಡುತ್ತಾರೆ. ಆ ರೂಪಗಳು ಸಿದ್ಧಿಸುವ ಕ್ರಮವು ಎರಡು ತೆರನಾಗಿರಬಹುದು. (೧) ಕಿಡು, ಪುಗು ಮೊದಲಾದ ಧಾತುಗಳಿಗೆ ದ ಅಥವಾ ತ ಪ್ರತ್ಯಯ ಪರವಾದಾಗ ಧಾತುವಿನ ಅಂತ್ಯಸ್ವರಕ್ಕೆ ಲೋಪವಾಗುತ್ತದೆ. (ಈ ಲೋಪಕ್ಕೆ ಕಾರಣ ಉ ಎಂಬುದು ಬಹು ಲಘುವಾದ ಸ್ವರವೆಂದು ಕೆಲವರು ಹೇಳುವುದನ್ನು ಇಲ್ಲಿ ಜ್ಞಾಪಕದಲ್ಲಿಡಬೇಕು.) ಆದಕಾರಣ ಅವುಗಳ ಭೂತರೂಪಗಳು ಕೆಡ್ತ, ಪೊಗ್ತ ಎಂದಾಗುತ್ತವೆ. ಇವುಗಳ ಉಚ್ಚಾರಣೆ ಕ್ಲಿಷ್ಟವಾದ ಕಾರಣ ಈ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯಗಳಾಗಬೇಕಾಗುತ್ತದೆ. ಪದಮಧ್ಯದಲ್ಲಿ ಅಥವಾ ಪದಾಂತ್ಯದಲ್ಲಿ ದ್ವಿತ್ವ ಬರುವುದು ಪರುಷಗಳಿಗೆ ಮಾತ್ರ ಎಂಬುದು ದ್ರಾವಿಡಭಾಷೆಗಳ ಮೂಲತತ್ತ್ವಗಳಲ್ಲಿ ಒಂದೆಂದು ಆಧುನಿಕ ಭಾಷಾಶಾಸ್ತ್ರಜ್ಞರು ಹೇಳುತ್ತಾರೆ. ಈ ಕಾರಣದಿಂದ ಅಂತ್ಯ ವ್ಯಂಜನವು ಪರುಷವಾಗುತ್ತದೆ. ಕೆಟ್ತ, ಪೊಕ್ತ ಆಮೇಲೆ ಕೆಟ್ಟ, ಪೊಕ್ಕ ಎಂಬ ರೂಪಗಳಾಗುತ್ತವೆ. (ಈ ಸಂದರ್ಭದಲ್ಲಿ ಮೂಲದ್ರಾವಿಡ ಭಾಷೆಯಲ್ಲಿ ಇದ್ದುದು ಪರುಷಾಕ್ಷರಗಳು ಮಾತ್ರವೆ ಎಂಬ ಮತವನ್ನೂ ತಮಿಳು ವರ್ಣಮಾಲೆಯಲ್ಲಿ ಸರಳಾಕ್ಷರಗಳು ಇಲ್ಲದೆ ಶಬ್ದದಲ್ಲಿ ಪರುಷಾಕ್ಷರಕ್ಕಿರುವ ಸ್ಥಾನವು ಅದು ಪರುಷವೇ ಸರಳವೇ ಎಂಬುದನ್ನು ನಿರ್ಧರಿಸುತ್ತದೆ ಎಂಬುದನ್ನೂ ಜ್ಞಾಪಕದಲ್ಲಿಟ್ಟಿರಬೇಕು.) ಇದು ಒಂದು ಮತ. (ಕೆಡು, ಪುಗು ಮೊದಲಾದುವುಗಳ ಮೂಲರೂಪವು ಕೆಟ್ ಅಥವಾ ಪೊಕ್ ಆಗಿರಬೇಕು. ಇವುಗಳಿಗೆ ದ ಅಥವಾ ತ ಪ್ರತ್ಯಯವು ಸೇರಿದಾಗ ಅವಕ್ಕೆ ಕೆಟ್ತ ಅಥವಾ ಪೊಕ್ತ ಎಂಬ ರೂಪಗಳಾಗಿ ಆಮೇಲೆ ಕೆಟ್ಟ, ಪೊಕ್ಕ ಎಂಬ ರೂಪಗಳು ಬಂದಿರಬೇಕೆಂಬುದು ಇನ್ನೊಂದು ಮತ.

ಮೇಲೆ ಉಕ್ತವಾದ ಡಾ. ಕಾಲ್ಡ್ವೆಲ್ ಸಾಹೇಬರ ಅಭಿಪ್ರಾಯಗಳು ಕನ್ನಡ ಭಾಷೆಯ ಚರಿತ್ರೆಯ ದೃಷ್ಟಿಯಿಂದ ಮುಖ್ಯವಾದವುಗಳಲ್ಲದಿದ್ದರೂ ಭಾಷಾಶಾಸ್ತ್ರದ ದೃಷ್ಟಿಯಿಂದ ವಿಚಾರಯೋಗ್ಯವಾದುವು. ಆದುದರಿಂದ ಇವುಗಳನ್ನು ಇಲ್ಲಿ ವಿಚಾರ ಮಾಡಿದೆ. ಹೀಗೆಯೇ ವಿಚಾರಾರ್ಹವಾದ ಇನ್ನೂ ಒಂದೆರಡು ಅಂಶಗಳನ್ನು ಇಲ್ಲಿ ಸೂಚಿಸಬಹುದು.

ಭೂತಕಾಲದಲ್ಲಿ (೧) ಮಿಾ, ಬೇ, ನೋ, ಎಂಬ ಧಾತುಗಳಿಗೆ ಮಿಂದ, ಬೆಂದ, ನೊಂದ ಎಂಬ (೨) ಕೊಲ್, ಸಲ್ ಧಾತುಗಳಿಗೆ ಕೊಂದ, ಸಂದ ಎಂಬ

(೩) ಕೊಳ್ ಧಾತುಗೆ ಕೊಂಡ ಎಂಬ (೪) ಸಾ, ಈ ಧಾತುಗಳಿಗೆ ಸತ್ತ, ಇತ್ತ ಎಂಬ (೫) ತರ್, ಬರ್ ಧಾತುಗಳಿಗೆ ತಂದ, ಬಂದ ಎಂಬ ರೂಪಗಳು ಬರುತ್ತವೆ. ಕನ್ನಡವ್ಯಾಕರಣಗಳಲ್ಲಿ ಈ ರೂಪಗಳು ಹೇಗೆ ಸಿದ್ಧಿಸುತ್ತವೆಂಬ ವಿಚಾರವಾಗಿ ಹೇಳಿರುವುದು ಭಾಷಾಶಾಸ್ತ್ರದೃಷ್ಟಿಯಿಂದ ಸಮರ್ಪಕವಾಗಿಲ್ಲ. ಮಿಾ ಧಾತುಗೆ ದ ಪರವಾದಾಗ ಅದರ ದೀರ್ಘಕ್ಕೆ ಹ್ರಸ್ವಾದೇಶವಾಗುವುದೆಂದೂ ಅನುಸ್ವಾರಾಗಮವಾಗುವುದೆಂದೂ ಹೇಳಿದರೆ ಆಗತಕ್ಕ ಕಾರ್ಯವನ್ನು ಶಾಸ್ತ್ರಪರಿಭಾಷೆಯಲ್ಲಿ ಹೇಳಿದಂತಾಯಿತೇ ಹೊರತು ಕಾರಣವನ್ನು ಹೇಳಿದಂತೆ ಆಗುವುದಿಲ್ಲ. ಆ ಕಾರಣವೇನಿರಬಹುದೆಂಬುದು ವಿಚಾರಾರ್ಹವಾದ ವಿಷಯವಾಗಿದೆ. ಅದನ್ನು ಹೀಗೆ ಸೂಚಿಸಬಹುದು. (೧) ಮಿಾ, ಬೇ, ನೋ ಧಾತುಗಳ ರೂಪವು ಮಿಯ್, ಬೆಯ್, ನೊಯ್ ಎಂದಿದ್ದು ಅಂತ್ಯ ಯಕಾರವು ಅನುನಾಸಿಕವಾಗಿದ್ದಿರಬೇಕು. (೨) ಕೊಲ್, ಸಲ್ ಧಾತುಗಳ ಅಂತ್ಯ ಲಕಾರವೂ (೩) ಕೊಳ್ ಧಾತುವಿನ ಳಕಾರವೂ ಅನುನಾಸಿಕಗಳಾಗಿದ್ದಿರಬೇಕು.[1] ಯ ವ ಲಗಳು ಅನುನಾಸಿಕಗಳೂ ಆಗಿದ್ದುವೆಂದು ವ್ಯಾಕರಣಗಳಲ್ಲಿ ಹೇಳಿದೆ. (ಆದರೆ ಅದರಂತೆ ಳಕಾರವೂ ಅನುನಾಸಿಕವಾಗಿರಬಹುದೆಂದು ಹೇಳಿಲ್ಲ.) ಈ ಅನುನಾಸಿಕಾಂತ ಧಾತುಗಳಿಗೆ ದ ಪ್ರತ್ಯಯ ಸೇರಿದಾಗ ತವರ್ಗದ ಪಂಚಮಾಕ್ಷರವು ಆದೇಶವಾಗುವುದು ಸ್ವಾಭಾವಿಕವೇ ಆಗಿದೆ. ಆದಕಾರಣ ಬೆಂದ,[2] ಕೊಂದ ಇತ್ಯಾದಿ ರೂಪಗಳಾಗುತ್ತವೆ. ಣಕಾರವು ಳಕಾರಕ್ಕೆ ಸಮನಾದ ಅನುನಾಸಿಕವಾದ ಕಾರಣ ಕಂಡ ಎಂಬಂತೆ ಕೊಂಡ ಎಂಬ ರೂಪವು ಬರುತ್ತದೆ. ಇಲ್ಲಿ ಣಕಾರದ ಸಾನ್ನಿಧ್ಯದಿಂದ ದಕಾರವು ಡಕಾರವಾಗುತ್ತದೆ. (೪) ಸಾ, ಈ ಧಾತುಗಳ ರೂಪವು ಸಯ್, ಇಯ್ ಎಂದು ಇದ್ದಿರಬೇಕು. ಹಾಗಾದರೆ ಅವಕ್ಕೆ ತ ಪ್ರತ್ಯಯ ಸೇರಿದಾಗ ಸಯ್ತು, ಇಯ್ತು, ಸತ್ತ, ಇತ್ತ ಎಂಬ ರೂಪಗಳು ಸ್ವಾಭಾವಿಕವಾಗಿಯೇ ಬರುತ್ತವೆ. (೫) ತರ್, ಬರ್ ಎಂಬಿವುಗಳಿಗೆ, ಒರ್ ಎಂಬುದು ಒಂದು ಎಂದಾದಂತೆ ಅನುನಾಸಿಕ ವಿಧಿಯಿಂದ ತಂದ, ಬಂದ, ತನ್ನಿ, ಬನ್ನಿ, ಎಂಬ ರೂಪಗಳಾಗಿರಬಹುದು. ಮೇಲೆ ಹೇಳದೆ ಬಿಟ್ಟಿರುವ ಮತ್ತೆ ಕೆಲವು ಭೂತಕ್ರಿಯಾರೂಪಗಳು ಹೇಗೆ ಸಿದ್ಧಿಸುತ್ತವೆಂಬುದನ್ನು ಹೀಗೆಯೇ ಊಹಿಸಬಹುದು.

ಕನ್ನಡ ಭಾಷೆಯ ದೃಷ್ಟಿಯಿಂದ ಈ ಸಂದರ್ಭದಲ್ಲಿ ವಿಚಾರಾರ್ಹವಾದ

---

[1] ಆದ್ದರಿಂದಲೇ 'ಕೊಳ್ಳಿ' ಎಂಬುದಕ್ಕೆ ಗ್ರಾಮ್ಯವಾಗಿ 'ಕೊನ್ನಿ' ಎಂಬ ರೂಪವೂ ದೊರೆಯುತ್ತದೆ. ಉಣ್, ಉಣ್ಬು ಎಂಬುದನ್ನೂ ನೋಡಿ.

[2] ಬೆಚ್ಚಗೆ ಎಂಬುದು ಸಮಾಸದಲ್ಲಿ ಬೆಂ ಆಗುವುದೆಂದು ಕೇಶಿರಾಜನು ಹೇಳಿರುವನು. ವಾಸ್ತವವಾಗಿ, ಬೆಯ್ನ್‌ದು > ಬೆಂದು ಎಂಬಂತೆಯೇ, ಬೆಯ್ನ್+ಕದಿರ್ = ಬೆಂಗದಿರ್ (ಬೆಯ್+ತು = ಬಿಸಿದು, ಬಹುವಚನ, ಬಿಸಿಯವು). ಕೆಚ್ಚಗೆ, ಪಚ್ಚಗೆ ಎಂಬುವುಗಳ ವಿಷಯವೂ ಹೀಗೆಯೇ.

ಮತ್ತೊಂದಂಶವಿದೆ. ಹಳಗನ್ನಡದ ವ್ಯಂಜನಾಂತಗಳು ಹೊಸಗನ್ನಡದಲ್ಲಿ ಸಾಮಾನ್ಯವಾಗಿ ಉಕಾರಾಂತವಾಗುವುದರಿಂದ ಅವುಗಳಲ್ಲಿ ಕೆಲವು ಧಾತುಗಳ ಭೂತರೂಪಗಳಲ್ಲಿ ಹಳಗನ್ನಡದ ಉಕಾರಾಂತ ಧಾತುಗಳ ಭೂತರೂಪಗಳಲ್ಲಿ ಕಂಡುಬರುವ ಇಕಾರವು ಕಂಡುಬರುತ್ತದೆ. ಉದಾ: ಆಳ್, ಆಳಿದ, ಬಾಳ್, ಬಾಳಿದ. ಮತ್ತೆ ಕೆಲವು ಹಳಗನ್ನಡದ ರೂಪಗಳನ್ನೇ ಹೊಂದುತ್ತವೆ. ಉದಾ: ಗೆಲ್ಲು, ಗೆದ್ದ, (ನಡುಗನ್ನಡ ಗೆಲಿದ), ಇರು, ಇದ್ದ. ಇಲ್ಲಿ ವಿಜಾತೀಯ ಸಂಯುಕ್ತಾಕ್ಷರಗಳು ಸಜಾತೀಯವಾಗುತ್ತವೆ. ಕಳ್ ಧಾತುವಿನ ಭೂತರೂಪವಾದ ಕಳ್ದ ಎಂಬುದು ಹೊಸಗನ್ನಡದಲ್ಲಿ ಕದ್ದ ಎಂಬ ರೂಪವನ್ನೇ ಹೊಂದಿದೆ, ಇದರಿಂದ ಕದಿ ಎಂಬ ಧಾತು ಹುಟ್ಟಿರುತ್ತದೆ.

**ಭವಿಷ್ಯತ್ಕಾಲ** : ಧಾತುಗೆ ಪ ಅಥವಾ ವ ಪ್ರತ್ಯಯ ಸೇರಿ ಭವಿಷ್ಯತ್ಕಾಲವನ್ನು ಸೂಚಿಸುತ್ತದೆ. ಹೊಸಗನ್ನಡದಲ್ಲಿ ವರ್ತಮಾನರೂಪವನ್ನೇ ಭವಿಷ್ಯದರ್ಥದಲ್ಲಿ ಪ್ರಯೋಗಿಸುವುದು ರೂಢಿಗೆ ಬರುತ್ತಿದೆ. ಹಳಗನ್ನಡದ ವ ಪ್ರತ್ಯಯ ಸೇರಿದ ರೂಪಗಳು ಈಗ ಗ್ರಾಂಥಿಕ ಭಾಷೆಯಲ್ಲಿ ಪ್ರಯೋಗವಾಗುತ್ತವೆ.

ಹಳಗನ್ನಡದ ಪಕಾರವು ನಡುಗನ್ನಡದಲ್ಲಿ ಹಕಾರವಾಗುತ್ತವೆ. ಉದಾ: ಹಳಗನ್ನಡದ ಬರ್ಪ, ಪೋಪ > ನಡುಗನ್ನಡ ಬಹ, ಹೋಹ. ನಡುಗನ್ನಡದ ರೂಪಗಳು ಈಗ ಎರಡು ಪದಗಳಲ್ಲಿ ಮಾತ್ರ ಉಳಿದಿವೆ. ಹಳಗನ್ನಡದ ಬರ್ಪುದು > ನಡುಗನ್ನಡ ಬಹುದು > ಹೊಸಗನ್ನಡ (ಮಾಡ)ಬಹುದು. ಹಳಗನ್ನಡ ಅಪ್ಪುದು > ನಡುಗನ್ನಡ ಅಹುದು > ಹೊಸಗನ್ನಡ ಆಹುದು > (ವರ್ಣವ್ಯತ್ಯಯವಾಗಿ) ಹಉದು > ಹೌದು.

ಹಳಗನ್ನಡ ವ್ಯಂಜನಾಂಶಗಳು ಹೊಸಗನ್ನಡದಲ್ಲಿ ಉಕಾರಾಂತವಾಗುವುದರಿಂದ ವ ಪ್ರತ್ಯಯವೊಂದೇ ಹೊಸಗನ್ನಡದಲ್ಲಿ ಸೇರುತ್ತದೆ. ಉದಾ: ಬರುವ, ಹೋಗುವ, ತಿನ್ನುವ, ಎನ್ನುವ (ಅನ್ನುವ). ತಿಂಬ, ಉಂಬ, ಕೊಂಬ (= ಕೊಳ್ಳ) ಎಂಬ ಮೊದಲಾದ ರೂಪಗಳು ನಡುಗನ್ನಡದಲ್ಲಿ ಕಾಣುತ್ತವೆ.

## ಪುರುಷವಾಚಕ ಪ್ರತ್ಯಯಗಳು (ಆಖ್ಯಾತ ವಿಭಕ್ತಿ ಪ್ರತ್ಯಯಗಳು)

ಆಖ್ಯಾತವಿಭಕ್ತಿ ಪ್ರತ್ಯಯಗಳೆಲ್ಲವೂ ಸರ್ವನಾಮ ಶಬ್ದಗಳೆಂದು ಮೇಲೆ ಹೇಳಿದೆ. ಅನ್, ಅಳ್, ಅರ್, ಉದು, ಅದು, ಉವು, ಅವು ಎಂಬ ಪ್ರಥಮಪುರುಷ ಪ್ರತ್ಯಯಗಳು ಸರ್ವನಾಮಗಳೆಂಬುದು ಸ್ವತಸ್ಸಿದ್ಧವಾಗಿದೆ. ಉತ್ತಮಪುರುಷ ಪ್ರತ್ಯಯಗಳಾದ ಎನ್, ಎಮ್ ಎಂಬಿವೂ ಆನ್, ಆಮ್ ಎಂಬುವುಗಳ ಮೂಲ ರೂಪಗಳು. ಮಧ್ಯಮಪುರುಷ ಪ್ರತ್ಯಯಗಳು ಸರ್ವನಾಮಗಳೆಂದು ತೋರಿಸುವುದು ಇಷ್ಟು ಸುಲಭವಲ್ಲ; ಆದರೂ ಅವು ಸರ್ವನಾಮಗಳೆಂಬುದರಲ್ಲಿ ಸಂಶಯವಿಲ್ಲ. ಉತ್ತಮಪುರುಷ ಸರ್ವನಾಮಕ್ಕೆ ನಾನ್, ಆನ್ ಎಂಬ ಎರಡು ರೂಪಗಳಿದ್ದಂತೆಯೇ

ಮೂಲಭಾಷೆಯಲ್ಲಿ ಮಧ್ಯಮಪುರುಷ ಸರ್ವನಾಮಕ್ಕೆ ನೀನ್, ಈನ್ ಎಂಬ ಎರಡು ರೂಪಗಳಿದ್ದಿರಬೇಕು. ನೀನು ಎಂಬುದಕ್ಕೆ ತುಳು ಭಾಷೆಯಲ್ಲಿ ಈ ಎಂಬ ಮತ್ತು ತೆಲುಗು ಭಾಷೆಯಲ್ಲಿ ಈವು ಎಂಬ ರೂಪಗಳಿರುವುದೇ ಇದಕ್ಕೆ ನಿದರ್ಶನವಾಗಿದೆ. ಈ ಎಂಬ ಸರ್ವನಾಮವೇ (ಇಯ್ > ಎಯ್ >) ಅಯ್ ಎಂಬ ರೂಪವನ್ನು ಪಡೆದಿರಬೇಕೆಂದೂ ಇರ್ ಎಂಬುದೂ ಹಾಗೆಯೇ ಮಧ್ಯಮಪುರುಷ ಬಹುವಚನ ರೂಪವಿದ್ದಿರಬೇಕೆಂದೂ ತೋರುತ್ತದೆ. ಇರ್ ಎಂಬುದು ಇಮ್(ನೀಮ್) ಎಂಬುದಕ್ಕೆ ಸಂಬಂಧಿಸಿರಬಹುದೇ ? ಇಮ್ ಎಂಬುದು ವಿಧ್ಯರ್ಥಕ ಬಹುವಚನ ಪ್ರತ್ಯಯವಾಗಿಯೂ ಇದೆ. ಇರ್ ಎಂಬುದು ಸಂಬೋಧನಾವಿಭಕ್ತಿಯಲ್ಲಿಯೂ ಪ್ರಯೋಗವಾಗುತ್ತದೆ. ಉದಾ : ಮುಗಿಲ್ಗಳಿರ, ಅಣ್ಣಂಗಳಿರ. ಸಂಬೋಧನಾವಿಭಕ್ತಿಯಲ್ಲಿ ಮಧ್ಯಮಪುರುಷದ ಅರ್ಥವಿರುವುದರಿಂದ ಇರ್ ಎಂಬುದು ಮಧ್ಯಮಪುರುಷ ಬಹುವಚನವನ್ನು ಸೂಚಿಸುವುದೆಂಬುದು ಕಂಡುಬರುತ್ತದೆ.

ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ಆಖ್ಯಾತವಿಭಕ್ತಿಪ್ರತ್ಯಯಗಳೇ ಈಗಲೂ ಪ್ರಯೋಗದಲ್ಲಿವೆ. ಆದರೆ ಅವುಗಳ ರೂಪದಲ್ಲಿ ಸ್ವಲ್ಪಮಟ್ಟಿಗೆ ವ್ಯತ್ಯಾಸವಾಗಿರುತ್ತದೆ. ಆ ವ್ಯತ್ಯಾಸಗಳಾವುವೆಂಬುದು ಇಲ್ಲಿ ನಿರೂಪಿತವಾಗಿದೆ.

**ಉ. ಪು; ಏ. ವ.** ಹಳಗನ್ನಡ ಎನ್[1] ನಡುಗನ್ನಡದಲ್ಲಿ ಈ ರೂಪವಲ್ಲದೆ ಏನು, ಎ ಎಂಬ ರೂಪಗಳೂ ಕಂಡುಬರುತ್ತವೆ. ಹೊಸಗನ್ನಡದಲ್ಲಿ ಎನು, ಎ ಎಂಬೆರಡು ರೂಪಗಳೇ ಪ್ರಯೋಗದಲ್ಲಿವೆ. ಎನು ಎಂಬುದು ಗ್ರಾಂಥಿಕ ಭಾಷೆಯಲ್ಲಿಯೂ ಎ ಎಂಬುದು ಮಾತಿನ ಭಾಷೆಯಲ್ಲಿಯೂ ರೂಢಿಯಾಗಿ ಪ್ರಯೋಗವಾಗುತ್ತವೆ.

**ಉ. ಪು; ಬ. ವ.** ಹಳಗನ್ನಡ ಎವು, ಎಮ್. ನಡುಗನ್ನಡದಲ್ಲಿಯೂ ಹೊಸಗನ್ನಡದಲ್ಲಿಯೂ ಎವು ರೂಪವು ಪ್ರಯೋಗದಲ್ಲಿದೆ. ಎವು ಎಂಬುದು ಎಮ್ ಎಂಬುದರಿಂದ ಹುಟ್ಟಿದ ರೂಪವೆಂಬುದರಲ್ಲಿ ಸಂಶಯವಿಲ್ಲ. ಎಮ್ ಎಂಬುದರ ಮಕಾರಕ್ಕೆ ವಕಾರಾದೇಶವಾಗಿ ಉಕಾರ ಸೇರಿ ಎವು ಆಗುತ್ತದೆ. ಎವು ಎಂಬುದಕ್ಕೆ ಎಮ್ ಆದೇಶವಾಗಿ ಬರುತ್ತದೆಂದು ಕೆಲವು ವ್ಯಾಕರಣಗಳಲ್ಲಿ ಹೇಳಿರುವುದು ಸಮಂಜಸವಾಗಿಲ್ಲ.

**ಮ. ಪು; ಏ. ವ.** ಹಳಗನ್ನಡ ಅಯ್, ಎ (ಕೆಲವು ಕಡೆ). ನಡುಗನ್ನಡದಲ್ಲಿ ವಿಶೇಷವಾಗಿ ಎ ಎಂಬ ರೂಪವೇ ಕಂಡುಬರುತ್ತದೆ. ಹೊಸಗನ್ನಡದಲ್ಲಿ ಎ (ಇ, ಗ್ರಾಮ್ಯ).

**ಮ. ಪು : ಬ. ವ.** ಹಳಗನ್ನಡದ ಇರ್. ನಡುಗನ್ನಡದಲ್ಲಿಯೂ ಹೊಸಗನ್ನಡದಲ್ಲಿಯೂ ಇರಿ.

---

1 ಕ್ವಚಿತ್ತಾಗಿ ಏನ್. ಉದಾ. ನಿನಗೀವೇನಂಚೆ (ಕಬ್ಬಿಗರ ಕಾವ).

**ಪ್ರ. ಪು; ಪು. ಸ್ತ್ರೀ. ಏ. ವ.** ಹಳಗನ್ನಡ ಅನ್, ಅಳ್. ನಡುಗನ್ನಡ ಹೊಸಗನ್ನಡಗಳಲ್ಲಿ ಇವಕ್ಕೆ ಅನು, ಅ, ಅಳು ಎಂಬ ರೂಪಗಳು ಕಂಡುಬರುತ್ತವೆ. ಈಗ ಅ ಎಂಬುದು ಮಾತಿನ ಭಾಷೆಯಲ್ಲಿ ಮಾತ್ರ ಪ್ರಯೋಗದಲ್ಲಿದೆ; ಅಳು ಎಂಬುದು ಅಲು ಎಂದು ಉಚ್ಚಾರಣೆಯಲ್ಲಿ ಕೇಳಿಸುತ್ತದೆ. ಉದಾ : ಬಂದ್ಲು.

**ಪ್ರ. ಪು; ಪು. ಸ್ತ್ರೀ. ಬ. ವ.** ಹಳಗನ್ನಡದ ಅರ್. ನಡುಗನ್ನಡ ಹೊಸಗನ್ನಡದಲ್ಲಿ ಅರು. ಹಳಗನ್ನಡದಲ್ಲಿ ಮೇಲೆ ಹೇಳಿದ ಅನ್, ಅರ್ ಎಂಬ ರೂಪಗಳು ಮಾತ್ರವೇ ಅಲ್ಲದೆ ಒನ್, ಒರ್, ಆಳ್, ಆರ್ ಎಂಬ ರೂಪಗಳೂ ಕ್ವಚಿತ್ತಾಗಿ ಪ್ರಯೋಗವಾಗುತ್ತಿದ್ದುವು. ಉದಾ : ಅಟಿಪೊನ್, ಬರೆದೊನ್, ಇತ್ತೊರ್, ಕೊಟ್ಟಾಳ್, ಬಿಟ್ಟಾರ್ ಇತ್ಯಾದಿ.

**ಪ್ರ. ಪು; ನ. ಏ. ವ.** ಹಳಗನ್ನಡ ಉದು, ಅತ್ತು, ಇತ್ತು, ಇತ್ತು, ತು. ಈ ಪ್ರತ್ಯಯಗಳೆಲ್ಲವೂ ನಡುಗನ್ನಡದಲ್ಲಿ ಪ್ರಯೋಗದಲ್ಲಿದ್ದುವು. ಅದು ಎಂಬುದೂ ಕ್ವಚಿತ್ತಾಗಿ ಪ್ರಯೋಗದಲ್ಲಿತ್ತು. ಹೊಸಗನ್ನಡದಲ್ಲಿ ಉದು ಎಂಬುದು ಗ್ರಾಂಥಿಕ ಭಾಷೆಯಲ್ಲಿ ಕಂಡುಬರುತ್ತದೆ. ಅದು ಎಂಬುದು ಗ್ರಾಂಥಿಕ ಭಾಷೆಯಲ್ಲಿಯೂ ಮಾತಿನ ಭಾಷೆಯಲ್ಲಿಯೂ ಪ್ರಯೋಗದಲ್ಲಿದೆ. ತು ಪ್ರತ್ಯಯದಿಂದ ಕೂಡಿದ ಬಂತು, ಇತ್ತು ಎಂಬ ರೂಪಗಳನ್ನು ಗ್ರಾಂಥಿಕ ಭಾಷೆಯಲ್ಲಿ ಕೆಲವರು ಪ್ರಯೋಗಿಸುವುದಿಲ್ಲ. ಅವನ್ನು ಅಶುದ್ಧರೂಪಗಳೆಂದು ಹೇಳುತ್ತಾರೆ. ಆಯ್ತು ಪೋಯ್ತು ಎಂಬ ರೂಪಗಳು ಹಳಗನ್ನಡ ಕಾಲಕ್ಕೆ ಬಂದಿದ್ದುವು. ತಿರುಮಲಾರ್ಯನ ಗೀತಗೋಪಾಲದಲ್ಲಿ—

ಅವಳನಿಸುವ ಕಾವನ ಪಂತ ಸಂತು !
ಈ ಪೊಸವೇಟದೊಳು ಇವಳಿಗೇನೇನು ಬಂತು ||

ಎಂದು ಪ್ರಯೋಗವಿದೆ.

**ಪ್ರ. ಪು; ನ. ಬ. ವ.** ಹಳಗನ್ನಡ ಉವು. ನಡುಗನ್ನಡದಲ್ಲಿಯೂ ಈ ಪ್ರತ್ಯಯ ಪ್ರಯೋಗವಾಗುತ್ತದೆ. ಆದರೆ ಇದಕ್ಕಿಂತಲೂ ಅವು ಎಂಬುದು ಹೆಚ್ಚಾಗಿ ಪ್ರಯೋಗವಾಗುವಂತೆ ತೋರುತ್ತದೆ. ಹೊಸಗನ್ನಡದಲ್ಲಿ ಈ ಎರಡು ಪ್ರತ್ಯಯಗಳೂ ರೂಢಿಯಲ್ಲಿವೆ. ಅವು ಎಂಬುದು ಉವು ಎಂಬುದಕ್ಕಿಂತಲೂ ಹೆಚ್ಚು ಬಳಕೆಯಲ್ಲಿದೆ. ಅವು ಎಂಬುದು ಹಳಗನ್ನಡದಲ್ಲಿ ಕ್ವಚಿತ್ತಾಗಿ ಕಂಡುಬರುತ್ತದೆ. ಉದಾ : ಒಳವು.

ಹೊಸಗನ್ನಡದಲ್ಲಿ ವರ್ತಮಾನ ಕ್ರಿಯೆಗೆ ಸೇರುವಾಗ ಆಖ್ಯಾತವಿಭಕ್ತಿ ಪ್ರತ್ಯಯಗಳು ಮೇಲೆ ಹೇಳಿದುದಕ್ಕಿಂತಲೂ ಹೆಚ್ಚಾದ ವ್ಯತ್ಯಾಸವನ್ನು ಹೊಂದುತ್ತವೆ. ಹಳಗನ್ನಡದಲ್ಲಿ ವರ್ತಮಾನಕಾಲವಾಚಿಯಾಗಿದ್ದ ದಪ ಎಂಬ ಪ್ರತ್ಯಯವು

ಹೋಗಿ ಈಗ ಉತ್ತ ಎಂಬ ಪ್ರತ್ಯಯವು ಪ್ರಯೋಗಕ್ಕೆ ಬಂದಿದೆಯೆಂಬ ವಿಷಯವನ್ನು ಹಿಂದೆ ತಿಳಿಸಿದೆ. ಆ ಉತ ಅಥವಾ ಉತ್ತ ಪ್ರತ್ಯಯಕ್ಕೆ ಹತ್ತುವಾಗ ಆಖ್ಯಾತವಿಭಕ್ತಿಪ್ರತ್ಯಯಗಳ ರೂಪದಲ್ಲಿ ವಿಶೇಷವಾದ ವ್ಯತ್ಯಾಸವುಂಟಾಗುತ್ತದೆ. ಆ ವ್ಯತ್ಯಾಸವು ಪ್ರತ್ಯಯದ ಆದಿಸ್ವರವು ದೀರ್ಘವಾಗುವುದೂ ಪ್ರತ್ಯಯದ ಅಂತ್ಯಕ್ಕೆ ಎ ಕಾರ ಸೇರುವುದೂ ಆಗಿರುತ್ತದೆ. ಉದಾ: ಎನ್ ಎಂಬುದು ಏನೆ ಆಗುವುದು, ಅಳ್ ಎಂಬುದು ಆಳೆ ಆಗುವುದು ಇತ್ಯಾದಿ. ಪ್ರ. ಪು. ನಪುಂಸಕಲಿಂಗದ ಆದಿಸ್ವರವು ಮಾತ್ರ ದೀರ್ಘವಾಗುವುದಿಲ್ಲ. ಅದು ಎಂಬುದು ಅದೆ ಎಂದೂ, ಎವು ಎಂಬುದು ಅವೆ ಎಂದೂ ಆಗುವುವು. ಉದು ಮುಂತಾದ ಮತ್ತಾವ ಪ್ರತ್ಯಯವೂ ಹತ್ತುವುದಿಲ್ಲ.

ಮೇಲೆ ಹೇಳಿದ ವ್ಯತ್ಯಾಸವಾಗುವುದಕ್ಕೆ ಕಾರಣವೇನು? ಹಳಗನ್ನಡದ ಎಲ್ಲ ವರ್ತಮಾನ ಕ್ರಿಯೆಗಳಲ್ಲಿಯೂ ನಡುಗನ್ನಡದ ಕಾಲದಲ್ಲಿ ಆದಿದೀರ್ಘವಾದ ರೂಪವು ಪ್ರತ್ಯಯಕ್ಕೆ ಬರುತ್ತದೆ. ಉದಾ:—ಕಂಡಪೆನ್ > ಕಂಡಹೆನ್ > ಕಂಡೇನ್ > ಕಂಡೇನು; ಬಂದಪನ್ > ಬಂದಹನ್ > ಬಂದಾನ್ > ಬಂದಾನು ಇತ್ಯಾದಿ. ಇಲ್ಲಿ ಪ್ರತ್ಯಯದ ಆದಿ ಸ್ವರವು ದೀರ್ಘವಾಗುವುದು ಕಂಡುಬರುತ್ತದೆ. ಕಂಡೇನು, ಬಂದಾನು ಇತ್ಯಾದಿ ಕ್ರಿಯೆಗಳು ಸಂಶಯಾರ್ಥಬೋಧಕಗಳಾಗಿ ಪರಿಣಮಿಸಿದುದರ ಫಲವಾಗಿ ವರ್ತಮಾನಕಾಲವನ್ನು ಸೂಚಿಸುವುದಕ್ಕೋಸ್ಕರ ಜನರು ಉತ, ಉತ್ತ ಪ್ರತ್ಯಯವನ್ನು ದಪ ಪ್ರತ್ಯಯಕ್ಕೆ ಬದಲಾಗಿ ಪ್ರಯೋಗಿಸುವಾಗ ಈ ದೀರ್ಘಾದಿ ಪ್ರತ್ಯಯಗಳನ್ನೇ ವರ್ತಮಾನಕಾಲದಲ್ಲಿ ಪ್ರಯೋಗಿಸುವ ರೂಢಿ ಬಂದಿತ್ತು. ಈಗಲೂ ಕೆಲವು ಪ್ರಾಂತದ ಜನರು ಆಡುವ ಮಾತಿನಲ್ಲಿ "ಬರುತ್ತೇನು" "ಹೋಗುತ್ತೇನು" ಇತ್ಯಾದಿ ರೂಪಗಳು ಕಂಡುಬರುತ್ತವೆ. ಆದರೆ "ಏನು", "ಆನು" ಮೊದಲಾದ ಪ್ರತ್ಯಯಗಳಿಗೆ ಸಂದೇಹಸೂಚನೆಯು ಸೇರಿಹೋಗಿದ್ದುದರಿಂದ ನಿಶ್ಚಿತಾರ್ಥವನ್ನು ಸೂಚಿಸುವ ಎ ಪ್ರತ್ಯಯವು ಅವುಗಳ ಕೊನೆಗೆ ಸೇರಿತು.[1] ಹೀಗಾಗಿ ಏನೆ, ಆನೆ, ಇತ್ಯಾದಿಯಾಗಿ ರೂಪಗಳುಂಟಾದುವೆಂದು ಆಧುನಿಕ ವಿದ್ವಾಂಸರು ಕೆಲವರು ಹೇಳುತ್ತಾರೆ. ಹೊಸಗನ್ನಡದಲ್ಲಿ ಮ. ಪು. ಏಕವಚನದಲ್ಲಿ ಎರಡು ರೂಪಗಳಾಗುತ್ತವೆ. ಒಂದು, ಮೇಲಿನ ನಿಯಮಕ್ಕೆ ಅನುಸರಿಸಿದ ರೂಪ. ಉದಾ: ಮಾಡುತ್ತೀಯೆ (ಈಯೆ); ಮತ್ತೊಂದು, ಬರಿಯ ಇ ಅಥವಾ ಈ ಪ್ರತ್ಯಯವು ಸೇರಿದುದು. ಉದಾ: ಬರುತ್ತಿ ಅಥವಾ ಬರುತ್ತೀ.

ಪ್ರಥಮಪುರುಷದ ಆಖ್ಯಾತಪ್ರತ್ಯಯಗಳಿಗೆ ಬದಲಾಗಿ ಕಾಲ ಲಿಂಗ ವಚನ

---

[1] ಕೆಲವರು ಇದು ಸ್ವರಸಾಮ್ಯವಿಧಿಯಿಂದ (Harmonic sequence of vowels) ಆದುದೆಂದು ಹೇಳುತ್ತಾರೆ. ಮಾಡುತ್ತೇನೆ, ಮಾಡುತ್ತೀರಿ, ಮರುಕು, ಉಸುರು, ಎದುರು (ಒತ್ತಿ ಹೇಳುವಾಗ ಎದೂರು), ಕಳುಹು, ಅಜುಹು, ಮುಂತಾದುವನ್ನು ನೋಡಿ.

ಭೇದವಿಲ್ಲದೆ, ಕುಂ, ಗುಂ ಎಂಬ ಪ್ರತ್ಯಯಗಳು ಹಳಗನ್ನಡದಲ್ಲಿ ಹತ್ತುತ್ತವೆ.[1] ಉದಾ : ಮಾಡುಗುಂ, ಅಕ್ಕುಂ, ಬರ್ಕುಂ, ಸಾಲ್ಕುಂ, ಬೇಟ್ಕುಂ. ಇವು ನಡುಗನ್ನಡದಲ್ಲಿ ಅಂತ್ಯ ವ್ಯಂಜನ ಲೋಪವಾಗಿದ್ದು, (ಮಾಡುಗು, ಅಕ್ಕು, ಬರ್ಕು) ಹೊಸಗನ್ನಡದಲ್ಲಿ ಸಾಕು, ಬೇಕು ಎಂಬಲ್ಲಿ ಮಾತ್ರ ಉಳಿದಿವೆ.

## ಅಸಂಪೂರ್ಣ ಕ್ರಿಯೆಗಳು

1. **ವರ್ತಮಾನ ಕಾಲವಾಚಕ ಕ್ರಿಯೆ :** ಧಾತುಗೆ ಉತ್ ಎಂಬ ಮೂಲ ರೂಪದಿಂದ ಹುಟ್ಟಿದ ಅನೇಕ ಪ್ರತ್ಯಯಗಳು ಹಳಗನ್ನಡದಲ್ಲಿ ಸೇರುತ್ತಿದ್ದುವು. ಉದಾ : ಉತುಂ, ಉತ್ತುಂ, ಉತೆ, ಉತ್ತೆ. ನಡುಗನ್ನಡದಲ್ಲಿ ಉತ್ತಂ, ಉತ್ತ, ಉತ; ಹೊಸಗನ್ನಡದಲ್ಲಿ ಉತ್ತ, ಉತ, ಎಂಬುವು ಕಾಣುತ್ತವೆ. ಇವಲ್ಲದೆ ಉತ್ತಾ, ಉತಾ, ಎಂಬಿವೂ ಪ್ರಯೋಗಕ್ಕೆ ಬಂದಿವೆ.

2. **ಭೂತಕಾಲವಾಚಕ ಕ್ರಿಯೆ :** ಸಾಮಾನ್ಯವಾಗಿ ಧಾತುವಿಗೆ ದು ಅಥವಾ ತು ಪ್ರತ್ಯಯ ಹತ್ತುವುದರಿಂದ ಅಸಂಪೂರ್ಣಭೂತಕ್ರಿಯೆ ಸೂಚಿತವಾಗುತ್ತದೆ. ಉದಾ :—ಮಾಣ್ದು, ಒಸೆದು, ಸೋಲ್ತು, ಕಲ್ತು ಇತ್ಯಾದಿ. ಆದರೆ (೧) ಕೆಲವು ವೇಳೆ ಯಾವ ಪ್ರತ್ಯಯವೂ ಸೇರುವಂತೆ ಕಾಣುವುದಿಲ್ಲ. ಉದಾ :—ನಡೆತರ್, ಹೊಯ್ಕೊಳ್ ಇತ್ಯಾದಿ. ಧಾತುವಿನ ಅಂತ್ಯಸ್ವರವು ವ್ಯತ್ಯಾಸವಾಗುವುದೂ ಉಂಟು :—ಎಳಕೊಳ್, ಇಳುಕೊಳ್, ಇತ್ಯಾದಿ. ಈ ಸಂದರ್ಭದಲ್ಲಿ ದು ಪ್ರತ್ಯಯವು ಲೋಪವಾಗಿದೆಯೆಂದು ಕೆಲವರು ಹೇಳುತ್ತಾರೆ. (೨) ಉಕಾರಾಂತ ಧಾತುಗಳಿಗೆ ದು ಪ್ರತ್ಯಯ ಹತ್ತುವುದು ಹಳಗನ್ನಡದಲ್ಲಿ ಕಂಡುಬರುವುದಿಲ್ಲ. ಧಾತುವಿನ ಅಂತ್ಯ ಉಕಾರವು ಇಕಾರವಾಗುತ್ತದೆ. ಉದಾ : ಮಾಡಿ, ಪೋಗಿ ಇತ್ಯಾದಿ. ಈ ವಿಷಯದಲ್ಲಿರುವ ಭಿನ್ನಮತಗಳನ್ನು ಹಿಂದೆಯೇ ಹೇಳಿದೆ.

3. **ಭಾವಾರ್ಥಕ ಕ್ರಿಯೆ :** ಇದು ಕ್ರಿಯೆಯ ಭಾವ, ಉದ್ದೇಶ, ಪ್ರಯೋಜನ, ಸಮಕಾಲ ಮುಂತಾದ ಅರ್ಥಗಳನ್ನು ಸೂಚಿಸುತ್ತದೆ.

ಇದಕ್ಕೆ ಹಳಗನ್ನಡದಲ್ಲಿ ವಿಶೇಷವಾಗಿ ಪ್ರಯೋಗದಲ್ಲಿದ್ದ ಪ್ರತ್ಯಯಗಳು ಎ, ಅಲ್ ಅಥವಾ ಅಲ್ಕೆ ಎಂಬಿವು. ಎ ಎಂಬುದು ಉಭಯಕರ್ತೃಕಕ್ಕೂ ಅಲ್ ಎಂಬುದು ಏಕ ಕರ್ತೃಕಕ್ಕೂ ಹತ್ತುವುದೆಂದು ವ್ಯಾಕರಣಗಳಲ್ಲಿ ಹೇಳಿದೆ. ಎ ಪ್ರತ್ಯಯವು ಹೊಸಗನ್ನಡದಲ್ಲಿ ಪ್ರಯೋಗದಲ್ಲಿಲ್ಲ. ಅಲ್, ಅಲ್ಕೆ ಎಂಬಿವು ನಡುಗನ್ನಡದಲ್ಲಿ ಅಲು, ಅಲಿಕೆ, ಅಲಿಕ್ಕೆ ಎಂಬ ರೂಪಗಳನ್ನು ಹೊಂದುತ್ತವೆ. ಹೊಸಗನ್ನಡದಲ್ಲಿ ಅಲು, ಅಲಿಕ್ಕೆ ಎಂಬಿವು ತಕ್ಕಮಟ್ಟಿಗೆ ಬಳಕೆಯಲ್ಲಿವೆ. ಆದರೆ ಉದು

---

[1] ಆಡುಂಬೊಲಂ, ಪಿಡಿಯುಂದಲೆ, ಇಱಿಯುಂಬೊಜ್ಜು ಮುಂತಾದ ಸಮಾಸಗಳಲ್ಲಿ ಗುಂ ಪ್ರತ್ಯಯವು ಉಂ ಎಂಬ ರೂಪದಲ್ಲಿ ಉಳಿದಿದೆ ಎಂದು ಹೇಳಬಹುದು. ತಮಿಳಿನಲ್ಲಿ ಈ ತೆರದ ಪ್ರಯೋಗವು ಸಾಮಾನ್ಯವಾಗಿದೆ.

ಪ್ರತ್ಯಯಾಂತವಾದ ಭಾವನಾಮದ ಚತುರ್ಥಿ, ವಿಶೇಷವಾಗಿ ಬಳಕೆಯಲ್ಲಿದೆ. ಉದಾ : ಮಾಡುವುದಕ್ಕೆ, ತರುವುದಕ್ಕೆ, ಇತ್ಯಾದಿ. ಇವು ಜನರು ಮಾತನಾಡುವ ಭಾಷೆಯಲ್ಲಿ ಮಾಡೋದಕ್ಕೆ, ಮಾಡೋಕೆ, ಇತ್ಯಾದಿ ರೂಪಗಳನ್ನು ಹೊಂದುತ್ತದೆ. ಆದರೆ ಇವು ಗ್ರಾಮ್ಯವೆಂದು ಪರಿಗಣಿತವಾಗಿದೆ.

ಹಳಗನ್ನಡದಲ್ಲಿ ಅ ಎಂಬ ಪ್ರತ್ಯಯವೂ ಧಾತುವಿಗೆ ಸೇರುತ್ತಿತ್ತು. ಉದಾ :— ತರವೇೞ್, ಕುಡುವೇೞ್ಕುಂ ಇತ್ಯಾದಿ. ಈ ತೆರದ ಪ್ರಯೋಗವು ನಡುಗನ್ನಡ ಹೊಸ ಗನ್ನಡಗಳಲ್ಲಿಯೂ ಇದೆ. ಉದಾ :—ತರಹೇಳು, ಕೊಡಬೇಕು, ಇತ್ಯಾದಿ.

ಹೊಸಗನ್ನಡದಲ್ಲಿರುವ ಬರುತ್ತಲು, ಹೋಗುತ್ತಲು ಮುಂತಾದ ರೂಪಗಳು ಉತ್ತಂ ಎಂಬ ಪ್ರತ್ಯಯದಿಂದ ಬಂದಹಾಗಿಲ್ಲ. ಅಲ್ ಎಂಬಂತೆಯೇ ತಲ್[1] ಎಂಬ ಒಂದು ಪ್ರತ್ಯಯ ಸೇರಿ ಭಾವಕ್ರಿಯೆಗಳಾಗುತ್ತಿರಬಹುದು. ಆದರೆ ಗ್ರಂಥಗಳಲ್ಲಿ ಈ ಪ್ರಯೋಗವಿಲ್ಲ. ಒಂದು ವೇಳೆ ತಮಿಳಿನಿಂದ ಈ ರೂಪಗಳು ಬಂದಿದ್ದರೂ ಬಂದಿರ ಬಹುದು.

ಹಳಗನ್ನಡದ ಒಡೆ ಪ್ರತ್ಯಯವು ನಡುಗನ್ನಡದಲ್ಲಿ ಅಡೆ, ಅರೆ, ಎಂಬ ರೂಪ ಗಳನ್ನು ಪಡೆಯುತ್ತದೆ. ಉದಾ ; ಬರ್ಪೊಡೆ > ಬರ್ಪಡೆ > ಬರ್ಪರೆ; ಬಂದೊಡೆ > ಬಂದಡೆ > ಬಂದರೆ. ಭೂತಕಾಲದ ರೂಪವು ಈಗ ಬಳಕೆಯಲ್ಲಿದೆ. ಭವಿಷ್ಯತ್ಕಾಲದ ರೂಪವು ಪ್ರಾಂತಿಕ ಪ್ರಯೋಗದಲ್ಲಿದೆ.

ಹಳಗನ್ನಡದಲ್ಲಿ ಪ್ರಯೋಗವಾಗುತ್ತಿದ್ದ ಮಿಕ್ಕ ಪ್ರತ್ಯಯಗಳು ಮುಖ್ಯವಾದು ವಲ್ಲ; ಅವು ಹೊಸಗನ್ನಡದಲ್ಲಿ ಹೆಚ್ಚು ಬಳಕೆಯಲ್ಲಿಲ್ಲ.

## ಕರ್ಮಣಿ ಪ್ರಯೋಗ

ಕನ್ನಡದಲ್ಲಿ ಸಹಜವಾಗಿ ಕರ್ಮಣಿ ಪ್ರಯೋಗವಿಲ್ಲ. ಅಲ್ ಸೇರಿದ ಭಾವಾ ರ್ಥಕ ಕ್ರಿಯೆಗೆ ಪಡು ಎಂಬುದನ್ನು ಸೇರಿಸಿ ಈ ಪ್ರಯೋಗವನ್ನು ರೂಢಿಗೆ ತರುವು ದಕ್ಕೆ ಪ್ರಯತ್ನಪಟ್ಟರೂ ಭಾಷೆಯಲ್ಲಿ ಇದು ವಿಶೇಷವಾಗಿ ಬಳಕೆಯಿಲ್ಲ. ಕೇಶಿ ರಾಜನು ಪಡೆ ಎಂಬುದನ್ನು ಸೇರಿಸಿದ್ದಾನೆ. ಉದಾ :—ಪೇೞಲ್ಪಡೆಗುಂ. ಪೂರ್ವದ ಕೆಲವು ಶಾಸನಗಳಲ್ಲಿ ಕರ್ಮಣಿ ಪ್ರಯೋಗವು ಸಿಕ್ಕುತ್ತದೆ. ತಮಿಳಿನಲ್ಲಿ ಇದು ಹೆಚ್ಚಾಗಿ ಪ್ರಚಾರದಲ್ಲಿದ್ದು ಕನ್ನಡಕ್ಕೆ ಬಂದಿರಬಹುದು. ಬಸವಪುರಾಣದಲ್ಲಿ (1369) ಈ ಪ್ರಯೋಗವಿದೆ :

ಎಂದು ಕೇಳಲ್ಪಟ್ಟುದಲ್ಲಾ |
ಮುಂದೆ ಕಾಣಲ್ಪಟ್ಟುದಲ್ಲಾ | (೬೦, ೨೦)

---

[1] ದಲ್ ಎಂಬ ಅವ್ಯಯವನ್ನೂ, ಕಾದಲ್ಮೆ ಎಂಬ ಭಾವನಾಮವನ್ನೂ ನೋಡಿ.

ಈ ವಿಚಾರವಾಗಿ ಶಬ್ದಮಣಿದರ್ಪಣದಲ್ಲಿ ಗ್ರಂಥಕರ್ತನದಲ್ಲದ ಅನುಕ್ತ ಸೂತ್ರಂ ಎಂಬ ಒಂದು ಸೂತ್ರವೂ, ಅದಕ್ಕೆ ವ್ಯಾಖ್ಯಾನವಾಗಿ ಸೇರಿಸಿದ ಶಬ್ದಾನುಶಾಸನದ ಇರಲ್ಪಟ್ಟಂ ಮುಂತಾದ ವಿಲಕ್ಷಣವಾದ ಉದಾಹರಣೆಗಳುಳ್ಳ ಸೂತ್ರಗಳೂ ಇವೆ.

# ೧೧. ಅವ್ಯಯಗಳು

ಕೃತ್ಪ್ರತ್ಯಯಗಳನ್ನಾಗಲಿ ಆಖ್ಯಾತಪ್ರತ್ಯಯಗಳನ್ನಾಗಲಿ ಹೊಂದದಿರುವ ಶಬ್ದಗಳಿಗೆ ಅವ್ಯಯಗಳೆಂಬ ಹೆಸರು ಬಂದಿದೆ. ಅವುಗಳಲ್ಲಿ ಕೆಲವು ಕ್ರಿಯಾವಿಶೇಷಣಗಳಾಗಿರುತ್ತವೆ. ಕೆಲವು ಸಂಬಂಧಸೂಚಕಗಳಾಗಿರುತ್ತವೆ. ಮತ್ತೆ ಕೆಲವು ಖೇದ ಆಶ್ಚರ್ಯ ಮುಂತಾದ ಮನೋಭಾವಗಳನ್ನು ತಿಳಿಸುವ ನಿಪಾತಗಳಾಗಿರುತ್ತವೆ. ಅವ್ಯಯಗಳಲ್ಲಿ ಕೆಲವು ಸ್ವತಂತ್ರವಾದುವು ; ಮತ್ತೆ ಕೆಲವು ನಿಷ್ಪನ್ನವಾದುವು. ಈ ವಿಷಯಗಳು ವ್ಯಾಕರಣಗಳಲ್ಲಿ ವಿಸ್ತಾರವಾಗಿ ನಿರೂಪಿತವಾಗಿರುತ್ತವೆ. ಕಾಲಕ್ರಮದಲ್ಲಿ ಅವ್ಯಯಗಳಲ್ಲಿ ಆಗಿರುವ ವ್ಯತ್ಯಾಸಗಳಾವುವು ಎಂಬುದು ಇಲ್ಲಿ ಹೇಳಿರುತ್ತದೆ.

ಹಳಗನ್ನಡದಲ್ಲಿ ಪ್ರಯೋಗದಲ್ಲಿದ್ದ ಅನೇಕ ಅವ್ಯಯಗಳು ಈಗ ಪ್ರಯೋಗದಲ್ಲಿಲ್ಲ. ಅವುಗಳಲ್ಲಿ ಕೆಲವು ನಡುಗನ್ನಡದ ಹೊತ್ತಿಗೆ ಅಳಿದುಹೋಗಿದ್ದುವು. ಉದಾ : ಆಗಡು, ಈಗಡು, ವಲಂ, ದಲ್, ಗಡ. ಇನ್ನು ಕೆಲವು ನಡುಗನ್ನಡ ಕಾಲದಲ್ಲಿದ್ದು ಈಗ ಅಳಿದಿವೆ. ಉದಾ : ಆಗಳ್, ಈಗಳ್, ಅನ್ನೆಗಂ, ಮಿಗೆ, ತವೆ, ಉೞಿ ಇತ್ಯಾದಿ. ಕೆಲವು ಮಾತ್ರ ಈಗಲೂ ಪ್ರಯೋಗದಲ್ಲಿವೆ. ಅವುಗಳಲ್ಲಿಯೂ ಕೆಲವು ಹಳಗನ್ನಡದಲ್ಲಿ ಇದ್ದ ರೂಪದಲ್ಲಿ ಸ್ವಲ್ಪ ವ್ಯತ್ಯಾಸವನ್ನು ಹೊಂದಿ ಉಳಿದಿವೆ. ಉದಾ : ಬೞಿಕಂ=ಬಳಿಕ, ಇಱ್=ಇನ್ನು, ಉಂ=ಊ (ಅವನುಂ, ಅವನೂ), ವರಂ, ವರೆಗಂ=ವರೆಗೆ, ವರೆಗೂ, ಅನ್ನೆಗಂ=ಅನಕ, ತನಕ, ಪೊಱಗಾಗಿ=ಹೊರತು, ಆಗಳುಂ=ಯಾವಾಗಲೂ, ಆನುಂ=ಆದರೂ (ಏನಾನುಂ=ಏನಾದರೂ.) ಕೆಲವು ಹಳಗನ್ನಡದಲ್ಲಿ ಇದ್ದ ರೂಪದಲ್ಲಿಯೇ ಉಳಿದಿವೆ. ಉದಾ : ಅತ್ತ, ಇತ್ತ, ಅಲ್ಲಿ, ಇಲ್ಲಿ.

ಉಪಮೆಯಲ್ಲಿ ಬರುವ ಹಳಗನ್ನಡದ ವೋಲ್, ಅಂತಿರೆ, ಮುಂತಾದ ಪ್ರತ್ಯಯಗಳು ಹೊಸಗನ್ನಡದಲ್ಲಿಲ್ಲ. ಈ ಸಂದರ್ಭದಲ್ಲಿ ಅಂತೆ, ಹಾಗೆ, ಎಂಬುವು ಬರುತ್ತವೆ. ನಿರ್ಧಾರಣದ ಎ, ಏ, ಪ್ರಶ್ನಾರ್ಥದ ಎ, ಏ, ಒ, ಓ, ಮುಂತಾದುವು ಮೊದಲಿನ ಹಾಗೆಯೇ ಇವೆ.

ಒಂದೇ ಮೂಲಶಬ್ದದಿಂದ ಹುಟ್ಟಿದ ಅನೇಕ ಅವ್ಯಯಗಳು ಹಳಗನ್ನಡದಲ್ಲಿದ್ದರೆ ಅವುಗಳಲ್ಲಿ ಕೆಲವು ಕಾಲಕ್ರಮದಲ್ಲಿ ಅಳಿದು ಒಂದೆರಡು ಮಾತ್ರ ಉಳಿದುಕೊಳ್ಳುತ್ತವೆ. ಉದಾಹರಣೆಗೆ ಹಳಗನ್ನಡದಲ್ಲಿ ಆಮೇಲೆ ಎಂಬ ಅರ್ಥದಲ್ಲಿ ಒಂದೇ ಮೂಲರೂಪದಿಂದ ಹುಟ್ಟಿದ ಬೞಿಕಂ, ಬೞಿಕೆ, ಬೞಿಕ್ಕಂ, ಬೞಿಕ್ಕೆ, ಬೞಿಯುಂ ಎಂಬ ಐದು ರೂಪಗಳು ಪ್ರಯೋಗದಲ್ಲಿದ್ದುವು. ನಡುಗನ್ನಡ ಕಾಲದಲ್ಲಿ ಅವುಗಳಲ್ಲಿ ಬೞಿಕಂ ಎಂಬುದೊಂದು ಮಾತ್ರ ಅಂತ್ಯವ್ಯಂಜನದ ಲೋಪವನ್ನು ಹೊಂದಿ ಬಳಿಕ ಎಂಬ ರೂಪದಲ್ಲಿ ಪ್ರಯೋಗದಲ್ಲಿದೆ. ಹೀಗೆಯೇ ಒಂದೇ ಅರ್ಥವನ್ನು ಕೊಡುವ ಅನೇಕ ಅವ್ಯಯ

ಶಬ್ದಗಳು ಹಳಗನ್ನಡದಲ್ಲಿದ್ದರೆ ಅವುಗಳಲ್ಲಿ ಕೆಲವು ಮಾತ್ರ ಹೊಸಗನ್ನಡದಲ್ಲಿ ಉಳಿಯು ತ್ತವೆ. ಉದಾ : ಮೇಣ್, ಮತ್ತಂ. ಮತ್ತೆ, ಮತ್ತು. ಇವುಗಳಲ್ಲಿ ಕಡೆಯ ಎರಡು ಈಗ ಪ್ರಯೋಗದಲ್ಲಿವೆ.

ಹಳಗನ್ನಡದ ಕೆಲವು ಅವ್ಯಯಗಳು ಅಳಿದು ಹೋದರೂ ಕೆಲವು ಹೊಸ ಅವ್ಯ ಯಗಳು ಕಾಲಕ್ರಮದಲ್ಲಿ ಪ್ರಯೋಗಕ್ಕೆ ಬಂದಿವೆ. ಕೆಲವು ನಡುಗನ್ನಡ ಕಾಲದಲ್ಲಿಯೇ ಬಳಕೆಗೆ ಬಂದುವು. ಉದಾ : ಈಚೆ, ಆಚೆ, ಹತ್ತಿರ ಇತ್ಯಾದಿ. ಕೆಲವು ಹೊಸಗನ್ನಡ ಕಾಲದಲ್ಲಿ ಬಂದುವು. ಉದಾ : ಕೂಡಲೆ, ಬೆಳಗ್ಗೆ, ಆಗ್ಗೆ, ಈಗ್ಗೆ.

ಅವ್ಯಯಗಳಿಗೆ ವಿಶೇಷವಾಗಿ ಸೇರುವ ಪ್ರತ್ಯಯಗಳು ಅಗೆ, ಅನೆ. ಅಗೆ ಎಂಬುದು ಅಗು ಧಾತುಗೆ ಎ ಪ್ರತ್ಯಯ ಸೇರಿ ಆಗಿರುವ ಪದ. ಆಗು ಧಾತುಗೆ ಪೂರ್ವದಲ್ಲಿ ಅಗು ಎಂಬ ರೂಪವಿದ್ದಿರಬೇಕೆಂದು ಈ ಅವ್ಯಯ ಪ್ರತ್ಯಯದಿಂದಲೂ, ಅಪ್ಪ, ಅಕ್ಕೆ, ಅಕ್ಕುಮ್, ಮುಂತಾದ ಹಳಗನ್ನಡದ ಶಬ್ದಗಳಿಂದಲೂ, ಅಯ್ದನೆ, ಅಯ್ತೆ ಮುಂತಾದ ಹೊಸಗನ್ನಡದ ಗ್ರಾಮ್ಯಪ್ರಯೋಗಗಳಿಂದಲೂ ಊಹಿಸಬಹುದಾಗಿದೆ. ಹೀಗೆಯೇ ಅನೆ=ಎನ್ (=ಅನ್) +ಎ. ಭೋಂಕನೆ, ಭೋಂಕೆನೆ, ಭೋಂಕೆನಲ್, ಎಂಬ ರೂಪಗಳಲ್ಲಿ, ಅನ್ ಎಂಬುದಕ್ಕೆ ಸಮಾನಾರ್ಥವಾಗಿ ಎನಲ್ ಎಂಬುದು ಬರುವು ದರಿಂದ ಇದು ಸ್ಪಷ್ಟವಾಗುತ್ತದೆ. ಹೊಸಗನ್ನಡದಲ್ಲಿ ಥಟ್ಟೆನುತ (ಥಟ್ಟಂತ), ಥಳಂ ಅಂತ, ಮುಂತಾದ ಪ್ರಯೋಗಗಳೂ ಅನ್, (ಎನ್) ಎಂಬ ಧಾತುವಿನಿಂದಲೇ ಬಂದಿರು ತ್ತವೆ. ನಾಡೆ, ಮಿಗೆ, ತವೆ, ಉಜಿ, ಸಲೆ, ಮುಂತಾದ ಅವ್ಯಯಗಳೂ ಧಾತುಗೆ ಎ ಪ್ರತ್ಯಯ ಸೇರಿಯೇ ಆಗಿವೆ. ಹೊಸಗನ್ನಡದಲ್ಲಿ ಅನೆ ಪ್ರತ್ಯಯಕ್ಕಿಂತ ಅಗೆ ಪ್ರತ್ಯ ಯವೇ ಹೆಚ್ಚು ರೂಢಿ. ಸಂಸ್ಕೃತ ಶಬ್ದಗಳಿಗೆ ಆಗಿ ಎಂಬುದು ಸೇರುತ್ತದೆ. ಉದಾ : ಮೃದುವಾಗಿ, ಮಂಗಳವಾಗಿ. ಹಳಗನ್ನಡದಲ್ಲಿ ಅನೆ ಎಂಬುದಕ್ಕೆ ಬದಲು ಎನೆ ಎಂಬುದು ಸೇರಬೇಕು. ಉದಾ : ಮೃದುವೆನೆ, ಮಂಗಳಮೆನೆ.

## ಕೆಲವು ಉಪಯುಕ್ತ ಪ್ರಕಟಣೆಗಳು

೧. ಯುಗಯಾತ್ರೀ ಭಾರತೀಯ ಸಂಸ್ಕೃತಿ ಭಾಗ ೧, ೨, ೩, ೪
೨. ತೋಟಗಾರಿಕೆ ಮೂಲತತ್ವಗಳು ಭಾಗ ೧, ೨, ೩
೩. ಪ್ರವಾಸಿ ಕಂಡ ಇಂಡಿಯಾ ಭಾಗ ೧, ೨, ೩, ೪, ೫, ೬, ೭
೪. ಕನ್ನಡ ನೇಮಿನಾಥ ಪುರಾಣಗಳ ತೌಲನಿಕ ಅಧ್ಯಯನ
೫. ನಾಗವರ್ಮನ ಕರ್ಣಾಟಕ ಕಾದಂಬರಿ
೬. ಕುಮಾರ ವಾಲ್ಮೀಕಿ–ಒಂದು ಅಧ್ಯಯನ
೭. ದಕ್ಷಿಣ ಕರ್ಣಾಟಕ ಜನಪದ ಕಾವ್ಯಪ್ರಕಾರಗಳು
೮. ದಕ್ಷಿಣ ಕರ್ಣಾಟಕ ಜನಪದ ರಂಗಭೂಮಿ
೯. ಕನ್ನಡ ಸಾಂಗತ್ಯ ಪ್ರಕಾರ–ಒಂದು ಸಂಕ್ಷಿಪ್ತ ಸಮೀಕ್ಷೆ
೧೦. ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ
೧೧. ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು
೧೨. ಕರ್ನಾಟಕ ಸಂಗೀತದಲ್ಲಿ ಮನೋಧರ್ಮ ಸಂಗೀತ ಪ್ರಕಾರಗಳು
೧೩. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ
೧೪. ಕರ್ಣಾಟಕದಲ್ಲಿ ಚಿತ್ರಕಲೆ
೧೫. ಮೈಸೂರು : ಒಂದು ಅಧ್ಯಯನ
೧೬. ಉಪನಿಷತ್ತುಗಳ ಸಂದೇಶ
೧೭. ಶ್ರೀರಾಮಕೃಷ್ಣಪರಮಹಂಸ
೧೮. ಹಿಂದೂದರ್ಶನ ಸಾರ
೧೯. ಪುರಾಣನಾಮ ಚೂಡಾಮಣಿ
೨೦. ಶ್ರೀರಾಮಕೃಷ್ಣರು ಮತ್ತು ಅವರ ಶಿಷ್ಯರು